# ದೇವ್ವಗಳ ಭೂತಗಳ

## ಯಥಾರ್ಥ ಸಂಘಟನೆಗಳು




ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು


**www.thraithashakam.org**





# ದೇವ್ವಗಳ ಹಾಗೂ ಭೂತಗಳ ಯಥಾರ್ಥ ಸಂಘಟನೆಗಳು


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000 **ಬೆಲೆ : 270/–**

## "ಇಂದೂ ಜ್ಞಾನವೇದಿಕೆ" ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## "ಇಂದೂ ಜ್ಞಾನವೇದಿಕೆ" ಪ್ರಕಟಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ - ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–
    ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
     ಚನಿಪೋಯಾಡಾ? ಚಂಪಬಡ್ಡಾಡಾ?
116. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

# ‘ಇಂದೂ ಜ್ಞಾನವೇದಿಕೆ’ ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : **ಶ್ರೀನಿವಾಸ**–09705864675, **ಲಕ್ಷ್ಮಿಣಾರಾಯಣಾಚಾರಿ**–09440556968.
**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ ‘ಸಿ’ (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆಂಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ದೆವ್ವಗಳನ್ನು, ಭೂತಗಳನ್ನು ಈ ಕಾಲದಲ್ಲಿ ಯಾರು ನಂಬಿದರೂ ಹೇತುವಾದಿಗಳೆನ್ನುವವರು, ನಾಸ್ತಿಕವಾದಿಗಳೆನ್ನುವವರು ನಂಬುವುದಿಲ್ಲ. ನಂಬಿಕೆ ಎನ್ನುವ ಮಾತು (ಪದ) ನಮ್ಮ ನಿಘಂಟುವಿನಲ್ಲಿ (ಡಿಕ್ಷನರಿಯಲ್ಲಿ) ಇಲ್ಲ ಎಂದು ಅನ್ನುತ್ತಿದ್ದಾರೆ. ಹೊರಗೆ ಕಾಣಿಸುವ ಸಮಾಜದಲ್ಲಿ ಹೇತುವಾದ, ನಾಸ್ತಿಕವಾದ ಎಂದು ಎರಡು ಬೇರೆ ಬೇರೆ ಹೆಸರುಗಳಿರುವ ವಾದಗಳಿದ್ದರೂ, ಮಾತು ಗಳಲ್ಲಾಗಲಿ, ಕಾರ್ಯಗಳಲ್ಲಾಗಲಿ ಎರಡು ಒಂದಾಗಿಯೇ ಕಾಣಿಸುತ್ತಿವೆ. ಉದಾಹರಣೆಗೆ ಬೆಳ್ಳಿ, ಬಂಗಾರ ಎರಡು ಬೇರೆಬೇರೆ ಲೋಹಗಳಿವೆ. ಆದರೆ ಈ ಕಾಲದಲ್ಲಿ ಬೆಳ್ಳಿ ಒಡವೆಗಳಿಗೆ ಬಂಗಾರದ ಬಣ್ಣ ಹಾಕುವುದರಿಂದ ಎರಡೂ ಬಂಗಾರವಾಗಿಯೇ ಕಾಣಿಸುತ್ತವೆ. ಹಾಗೆ ಹೇತುವಾದಿಗಳು, ನಾಸ್ತಿಕವಾದಿಗಳು ತಮ್ಮನ್ನು ಬೇರೆ ಬೇರೆಯಾಗಿ ಹೇಳಿಕೊಳ್ಳುತ್ತಿದ್ದರೂ, ಹೇತುವಾದಿಗಳು ನಾಸ್ತಿಕರ ಹಾಗೆ ಮಾತನಾಡುವುದರಿಂದ ಹೇತುವಾದಿಗಳು ಸಹ ನಾಸ್ತಿಕರ ಹಾಗೆ ಕಾಣಿಸುತ್ತಿದ್ದಾರೆ. ಆದ್ದರಿಂದ ಹೇತುವಾದ ಎನ್ನುವ ಹೆಸರಿದ್ದರೂ, ಅದು ಸ್ವಲ್ಪ ನಾಸ್ತಿಕವಾದವಾಗಿ ಬದಲಾಗಿ ಹೋಗಿದೆ. ಈಗಿನ ಕಾಲದಲ್ಲಿ ಆಸ್ತಿಕವಾದ, ನಾಸ್ತಿಕವಾದ ಬಿಟ್ಟರೆ ಹೇತುವಾದ ಎಲ್ಲಿಯೂ ಕಾಣಿಸಲಿಲ್ಲ. ಹೇತುವಾದ ಹೆಸರಿನಿಂದ ಕೆಲವು ಸಂಸ್ಥೆಗಳು ಏರ್ಪಟ್ಟರೂ, ಅವರದು ಅಸಲಾದ ಹೇತು ವಾದವಲ್ಲದೆ, ಬಂಗಾರದ ಬಣ್ಣ ಹಾಕಿಕೊಂಡ ಬೆಳ್ಳಿಯ ಹಾಗೆ ನಾಸ್ತಿಕತ್ವವನ್ನು ತುಂಬಿಕೊಂಡ ಹೇತುವಾದವಾಗಿದೆ. ಒಂದು ವಿಧವಾಗಿ ಹೇಳಿದರೆ ವಾಸ್ತವವಾದ ಹೇತುವಾದವು ಭೂಮಿ ಮೇಲೆ ಅಪರೂಪವಾಗಿದೆಯೆಂದು ಹೇಳಬಹುದು. ದೇವರಿದ್ದಾನೆ ಎನ್ನುವ ಆಸ್ತಿಕವಾದಕ್ಕೆ, ದೇವರಿಲ್ಲ ಎನ್ನುವ ನಾಸ್ತಿಕವಾದ ಎಂದಿಗೂ ವಿರುದ್ಧವಾಗಿರುತ್ತದೆ. ಎಲ್ಲಾದರೂ ಹೇತುವಾದಿಗಳು ಎಂದು ಹೇಳಿಕೊಳ್ಳುವ ವರಿದ್ದರೂ ಅವರು ನಾಸ್ತಿಕವಾದಿಗಳಲ್ಲಿಯೆ ಸೇರಿ ಹೋಗಿದ್ದಾರೆ. ಆದ್ದರಿಂದ ಅವರು ಸಹ ಆಸ್ತಿಕವಾದಕ್ಕೆ ವಿರೋಧಿಗಳೆ!

ಮೊದಲು ನನ್ನ ಜೀವನ ಪ್ರಾರಂಭವಾಗಿದ್ದು ಹೇತುವಾದದೊಂದಿಗೆ. ನನ್ನಲ್ಲಿರುವುದು ಅಸಲಾದ ಹೇತುವಾದ, ಆದರೆ ಅದರಲ್ಲಿ ನಾಸ್ತಿಕವಾದ

ಲಕ್ಷಣಗಳಾದ ದೇವರು ಇಲ್ಲ ಎನ್ನುವ ಉದ್ದೇಶ ಇಲ್ಲವೆ ಇಲ್ಲ. ದೇವರು ಹೇಗಿದ್ದಾನೆನ್ನುವುದು ಆಗಿನ ನನ್ನಲ್ಲಿನ ಪ್ರಶ್ನೆ. **ಆಸ್ತಿಕವಾದದಲ್ಲಿ ಉತ್ತರ ಇರುವುದಿಲ್ಲ, ನಾಸ್ತಿಕವಾದದಲ್ಲಿ ಪ್ರಶ್ನೆ ಇರುವುದಿಲ್ಲವೆಂದು ನಾನು ಹೇಳುತ್ತಿರುತ್ತೇನೆ.** ಒಂದೇ ಒಂದು ಹೇತುವಾದದಲ್ಲಿ ಮಾತ್ರ ಪ್ರಶ್ನೆ ಇರುತ್ತದೆ ಮತ್ತು ಉತ್ತರ ಇರುತ್ತದೆ ಎಂದು ಸಹ ಮುಖ್ಯವಾಗಿ ಹೇಳುತ್ತಿರುತ್ತೇನೆ. ಅಸಲಾದ ಹೇತುವಾದ ಲಕ್ಷಣಗಳು ನನ್ನಲ್ಲಿ ಮೊದಲಿನಿಂದ ಇರುವುದರಿಂದ ನನ್ನಲ್ಲಿ ಪ್ರಶ್ನೆ ಇದೆ, ಕೊನೆಗೆ ಉತ್ತರ ಸಹ ಇದೆ. ಒಂದು ಪ್ರಶ್ನೆ ಉದ್ಭವಿಸಿದಾಗ, ಶಾಸ್ತ್ರಬದ್ಧತೆಯಾದ ಉತ್ತರ ದೊರಕುವವರೆಗೂ ಹೇತುವಾದಿ ಅನ್ವೇಷಣೆ ಮಾಡುವುದರಿಂದ, ಹೇತುವಾದಿಯ ಹತ್ತಿರ ಪ್ರಶ್ನೆ ಇರುತ್ತದೆ ಮತ್ತು ಅದಕ್ಕೆ ಸರಿಯಾದ ಉತ್ತರ ಇರುತ್ತದೆಂದು ಹೇಳಬಹುದು. ಹೇತುವಾದ ಎನ್ನುವ ಪದದಲ್ಲಿ “ವಾದ” ಎನ್ನುವುದು ಸಾಮಾನ್ಯವಾದದ್ದು, “ಹೇತು” ಎನ್ನುವುದು ಮುಖ್ಯವಾದದ್ದು. ಹಾಗೆ ಆಸ್ತಿಕವಾದ, ನಾಸ್ತಿಕವಾದ ಅನ್ನುವವುಗಳಲ್ಲಿಯೂ ಸಹ ‘ವಾದ’ ಎನ್ನುವುದು ಎಲ್ಲದರಲ್ಲಿಯೂ ಸಮಾನವೆ. ವಾದಕ್ಕಿಂತ ಮೊದಲಿರುವ ಶಬ್ದವೇ ಮುಖ್ಯವಾದದ್ದು. ಹೇತುವಾದ ಎನ್ನುವ ಶಬ್ದದಲ್ಲಿ ಅಡಗಿರುವ ಅರ್ಥವನ್ನು ಗಮನಿಸಿದರೆ, ಸತ್ಯಕ್ಕಾಗಿ ಕೇಳುವುದು ಇಲ್ಲವೆ ಪ್ರಶ್ನಿಸುವುದು. ಸತ್ಯವಾದ ಉತ್ತರವನ್ನು ಹೊಂದುವುದೆಂದು ತಿಳಿಯುತ್ತದೆ. ಹೇತುವಾದದಲ್ಲಿ ಶಾಸ್ತ್ರಬದ್ಧತೆಯಾದ ಪ್ರಶ್ನೆ ಇರುತ್ತದೆ ಮತ್ತು ಶಾಸ್ತ್ರಬದ್ಧವಾದ ಉತ್ತರ ಇರುತ್ತದೆ. ಆದ್ದರಿಂದ ಹೇತುವಾದವನ್ನು ಅಸಲಾದ ಸತ್ಯವಾದ ಎಂದು ಅನ್ನಬಹುದು. ‘ಹೇತು’ ಎನ್ನುವ ಪದವು ಭಗವದ್ಗೀತೆಯಲ್ಲಿ ಮೂರು ಸಂದರ್ಭಗಳಲ್ಲಿ ಬಳಸಲಾಗಿದೆ. ರಾಜ ವಿದ್ಯಾ ರಾಜ ಗುಹ್ಯಾ ಯೋಗ ಎನ್ನುವ ಅಧ್ಯಾಯದಲ್ಲಿ 10ನೇ ಶ್ಲೋಕದಲ್ಲಿಯು, ಕ್ಷೇತ್ರ ಕ್ಷೇತ್ರಜ್ಞ ವಿಭಾಗ ಯೋಗ ಎನ್ನುವ ಅಧ್ಯಾಯದಲ್ಲಿ 5 ಮತ್ತು 21 ನೇ ಶ್ಲೋಕಗಳಲ್ಲಿಯು ಹೇಳಲಾಗಿದೆ. ಅದರಲ್ಲಿ ಕ್ಷೇತ್ರ ಕ್ಷೇತ್ರಜ್ಞ ವಿಭಾಗಯೋಗದಲ್ಲಿನ 21ನೇ ಶ್ಲೋಕವನ್ನು ಗಮನಿಸೋಣ.

ಶ್ಲೋಕ॥ ***ಕಾರ್ಯ ಕಾರಣ ಕರ್ತೃತ್ವೇ ಹೇತುಃ ಪ್ರಕೃತಿ ರುಚ್ಯತೇ ।***

***ಪುರುಷ ಸ್ಸುಖ ದುಃಖಾನಾಂ ಭೋಕ್ತೃತ್ವೇ ಹೇತು ರುಚ್ಯತೇ ॥***

ಶ್ಲೋಕದಲ್ಲಿನ ಎರಡು ವಾಕ್ಯಗಳಲ್ಲಿ ಮೇಲಿನ ವಾಕ್ಯದಲ್ಲಿ ಕಾರ್ಯ, ಕಾರಣ, ಕರ್ತ ಎನ್ನುವ ಮೂರು ಪದಗಳೂ, ಎರಡನೇ ವಾಕ್ಯದಲ್ಲಿ ಸುಖ, ದುಃಖ, ಭೋಕ್ತ ಎನ್ನುವ ಮೂರು ಪದಗಳು ಇವೆ. ಮೇಲಿನ ವಾಕ್ಯದಲ್ಲಿನ ಕಾರ್ಯ, ಕಾರಣ, ಕರ್ತನಿಗೆ ಕೊನೆಯಲ್ಲಿ ಪ್ರಕೃತಿ ಹೇಳಲಾಗಿದೆ. ಹಾಗೇ ಎರಡನೇ ವಾಕ್ಯದಲ್ಲಿನ ಸುಖ, ದುಃಖ, ಭೋಕ್ತಗೆ ಕೊನೆಯಲ್ಲಿ ಪುರುಷ ಎಂದು ಹೇಳಲಾಗಿದೆ. ಮೇಲಿನ ವಾಕ್ಯದಲ್ಲಿಯು, ಕೆಳಗಿನ ವಾಕ್ಯದಲ್ಲಿಯು 'ಹೇತು' ಎನ್ನುವ ಪದ ಮಾತ್ರ ಉಳಿದಿದೆ. ಈ ಎರಡು ವಾಕ್ಯಗಳಲ್ಲಿಯು ಹೇತು ಎನ್ನುವ ಪದ ವಿಶೇಷತೆಯನ್ನು ಹೊಂದಿದೆ. ಹೇತು ಎನ್ನುವ ಪದದಿಂದಲೆ ಸತ್ಯ ಹೊರಬೀಳುತ್ತಿದೆ. ಮೇಲಿನ ವಾಕ್ಯದಲ್ಲಿನ ಕಾರ್ಯ, ಕಾರಣ, ಕರ್ತನಿಗೆ ಪ್ರಕೃತಿಯನ್ನು ಅನುಸಂಧಾನ ಮಾಡುವುದು ಹೇತು ಅನ್ನುವ ಒಂದು ಶಬ್ಧವೆ, ಹಾಗೆ ಸುಖ, ದುಃಖ, ಭೋಕ್ತಗೆ ಪುರುಷನನ್ನು ಅನುಸಂಧಾನ ಮಾಡುವುದು ಹೇತು ಎನ್ನುವ ಒಂದು ಪದವೇ ಎಂದು ತಿಳಿಯುತ್ತಿದೆ. ಸುಖ, ದುಃಖ ಅನುಭವಕ್ಕೆ, ಪುರುಷನಿಗೆ (ಜೀವಿಗೆ) ಮಧ್ಯೆದಲ್ಲಿರುವ ಸತ್ಯವೇನೊ ಹೇತು ಎನ್ನುವ ಪದದಿಂದಲೇ ತಿಳಿಯುತ್ತಿದೆ. ಹಾಗೆ ಕಾರ್ಯ, ಕಾರಣ, ಕರ್ತನಿಗೆ ಪ್ರಕೃತಿಗೆ ಮಧ್ಯೆದಲ್ಲಿರುವ ಸಂಬಂಧವಾಗಲಿ, ತಿಳಿಯದ ರಹಸ್ಯವಾಗಲಿ, ಇರುವ ಸತ್ಯವಾಗಲಿ, ಹೇತು ಎನ್ನುವ ಪದದಿಂದಲೆ ತಿಳಿಯುತ್ತಿದೆ. ಆದ್ದರಿಂದ ಬ್ರಹ್ಮ ವಿದ್ಯಾ ಶಾಸ್ತ್ರವಾದ ಭಗವದ್ಗೀತೆಯಲ್ಲಿಯೆ, ಹೇತು ಎನ್ನುವ ಪದವು ಮುಖ್ಯವಾಗಿ ಬಳಸಲಾಗಿದೆ. ಆಗಿರುವಾಗ ಹೇತುವಾದ ಬಹಳ ದೊಡ್ಡದೆಂದು, ಸತ್ಯವನ್ನು ತಿಳಿಸುತ್ತದೆಂದು, ವಾಸ್ತವ ಸಂಬಂಧವನ್ನು ತಿಳಿಸುವುದೆಂದು ಅರ್ಥವಾಗುತ್ತಿದೆ. ಒಂದು ಸತ್ಯವನ್ನು ಮನುಷ್ಯ ತಿಳಿದುಕೊಳ್ಳಬೇಕೆಂದರೆ, ಅವನಿಗೆ ಮೊದಲು ಪ್ರಶ್ನೆ ಅವಶ್ಯ ನಂತರ ಉತ್ತರ ಅವಶ್ಯ. ಆದ್ದರಿಂದ ಭೂಮಿ ಮೇಲೆ ಹೇತುವಾದ ಪ್ರಶ್ನೆಗಳೊಂದಿಗೆ ಪ್ರಾರಂಭವಾಗಿ ಉತ್ತರಗಳೊಂದಿಗೆ ಮುಗಿಯುತ್ತದೆ. ಪ್ರಶ್ನೆ ಮಾತ್ರವಿದ್ದು ಉತ್ತರವಿಲ್ಲದ ದಿನ ಅದು ಹೇತುವಾದವಲ್ಲ.

ನಾನು ಹೇತುವಾದದೊಂದಿಗೆ ಜೀವನವನ್ನು ಪ್ರಾರಂಭಿಸಿದವನು. ಆದ್ದರಿಂದ ಚಿಕ್ಕವಯಸ್ಸಿನಿಂದಲೂ ಪ್ರತಿ ವಿಷಯದಲ್ಲಿಯು ನನ್ನಲ್ಲಿ ಪ್ರಶ್ನೆಗಳು

ಬರುತ್ತಿದ್ದವು. ಅವುಗಳ ಉತ್ತರಗಳಿಗಾಗಿ ದೊಡ್ಡವರನ್ನು ಕೇಳುತ್ತಿದ್ದೆನು. ಆ ಕಾಲದಲ್ಲಿ ಸ್ವಲ್ಪ ಜ್ಞಾನವಿರುವ ದೊಡ್ಡವರು ಸಹ ನನ್ನ ಪ್ರಶ್ನೆಗಳಿಗೆ ಉತ್ತರ ಹೇಳಲಾರದೆ, ಈ ವಯಸ್ಸಿನಲ್ಲಿ ಇವೆಲ್ಲಾ ನಿನಗೇಕೆ ಎಂದು ನನ್ನ ಬಾಯಿ ಮುಚ್ಚಿಸುತ್ತಿದ್ದರು. ನನಗೆ ಯುಕ್ತವಯಸ್ಸು ಬಂದನಂತರ ಒಬ್ಬ ದೊಡ್ಡ ಸ್ವಾಮೀಜಿಯನ್ನು ಯೋಗದಂಡವನ್ನು ಕುರಿತು ಪ್ರಶ್ನಿಸಿದೆನು. ನನ್ನ ಪ್ರಶ್ನೆ ತುಂಟತನದ್ದಾಗಲಿ, ಚಿಕ್ಕದಾಗಾಗಲಿ ಎಂದಿಗೂ ಇರುವುದಿಲ್ಲ. ನನ್ನ ಪ್ರಶ್ನೆ ವಿನಯ ವಿಧೇಯತೆಗಳಿಂದ ಕೂಡಿಕೊಂಡು, ಶಾಸ್ತ್ರ ಬದ್ಧವಾಗಿ ಇರುತ್ತದೆ. ನಾನು ಎಷ್ಟೋ ವಿನಯವಾಗಿ ಕೇಳಿದ ಪ್ರಶ್ನೆಗೆ, ಆ ಸ್ವಾಮೀಜಿ ಸಮಾಧಾನ ಹೇಳಲಾಗದೆ ತಲೆ ಬಾಲ ಇಲ್ಲದ ಉತ್ತರ ಹೇಳಿದನು. ಅಂದಿನಿಂದ ನನ್ನಲ್ಲಿ ಬಂದಿರುವ ಪ್ರಶ್ನೆಗಳಿಗೆ, ನಾನೇ ಉತ್ತರವನ್ನು ಅನುಭವಗಳಿಂದಾಗಲಿ, ಪರಿಶೋಧನೆಗಳಿಂದಾಗಲಿ ತಿಳಿದುಕೊಳ್ಳಬೇಕೆಂದುಕೊಂಡೆನು. ನನ್ನಲ್ಲಿ ಮೊದಲ ದೊಡ್ಡ ಪ್ರಶ್ನೆ ದೇವರ್‍ಯಾರು? ನನ್ನಲ್ಲಿನ ಎರಡನೇ ಪ್ರಶ್ನೆ ದೆವ್ವ ಅಂದರೆ ಏನು? ಈ ಎರಡು ಪ್ರಶ್ನೆಗಳ ನಂತರ ನಾನ್ಯಾರು ಎನ್ನುವ ಪ್ರಶ್ನೆ ಮೊದಲಾದ ಕೆಲವು ನೂರಾರು ಪ್ರಶ್ನೆಗಳಿವೆ. ಅವೆಲ್ಲಾ ತಿಳಿಯಬೇಕೆಂದರೆ, ಮೊದಲು ಎರಡನೇ ಪ್ರಶ್ನೆಯಿಂದ ಪ್ರಾರಂಭಿಸಿ ತಿಳಿದುಕೊಂಡರೆ, ದೊಡ್ಡ ಪ್ರಶ್ನೆಯಾದ ದೇವರ್‍ಯಾರು ಎನ್ನುವುದಕ್ಕೆ ಸಹ ಉತ್ತರವನ್ನು ಗ್ರಹಿಸಬಹುದೆಂದು ಅಂದುಕೊಂಡೆನು. ಆದ್ದರಿಂದ ಮೊದಲು ನನ್ನ ಪರಿಶೋಧನೆ ದೆವ್ವಗಳಿಂದ ಆರಂಭವಾಯಿತು. ಆ ಪರಿಶೋಧನೆಯಲ್ಲಿ ಎಷ್ಟೋ ನೂರು ಅನುಭವಗಳಿಂದ ಸತ್ಯವನ್ನು ತಿಳಿದುಕೊಂಡೆನು. ಒಂದೊಂದು ಅನುಭವದಲ್ಲಿ ಒಂದೊಂದು ಉತ್ತರವನ್ನು ಶೇಕರಿಸುತ್ತಾ ಬಂದೆನು. ಈ ಗ್ರಂಥದಲ್ಲಿ ಬರೆದ ಸಂಘಟನೆಗಳು, ನೂರಕ್ಕೆ ಒಂದನ್ನು ಮಾತ್ರ ಬರೆದಿದ್ದೇವೆ. ನನ್ನನ್ನು ಮೊಟ್ಟಮೊದಲು ಸ್ವಾಮಿ ಎಂದು ಕರೆದಿದ್ದು ಮನುಷ್ಯರಲ್ಲ ದೆವ್ವಗಳು! ಆ ದಿನಗಳಲ್ಲಿ ನಾನು ಯಾವ ಗುರುತು ಇಲ್ಲದೆ, ಸರ್ವ ಸಾಧಾರಣ ಮನುಷ್ಯನ ಹಾಗೆ ಇರುತ್ತಿದ್ದೆನು. ಮೇಲಾಗಿ ಹಾಗೆ ಕರೆದಾಗ ನನ್ನ ವಯಸ್ಸು ಇಪ್ಪತ್ತೆರಡು (22) ಸಂವತ್ಸರಗಳು ಮಾತ್ರ. ಹಾಗೆ ನನ್ನ ಎರಡನೇ ಪ್ರಶ್ನೆಯಾದ ದೆವ್ವವೆಂದರೆ ಏನು? ಎನ್ನುವುದಕ್ಕೆ ಉತ್ತರ ಪ್ರಾರಂಭವಾಗಿ, ನಂತರ ಕ್ಷುದ್ರ ದೇವತೆಗಳು,

ಮಹಾ ದೇವತೆಗಳವರೆಗೂ ಕೊನೆಸಾಗಿತು. ಸುಮಾರು ಹತ್ತು ಅಥವಾ ಹನ್ನೆರಡು ವರ್ಷಗಳು ಸಾಗಿದ ನನ್ನ ಅನ್ವೇಷಣೆಯಲ್ಲಿ ಎಷ್ಟೋ ಉತ್ತರಗಳು ಶಾಸ್ತ್ರ ಬದ್ಧತೆಯಿಂದ ಲಭಿಸಿದವು.

ಇಷ್ಟು ಸತ್ಯವಾದ ವಿಷಯವನ್ನು, ಹೇತುಬದ್ದವಾದ ವಿಷಯವನ್ನು ಓದಿಕೊಂಡಿರುವವರೆಲ್ಲಾ ಅಸತ್ಯವೆಂದೆನ್ನುವುದೇನು, ನಾವು ನಂಬುವುದಿಲ್ಲವೆಂದು ಎನ್ನುವುದೇನು, ಎಂದು ಯೋಚಿಸಿದರೆ, ಅವರ ಮೆದುಳಿನಲ್ಲಿ ಸೂಕ್ಷ್ಮವನ್ನು ಗ್ರಹಿಸುವ ಗ್ರಹಿತಶಕ್ತಿ ಇಲ್ಲವೆಂದು ಅರ್ಥವಾಗುತ್ತಿದೆ. ಎಲ್ಲರಿಗೂ ತಿಳಿದ ನವಗ್ರಹಗಳಲ್ಲಿ ಬುಧಗ್ರಹದವೊಂದು ಕಿರಣಗಳು ಆತನು ಹುಟ್ಟಿದ ಸಮಯದಲ್ಲಿ ಮೆದುಳಿನೊಳಗೆ ಪ್ರಸಾರವಾಗದೆ ಇರುವುದರಿಂದ, ಸೂಕ್ಷ್ಮಗಳಾದ ದೆವ್ವಗಳನ್ನು ಕುರಿತು ತಿಳಿದುಕೊಳ್ಳುವ ಶಕ್ತಿ ಇರುವುದಿಲ್ಲ. ಆದ್ದರಿಂದ ಬಹಳಜನ ದೆವ್ವಗಳಿಲ್ಲ, ಭೂತಗಳಿಲ್ಲ ಎನ್ನುತ್ತಿರುತ್ತಾರೆ. ಯಾರು ಏನಂದರೂ, ದೆವ್ವಗಳು ಎನ್ನುವವು ಮತ್ತು ದೇವತೆಗಳು ಎನ್ನುವವು ಎರಡು ಸತ್ಯಗಳೆ ಮತ್ತು ಅನುಭವ ಪೂರ್ವಕವಾದವುಗಳೆ. ಈ ಗ್ರಂಥದಲ್ಲಿ ವಿವಿಧ ರೀತಿಯ ಸಂಘಟನೆಗಳನ್ನು ವಿವರಿಸಿ ಹೇಳಿದರೂ, ಇಲ್ಲಿಯುವರೆಗು ನಾನು ದೆವ್ವಗಳನ್ನಾಗಲೀ, ದೇವತೆಗಳನ್ನಾಗಲೀ ಪ್ರತ್ಯಕ್ಷವಾಗಿ ನೋಡಿಲ್ಲ. ಒಂದು ದೆವ್ವವನ್ನು ಸಹ ನೋಡದೆ, ಎಲ್ಲ ವಿಷಯಗಳು ಹೇಗೆ ಬರೆದಿದ್ದೀರ ಅಂದರೆ ಅದಕ್ಕೆ ಉತ್ತರ, ಶರೀರಕ್ಕಿರುವ ಸ್ಥೂಲಕಣ್ಣುಗಳಿಗೆ ಸ್ಥೂಲ ಆಕಾರಗಳೇ ಕಾಣಿಸುತ್ತವೆ. ಆದರೆ ಸೂಕ್ಷ್ಮ ಆಕಾರಗಳು ಕಾಣಿಸುವುದಿಲ್ಲ. ಶರೀರದೊಳಗಿರುವ ಸೂಕ್ಷ್ಮನೇತ್ರವಾದ ಜ್ಞಾನನೇತ್ರಕ್ಕೆ ಸೂಕ್ಷ್ಮಗಳು ಕಾಣಿಸುವವು. ನನಗೆ ಕಾಣಿಸದ ದೆವ್ವಗಳನ್ನು ಕುರಿತು, ಮತ್ತು ಭೂತಗಳನ್ನು ಕುರಿತು ದೊಡ್ಡ ಗ್ರಹಗಳನ್ನು ಕುರಿತು, ನನ್ನ ಕೈಯಿಂದಲೆ ಈ ಗ್ರಂಥದಲ್ಲಿ ಬರೆಯಲಾಗಿದೆ. ಇಷ್ಟೆಲ್ಲಾ ಹೇಳಿದರು ಕೆಲವರು ಹೇಳಿದ್ದನ್ನು ಗ್ರಹಿಸದೆ, ದೆವ್ವವನ್ನು ನನಗೆ ತೋರಿಸುತ್ತೀಯಾ? ಎಂದು ಕೇಳುವವರು ಸಹ ಇದ್ದಾರೆ. ನಾನು ನೋಡಿದ್ದರೆ ನಿನಗೂ ತೋರಿಸುತ್ತಿದ್ದೆನು, ಆದರೆ ನಾನೇ ನೋಡದಿರುವಾಗ, ನಿನಗೆ ಹೇಗೆ ತೋರಿಸಬೇಕು? ನಾನು, ನೀನೇ ಅಲ್ಲ, ಯಾರೂ ನೋಡಲಾರರು. ಮನುಷ್ಯ ಪೂರ್ತಿ ನಿದ್ರೆಯಲ್ಲಿಲ್ಲದೆ, ಪೂರ್ತಿ ಎಚ್ಚರದಲ್ಲಿಯು ಸಹ ಇಲ್ಲದೆ

ಇರುವ ಸಮಯದಲ್ಲಿ ದೆವ್ವಗಳ ಸ್ವಲ್ಪ ನಮೂನೆ ಆಕಾರ ಕಾಣಿಸುವುದು. ಹಾಗೆ ಕಾಣಿಸಿರುವುದು ಸ್ಪಷ್ಟವಾಗಿ ಕಾಣಿಸುವುದಿಲ್ಲ. ಪೂರ್ತಿ ಎಚ್ಚರದಲ್ಲಿರುವಾಗ ಯಾವ ದೆವ್ವವು ಯಾರಿಗೂ ಕಾಣಿಸುವುದಿಲ್ಲ.

ದೆವ್ವವೆಂಬ ಬಳ್ಳಿಯನ್ನೆಳೆದರೆ ದೊಡ್ಡ ಹೆಮ್ಮರವೆ ಕದಲಿತು. ಅದರಲ್ಲಿಯೇ ರೋಗಗಳು ಜೀವರಾಶಿಗಳೆಂದು ಹೊರಬಿದ್ದಿದೆ. ಅಷ್ಟೆ ಅಲ್ಲದೆ ರೋಗಗಳಿಂದ ಮೇಘಗಳವರೆಗು ಎಳೆಯಷ್ಟು ಕದಲಿ ಕಾಣಿಸಿದಂತಾಗಿದೆ. ಇದರಲ್ಲಿ ಮೂನ್ನೂರು ಪುಟಗಳವರೆಗೂ ದೆವ್ವಗಳು, ದೇವತೆಗಳನ್ನು ಕುರಿತು ಹೇಳಲಾಗಿದೆ. ಅಲ್ಲಿಯವರೆಗು ದೆವ್ವಗಳು, ದೇವತೆಗಳ ಸಂಘಟನೆಗಳು ಆಸಕ್ತಿಯನ್ನುಂಟುಮಾಡುವವುಗಳಾಗಿ, ಯಾರಿಗೂ ತಿಳಿಯದ ವಿಷಯಗಳೆಷ್ಟೊ ತಿಳಿದು ಬಂದಿವೆ. ಮೂರುನೂರು ಪುಟಗಳ ನಂತರ ಹೇಳಿದ ಸಮಾಚಾರದಲ್ಲಿ ಬಹಳ ದೊಡ್ಡದಾದ ಜ್ಞಾನ ಒಳಗೊಂಡಿದೆ. ಈ ಗ್ರಂಥದ ಹೆಸರು ನೋಡಿದರೆ, ಏನೊ ದೆವ್ವಗಳ ವಿಷಯಗಳು ಕಾಲಕ್ಷೇಪಕ್ಕೆ, ಕಥೆಗಳನ್ನು ತಯಾರು ಮಾಡಿ ಬರೆದಿರುತ್ತಾರೆ ಎಂದು ಕೆಲವರು ಅಂದುಕೊಳ್ಳಬಹುದು. ಅಂತಹ ಉದ್ದೇಶದಿಂದ ಓದಲು ಪ್ರಾರಂಭಿಸಿದರೂ ನಂತರ, ಅದರಲ್ಲಿ ಹೇಳಿರುವವು ಹೆಣೆದ ಕಥೆಗಳಲ್ಲ, ನಡೆದ ಸಂಘಟನೆಗಳೆಂದು ತಿಳಿದುಹೋಗುತ್ತವೆ. ಇನ್ನೂ ಮುಂದಕ್ಕೆ ಓದಿದರೆ, ನಡೆದ ಸಂಘಟನೆಗಳಾದರೂ, ಇವು ಹೊತ್ತು ಹೋಗುವುದಕ್ಕೆ (ಕಾಲಕ್ಷೇಪಕ್ಕೆ) ಹೇಳಿರುವವಲ್ಲ, ಕರ್ಮ ಹೋಗುವುದಕ್ಕೆ (ಕರ್ಮಕ್ಷೇಪಕ್ಕೆ) ಹೇಳಿದ ಸಮಾಚಾರವೆಂದು ತಿಳಿದುಬರುತ್ತದೆ. ಮೇಘಗಳನ್ನು ಕುರಿತು ಹೇಳಿದ ಸಮಾಚಾರದಲ್ಲಿ, ಸ್ವಲ್ಪ ಮಾತ್ರವೆ ಮೇಘಗಳನ್ನು ಕುರಿತು ಪರಿಶೋಧನೆ ಮಾಡುವ ಶಾಸ್ತ್ರಜ್ಞರಿಗೆ ತಿಳಿದಿದೆಯೆಂದು ಅರ್ಥವಾಗಿ ಹೋಗುತ್ತದೆ. ಮೇಘಗಳ ವಿಷಯ ಇಲ್ಲಿಯವರೆಗು ಶಾಸ್ತ್ರಜ್ಞರಿಗು ಸಹ ತಿಳಿದಿಲ್ಲವೆಂದು, ಓದುತ್ತಾಹೋದರೆ ತಿಳಿದು ಹೋಗುತ್ತದೆ. ಪ್ರತಿ ವಿಷಯದಲ್ಲು ಹೇತುವನ್ನು ಹುಡುಕುತ್ತಾ ಹೋಗುವುದರಿಂದ, ದೊರಕಿದ ಉತ್ತರಗಳು ಬಹಳ ಜನ ಶಾಸ್ತ್ರಜ್ಞರ ಲೆಕ್ಕಾಚಾರಕ್ಕೂ ಸಹ ಮೀರಿಹೋದವುಗಳಾಗಿವೆ. ಈ ಗ್ರಂಥವನ್ನು ಓದಿದಷ್ಟು, ಕೊನೆಗೆ ನಮಗೆ ತಿಳಿಯದ ಹೊಸ ಪ್ರಪಂಚ ತಿಳಿದಂತಾಗುತ್ತದೆ.

ಸಾಯಿಬಾಬಾ ಮೊದಲಾದ ಮಹಾತ್ಮರು ಪ್ರಜೆಗಳನ್ನು ಉದ್ಧರಿಸುವುದಕ್ಕೆ, ಅವರನ್ನು ಎಷ್ಟೋ ಆಪತ್ತುಗಳಿಂದ ಕಾಪಾಡುವುದಕ್ಕೆ ಕೆಲವು ನೂರು ಸಂವತ್ಸರಗಳಿಂದ ಭೂಮಿಮೇಲೆಯೇ ಇದ್ದಹಾಗೆ, ಅವರು ಅವರ ಶಿಷ್ಯರು ಎಷ್ಟೋ ಮಹತ್ವಗಳನ್ನು ತೋರಿಸಿರುವುದು ಸಹ ನಡೆದಿದೆಯೆಂದು ಈ ಗ್ರಂಥದಲ್ಲಿ ತಿಳಿದುಬಂದಿದೆ. ದೊಡ್ಡವರಾದ ಪೆನುಕೊಂಡ ಬಾಬಾ ಪಕ್ರುದ್ದೀನ್, ಪುಟ್ಟಪರ್ತಿ ಸಾಯಿಬಾಬಾರವರು ಮಾನವರ ಶ್ರೇಯಸ್ಸಿಗಾಗಿ ಎಷ್ಟೋ ಸಂವತ್ಸರಗಳಿಂದ ಜನ್ಮಗಳನ್ನು ತೆಗೆದುಕೊಳ್ಳದೆ, ಒಂದೇ ಜನ್ಮದಲ್ಲಿ ಇದ್ದಹಾಗೆ ಸಹ ಅವರಿಂದಲೆ ತಿಳಿದು ಬಂದಿದೆ. ಮಾನವನು ಪ್ರಕೃತಿ ಶಕ್ತಿಯ ಮುಂದೆ ಬಲಹೀನನೆಂದು, ಯೋಗಿಗಳ ಶಕ್ತಿ ಪ್ರಕೃತಿ ಶಕ್ತಿಗಳಿಗಿಂತ ಬಲವಾದದೆಂದು, ಅವಶ್ಯಬಂದರೆ ಪ್ರಕೃತಿಯನ್ನು ಸಹ ಶಪಿಸುವಂತಹ ಸಾಮರ್ಥ್ಯ ಯೋಗಿಗಳಿಗಿರುತ್ತದೆಂದು ಸಹ ಇದರಲ್ಲಿ ತಿಳಿದುಬಂದಿದೆ. ಅಷ್ಟೇ ಅಲ್ಲದೆ ಈ ಗ್ರಂಥದಲ್ಲಿ ಯೋಗಿಗಳನ್ನು ದೊಡ್ಡದಾಗಿ ಹೇಳಿರುವುದೇ ಅಲ್ಲದೆ, ಯೋಗಿಗಳಿಗೆ ಪ್ರಕೃತಿ ಶಕ್ತಿಗಳೇ ಅಲ್ಲದೆ, ದೆವ್ವಗಳು, ದೇವತೆಗಳು, ಭೂತಗಳು, ಗ್ರಹಗಳು ಎಲ್ಲವು ಗೌರವಕೊಡುತ್ತವೆಂದು, ಕೆಲವು ಕಡೆ ಯೋಗಿಗಳು ಹೇಳಿದಹಾಗೆ ನಡೆದುಕೊಳ್ಳುತ್ತವೆಂದು ತಿಳಿಸಲಾಗಿದೆ. ಈ ಗ್ರಂಥದಿಂದ, ಇತ್ತ ಪ್ರಪಂಚ ಜ್ಞಾನ, ಅತ್ತ ಪರಮಾತ್ಮ ಜ್ಞಾನ ತಿಳಿಯುವುದು. ಅಷ್ಟೇ ಅಲ್ಲದೆ ನಾವು ದೊಡ್ಡವರು, ಎಲ್ಲ ನಮಗೆ ತಿಳಿದಿದೆ ಎನ್ನುವ ಈಗಿನ ಕಾಲದ ಹೇತುವಾದಿಗಳು ಈ ಗ್ರಂಥವನ್ನು ಓದಿದ ನಂತರ ಅವರು ಸಹ ನಿಜವಾದ ಹೇತುವನ್ನು ಅನುಸರಿಸಿ, ನಿಜವಾದ ಹೇತುವಾದಿಗಳಾಗಿ (ಸತ್ಯವಾದಿಗಳಾಗಿ) ಬದಲಾಗುತ್ತಾರೆಂದು ಅಂದುಕೊಳ್ಳುತ್ತಿದ್ದೇನೆ.

ಪ್ರಪಂಚ ವಿಷಯಗಳಿಂದ ಪ್ರಾರಂಭವಾದ ಈ ಗ್ರಂಥ ಕೊನೆಗೆ ಪರಮಾತ್ಮ ವಿಷಯದವರೆಗು ತೆಗೆದುಕೊಂಡು ಹೋಗಿದೆ. ಹಾಗೆಂದು ಯಾವುದೋ ದೇವರ ಜ್ಞಾನವೆಂದು ಎಲ್ಲಾ ಪುಸ್ತಕಗಳಲ್ಲಿ ಇದ್ದಹಾಗೆ, ಎಲ್ಲಾ ಸ್ವಾಮೀಜೀಗಳು ಹೇಳಿದಹಾಗೆ ಹೇಳಿರುತ್ತಾರೆಂದು ಅಂದುಕೊಳ್ಳಬೇಡಿ. ಇಲ್ಲಿಯವರೆಗೂ ಯಾರೂ ಹೇಳದ ಸತ್ಯವಾದ ದೇವರ ವಿಧಾನವನ್ನು ಅಕ್ಷರಸಃ ಸತ್ಯವಾದ ಪದ್ಧತಿಯನ್ನು

ಎಲ್ಲರಿಗು ಅರ್ಥವಾಗುವ ಹಾಗೆ ಹೇಳಲಾಗಿದೆ. ಒಂದು ದೇಶದಲ್ಲಿನ ಪ್ರಭುತ್ವ ಪರಿಪಾಲನಾ ವಿಧಾನ ಇದ್ದಹಾಗೆ, ವಿಶ್ವವೆಲ್ಲದಕ್ಕು ಕಾಣಿಸದ ಪ್ರಭುತ್ವ, ಕಾಣಿಸದ ಪಾಲನೆ ಇದೆಯೆಂದು, ವಿಶ್ವವೆಲ್ಲಾ ಇರುವ ಕಾಣಿಸದ ಪ್ರಭುತ್ವಕ್ಕೆ, ಅಧಿಪತಿ ಇಲ್ಲವೆ ರಾಜ ಕಾಣಿಸದ ದೇವರೆಂದು, ದೇವರ ಪ್ರಭುತ್ವದಲ್ಲಿನ ಪಾಲಕರಾದ ಅಧಿಕಾರಿಗಳು ಇವರೇ ಎಂದು ಯಾರಿಗು ತಿಳಿಯದೆಂದು, ಅವರ ಪಾಲನೆ ಎಷ್ಟೋ ಬಲದಿಂದ ಕೂಡಿಕೊಂಡಿರುತ್ತದೆಂದು ತಿಳಿಯುತ್ತಿದೆ. ದೇವರ ಪಾಲಕರಾದ ಮಹಾಭೂತಗಳು, ಸ್ವಲ್ಪಭೂತಗಳು ಉಪಭೂತಗಳು, ಗ್ರಹಗಳು ಮೊದಲಾದವುಗಳು ನಿಜಾಯಿತಿ ಇರುವವುಗಳಾಗಿ, ಬಡವ, ಧನಿಕ ಎಂಬ ಬೇಧವಿಲ್ಲದೇ ಸ್ವಚ್ಛವಾದ ಪಾಲನೆಯನ್ನು ಒದಗಿಸುತ್ತಾ, ಭೂಮಿ ಮೇಲೆಯೇ ಮನುಷ್ಯನಿಗೆ ಸ್ವರ್ಗವನ್ನು ಮತ್ತು ನರಕವನ್ನು ತೋರಿಸುತ್ತವೆಂದು ತಿಳಿಸಲಾಗಿದೆ. ಭೂಮಿ ಮೇಲಿರುವ ಎಲ್ಲ ಮತದವರು ಎಲ್ಲೋ ಮೇಲಿನ ಲೋಕಗಳಲ್ಲಿವೆ ಯೆಂದು ಹೇಳುತ್ತಿರುವ ಸ್ವರ್ಗ, ನರಕಗಳು ಅಸತ್ಯವೆಂದು, ಭೂಮಿಮೇಲೆಯೆ ಸ್ವರ್ಗ ನರಕಗಳು ಎರಡೂ ಇವೆಯೆಂದು, ಅವು ದೇವರ ಪಾಲಕರು ವಿಧಿಸುವ ಪ್ರತ್ಯಕ್ಷ ಸತ್ಯಗಳೆಂದು ತಿಳಿಯದ ದೊಡ್ಡ ರಹಸ್ಯಗಳು ಈ ಗ್ರಂಥದ ಕೊನೆಯಲ್ಲಿ ಬರೆಯಲಾಗಿದೆ. ಆದ್ದರಿಂದ ಈ ಗ್ರಂಥವನ್ನು ಓದಿದವರಿಗೆ ಪಾಪದ ಫಲ ಎಷ್ಟು ಭಯಂಕರವಾಗಿರುತ್ತದೊ ಅರ್ಥವಾಗುತ್ತದೆ. ಹಾಗೆ ಅರ್ಥವಾಗುವುದರಿಂದ ಮನುಷ್ಯ ಕರ್ಮದಿಂದ ಹೊರಬೀಳುವುದಕ್ಕೆ ಪ್ರಯತ್ನಿಸುವನು. ಪಾಪದಿಂದ ಹೊರಬೀಳುವುದಕ್ಕೆ ಒಂದೇ ಒಂದು ದೈವಮಾರ್ಗವನ್ನು ಅನುಸರಿಸುತ್ತಾನೆಂದು ನೆನೆಸುತ್ತೇವೆ.

ಇಂತಿ

**ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ದೇವರು ಎನ್ನುವ ಮಾತು ಹುಟ್ಟಿದ ಪ್ರತಿ ಮನುಷ್ಯನಿಗೂ ಗೊತ್ತು. ಆದರೆ ಕೆಲವರು ದೇವರನ್ನು ವಿಶ್ವಾಸಿಸುತ್ತಾರೆ, ಕೆಲವರು ವಿಶ್ವಾಸಿಸುವುದಿಲ್ಲ. ವಿಶ್ವಾಸಿಸುವರನ್ನು ಆಸ್ತಿಕರೆಂದು, ವಿಶ್ವಾಸಿಸದವರನ್ನು ನಾಸ್ತಿಕರೆಂದು ಅನ್ನುತ್ತಾರೆ. ವಾಸ್ತವವಾಗಿ ಇತ್ತ ಆಸ್ತಿಕರಿಗಾಗಲಿ, ಅತ್ತ ನಾಸ್ತಿಕರಿಗಾಗಲಿ ದೇವರು ತಿಳಿದಿಲ್ಲ. ಏಕೆಂದರೆ ದೇವರು ನಿಜವಾಗಿ ಇಲ್ಲ, ಸುಳ್ಳಾಗಿ ಇದ್ದಾನೆ. ಈ ನಮ್ಮ ಮಾತನ್ನು ಅನುಸರಿಸಿ ನೋಡಿದರೆ ನೀವು ಸಹ ನಾಸ್ತಿಕರೇನಾ? ಎಂದು ನಮ್ಮನ್ನು ನೀವು ಪ್ರಶ್ನಿಸಬಹುದು. ಅದಕ್ಕೆ ಸಮಾಧಾನ ನಾವು ನಾಸ್ತಿಕರು ಯಾಮಾತ್ರವು ಅಲ್ಲ, ಹಾಗೆಂದು ಈಗಿರುವಂತಹ ಆಸ್ತಿಕರು ಅಲ್ಲ, ದೇವರು ಸುಳ್ಳಾಗಿ ಇದ್ದಾನೆಂದು ಹೇಳುತ್ತಿದ್ದೇವಲ್ಲ! ಆದ್ದರಿಂದ ಇತ್ತ ನಾಸ್ತಿಕರಿಗೆ ಅತ್ತ ಆಸ್ತಿಕರಿಗೆ ಮಧ್ಯೆ ದಲ್ಲಿರುವವರೆಂದು ನೆನಪಲ್ಲಿಟ್ಟುಕೊಳ್ಳಬೇಕು.

ದೇವರಿಗೆ ರೂಪ, ಹೆಸರು ಇಟ್ಟುಕೊಂಡು ಅನೇಕ ಪೂಜೆಗಳು, ಯಜ್ಞಯಾಗಾದಿಗಳು ಮಾಡುತ್ತಿರುವ ಈಗಿನ ಆಸ್ತಿಕರನ್ನು ನಾವು ಒಪ್ಪುವುದಿಲ್ಲ. ಆದ್ದರಿಂದ ನಮ್ಮನ್ನು ನಾಸ್ತಿಕರ ಸಾಲಿಗೆ ಕೆಲವರು ಆಸ್ತಿಕರು ಸೇರಿಸಿದ್ದಾರೆ. ಆದರೆ ನಾವು ದೇವರನ್ನು ಇಲ್ಲವೆಂದು ಹೇಳಲಿಲ್ಲವಲ್ಲ! ಸುಳ್ಳಾಗಿ ಇದ್ದಾನೆಂದು ಹೇಳುತ್ತಿದ್ದೇವೆ! ಆದ್ದರಿಂದ ನಾವು ನಾಸ್ತಿಕರು ಅಲ್ಲ. ಅದೇ ವಿಧವಾಗಿ ದೇವರು ಇಲ್ಲವೆಂದು ಮೊದಲು ಹೇಳಿದರೂ ಕೊನೆಯಲ್ಲಿ ಸುಳ್ಳಾಗಿ ಇದ್ದಾನೆನ್ನುವುದರಿಂದ ನಾಸ್ತಿಕರು ನಮ್ಮನ್ನು ಆಸ್ತಿಕರ ಲೆಕ್ಕಕ್ಕೆ ಸೇರಿಸಿದರೂ ನಾವು ಅವರಂದುಕೊಂಡಹಾಗೆ ಆಸ್ತಿಕರು ಅಲ್ಲ. ದೇವರು ನಿಜವಾಗಿ ಇಲ್ಲವೆಂದು ಹೇಳುತ್ತಿದ್ದೇವಲ್ಲವೆ! ಆದ್ದರಿಂದ ನಮ್ಮನ್ನು ಆಸ್ತಿಕರೆನ್ನುವುದಕ್ಕು ಸಹ ಅವಕಾಶವಿಲ್ಲ. ನಾವು ಹೇಳುವ ಮಾತುಗಳು ಬಹಳ ಗಲಿಬಿಲಿಯಾಗಿ ಇವೆ ಅಲ್ಲವೆ! ಇಷ್ಟಕ್ಕೂ ನೀವು ಯಾರೆಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನವೇನೆಂದರೆ! ನಾವು ನಾಸ್ತಿಕರಾಗಿ ಕೆಲವರಿಗೆ, ಆಸ್ತಿಕರಾಗಿ ಕೆಲವರಿಗೆ ಕಾಣಿಸಿದರೂ ವಾಸ್ತವವಾಗಿ ನಾವು ಸತ್ಯವಾದಿಗಳು. ಸತ್ಯಶೋಧನೆ ಮಾಡಿ ನೋಡಿದರೆ ದೇವರಿದ್ದಾನೆನ್ನುವ ಆಸ್ತಿಕರಲ್ಲಿ ದೇವರನ್ನು ಕುರಿತಿರುವ ಭಾವವಾಗಲಿ, ದೇವರು ಇಲ್ಲ ಎನ್ನುವ ನಾಸ್ತಿಕರಲ್ಲಿ ದೇವರನ್ನು ಕುರಿತಿರುವ

ಅವಗಾಹನೆಯಾಗಲಿ ವಾಸ್ತವಕ್ಕೆ ದೂರವಾಗಿ ಇವೆ. ಆಸ್ತಿಕರು ಅಂದುಕೊಂಡ ಭಾವದ ಪ್ರಕಾರ ದೇವರು ಇಲ್ಲ. ಹಾಗೆ ನಾಸ್ತಿಕರು ಅಂದುಕೊಂಡ ಭಾವದ ಪ್ರಕಾರವೂ ಸಹ ದೇವರು ಇಲ್ಲ. ಇದನ್ನು ಅನುಸರಿಸಿ ನೋಡಿದರೆ ದೇವರ ವಾಸ್ತವಿಕತೆ ಈ ಕಡೆ ಆಸ್ತಿಕರಿಗಾಗಲಿ, ಆ ಕಡೆ ನಾಸ್ತಿಕರಿಗಾಗಲಿ ಸ್ವಲ್ಪವಾದರು ತಿಳಿದಿಲ್ಲವೆಂದೇ ಹೇಳಬಹುದು.

ಭೂಮಿ ಮೇಲೆ ಇರುವ ಶಾಸ್ತ್ರಗಳು ಒಟ್ಟು ಆರು ಮಾತ್ರ, ಅದರಲ್ಲಿ 1) ಗಣಿತ, 2) ರಸಾಯನಿಕ, 3) ಭೌತಿಕ 4) ಖಗೋಳ ಶಾಸ್ತ್ರಗಳು ನಾಲ್ಕು ಪ್ರಪಂಚಕ್ಕೆ ಸಂಬಂಧಿಸಿರುವವುಗಳಾದರೆ, ಐದನೆಯದಾದ ಜ್ಯೋತಿಷ್ಯಶಾಸ್ತ್ರ ಈ ಕಡೆ ಪ್ರಪಂಚಕ್ಕೆ ಆ ಕಡೆ ಪರಮಾತ್ಮನಿಗೆ ಸಂಬಂಧಿಸಿ ಮಧ್ಯೆದಲ್ಲಿದೆ. ಆರನೇ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರ ದೇವರಿಗೆ ಸಂಬಂಧಿಸಿದೆ. ಇದನ್ನು ಅನುಸರಿಸಿ ನೋಡಿದರೆ ಶಾಸ್ತ್ರಗಳು ಮೂರು ಭಾಗಗಳೆಂದು, ನಾಲ್ಕು ಶಾಸ್ತ್ರಗಳು ಪ್ರಕೃತಿಗೆ ಸಂಬಂಧಿಸಿದವುಗಳೆಂದು, ಐದನೆಯದು ಪ್ರಕೃತಿಗು, ಪರಮಾತ್ಮನಿಗು ಸಂಬಂಧಿಸಿರುವುದೆಂದು, ಆರನೆಯದು ಒಂದು ಮಾತ್ರ ಪರಮಾತ್ಮನಿಗೆ ಸಂಬಂಧಿಸಿರುವುದೆಂದು ತಿಳಿಯುತ್ತಿದೆ. ಇನ್ನೂ ಸ್ವಲ್ಪ ಯೋಚಿಸಿದರೆ ಕೆಲವರ ದೃಷ್ಟಿಯಲ್ಲಿ ಗಣಿತ, ರಸಾಯನಿಕ, ಭೌತಿಕ, ಖಗೋಳ ಶಾಸ್ತ್ರಗಳು ಪೂರ್ತಿ ಪ್ರಪಂಚಕ್ಕೆ ಸಂಬಂಧಿಸಿದವುಗಳಾದರೆ, ಕೇವಲ ಜ್ಯೋತಿಷ್ಯ ಶಾಸ್ತ್ರ, ಬ್ರಹ್ಮವಿದ್ಯಾಶಾಸ್ತ್ರ ಎರಡು ಆಧ್ಯಾತ್ಮಿಕಕ್ಕೆ ಸಂಬಂಧಿಸಿದವುಗಳಾಗಿವೆ. ಮತ್ತೆ ಕೆಲವರ ದೃಷ್ಠಿಯಲ್ಲಿ ಬ್ರಹ್ಮವಿದ್ಯಾ ಶಾಸ್ತ್ರ ಇಲ್ಲವೆ ಇಲ್ಲ. ಇನ್ನೂ ಕೆಲವರ ದೃಷ್ಠಿಯಲ್ಲಿ ಜ್ಯೋತಿಷ್ಯ ಶಾಸ್ತ್ರವೇ ಅಲ್ಲ. ಅಂತವರಿಗೆ ಕೇವಲ ನಾಲ್ಕು ಶಾಸ್ತ್ರಗಳೆ ಕಾಣಿಸುತ್ತಿವೆ. ಈ ವಿಧವಾಗಿ ಕೆಲವರ ದೃಷ್ಠಿಯಲ್ಲಿ ನಾಲ್ಕು, ಕೆಲವರ ದೃಷ್ಠಿಯಲ್ಲಿ ಐದು, ಕೆಲವರ ದೃಷ್ಠಿಯಲ್ಲಿ ಆರು ಇವೆ. ಆಸ್ತಿಕರ ದೃಷ್ಠಿಯಲ್ಲಿ ಐದು ಮತ್ತು ಆರು ಶಾಸ್ತ್ರಗಳಿದ್ದರೆ, ನಾಸ್ತಿಕರ ದೃಷ್ಠಿಯಲ್ಲಿ ಕೇವಲ ನಾಲ್ಕು ಶಾಸ್ತ್ರಗಳೆ ಇವೆ. ನಾಸ್ತಿಕರು ಆರನೇ ಶಾಸ್ತ್ರದ ಮೇಲೆ ಏನು ಮಾತನಾಡದೆ ಮೂಢನಂಬಿಕೆಯೆನ್ನುತ್ತಾ ದೇವರೇ ಇಲ್ಲ ಎನ್ನುತ್ತಾರೆ, ಅಂತಹ ನಾಸ್ತಿಕರೆ ಜ್ಯೋತಿಷ್ಯದ ಮೇಲೆ ಮಾತನಾಡುತ್ತಾ

ಜ್ಯೋತಿಷ್ಯ ಶಾಸ್ತ್ರವಲ್ಲವೆಂದು, ಅದನ್ನು ನಿರೂಪಿಸುತ್ತೀರ ಎಂದು ಕೋಟಿ ಪಂದ್ಯದಿಂದ ಸವಾಲು ಬೀಸುತ್ತಿದ್ದಾರೆ.

ನಾಸ್ತಿಕರಿಗೆ ತಿಳಿದ ಗಣಿತ, ರಸಾಯನಿಕ, ಭೌತಿಕ, ಖಗೋಳ ಶಾಸ್ತ್ರಗಳು ಇತ್ತೀಚೆಗೆ ನೂರು ಸಂವತ್ಸರಗಳಿಂದ ಅಭಿವೃದ್ಧಿಯಾಗಿ ಅವುಗಳಲ್ಲಿನ ಬಹಳ ವಿಷಯಗಳು ಎಲ್ಲರಿಗು ತಿಳಿದಿವೆ. ಈ ನಾಲ್ಕು ಶಾಸ್ತ್ರಗಳ ಅನುಸಂಧಾನದಿಂದಲೆ ಕಳೆದ ಐವತ್ತು ಸಂವತ್ಸರಗಳಿಂದ ಮಾನವನ ಜೀವನ ಸುಖಮಯವಾಗುವುದಕ್ಕೆ ಎಷ್ಟೋ ಪರಿಕರಗಳು ಕಂಡುಬಂದಿವೆ. ಈ ನಾಲ್ಕು ಶಾಸ್ತ್ರಗಳನ್ನು ಓದಿದ ಮನುಷ್ಯರು, ಈ ನಾಲ್ಕು ಶಾಸ್ತ್ರಗಳಿಂದ ಅಭಿವೃದ್ಧಿ ಪಡೆದ ಮನುಷ್ಯರು, ಎಲ್ಲಾ ನಾವೇ ಕಂಡುಕೊಂಡಿದ್ದೇವೆ, ಇದೆಲ್ಲವು ಮಾನವನ ಮೇಧಸ್ಸಿನಿಂದಲೆ ನಡೆದಿದೆ, ಇದರಲ್ಲಿ ದೇವರ ಪಾತ್ರ ಸ್ವಲ್ಪವಾದರೂ ಇಲ್ಲವೆಂದು ಹೇಳುತ್ತಾ ನಾಸ್ತಿಕರಾಗಿ ಹೋಗಿದ್ದಾರೆ. ಜ್ಯೋತಿಷ್ಯದ ಮೇಲೆ, ಬ್ರಹ್ಮವಿದ್ಯಾ ಶಾಸ್ತ್ರದ ಮೇಲೆ ನಂಬಿಕೆಯಿರುವ ಕೆಲವರು ಮಾತ್ರ ಆ ಶಾಸ್ತ್ರಗಳನ್ನು ಪೂರ್ತಿ ತಿಳಿಯದಿದ್ದರೂ ಅವುಗಳ ಮೇಲಿನ ನಂಬಿಕೆಯಿಂದ ಆಸ್ತಿಕರಾಗಿ ಇದ್ದಾರೆ. ಆಸ್ತಿಕರಾದವರಲ್ಲಿ ಕೆಲವರು ಜ್ಯೋತಿಷ್ಯದ ಮೇಲೆ, ಕೆಲವರು ಬ್ರಹ್ಮವಿದ್ಯೆ ಮೇಲೆ ಆಸಕ್ತಿ ಇದ್ದರೂ ಅವುಗಳಲ್ಲಿನ ಪೂರ್ತಿ ಪರಿಶೋಧನೆ ಇಲ್ಲದೆ, ತಿಳಿದಿರುವುದು ಸ್ವಲ್ಪವಾದರೂ ಎಲ್ಲ ತಿಳಿದಹಾಗೆ ಭಾವಿಸಿಕೊಳ್ಳುತ್ತಿದ್ದಾರೆ. ಒಟ್ಟಾರೆ ಗಣಿತ, ರಸಾಯನಿಕ, ಭೌತಿಕ, ಖಗೋಳ ಶಾಸ್ತ್ರಗಳು ಪರಿಶೋಧಿಸಲ್ಪಟ್ಟು ಅಭಿವೃದ್ಧಿ ಆದಂತೆ ಜ್ಯೋತಿಷ್ಯವಾಗಲಿ, ಬ್ರಹ್ಮವಿದ್ಯಾಶಾಸ್ತ್ರವಾಗಲಿ ಶೋಧಿಸಲ್ಪಟ್ಟಿಲ್ಲ, ಅಭಿವೃದ್ಧಿಯೂ ಆಗಿಲ್ಲ. ಈ ಎರಡು ಶಾಸ್ತ್ರಗಳಲ್ಲಿ ಆಸ್ತಿಕರಾದವರು ಭಿನ್ನಾಭಿಪ್ರಾಯಗಳನ್ನು ಹೊಂದಿದ್ದಾರೆ. ಆದ್ದರಿಂದ ಯಾರಿಗೆ ತಿಳಿದಿದ್ದನ್ನು ಅವರೆ ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದಾರೆ. ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ನಮಗೆ ತಿಳಿದಿರುವುದು ಸತ್ಯವೊ ಅಲ್ಲವೊಎಂದು ಯೋಚಿಸುವುದಿಲ್ಲ. ಹೇಳುವುದರಲ್ಲಿ ಶಾಸ್ತ್ರೀಯತೆ ಇದೆಯೆ ಇಲ್ಲವೆ ಎಂದು ಸಹ ಆಲೋಚಿಸದೆ ಯಾರದು ಅವರು ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದಾರೆ. ಆದ್ದರಿಂದ ಈ ದಿನ ಆಧ್ಯಾತ್ಮಿಕರಂಗ ಅನೇಕ ಸೀಳಿಕೆಗಳಾಗಿ ಅನೇಕ ಮತಗಳಿಂದ, ಅನೇಕ ಸಾಂಪ್ರದಾಯಗಳಿಂದ, ಅನೇಕ ಹೆಸರುಗಳಿಂದ ಅನೇಕ ಆಚಾರಗಳಿಂದ ಕಾಣಿಸುತ್ತಿದೆ.

ಈ ವಿಧದಲ್ಲಿ ಆಸ್ತಿಕರು ಜ್ಯೋತಿಷ್ಯ, ಬ್ರಹ್ಮವಿದ್ಯಾ ಶಾಸ್ತ್ರಗಳನ್ನು ಪೂರ್ತಿ ತಿಳಿಯದೆ ಯಾರಿಗೆ ತೋಚಿದ್ದು ಅವರು ಹೇಳುತ್ತಿರುವಾಗ, ಅದರಲ್ಲಿನ ಅಂತರಗಗಳನ್ನು ಗಮನಿಸಿದ ನಾಸ್ತಿಕರು ಕೆಲವರು ಅಸಲು ಆಸ್ತಿಕವಾದವೇ ತಪ್ಪು ಎನ್ನುತ್ತಿದ್ದಾರೆ. ಬ್ರಹ್ಮವಿದ್ಯೆಯನ್ನು ಅಸಲು ಒಪ್ಪಿಕೊಳ್ಳದೆ ದೇವರೆ ಇಲ್ಲ ಎನ್ನುತ್ತಿದ್ದಾರೆ. ಅಂತಹ ನಾಸ್ತಿಕರಲ್ಲಿ ಎರಡು ಪಂಗಡಗಳು ಇವೆ. ಒಂದು ಪಂಗಡ ಹೇತುವಾದಿಗಳೆಂದು, ಮತ್ತೊಂದು ಪಂಗಡ ನಾಸ್ತಿಕವಾದಿಗಳೆಂದು ಅನ್ನುತ್ತಿದ್ದಾರೆ. ನಾಸ್ತಿಕವಾದಿಗಳು ಬೇರೆ ಹೇತುವಾದಿಗಳು ಬೇರೆಯೆಂದು ಕೆಲವರಂದರೂ ವಾಸ್ತವವಾಗಿ ಹೇತುವಾದವೆನ್ನುವ ಹೆಸರಿನಿಂದಿರುವುದು ಸಹ ನಾಸ್ತಿಕವಾದವೆ. ಹೆಸರಿಗೆ ಹೇತುವಾದ ದೊಡ್ಡದೆ, ಆದರೆ ಹೇತುವಾದಿಗಳು ಯಾರೂ ಇಲ್ಲ, ಎಲ್ಲಾ ನಾಸ್ತಿಕವಾದಿಗಳೆ ಇರುವರು. ಹೇತುವಾದದಲ್ಲಿ ಪರಿಶೋಧನೆ, ಪರಿಶೀಲನೆ ದೃಷ್ಟಿ ಇರುತ್ತದೆ. ಅಂಧಕಾರದಿಂದ ಯಾವುದನ್ನೂ ಹೇತುವಾದ ಅಲ್ಲ ಎನ್ನುವುದಿಲ್ಲ. ಹೇತುವನ್ನು (ಕಾರಣವನ್ನು) ಪ್ರಶ್ನಿಸುವುದು ಹೇತುವಾದ. ಕಾರಣಕ್ಕೆ ಉತ್ತರ ದೊರಕಿದಾಗ ಅದನ್ನು ಪರಿಶೀಲಿಸಿ ಸತ್ಯವಾದರೆ ಒಪ್ಪಿಕೊಳ್ಳುವುದೂ, ಸತ್ಯವಿಲ್ಲದೆ ಹೋದರೆ ಖಂಡಿಸುವುದು ಹೇತುವಾದದಲ್ಲಿನ ಮುಖ್ಯ ಉದ್ದೇಶ. ಹಾಗಲ್ಲದೆ ಕೇಳಿದ ಸತ್ಯವನ್ನು ಪರಿಶೀಲಿಸದೆ ಖಂಡಿಸುವುದೆ ತಮ್ಮ ಕೆಲಸ ಆದಹಾಗೆ ವಾದಿಸುವುದನ್ನು ನಾಸ್ತಿಕವಾದವೆ ಎನ್ನಬಹುದು. ಇಂತಹ ನಾಸ್ತಿಕವಾದ ಇದೆಯಾಗಲಿ ಹೇತುವಾದವಿಲ್ಲ, ಇಲ್ಲವೆನ್ನುವುದಕ್ಕೆ ಒಂದು ಉದಾಹರಣೆಯಾಗಿ ಒಂದು ಯಥಾರ್ಥ (ನೈಜ) ಸಂಘಟನೆಯನ್ನು ನೋಡೋಣ.

ಆಂಧ್ರಪ್ರದೇಶ್ ರಾಷ್ಟ್ರದಲ್ಲಿ ರಾಯಲಸೀಮ ಪ್ರಾಂತದಲ್ಲಿ ಗುಂತಕಲ್ಲು, ಗುತ್ತಿ ಎನ್ನುವ ಎರಡು ಊರುಗಳ ಮಧ್ಯೆದಲ್ಲಿ ರೈಲ್ವೇಟ್ರ್ಯಾಕ್ ಪಕ್ಕದಲ್ಲಿಯೆ ಒಂದು ಚಿಕ್ಕ ಹಳ್ಳಿ ಇದೆ. ಆ ಊರಿನಲ್ಲಿ ಎಲ್ಲರೂ ಕಷ್ಟ ಜೀವಿಗಳೆ, ಗಂಡಸರೆಲ್ಲ ವ್ಯವಸಾಯದಲ್ಲಿ ಮಗ್ನರಾದರೆ, ಸ್ತ್ರೀಯರು ಕೆಲವರು ಹಾಲು, ಮೊಸರನ್ನು ಐದು ಕಿಲೋಮೀಟರುಗಳ ದೂರದಲ್ಲಿರುವ ಗುತ್ತಿಗೆ ತೆಗೆದುಕೊಂಡು ಹೋಗಿ

ಅಲ್ಲಿ ಮಾರಾಟ ಮಾಡಿಕೊಂಡು ಜೀವನ ಸಾಗಿಸುತ್ತಿದ್ದರು. ಆ ಹಳ್ಳಿ ವಾಸಸ್ಥರಿಗೆ ತೆಲುಗು ಭಾಷೆ ಹೊರತು ಬೇರೆ ಯಾವ ಭಾಷೆ ಗೊತ್ತಿಲ್ಲ. ತೆಲುಗು ಭಾಷೆಯೂ ಸಹ ಸ್ಪಷ್ಟವಾಗಿ ಅಲ್ಲದೆ ಆ ಪ್ರಾಂತಕ್ಕೆ ತಕ್ಕಹಾಗೆ ಸ್ವಲ್ಪ ಭಿನ್ನವಾಗಿ ಇರುತ್ತಿತ್ತು. ಆ ಊರಿನ ಹೆಂಗಸರು ಕೆಲವರು ಗುಂಪಾಗಿ ಮುಂಜಾನೆಯೆ ಹೊರಟು ರೈಲ್ವೇ ಟ್ರ್ಯಾಕ್ ಪಕ್ಕದಲ್ಲಿ ನಡೆದುಕೊಂಡು ಹೋಗಿ ಹಾಲು, ಮೊಸರು ಮಾರಿಕೊಂಡು ಬರುವುದು ನಿತ್ಯವೂ ಮಾಡುವ ಕೆಲಸವಾಗಿತ್ತು. ಒಂದು ದಿನ ಸಾಯಂಕಾಲ ನಿತ್ಯವು ಗುತ್ತಿಗೆ ಹೋಗಿ ಬರುವವರಲ್ಲಿ ಸುಮಾರು ಮೂವತ್ತು ಸಂವತ್ಸರಗಳ ವಯಸ್ಸಿರುವ ಒಬ್ಬ ಸ್ತ್ರೀ ಇದ್ದಕ್ಕಿದ್ದ ಹಾಗೆ ತಮಿಳು ಭಾಷೆ ಮಾತನಾಡಲು ಪ್ರಾರಂಭಿಸಿದಳು. ಆ ಭಾಷೆ ಆ ಊರಿನಲ್ಲಿ ಯಾರಿಗು ತಿಳಿಯದಿರುವುದರಿಂದ ಅವರಿಗೆ ಏನೂ ಅರ್ಥವಾಗದೆ ಕಂಗಾಲಾದರು. ಆಕೆ ಸುಮಾರು ಒಂದು ಗಂಟೆ ಕಾಲ ತಮಿಳುಭಾಷೆ ಮಾತನಾಡಿದ ನಂತರ ಮತ್ತೆ ಯಥಾಸ್ಥಿತಿಗೆ ಬಂದು, ಮಾಮೂಲಾಗಿ ತೆಲುಗು ಭಾಷೆ ಮಾತನಾಡುವುದು ನಡೆದಿದೆ. ಅಲ್ಲಿಯವರೆಗು ತೆಲುಗು ಮಾತನಾಡದೇ ತಮಿಳನ್ನು ಮಾತನಾಡಿರುವುದು, ತಮ್ಮನ್ನು ಹೊಸಬರನ್ನು ನೋಡಿದಹಾಗೆ ನೋಡಿದ್ದೀಯ ಹಾಗೆ ಏಕೆ ಮಾಡಿದ್ದೀಯ? ತಮಿಳನ್ನು ಹೇಗೆ ಮಾತನಾಡಿದ್ದೀಯ? ಎಂದು ಆಕೆಯನ್ನು ಪಕ್ಕದಲ್ಲಿರುವವರು ಪ್ರಶ್ನಿಸಿದರು. ಅದಕ್ಕೆ ಆಕೆ ನಾನು ಹಾಗೆ ಮಾಡಿದ್ದೇನಾ! ಎಂದು ಆಶ್ಚರ್ಯವಾಗಿ ಇವರನ್ನೇ ಕೇಳಿದಳಂತೆ. ನಾನು ಗಂಟೆಹೊತ್ತು ನಿದ್ರೆ ಹೋಗಿದ್ದೇನೆಂದು, ಆದರೆ ನಾನು ಏನು ಮಾತನಾಡಿರುವುದು ನನಗೆ ಗೊತ್ತಿಲ್ಲವೆಂದು ಹೇಳಿದಳು. ಅದಕ್ಕೆ ಪಕ್ಕದವರು ಆಶ್ಚರ್ಯಪಟ್ಟಿದ್ದಾರೆ. ಅಷ್ಟಕ್ಕೆ ಸುಮ್ಮನಾಗದೆ ಆಕೆ ಆಗಾಗ ಹೊಸದಾಗಿ ಪ್ರವರ್ತಿಸುವುದು ಅಂತಹ ಸಮಯದಲ್ಲಿ ತೆಲುಗು ಸ್ವಲ್ಪವಾದರು ಗೊತ್ತಿಲ್ಲದ ಹಾಗೆ ಪ್ರವರ್ತಿಸುವುದು, ತಮಿಳ ಭಾಷೆಯಲ್ಲಿ ಮಾತನಾಡುವುದು ನಡೆಯುತ್ತಿರುತ್ತಿತ್ತು. ಆಕೆ ಏಕೆ ಹಾಗೆ ಮಾಡುತ್ತಿದ್ದಾಳೊ ಆ ಊರಿನವರಿಗೆ ಅರ್ಥವಾಗದೆ, ತಮಿಳು ಭಾಷೆ ಬರುವ ವ್ಯಕ್ತಿಯನ್ನು, ಕರೆದುಕೊಂಡು ಬಂದು, ಆಕೆ ಹೊಸದಾಗಿ ಪ್ರವರ್ತಿಸಿ ತಮಿಳು ಮಾತನಾಡುವಾಗ, ಕರೆದುಕೊಂಡು ಬಂದು ತಮಿಳು ವ್ಯಕ್ತಿಯೊಂದಿಗೆ ಮಾತನಾಡಿಸಿದ್ದಾರೆ. ಆಗ

ಆಕೆ ತಮಿಳಿನಲ್ಲಿ ಹೇಳಿದ ವಿಷಯವನ್ನು ಪಕ್ಕದವರಿಗೆ ಆ ವ್ಯಕ್ತಿ ತೆಲುಗಿನಲ್ಲಿ ಹೇಳುವುದು ನಡೆದಿದೆ.

ಅಂದಿಗೆ ಐದು ವರ್ಷಗಳ ಕೆಳಗೆ ಬೆಳಗ್ಗೆ 7-30 ಗಂಟೆ ಸಮಯದಲ್ಲಿ ಮದ್ರಾಸ್ ಎಕ್ಸ್‌ಪ್ರೆಸ್‌ನಲ್ಲಿ ಪ್ರಯಾಣಿಸುವ ತಮಿಳನಾಡು ನಿವಾಸಿಯಾದ ಮಾಧವನ್ ಎನ್ನುವ ವ್ಯಕ್ತಿ, ಬ್ರಷ್‌ನಿಂದ ಹಲ್ಲನ್ನು ಉಜ್ಜುತ್ತಾ ಬಾಗಿಲ ಬಳಿ ನಿಂತುಕೊಂಡಿರುವಾಗ ಜೋರಾಗಿ ಹೋಗುತ್ತಿರುವ ರೈಲ್ವೇ ಬೋಗಿ ಅಲುಗಾಟಕ್ಕೆ ಹಿಡಿತ ತಪ್ಪಿ ರೈಲಿನೊಳಗಿಂದ ಕೆಳಗೆ ಬಿದ್ದು ಸತ್ತುಹೋಗಿದ್ದನು. ಆ ವ್ಯಕ್ತಿ ಕೆಳಗೆ ಬೀಳುವುದನ್ನು ನೋಡಿದ ಆತನ ಬಂಧುಗಳು ರೈಲನ್ನು ನಿಲ್ಲಿಸಿ ಆತನ ಶವವನ್ನು ತೆಗೆದುಕೊಂಡು ಹೋದರು. ಅದು ನಡೆದ ನಂತರ ಐದು ಸಂವತ್ಸರಗಳಿಗೆ ಆ ದಿನ ಸತ್ತುಹೋದ ಮಾಧವನ್ ಆ ಹಳ್ಳಿಯ ಹೆಂಗಸಿನೊಳಗಿಂದ ಮಾತನಾಡಿದ್ದಾನೆ. ಆ ವಿಷಯವನ್ನೆಲ್ಲಾ ಸತ್ತುಹೋದ ಮಾಧವನ್ ತಮಿಳಿನಲ್ಲಿ ಹೇಳಿದರೆ ಬಂದ ತಮಿಳು ವ್ಯಕ್ತಿ ಕೇಳಿ ಪಕ್ಕದವರಿಗೆ ತೆಲುಗಿನಲ್ಲಿ ಹೇಳಿದನು. ಸತ್ತುಹೋದ ಮಾಧವನ್ ರೈಲ್ವೇ ಟ್ರ್ಯಾಕ್ ಪಕ್ಕದಲ್ಲಿಯೆ ಇದ್ದು ಆ ದಾರಿಯಲ್ಲಿ ಹೋಗುವ ಹೆಂಗಸಿನ ಶರೀರದಲ್ಲಿ ಸೇರಿಹೋಗಿ ಆಗಾಗ ಹೊರಗೆ ಬಂದು ಮಾತನಾಡುತ್ತಿದ್ದನು. ಈ ವಿಷಯವನ್ನು ಕೇಳಿದವರಿಗೆ ಸತ್ತುಹೋದ ವ್ಯಕ್ತಿ ಮಾತನಾಡುವುದೇನೆಂದು ಪ್ರಶ್ನೆ ಬರಬಹುದು. ಇದು ಸಂಭವವೇನಾ? ಎಂದು ಕೆಲವರಿಗೆ ಪ್ರಶ್ನೆ ಬಂದಿದೆ. ಅದು ನಡೆಯುವ ಕೆಲಸವಲ್ಲವೆಂದು ಅಂದು ಕೊಳ್ಳುವುದಕ್ಕೆ ಭಾಷೆ ಬಾರದ ಹೆಂಗಸು ತಮಿಳುಭಾಷೆ ಮಾತನಾಡುವುದು ಪ್ರತ್ಯಕ್ಷವಾಗಿ ಕಾಣಿಸುತ್ತಿದೆಯಲ್ಲ ಎಂದು ಮತ್ತೊಂದು ಪ್ರಶ್ನೆ ಬರುತ್ತಿದೆ. ಈ ವಿಷಯವನ್ನು ಕುರಿತು ಸ್ವಲ್ಪ ವಿವರವಾಗಿ ತಿಳಿದುಕೊಳ್ಳಬೇಕೆಂದು ಒಬ್ಬ ಹೇತುವಾದಿ ಹತ್ತಿರಕ್ಕೆ ಹೋಗಿ ನಡೆಯುತ್ತಿರುವ ವಿಷಯವನ್ನೆಲ್ಲಾ ವಿವರಿಸಿ ಹೇಳಿದರೆ ಆತನು ಅದೊಂದು ರೋಗ, ಆ ರೋಗ ಇರುವಾಗ ಕೆಲವರು ತಮಗೆ ತಿಳಿಯದೆ ಬೇರೆ ಭಾಷೆ ಮಾತನಾಡುತ್ತಾರೆಂದು ಹೇಳಿದನು.

ಇಲ್ಲಿ ನಡೆದ ವಿಷಯ ಸ್ಪಷ್ಟವಾಗಿದ್ದರೂ ಆ ವಿಷಯುವನ್ನು ಪರಿಶೀಲನೆಯಾಗಿ ನೋಡದೆ, ಅದಕ್ಕೆ ಹೇತುವೇನು ಎಂದು ಹುಡುಕದೆ,

ಅದೊಂದು ರೋಗವೆಂದು ಸರಿಪಡಿಸಿಕೊಳ್ಳುವುದು ಹೇತುವಾದವಾಗುತ್ತದಾ? ಒಂದು ವಿಷಯವನ್ನು ಹದ್ದಿನ ಕಣ್ಣಿನ ಹಾಗೆ ನೋಡುವುದು ಹೇತುವಾದ. ಮೇಲಿನ ಸಂಘಟನೆಯಲ್ಲಿ ರೋಗದಿಂದ ಹೊಸ ಭಾಷೆ ಬರುತ್ತದಾ? ಎಂದು ಪ್ರಶ್ನಿಸಿಕೊಂಡು ನೋಡುವುದು ಹೇತುವಾದವಾಗುತ್ತದೆ. ಗಂಟೆಕಾಲ ಮನುಷ್ಯನಿಗೆ ಜ್ಞಾಪಕ ಏಕಿಲ್ಲ? ಎಂದು ಪ್ರಶ್ನಿಸಿಕೊಳ್ಳುವುದು ಹೇತುವಾದವಾಗುತ್ತದೆ. ಆ ಗಂಟೆಕಾಲ ಹೊಸ ಮನುಷ್ಯಳಾಗಿ ಏಕೆ ಪ್ರವರ್ತಿಸಿದ್ದಾಳೆಂದು ಪ್ರಶ್ನಿಸಿಕೊಂಡು ಯೋಚಿಸುವುದು, ಪರಿಶೋಧನಾ ದೃಷ್ಟಿಯಿಂದ ನೋಡುವುದು ಹೇತುವಾದ ವಾಗುತ್ತದೆ. ಈ ವಿಧವಾಗಿ ಈ ಸಂಘಟನೆಯಲ್ಲಿ ಮುಖ್ಯವಾದ ಮೂರು ಕಾರಣಗಳಿಗೆ (ಹೇತುವುಗಳಿಗೆ) ಉತ್ತರಗಳನ್ನು ಹುಡುಕಿ, ಅವುಗಳಿಗೆ ಸರಿಯಾದ ಉತ್ತರ ದೊರಕಿದಾಗ ಅದನ್ನು ಹೇತುಬದ್ಧವಾಗಿ ಅಂಗೀಕರಿಸಬೇ ಕಾಗಿ ಬರುತ್ತದೆ. ಹಾಗಲ್ಲದೆ ಯಾವ ಪ್ರಶ್ನೆಗು ಸರಿಯಾದ ಉತ್ತರ, ಸಮಾಧಾನ ಇಲ್ಲದಿರುವಾಗ ಅದು ಅಸತ್ಯವೆಂದು, ಹೇತುಬದ್ಧವಲ್ಲವೆಂದು, ಅದನ್ನು ಹೇತುವಾದ ಒಪ್ಪುವುದಿಲ್ಲವೆಂದು ಹೇಳಬೇಕಾಗಿರುತ್ತದೆ. ಆದರೆ ಇಲ್ಲಿ ಹಾಗೆ ನಡೆಯಲಿಲ್ಲ. ಆ ಸಂಘಟನೆ ಒಂದು ರೋಗವೆಂದು, ರೋಗದ ಮುಸುಗಿನಲ್ಲಿ ಅದನ್ನು ಮುಚ್ಚಿಡುವುದು ನಿಜವಾದ ಹೇತುವಾದವಲ್ಲ. ಹಾಗೆ ಹೇಳುವುದನ್ನು ಅಸಂಬದ್ಧತೆ ಹೇತುವಾದ ಎನ್ನಬಹುದು. ಅಸಂಬದ್ಧತೆ ಹೇತುವಾದವೆಂದರೆ ಅದು ಸರಿಯಾದ ಹೇತುವಾದ ಅಲ್ಲವೆಂದು ಅರ್ಥ. ಅದು ಒಂದು ರೋಗವೆಂದು ಅಂದರೆ ನಿಜವಾದ ಹೇತುವಾದಿ ಅದರ ಮೇಲೆ ಹೀಗೆ ಪ್ರಶ್ನಿಸುವನು. ರೋಗ ಅಂದರೆ ಆ ಲಕ್ಷಣಗಳು ಯಾವಾಗಲೊ ಒಂದು ಸಮಯದಲ್ಲಿ ಗಂಟೆಕಾಲ ಏಕೆ ಬರುತ್ತವೆ? ಪ್ರಪಂಚದಲ್ಲಿ ಯಾವ ರೋಗದಿಂದಾಗಲಿ ಹೊಸ ಭಾಷೆ ಬರುತ್ತದೆಂದು ನಿರೂಪಣೆ ಇದೆಯಾ? ಆ ರೋಗಕ್ಕೆ ತಮಿಳು ಭಾಷೆಗೆ ಸಂಬಂಧವೇನು? ಆ ಸ್ವಲ್ಪ ಹೊತ್ತು ಹಳೆ ಭಾಷೆ ಏನಾಗಿದೆ? ತಿಳಿಯದ ಭಾಷೆ ಅದರಲ್ಲಿ ಒಂದೇ ಭಾಷೆ ಹೇಗೆ ಬಂದಿದೆ? ಆ ಸ್ವಲ್ಪ ಹೊತ್ತು ಹಳೆಯ ಮನುಷ್ಯಳ ಪ್ರವರ್ತನೆ ಹೋಗಿ ಹೊಸ ವ್ಯಕ್ತಿ ಪ್ರವರ್ತನೆ ಹೇಗೆ ಬಂದಿದೆ? ಕಾಣಿಸುವುದು ಹೆಂಗಸು ಹೇಳುವುದು ಗಂಡಸನ ಹೆಸರು, ಅದೂ ಮಾಧವನ್ ಎನ್ನುವ ಒಂದೇ ಹೆಸರು ಹೇಳುವುದಕ್ಕೆ

ಕಾರಣ ಏನು? ಆ ಸಮಯದಲ್ಲಿ ಮಾತನಾಡುವ ಗಂಡಸು ನಾನು ಇಂತವನೆ, ಇಂತಹ ವಿಧದಲ್ಲಿಯೆ ಸತ್ತು ಹೋಗಿದ್ದೇನೆ, ನನ್ನ ಅಡ್ರಸ್ ತಮಿಳನಾಡಿನಲ್ಲಿ ಇಂತದ್ದೆ ಸ್ಥಳವೆಂದು ಹೇಳಿದರೆ, ಆ ಮಾತನ್ನು ಸ್ವಲ್ಪವಾದರೂ ಲೆಕ್ಕಹಾಕದೆ ಆ ಮಾತು ಸತ್ಯವೆ, ಅಸತ್ಯವೆ ಎಂದು ಏಕೆ ನೋಡಲಿಲ್ಲ. ಆಗ ನಡೆದಿರುವುದು ರೋಗವೆಂದುಕೊಳ್ಳುವುದಕ್ಕೆ ಶರೀರದಲ್ಲಿ ಯಾವ ಲೋಪದಿಂದ ಇಲ್ಲವೆ ಯಾವ ಕ್ರಿಮಿಗಳಿಂದ ಆ ರೋಗ ಬರುತ್ತದೆ? ಆ ರೋಗಕ್ಕೆ ನಿರೂಪಣೆ ಏನಾದರೂ ಇದೆಯಾ? ಹೀಗೆ ಇಷ್ಟು ಪ್ರಶ್ನೆಗಳನ್ನು ಹೇತುಬದ್ಧತೆಯಿಂದ ಕೇಳಬೇಕಾಗಿ ಬರುತ್ತದೆ. ಇಷ್ಟು ಪ್ರಶ್ನೆಗಳಿಗೆ ಉತ್ತರವಿಲ್ಲದೆ ರೋಗವೆನ್ನುವ ಕುರುಡು ಸೋಗಿನಿಂದ ತಪ್ಪಿಸಿಕೊಳ್ಳುವವರು, ನಾವು ಮೇಧಾವಿಗಳೆಂದು ಹೇಳಿಕೊಳ್ಳುವುದು ತಪ್ಪಲ್ಲವೆ? ಪ್ರಶ್ನೆಗಳಿಗೆ ಉತ್ತರ ಹೇಳಲಾಗದ ನಕಲಿ ಮೇಧಾವಿಗಳು ನಮ್ಮ ಸಮಾಜದಲ್ಲಿ ಬಹಳ ಜನರಿದ್ದಾರೆ. ಅಂತವರನ್ನು ಬಿಟ್ಟು ಅಸಲಾದ ಮೇಧಸ್ಸು ಹೇಗಿರುತ್ತದೊ ಗಮನಿಸೋಣ.

ಒಬ್ಬ ಮನುಷ್ಯ ಆರು ಶಾಸ್ತ್ರಗಳಿಂದ ಸಂಬಂಧ ಪಟ್ಟಿರುತ್ತಾನೆ. ಆದರೆ ಬಹಳ ಜನ ಮೇಧಾವಿಗಳೆಂದು ಹೆಸರು ಪಡೆದಿರುವವರು ಮನುಷ್ಯನನ್ನು ಮೊದಲ ನಾಲ್ಕು ಶಾಸ್ತ್ರಗಳಿಂದಲೆ ನೋಡುತ್ತಿದ್ದಾರೆ. ಅಂತವರು ನಮ್ಮ ದೃಷ್ಠಿಯಲ್ಲಿ ಸಂಪೂರ್ಣ ಮೇಧಾವಿಗಳಲ್ಲ. ಮನುಷ್ಯನನ್ನು ಆರು ಶಾಸ್ತ್ರಗಳಿಗೆ ವರ್ತಿಸಿಕೊಂಡು ನೋಡಿದರೇನೆ ಮನುಷ್ಯನಿಗೆ ಸಂಬಂಧಿಸಿದ ಎಲ್ಲ ಪ್ರಶ್ನೆಗಳಿಗು ಉತ್ತರ ದೊರಕುತ್ತದೆ. ಎಲ್ಲ ಉತ್ತರಗಳು ತಿಳಿದವನೆ ನಿಜವಾದ ಮೇಧಾವಿ. ತಿಳಿಯದಿದ್ದರೂ ತಿಳಿದಹಾಗೆ ಹೇಳಿಕೊಳ್ಳುತ್ತಾ ತಿಳಿಯದ ಉತ್ತರಗಳನ್ನು ಸೈನ್ಸ್ ಹೆಸರಿನಿಂದ ದಾಟಿಹೋಗಿ ತಾವು ವಿಜ್ಞಾನಿಗಳೆಂದು ಹೇಳಿಕೊಂಡ ಮಾತ್ರಕ್ಕೆ ಅವರು ವಿಜ್ಞಾನಿಗಳಾಗುತ್ತಾರಾ? ಪ್ರಪಂಚಕ್ಕೆ ಸಂಬಂಧಿಸಿದ ನಾಲ್ಕು ಶಾಸ್ತ್ರಗಳನ್ನು ಕಲಿತ ಮಾತ್ರಕ್ಕೆ ಯಾವನೂ ಮೇಧಾವಿ ಅಲ್ಲ. ಆರನೇ ಶಾಸ್ತ್ರವನ್ನು ತಿಳಿದವನು ಯಾವನಾದರು ಮೇಧಾವಿಯಾಗುವನು. ನಾಲ್ಕು ಶಾಸ್ತ್ರಗಳನ್ನು ತಿಳಿದವನು ನಾನು ದೇವ್ವಗಳನ್ನು ನಂಬುವುದಿಲ್ಲ, ದೇವ್ವಗಳಿವೆಯೆನ್ನುವುದು ಮೂಢನಂಬಿಕೆ

ಎನ್ನುತ್ತಿದ್ದಾನೆ. ತಿಳಿಯದೆ ಇವೆಯೆನ್ನುವುದು ಯಾವನಿಗಾದರೂ ಮೂಢ ನಂಬಿಕೆಯೆ, ಆದರೆ ತಿಳಿದು ಇವೆ ಯೆಂದರೆ ಮೂಢ ನಂಬಿಕೆ ಹೇಗೆ ಆಗುತ್ತದೆ? ಈಗ ಆರನೇ ಶಾಸ್ತ್ರದ ಪ್ರಕಾರ ದೆವ್ವಗಳು ಇವೆ ಎನ್ನುವ ಪ್ರಶ್ನೆಗೆ ಬಂದರೆ ನೂರಕ್ಕೆ ನೂರು ಪಾಲು ಇವೆಯೆಂದು ಹೇಳಬಹುದು. ಗುತ್ತಿ ಹತ್ತಿರ ನಡೆದ ನೈಜ ಸಂಘಟನೆಯಲ್ಲಿನ ಅನೇಕ ಪ್ರಶ್ನೆಗಳಿಗೆ ಆರನೇ ಶಾಸ್ತ್ರವನ್ನು ತಿಳಿದವನಿಗೆ ಉತ್ತರಗಳು ತಿಳಿಯುತ್ತವೆ.

ಆರನೇ ಶಾಸ್ತ್ರದ ಪ್ರಕಾರ ಗಮನಿಸಿದರೆ ಮನುಷ್ಯನ ಶರೀರ ಎರಡು ಭಾಗಗಳಾಗಿ ಇದೆ. ಇದರ ಪ್ರಕಾರ ಮನುಷ್ಯನ ಮರಣ ಸಹ ಎರಡು ವಿಧಗಳಾಗಿ ಇದೆ. ಒಬ್ಬ ಮನುಷ್ಯ ಸತ್ತು ಹೋದರೆ ನಮ್ಮ ಲೆಕ್ಕದಲ್ಲಿ ಅವನು ಪೂರ್ತಿಯಾಗಿ ತಿಳಿಯದಂತೆ ಹೋದಹಾಗೆ. ಸತ್ತು ಹೋದವನು ಎಲ್ಲಿಯು ಕಾಣಿಸುವುದಿಲ್ಲ, ಮತ್ತೆ ಮಾತನಾಡುವುದಿಲ್ಲ. ಇಲ್ಲಿ ಮರಣಿಸುವುದು ಇಲ್ಲವೆ ಸತ್ತುಹೋಗುವುದು ಅಂದರೆ ಶರೀರದ ಎರಡು ಭಾಗಗಳು ಪೂರ್ತಿಯಾಗಿ ಮರಣಿಸುವುದೆಂದು ಅರ್ಥ. ಮುಖ್ಯವಾಗಿ ಗಮನಿಸಿದರೆ ಇಲ್ಲಿ ಬಹಳ ಜನರಿಗೆ ಅಂದರೆ ಸಾಧಾರಣ ವ್ಯಕ್ತಿಗಳಿಗಾಗಲಿ, ಮೇಧಾವಿಗಳಿಗಾಗಲಿ ಶರೀರವು ಸ್ಥೂಲ, ಸೂಕ್ಷ್ಮ ಎನ್ನುವ ಎರಡು ಭಾಗಗಳಿವೆಯೆಂದು, ಮರಣದಲ್ಲಿ ಕಾಲ, ಅಕಾಲ ಎಂದು ಎರಡು ವಿಧಗಳ ಮರಣಗಳಿವೆಯೆಂದು ತಿಳಿದಿಲ್ಲ. ಸ್ಥೂಲ, ಸೂಕ್ಷ್ಮ ಶರೀರಗಳನ್ನು ಕುರಿತಾಗಲಿ, ಕಾಲ, ಅಕಾಲ ಮರಣಗಳನ್ನು ಕುರಿತಾಗಲಿ ತಿಳಿಯದೆ ಹೋಗುವುದೆ ಮನುಷ್ಯನ ಮೇಧಸ್ಸಿಗೆ ದೊಡ್ಡಲಾಸು. ಯಾವ ಮನುಷ್ಯನಿಗಾದರು ತನ್ನ ಶರೀರವನ್ನು ಕುರಿತಾಗಲಿ, ತನ್ನ ಮರಣವನ್ನು ಕುರಿತಾಗಲಿ ತಿಳಿಯದಿರುವಾಗ ಆತನು ದೇಶದಲ್ಲಿ ಎಷ್ಟು ದೊಡ್ಡ ಹುದ್ದೆಯಲ್ಲಿದ್ದರೂ, ಎಷ್ಟೊ ದೊಡ್ಡ ಮೇಧಾವಿಯಾದರೂ ಏನು ಪ್ರಯೋಜನ? ಹೊರಗಿನ ವಿಷಯಗಳು ಎಷ್ಟು ತಿಳಿದರೂ ತನ್ನ ವಿಷಯ ತನಗೆ ತಿಳಿಯದಿರುವಾಗ ಆತನು ಮೇಧಾವಿ ಆಗುತ್ತಾನಾ? ನೀವೇ ಹೇಳಿ.

ಮನೆಗೆದ್ದು ಮಂದಿ ಗೆದ್ದವನೇ ಶೂರನೆಂದು ಹಿರಿಯರು ಒಂದು ಗಾದೆಯನ್ನು ಹೇಳುತ್ತಿದ್ದರು. ಅದರ ವಿವರವೇನೆಂದರೆ! ಮೊದಲು ತನ್ನ

ಶರೀರದಲ್ಲಿನ ರಹಸ್ಯವನ್ನು ತಿಳಿದುಕೊಂಡು ನಂತರ ಹೊರಗಿನ ಪ್ರಪಂಚದಲ್ಲಿನ ರಹಸ್ಯವನ್ನು ತಿಳಿದವನು ಮೇಧಾವಿ ಎಂಬ ಭಾವ. ಮನೆ ಎಂದರೆ ಶರೀರವೆಂದು, ಮಂದಿ ಎಂದರೆ ಹೊರಗಿನ ಪ್ರಪಂಚವೆಂದು, ಗೆಲ್ಲುವುದೆಂದರೆ ರಹಸ್ಯಗಳನ್ನು ತಿಳಿದುಕೊಳ್ಳುವುದೆಂದು, ಶೂರನು ಎಂದರೆ ಮೇಧಾವಿ ಎಂದು ಅರ್ಥ. ಹಾಗೆ ಇನ್ನೊಂದು ಗಾದೆಯು ಸಹ ಇದೆ. ಅದೇನೆಂದರೆ "ಮೀಸೆ ತಿರುವಿದವನು ವೀರನೂ ಅಲ್ಲ, ಶೂಲ ಹಿಡಿದವನು ಶೂರನೂ ಅಲ್ಲ" ಇದರ ಅರ್ಥ ಏನೆಂದರೆ! ಪುಸ್ತಕ ಓದಿದ ಮಾತ್ರಕ್ಕೆ ಜ್ಞಾನಿಯಲ್ಲ, ಪ್ರಯೋಗ ಮಾಡಿದಷ್ಟು ಮಾತ್ರಕ್ಕೆ ವಿಜ್ಞಾನಿಯಲ್ಲವೆಂಬ ಭಾವ. ಇದನ್ನು ಅನುಸರಿಸಿ ನೋಡಿದರೆ ಓದು ಓದಿದ ಮಾತ್ರಕ್ಕೆ ಜ್ಞಾನಿಗಳಾಗುವುದಿಲ್ಲ, ಸೈನ್ಸ್ ಕಲಿತ ಮಾತ್ರಕ್ಕೆ ವಿಜ್ಞಾನಿಗಳು ಆಗಲಾರರೆಂದು ತಿಳಿಯುತ್ತಿದೆ. ಇಲ್ಲಿ ಕೆಲವು ಪ್ರಶ್ನೆಗಳು ಬರಬಹುದು. ಅದೇನೆಂದರೆ! ಓದು ಅಥವಾ ವಿದ್ಯೆ ಎಂದರೆ ಜ್ಞಾನ ಅಲ್ಲವೆ! ಹಾಗೆ ಸೈನ್ಸ್ ಎಂದರೆ ವಿಜ್ಞಾನ ಅಲ್ಲವೆ! ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಓದು ಎಂದರೆ ಜ್ಞಾನ, ಸೈನ್ಸ್ ಎಂದರೆ ವಿಜ್ಞಾನ ಎನ್ನುವ ಮಾತು ವಾಸ್ತವವೆ. ಆದರೆ ಶರೀರಕ್ಕೆ ಹೊರಗಿರುವವುಗಳನ್ನು ಜ್ಞಾನ, ವಿಜ್ಞಾನ ಅಂದುಕೊಳ್ಳುವುದು ತಪ್ಪು, ಓದು ಸೈನ್ಸ್ ಎಲ್ಲ ಶರೀರದೊಳಗಿನಿಂದ ಪ್ರಾರಂಭವಾಗುತ್ತವೆ. ಶರೀರದೊಳಗೇ ಜ್ಞಾನ, ವಿಜ್ಞಾನ ಇವೆ. ಶರೀರದಿಂದ ಅಲ್ಲದೆ ಹೊರಗಿನಿಂದ ಸಂಪಾದಿಸಿಕೊಂಡ ಜ್ಞಾನ ವಿಜ್ಞಾನ ಎಷ್ಟಾದರೂ ಅದನ್ನು ಜನರಲ್ ನಾಲೆಡ್ಜ್ (ಸಾಧಾರಣ ಜ್ಞಾನ) ಎನ್ನುತ್ತೇವೆ. ಜನರಲ್ ನಾಲೆಡ್ಜ್‌ನಲ್ಲಿ ಕೇವಲ ನಾಲ್ಕು ಶಾಸ್ತ್ರಗಳ ಜ್ಞಾನ ಮಾತ್ರವಿರುತ್ತದೆ. ಶಾಸ್ತ್ರಗಳ ಕುರಿತು ತಿಳಿಯದವನನ್ನು ನಾಲೆಡ್ಜ್ ಇಲ್ಲದವನ ಕೆಳಗೆ ಲೆಕ್ಕಕಟ್ಟುತ್ತಾರೆ. ಇದನ್ನು ಅನುಸರಿಸಿ ನೋಡಿದರೆ ನಾಲ್ಕು ಶಾಸ್ತ್ರಗಳನ್ನು ತಿಳಿಯದವನನ್ನು ಜ್ಞಾನ ಇಲ್ಲದವನೆಂದು, ನಾಲ್ಕು ಶಾಸ್ತ್ರಗಳ ಪರಿಚಯವಿರುವವನನ್ನು ಸಾಧಾರಣ ಜ್ಞಾನ ಇರುವವನೆಂದು ತಿಳಿಯುತ್ತಿದೆ. ಇನ್ನು **ಆರನೇ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರವನ್ನು ತಿಳಿದವನನ್ನು ಗ್ರೇಟ್ ನಾಲೆಡ್ಜ್ ಇಲ್ಲವೆ ಸೂಪರ್ ನಾಲೆಡ್ಜ್ ಇರುವವನೆಂದು ಹೇಳಬಹುದು. ಅದನ್ನೇ ಕನ್ನಡದಲ್ಲಿ ಅಂತ್ಯವಿಲ್ಲದ ಜ್ಞಾನವೆಂದು, ಅಸಾಧಾರಣ ಜ್ಞಾನವೆಂದು,**

**ದೊಡ್ಡ ಜ್ಞಾನವೆಂದು ಹೇಳಬಹುದು.** ಮೊದಲ ನಾಲ್ಕು ಶಾಸ್ತ್ರಗಳ ಜ್ಞಾನ ಸಾಧಾರಣ ಜ್ಞಾನವಾದರೆ, ಐದನೇ ಶಾಸ್ತ್ರವಾದ ಜ್ಯೋತಿಷ್ಯವು ಮಧ್ಯೆ ಜ್ಞಾನವಾದರೆ, ಆರನೇ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರವು ಅಸಾಧಾರಣ, ಅಂತ್ಯವಿಲ್ಲದ, ಅಮೋಘವಾದ ಜ್ಞಾನವಾಗುತ್ತದೆ. ಇಲ್ಲಿ ಸಾಧಾರಣ, ಅಸಾಧಾರಣಕ್ಕೆ ಮಧ್ಯೆ ಜ್ಞಾನವಾದ ಜ್ಯೋತಿಷ್ಯವನ್ನು ಬಿಟ್ಟು ಸಾಧಾರಣ ಜ್ಞಾನವನ್ನು ಕುರಿತು ಹೇಳಿಕೊಂಡರೆ ಅದೆಲ್ಲವೂ ಕಣ್ಣಿಗೆ ಕಾಣಿಸುವ ವಿಧಾನವಾಗಿ ಇರುತ್ತದೆ. ಸಾಧಾರಣ ಜ್ಞಾನದಿಂದ ತಯಾರು ಮಾಡಲಾದ ಯಾವ ಪರಿಕರವಾಗಲಿ ತಯಾರು ಮಾಡಿದವನಿಗೆ ಅಲ್ಲದೆ ಇತರರಿಗು ಸಹ ಉಪಯೋಗವಾಗುತ್ತದೆ. ನಾಲ್ಕು ಶಾಸ್ತ್ರಗಳ ಜ್ಞಾನ ಶರೀರದ ಹೊರಗಿನ ಐದು ಇಂದ್ರಿಯಗಳಿಗು ತಿಳಿದು ಬರುತ್ತಿರುವುದರಿಂದ ಯಾರಿಗಾದರು ನಿರೂಪಣೆಗೆ ಬರಬಹುದು. ಉದಾಹರಣೆಗೆ ಒಂದು ರೇಡಿಯೊ ತೆಗೆದುಕೊಳ್ಳೋಣ. ಇಟಲಿ ದೇಶದಲ್ಲಿ "ಮಾರ್ಕೊನಿ" ಎನ್ನುವ ವ್ಯಕ್ತಿ 1866 ರಲ್ಲಿ ಮೊದಲು ರೇಡಿಯೊವನ್ನು ಕಂಡುಹಿಡಿದನು. ರೇಡಿಯೊ ಸಾಧಾರಣ ಜ್ಞಾನ ಆದರೆ ಅದು ಕಂಡುಹಿಡಿದವನಿಗೆ ಅಲ್ಲದೆ ಪಕ್ಕದಲ್ಲಿರುವ ಮನುಷ್ಯರಿಗೆ, ಇತರ ದೇಶದವರಿಗು, ಇತರೆ ಕಾಲದವರಿಗೆ ಉಪಯೋಗಪಡುತ್ತಿದೆ. ರೇಡಿಯೊ ನಾಲ್ಕು ಶಾಸ್ತ್ರಗಳಿಗೆ ಒಳಪಟ್ಟಿರುವುದರಿಂದ ಅದನ್ನು ಸಾಧಾರಣ ಜ್ಞಾನ ಎನ್ನುತ್ತಿದ್ದೇವೆ. ಸಾಧಾರಣ ಜ್ಞಾನ ಎನ್ನುವುದು ಸೂತ್ರದ ಪ್ರಕಾರ ಶರೀರ ಹೊರಗಿನ ಇಂದ್ರಿಯಗಳಿಂದ ತಿಳಿದುಬರುತ್ತದೆ. ಆದ್ದರಿಂದ ಕಂಡುಹಿಡಿದ ಮಾರ್ಕೊನಿಗೇ ಅಲ್ಲದೆ, ಇಂದ್ರಿಯಗಳಿರುವ ಎಲ್ಲರಿಗು ತಿಳಿಯುತ್ತಿದೆ, ಅನುಭವಕ್ಕೆ ಬರುತ್ತಿದೆ. **"ಇಂದ್ರಿಯಗಳಿಂದ ಮಾಡಿರುವುದು ಇಂದ್ರಿಯಗಳಿಗೆ ತಿಳಿಯುತ್ತದೆ,** ಎನ್ನುವುದು ಸೂತ್ರ. ಆ ಸೂತ್ರದ ಪ್ರಕಾರ ಇಂದ್ರಿಯ ಜ್ಞಾನ ಸಾಧಾರಣ ಜ್ಞಾನವೆಂದು ಲೆಕ್ಕಿಸಲ್ಪಡುತ್ತದೆ. **"ಕಾಣಿಸದ ಇಂದ್ರಿಯಗಳಿಂದ ಕಂಡು ಹಿಡಿದು ಕಾಣಿಸುವ ಇಂದ್ರಿಯಗಳಿಗೆ ತಿಳಿಯದಿದ್ದನ್ನು ಅಸಾಧಾರಣ ಜ್ಞಾನ ಎನ್ನುತ್ತೇವೆ".** ಈ ಸೂತ್ರದ ಪ್ರಕಾರ ಕಾಣಿಸುವ ಜ್ಞಾನ, ಕಾಣಿಸದ ಜ್ಞಾನವೆಂದು ಎರಡು ವಿಧಗಳಲ್ಲಿ ಜ್ಞಾನವನ್ನು ವಿಭಜಿಸುತ್ತಿದ್ದೇವೆ. ಕಾಣಿಸುವುದನ್ನು **ಸ್ಥೂಲ** ಎನ್ನುತ್ತಿದ್ದೇವೆ. ಕಾಣಿಸದೇ ಇರುವುದನ್ನು **ಸೂಕ್ಷ್ಮ** ಎನ್ನುತ್ತೇವೆ. ಕಾಣಿಸುವ ಜ್ಞಾನವನ್ನೂ ಮತ್ತು

ಕಾಣಿಸದ ಜ್ಞಾನವನ್ನೂ ತಿಳಿದವನು ಅಸಲಾದ ಮೇಧಾವಿ ಆಗುತ್ತಾನೆ. ಕಾಣಿಸುವ ವಿಧಾನವೊಂದರ ಜ್ಞಾನವನ್ನು ಮಾತ್ರ ತಿಳಿದು, ಕಾಣಿಸದ ವಿಧಾನ ಜ್ಞಾನವನ್ನು ತಿಳಿಯದವನನ್ನು ಪೂರ್ತಿ ಜ್ಞಾನವಿರುವವನ ಹಾಗೆ ಲೆಕ್ಕಿಸಬಾರದು. ಅಂತವನನ್ನು ಅರ್ಧ ಜ್ಞಾನವಿರುವವನ ಹಾಗೆ ಲೆಕ್ಕಿಸಬೇಕು. ಆದ್ದರಿಂದ ಅಂತವನನ್ನು ಆಫ್‌ನಾಲೆಡ್ಜ್ ಇರುವವನೆಂದು ಹೇಳಬಹುದು. ಪೂರ್ತಿ ನಾಲೆಡ್ಜ್ ಸೂಕ್ಷ್ಮವನ್ನು ತಿಳಿಸುವ ಆರನೇ ಶಾಸ್ತ್ರವನ್ನು ತಿಳಿದವನಿಗೆ ತಿಳಿಯುತ್ತದೆ.

ಭೂಮಿ ಮೇಲೆ ಶಾಸ್ತ್ರಗಳು ಎಷ್ಟು ಇವೆಯೆಂದು, ಅವು ಯಾವುವೆಂದು ತಿಳಿಯದ ಮನುಷ್ಯ ಸೈನ್ಸ್ ಎನ್ನುವ ಹೆಸರನ್ನು ಅಡ್ಡ ಇಟ್ಟುಕೊಂಡು, ತನಗೆ ಸರ್ವವು ತಿಳಿದಿದೆ ಎನ್ನುವ ಹಾಗೆ ಮಾತನಾಡುತ್ತ, ಸೂಕ್ಷ್ಮವನ್ನು ಕುರಿತು ಸ್ವಲ್ಪವಾದರು ಜ್ಞಾನವಿಲ್ಲದವನಾಗಿ ವಾಸ್ತವವಾಗಿ ದೆವ್ವಗಳು ಇಲ್ಲ ಅನ್ನುತ್ತಿದ್ದಾನೆ. ದೆವ್ವಗಳಿದ್ದಹಾಗೆ ಕೆಲವರು ಅಭೂತ ಕಲ್ಪನೆ ಮಾಡುತ್ತಿದ್ದಾರೆಂದು, ಅವೆಲ್ಲವೂ ಕಲ್ಲಿನಯುಗದ ಮಾತುಗಳೆಂದು, ನಾಗರಿಕತೆ ಬೆಳೆದು ಸೈನ್ಸ್ ಅಭಿವೃದ್ಧಿ ಆದ ಈ ಕಾಲದಲ್ಲಿ ದೆವ್ವಗಳಿವೆಯೆನ್ನುವುದು ಅನಾಗರಿಕದ ಮಾತೆಂದು ಹೇಳುತ್ತಿರುವರು. ತಾವು ಎಷ್ಟೋ ಮೇಧಾವಿಗಳೆಂದು ದೆವ್ವಗಳಿವೆ ಎನ್ನುವುದು ಮೂಢನಂಬಿಕೆ ಯೆನ್ನುತ್ತಿದ್ದಾರೆ. ದೆವ್ವಗಳಿವೆಯೆನ್ನುವವರು ನಿರೂಪಿಸಬಲ್ಲಿರಾ? ಎಂದು ಪ್ರಶ್ನಿಸುವರು. ಅದಕ್ಕೆ ನಮ್ಮ ಸಮಾಧಾನವೇನೆಂದರೆ! ಕಣ್ಣಿನಿಂದ ನೋಡುವ ದೃಶ್ಯಗಳು ಇರುತ್ತವೆ. ಹಾಗೆ ಕಿವಿಯಿಂದ ಕೇಳುವ ಶಬ್ಧಗಳಿರುತ್ತವೆ. ಕಣ್ಣಿನಿಂದ ನೋಡುವ ದೃಶ್ಯಗಳನ್ನು ದೃಷ್ಠಿಯಿರುವವನು ಮಾತ್ರ ನೋಡಬಲ್ಲನು. ಕಿವಿಗಳಿಂದ ಕೇಳುವ ಶಬ್ದಗಳನ್ನು ಕಿವಿ ಕೇಳಿಸುವವನು ಮಾತ್ರ ಕೇಳಬಲ್ಲನು. ಕಣ್ಣಿದ್ದು ದೃಷ್ಠಿಯಿಲ್ಲದವನು ದೃಶ್ಯಗಳನ್ನು ನೋಡಲಾರನು. ಹಾಗೆ ಕಿವಿಗಳಿದ್ದು ಕಿವುಡುತನ ಇರುವವನು ಶಬ್ದವನ್ನು ಕೇಳಲಾರನು. ಹಾಗೆ ದೆವ್ವಗಳು ಸೂಕ್ಷ್ಮ ಜ್ಞಾನದೃಷ್ಠಿಯಿರುವವನಿಗೆ ಮಾತ್ರ ತಿಳಿಯುತ್ತವೆ. ಕಣ್ಣಿದ್ದು ಕುರುಡನು ದೃಶ್ಯವನ್ನು ನೋಡದಹಾಗೆ, ಕಿವಿಗಳಿದ್ದು ಕಿವುಡನು ಶಬ್ದವನ್ನು ಕೇಳದಹಾಗೆ ಆರನೆ ಶಾಸ್ತ್ರವೊಂದರ ಶಾಸ್ತ್ರೀಯತೆ ತಿಳಿಯದವನು ಪೂರ್ತಿ ಮೇದಸ್ಸು ಇಲ್ಲದವನಾಗಿ

ಸೂಕ್ಷ್ಮವನ್ನು ಗ್ರಹಿಸಲಾರನು. ನಾಲ್ಕು ಶಾಸ್ತ್ರಗಳಲ್ಲಿ ತಾನು ಎಷ್ಟು ಪ್ರವೀಣನಾದರು ಅರ್ಧ ಜ್ಞಾನವಿರುವವನೆ! ಆದ್ದರಿಂದ ಅವನು ಪ್ರಪಂಚದಲ್ಲಿ ಹೇತುವಾದಿ ಯಾದರೂ, ಸತ್ಯವಾದಿಯಾದರೂ ಸೂಕ್ಷ್ಮವನ್ನು ಗ್ರಹಿಸುವ ಸಾಮರ್ಥ್ಯ ಅವನ ಮೆದುಳಿಗಿರುವುದಿಲ್ಲ. ಅಂತಹದರಲ್ಲಿ ತನಗೆ ತಿಳಿಯದವುಗಳನ್ನು ಇಲ್ಲ ಎನ್ನುವುದು ಸಹಜವೆ, ಆದರೆ ಅವನಿಗೆ ತಿಳಿಯದಷ್ಟು ಮಾತ್ರಕ್ಕೆ ಇರುವುದು ಇಲ್ಲದೆ ಹೋಗುತ್ತದಾ?

ಇಲ್ಲಿ ಕೆಲವರಿಗೆ ಮತ್ತೊಂದು ಪ್ರಶ್ನೆ ಬರಬಹುದು. ಅದೇನೆಂದರೆ! "ಗಣಿತ, ರಸಾಯನಿಕ, ಭೌತಿಕ, ಖಗೋಳ ಶಾಸ್ತ್ರಗಳಲ್ಲಿ ವಿಜ್ಞಾನಿಗಳಾಗಿ ಶಾಸ್ತ್ರಜ್ಞರೆಂದು ಹೆಸರಾದ ಎಷ್ಟೋ ತಿಳಿವಳಿಕೆ ಇರುವವರಿಗು ಸಹ ತಿಳಿಯದ ಸೂಕ್ಷ್ಮಗಳಿವೆಯೆಂದು, ಅವರಿಗೆ ತಿಳಿಯದಷ್ಟು ಮಾತ್ರಕ್ಕೆ ಇರುವವು ಇಲ್ಲದೆ ಹೋಗುತ್ತವಾ ಎನ್ನುತ್ತಿದ್ದೀರಲ್ಲ! ಹಾಗೆ ದೆವ್ವಗಳಿದ್ದರೆ ನಾಲ್ಕು ಶಾಸ್ತ್ರಗಳಲ್ಲಿ ಮೇಧಾವಿಗಳಾದವರು ತಿಳಿದುಕೊಳ್ಳುವುದಕ್ಕೆ ಅವಕಾಶವೆ ಇಲ್ವಾ?" ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನಾಲ್ಕು ಶಾಸ್ತ್ರಗಳು ತಿಳಿದು ದೆವ್ವಗಳು ಇಲ್ಲ ಎನ್ನುವವರು ಸಹ ತಿಳಿದುಕೊಳ್ಳುವುದಕ್ಕೆ ಎರಡೆ ಎರಡು ಅವಕಾಶಗಳಿವೆ. ಒಂದು ನಮಗೆ ಎಲ್ಲಾ ತಿಳಿದಿದೆಯೆಂದು ಗೋಡೆ ಕಟ್ಟಿಕೊಂಡಿರದೆ, ತಿಳಿದುಕೊಳ್ಳಬೇಕಾಗಿರುವುದು ಇನ್ನು ಎಷ್ಟೋ ಇದೆ ಎಂದು ಪರಿಶೋಧನಾ ದೃಷ್ಠಿಯಿಂದ ಆರನೇ ಶಾಸ್ತ್ರವನ್ನು ತಿಳಿದುಕೊಳ್ಳುವುದರಿಂದ, ಎರಡನೆಯದು ಕಾಣಿಸದ ದೆವ್ವಗಳು ಕಾಣಿಸುವ ಮನುಷ್ಯರಲ್ಲಿ ಪ್ರವೇಶಿಸಿಯಾಗಲಿ, ಪ್ರವೇಶಿಸದೆಯಾಗಲಿ ಮಾಡಿದ ಕೆಲಸಗಳು ಪ್ರತ್ಯಕ್ಷವಾಗಿ ಕಾಣಿಸಿದಾಗ, ನಡೆದ ಆ ಕೆಲಸಗಳ ಹಿಂದಿರುವ ಸತ್ಯವನ್ನು ತಿಳಿದುಕೊಳ್ಳುವುದರಿಂದ ಸೂಕ್ಷ್ಮಗಳಾದ ದೆವ್ವಗಳನ್ನು ಕುರಿತು ತಿಳಿಯುತ್ತದೆ.

ನಿಮ್ಮ ಮಾತನ್ನು ಆಲಂಗಿಸಿ ಆರನೆಯ ಶಾಸ್ತ್ರವನ್ನು ತಿಳಿದುಕೊಳ್ಳ ಬಹುದು, ಆ ಶಾಸ್ತ್ರ ಯಾವುದು ಎಂದು ಯಾರಾದರು ಕೇಳಿದರೆ ನಿಮಗೆ ಹತ್ತಿರವಾಗಿ ಸುಲಭವಾಗಿ ಅರ್ಥವಾಗುವುದಕ್ಕೆ ನಮ್ಮಿಂದಲೆ ರಚಿಸಲ್ಪಟ್ಟ **"ತ್ರೈತ**

**ಸಿದ್ಧಾಂತ ಭಗವದ್ಗೀತೆ"**ಯೇ ಆರನೇ ಶಾಸ್ತ್ರವೆಂದು ಹೇಳುತ್ತಿದ್ದೇವೆ. ಭಗವದ್ಗೀತೆ ಸಂಪೂರ್ಣವಾದ ಆರನೇ ಶಾಸ್ತ್ರವಾಗಿ ಇದೆ. ಸಿದ್ಧಾಂತವನ್ನು ಆಧಾರವಾಗಿ ಮಾಡಿಕೊಂಡು ಹೇಳಲ್ಪಟ್ಟಿರುವುದು **"ತ್ರೈತ ಸಿದ್ಧಾಂತ ಭಗವದ್ಗೀತೆ"**. ಆದ್ದರಿಂದ ಪರಿಶೋಧನೆ ದೃಷ್ಠಿಯಿರುವವರಿಗೆ, ಪ್ರಶ್ನಿಸುವವರಿಗೆ ಎಲ್ಲ ವಿಧಗಳ ಉತ್ತರಗಳಿಂದ ಕೂಡಿರುವುದು ತ್ರೈತ ಸಿದ್ಧಾಂತ ಭಗವದ್ಗೀತೆ, **ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಪೂರ್ತಿಯಾಗಿ ಓದಿದ ನಂತರ ಸಂಪೂರ್ಣ ಮೇಧಸ್ಸು ಅಂದರೆ ಏನೋ ಆಗ ಅರ್ಥವಾಗುತ್ತದೆ.**

ಎರಡನೆಯ ವಿಧಾನದ ಪ್ರಕಾರ ದೆವ್ವಗಳು ಅವುಗಳ ನೈಜ ಸಂಘಟನೆಗಳನ್ನು ಕುರಿತು ಯೋಚಿಸುವಾಗಲಾದರು ದೆವ್ವಗಳನ್ನು ಕುರಿತು ತಿಳಿಯುವುದಕ್ಕೆ ಅವಕಾಶವಿದೆ. ಅವುಗಳನ್ನು ತಿಳಿಸುವುದಕ್ಕೆ ಭೂಮಿ ಮೇಲೆ ಅಲ್ಲಲ್ಲಿ ನಡೆದ ಸಂಘಟನೆಗಳನ್ನು ಕುರಿತು ನಿಮಗೆ ಈ ಗ್ರಂಥದ ಮುಖಾಂತರ ತಿಳಿಸುತ್ತಿದ್ದೇವೆ. ಯಾರೊ ಹೇಳಿರುವವಲ್ಲದೆ ನಾನು ಸ್ವತಹವಾಗಿ ನೋಡಿದ ಸಂಘಟನೆಗಳನ್ನು ಮಾತ್ರ ಈ ಪುಸ್ತಕದಲ್ಲಿ ವಿವರಿಸಿದ್ದೇವೆ. ಇದರಿಂದ ನಿಮಗೆ ಮೇದಸ್ಸು ಬೆಳೆಯುತ್ತದೆಂದು ಅಂದುಕೊಳ್ಳುತ್ತಿದ್ದೇವೆ. ಈ ಗ್ರಂಥದಿಂದ ನಮಗೆ ಬರುವ ಪ್ರಯೋಜನವೇನೆಂದು ಸಹ ಕೆಲವರು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಒಬ್ಬ ಮನುಷ್ಯ ಓಟದ ಪಂದ್ಯದಲ್ಲಿ ಪಾಲ್ಗೊಂಡು ಓಡುತ್ತಿರುವಾಗಾಗಲಿ, ಇಲ್ಲವೆ ಪ್ರಯಾಣ ಮಾಡುತ್ತಿರುವಾಗಾಗಲಿ ಆ ವ್ಯಕ್ತಿಯನ್ನು ಎಷ್ಟು ದೂರ ಓಡಿದ್ದೀಯ ಎಂದು ಕೇಳಿದರೂ ಇಲ್ಲವೆ ಎಷ್ಟು ದೂರ ಪ್ರಯಾಣಿಸಿದ್ದೀಯ? ಎಂದು ಕೇಳಿದರೂ ಹೊರಟ ಸ್ಥಳದಿಂದ ಎಷ್ಟು ದೂರವಾಗಿದೆಯೆಂದು ಲೆಕ್ಕಹಾಕಿ ಹೇಳುವನು. ಇಲ್ಲಿ ಮುಖ್ಯವಾಗಿ ತಾನು ಎಲ್ಲಿಂದ ಹೊರಟಿದ್ದಾನೊ, ಹೊರಟ ವ್ಯಕ್ತಿಗೆ ತಿಳಿದಿರಬೇಕು. ಹೊರಟ ಸ್ಥಳವನ್ನು ಮರೆತು ಹೋದರೆ ತಾನು ಎಷ್ಟು ದೂರ ಪ್ರಯಾಣಿಸಿದ್ದೇನೆಂದು ತನಗೆ ತಿಳಿಯುವುದಿಲ್ಲ. ಹಾಗೆ ಮರೆತು ಹೋದವನನ್ನು ತಿಳಿವಳಿಕೆಯಿಲ್ಲದವನೆಂದು ಹೇಳುತ್ತೇವೆ. ಮಧ್ಯ ದಾರಿಯಲ್ಲಿ ಬಹಳ ತಿಳುವಳಿಕೆಯಿಂದ ಪ್ರಯಾಣಿಸಿದರೂ,

ಅಡಚಣೆಗಳನ್ನು ಎಷ್ಟೋ ತಿಳಿವಳಿಕೆಯಿಂದ ಸುಲಭವಾಗಿ ದಾಟಿ ಹೋಗುತ್ತಿದ್ದರೂ ಮೊದಲು ಹೊರಟ ಸ್ಥಳವನ್ನು ಮರೆತುಹೋದವನನ್ನು ಮತಿಯಿಲ್ಲದವನೆಂದೇ ಲೆಕ್ಕಿಸಬೇಕು. ಒಬ್ಬನು ಹೊರಟ ಜಾಗವನ್ನು ಮರೆತು ಹೋದ ಹಾಗೆ, ಪ್ರಸ್ತುತ ಕಾಲದಲ್ಲಿ ನಾವು ಮೇಧಾವಿಗಳೆಂದುಕೊಂಡವರು ಶರೀರದೊಳಗೆ ತಾನು ಎಲ್ಲಿಂದ ಹೊರಗಿನ ಪ್ರಪಂಚದಲ್ಲಿ ವ್ಯವಹರಿಸುತ್ತಿದ್ದೇನೆಂದು ತಿಳಿಯದೆ, ತನ್ನ ಸ್ವಸ್ಥಳವನ್ನೇ ತಾನು ಮರೆತು ಹೋಗಿ, ಹೊರಗೆ ಚೆನ್ನಾಗಿ ಮೇಧಸ್ಸು ಇರುವವರೆಂದು, ಹೇತುವಾದಿಗಳೆಂದು, ಜನ ವೇದಿಕೆಯವರೆಂದು, ಪ್ರಜಾವೇದಿಕೆಯವರೆಂದು, ವಿಜ್ಞಾನಿಗಳೆಂದು ಹೇಳಿಕೊಳ್ಳುವುದನ್ನು ನೋಡಿದರೆ ಬಾವಿಯಲ್ಲಿನ ಕಪ್ಪೆ ನನಗೆ ಕಾಣಿಸುವುದೇ ಪ್ರಪಂಚವೆಂದಹಾಗೆ ಇದೆ.

ಪ್ರಪಂಚದಲ್ಲಿ ಕೆಲವರು ಯಾವ ವಿಷಯವನ್ನಾದರು ತರ್ಕಿಸುವುದು, ಅದನ್ನು ಅಲ್ಲ ಎನ್ನುವುದು ತಮ್ಮ ಕೆಲಸವಾಗಿ ಇಟ್ಟುಕೊಂಡಿದ್ದಾರೆ. ಅಂತಹವರು ಕೇವಲ ಭೌತಿಕವನ್ನು ಮಾತ್ರ ಸತ್ಯವೆಂದು, ಅಭೌತಿಕ ಪೂರ್ತಿ ಅಸತ್ಯವೆಂದು ವಾಧಿಸುತ್ತಿರುತ್ತಾರೆ. ಭೌತಿಕ ಸ್ಥೂಲದಿಂದ ಕೂಡಿಕೊಂಡಿದೆ, ಅಭೌತಿಕ ಸೂಕ್ಷ್ಮವಾಗಿದೆ. ಅಂತಹ ಭೌತಿಕವಾದಿಗಳು, ಅಭೌತಿಕವಾದ ಸೂಕ್ಷ್ಮವನ್ನು ಒಪ್ಪುವುದಿಲ್ಲ. ಅಭೌತಿಕ ಅಸತ್ಯವೆನ್ನುವುದಕ್ಕೆ ಮೊದಲ ನಾಲ್ಕು ಶಾಸ್ತ್ರಗಳನ್ನು ಆಧಾರ ಮಾಡಿಕೊಂಡು ಮಾತನಾಡುತ್ತಿದ್ದಾರೆ. ಸೂಕ್ಷ್ಮವಾದ ಅಭೌತಿಕ ಆ ನಾಲ್ಕು ಶಾಸ್ತ್ರಗಳಿಗೆ ಸಂಬಂಧಿಸಿರುವುದಲ್ಲವೆಂದು ಅವರಿಗೆ ತಿಳಿದಿಲ್ಲ. ಅಂತವರಿಗೆ ಭೂಮಿ ಮೇಲೆ ಷಟ್ ಶಾಸ್ತ್ರಗಳಿರುವ ವಿಷಯವು ಸಹ ತಿಳಿದಿಲ್ಲ. ನಿರ್ಧಿಷ್ಟವಾಗಿ ಇಷ್ಟು ಶಾಸ್ತ್ರಗಳಿವೆಯೆಂದು ಹೇಳಲಾಗದವರು, ತಮಗೆ ತಿಳಿದ ವಿಷಯಗಳೆಲ್ಲವನ್ನು ಶಾಸ್ತ್ರಗಳೆನ್ನುತ್ತಿದ್ದಾರೆ. ಭೌತಿಕವಾದಿಗಳಾದವರು ಭೂಮಿ ಮೇಲಿರುವ ಕೆಲವು ಮೋಸಗಾರರನ್ನು ಟಕ್ಕು ಟಮಾರಾ ವಿದ್ಯೆಗಳನ್ನು ಮಹತ್ವಗಳಾಗಿ ಹೇಳಿಕೊಳ್ಳುವವರನ್ನು ತೋರಿಸುತ್ತಾ ಇದೆಲ್ಲಾ ಮೋಸವೆಂದು ಹೇಳುತ್ತಿರುತ್ತಾರೆ. ಟಕ್ಕು ಟಮಾರಾ ವಿದ್ಯೆಗಳು ಇತರರನ್ನು ಮೋಸಗೊಳಿಸುವವೇ ಆಗಲಿ ಸತ್ಯಗಳಲ್ಲವೆಂದು ನಾವು ಸಹ ಹೇಳುತ್ತಿದ್ದೇವೆ. ಟಕ್ಕು ಟಮಾರಾ ವಿದ್ಯೆಗಳನ್ನು ನೋಡಿ ಮಂತ್ರಗಳನ್ನು, ಮಂತ್ರಶಕ್ತಿಯನ್ನು ಇಲ್ಲೆನ್ನುವುದು ಸರಿಯಾದ

ತಿಳಿವಳಿಕೆಯಲ್ಲ. ಮಂತ್ರಗಳ ಹೆಸರು ಹೇಳಿ ಯಾರೊ ಮೋಸ ಮಾಡಿದ ಮಾತ್ರಕ್ಕೆ ಸೂಕ್ಷ್ಮವಾದ ಮಂತ್ರಶಕ್ತಿಯನ್ನು ಇಲ್ಲೆನ್ನುವುದು ತಪ್ಪು. ಈ ನಮ್ಮ ಮಾತುಗಳು ಕೆಲವರಿಗೆ ಅನಾಗರಿಕವಾಗಿ ಕಾಣಿಸಬಹುದು, ಮೋಸಪೂರಿತವಾಗಿ ಕಾಣಿಸಬಹುದು, ಅಸತ್ಯವಾದನೆಯಾಗಿಯು ಸಹ ಕಾಣಿಸಬಹುದು. ಇಲ್ಲಿ ಗಮನಿಸಬೇಕಾಗಿರುವುದು ಏನೆಂದರೆ! ನಮ್ಮ ಆದಾಯ ಮಂತ್ರಗಳ ಮೇಲೆ ಆಧಾರವಾಗಿದ್ದರೆ, ದೆವ್ವಗಳ ಮೇಲೆ ಆಧಾರವಾಗಿದ್ದರೆ ನೀವು ಹಾಗೆ ಅನ್ನುವುದಕ್ಕೆ ಅವಕಾಶವಿದೆ. ಆದರೆ ನಾನು ಆ ಕೆಲಸಗಳನ್ನು ಯಾವಾಗಲು ಮಾಡಿಲ್ಲ. ಅವುಗಳ ಮೇಲೆ ಆಧಾರ ಬಿದ್ದು ಬದುಕಲಿಲ್ಲ. ಅವುಗಳನ್ನು ಕುರಿತು ಸಮರ್ಥಿಸುವುದರಲ್ಲಿ ನನಗೆ ಎಂತಹ ಲಾಭವೂ ಇಲ್ಲ. ಇದು ಕೇವಲ ಮೇಧಸ್ಸಿಗೆ ಸಂಬಂಧಿಸಿರುವಂತದ್ದು, ಶಾಸ್ತ್ರಬದ್ಧತೆಯಾಗಿರುವುದರಿಂದ ಹೇಳಬೇಕಾಗಿ ಬಂದಿದೆ. ಆದ್ದರಿಂದ ಹೇತುವಾದಿಗಳು, ಪ್ರಜಾ ವಿಜ್ಞಾನ ವೇದಿಕೆಗಳನ್ನು ಇಟ್ಟುಕೊಂಡವರೂ, ನಾವು ಹೇಳುವ ವಿಷಯಗಳನ್ನು ಕೂಲಂಕುಷವಾಗಿ ನೋಡಬೇಕೆಂದು ಕೋರುತ್ತಿದ್ದೇವೆ.

**ಮನುಷ್ಯ** ಎಂದಾಗ ಕಾಣಿಸುವ ಶರೀರ ಭಾಗಗಳಿಂದ ಕಾಣಿಸದ ಜೀವಾತ್ಮನು, ಹಾಗೆ ಕಾಣಿಸದ ಜೀವಿಗೆ ಸಂಬಂಧಿಸಿದ ಕೆಲವು ಭಾಗಗಳು ಎಂದು ಅರ್ಥ. **ಶವ** ಎಂದರೆ ಕಾಣಿಸುವ ಶರೀರ ಮಾತ್ರವೇಯೆಂದು ಅದರಲ್ಲಿ ಕಾಣಿಸದ ಜೀವಾತ್ಮನಾಗಲಿ, ಕಾಣಿಸದ ಜೀವಾತ್ಮನೊಂದಿಗೆ ಸಂಬಂಧಪಟ್ಟಿರುವ ಕೆಲವು ಭಾಗಗಳಾಗಲಿ ಇಲ್ಲವೆಂದು ಅರ್ಥ. **ದೆವ್ವ** ಎಂದರೆ ಕಾಣಿಸದ ಜೀವಿ, ಅವನಿಗೆ ಅನುಬಂಧವಾಗಿ ಇರುವವು ಮಾತ್ರವೇಯೆಂದು, ಕಾಣಿಸುವ ಶರೀರವಲ್ಲವೆಂದು ಅರ್ಥ. ಇನ್ನೂ ವಿವರವಾಗಿ ಹೇಳಿಕೊಂಡರೆ ಒಬ್ಬ ಮನುಷ್ಯ ಅಂದಾಗ ಕಾಣಿಸುವ ಹತ್ತು (10) ಭಾಗಗಳ ಶರೀರ ಮತ್ತು ಕಾಣಿಸದ ಹದಿನೈದು (15) ಭಾಗಗಳ ಜೀವಿಯು ಅವನ ಅನುಬಂಧವೆಂದು ಅರ್ಥ. ಶವ ಎಂದರೆ ಕೇವಲ ಕಾಣಿಸುವ ಹತ್ತು ಭಾಗಗಳೆಂದೇ ಅರ್ಥ. ದೆವ್ವ ಎಂದರೆ ಕೇವಲ ಕಾಣಿಸದ ಜೀವಿಯು ಅವನ ಅನುಬಂಧ ಒಟ್ಟು ಹದಿನೈದು ಭಾಗಗಳೆಂದು

ಅರ್ಥ. ಇದನ್ನು ಅನುಸರಿಸಿ ನೋಡಿದರೆ ಒಬ್ಬ ಮನುಷ್ಯ ಅಂದಾಗ 25 ಭಾಗಗಳಿಂದ ಕೂಡಿಕೊಂಡು ಚಲಿಸುವ ಶರೀರವೆಂದು, ಶವ ಎಂದರೆ ಕೇವಲ 10 ಭಾಗಗಳಿಂದಿರುವ ಕದಲದ (ಚಲಿಸದ) ಶರೀರವೆಂದು, ದೆವ್ವ ಎಂದರೆ ಕೇವಲ 15 ಭಾಗಗಳಿಂದ ಕೂಡಿಕೊಂಡಿರುವ ಕಾಣಿಸದ ಸೂಕ್ಷ್ಮ ಶರೀರವೆಂದು ಅರ್ಥ. ಈ ವಿವರ ತಿಳಿಯದೇ ಹೋದರೆ ದೆವ್ವಗಳನ್ನು ಕುರಿತು ಯಾರೂ ತಿಳಿಯಲಾರರು.

ಈ ವಿವರ ತಿಳಿಯದವರಿಗೆ ದೆವ್ವಗಳನ್ನು ಕುರಿತು ಸ್ವಲ್ಪವಾದರೂ ತಿಳಿಯದು. ಆದ್ದರಿಂದ ಅವರು ದೆವ್ವಗಳು ಇಲ್ಲ ಎನ್ನುತ್ತಿದ್ದಾರೆ. ದೆವ್ವಗಳು ಇಲ್ಲ ಎನ್ನುವವನು ತಾನು ಜೀವನೆಂದಾಗಲಿ, ಕಾಣಿಸದಂತಿದ್ದು ತನಗೆ ಸಹಾಯಪಡುವ 14 ಭಾಗಗಳು ತನ್ನ ಶರೀರದಲ್ಲಿ ಇವೆಯೆಂದಾಗಲಿ ತಿಳಿದಿಲ್ಲ. ಹೊರಗೆ ಎಷ್ಟು ವಿಜ್ಞಾನವನ್ನು ಬೆಳೆಸಿಕೊಂಡ ದೊಡ್ಡ ಸೈಂಟಿಸ್ಟಾಗಲಿ ತನ್ನ ಜ್ಞಾನವೇ ತನಗೆ ತಿಳಿಯದೇ ಹೋಗುವುದರಿಂದ ಆತನನ್ನು ಅಜ್ಞಾನಿ ಎಂದು ಅನ್ನಬಹುದು. ಇದರ ಪ್ರಕಾರ ಈಗಿನ ಕಾಲದಲ್ಲಿ ಹೊರಗಿನ ಮೇಧಾವಿಗಳನ್ನು, ಶಾಸ್ತ್ರಕಾರರನ್ನು ತಮ್ಮ ಅಡ್ರಸ್ ತಮಗೆ ತಿಳಿಯದವರಾಗಿ, ತಮ್ಮ ಸ್ವಂತ ಸ್ಥಳಯಾವುದೊ ತಮಗೆ ತಿಳಿಯದವರೆಂದು ಲೆಕ್ಕಿಸಬಹುದು. ತಮ್ಮ ಶರೀರದಲ್ಲಿ ತಮ್ಮ ವಿಳಾಸ ಏನೊ ತಮ್ಮ ಆಕಾರವೇನೊ, ತನ್ನ ಸಹಚರರ್ಯಾರೋ ತಿಳಿಯದ ಇವರಾ ಮೇಧಾವಿಗಳು? ಅದಕ್ಕೆ ಉತ್ತರವಾಗಿ ಅಲ್ಲವೆಂದೇ ಹೇಳಬಹುದು. ಇಂಥವರು ದೆವ್ವಗಳಿವೆಯೆಂದು ನಿರೂಪಿಸುತ್ತೀರಾ? ಎಂದು ನಮ್ಮನ್ನು ಕೇಳಬಹುದು. ನಿಮಗೆ ಕಾಣಿಸಿದರೆ ನಿರೂಪಣೆಗೆ ಬರಬಹುದು, ಆದರೆ ದೆವ್ವಗಳು ಕಾಣಿಸುವುದಿಲ್ಲವಲ್ಲ! ಆದ್ದರಿಂದ ಅವರಿಗೆ ನಿರೂಪಣೆಗೆ ಬರುವುದಿಲ್ಲ. ಕಣ್ಣಿರುವವನೆ ನೋಡುವನು, ಕಣ್ಣು ಇಲ್ಲದವನು ನೋಡಲಾರನು ಎನ್ನುವ ಸೂತ್ರದ ಪ್ರಕಾರ ಜ್ಞಾನ ನೇತ್ರ ಇಲ್ಲದವರಿಗೆ ದೆವ್ವಗಳು ತಿಳಿಯುವುದಿಲ್ಲ. ಆದ್ದರಿಂದ ಅವುಗಳನ್ನು ನಿಮಗೆ ಪ್ರತ್ಯಕ್ಷವಾಗಿ ತೋರಿಸದಿದ್ದರೂ ಅವುಗಳ ಕೆಲಸಗಳನ್ನು ವಿವರಿಸುತ್ತಾ ಯಾರಾದರೂ ತಿಳಿದುಕೊಳ್ಳುವುದಕ್ಕೆ ಅವಕಾಶ ಸಿಗುವಂತೆ ಈ ಗ್ರಂಥವನ್ನು ಬರೆಯಬೇಕಾಗಿ ಬಂದಿದೆ.

ಮೊದಲು ನಾನು ಹೇಳುವುದೇನೆಂದರೆ! ಇಲ್ಲಿಯವರೆಗು ಇಲ್ಲಿ ಬರೆದ ವಿಧಾನವನ್ನು ನೋಡಿದರೆ ನನ್ನನ್ನು ಒಬ್ಬ ಆಸ್ತಿಕನಾಗಿ ಬಹಳ ಜನ ಹೇತುವಾದಿಗಳು, ನಾಸ್ತಿಕವಾದಿಗಳು ಲೆಕ್ಕಹಾಕಿರುತ್ತಾರೆ. ಹಾಗೆ ನಮ್ಮ ಬೋಧನೆಗಳನ್ನು ಕೇಳಿದವರು, ನಮ್ಮ ವಿಧಾನವನ್ನು ನೋಡಿದ ದೇವತಾ ಭಕ್ತರು, ಆಸ್ತಿಕರು, ಮತ ಪ್ರಚಾರಕರು ಮೊದಲಾದವರು ನನ್ನನ್ನು ನಾಸ್ತಿಕನು ಎಂದಿದ್ದಾರೆ. ಹೀಗೆ ನಮ್ಮ ಸತ್ಯವಾದನೆ ಅರ್ಥವಾಗದೆ ಕೆಲವರು ನಿನ್ನದು ಯಾವ ಮತ ಎಂದು ಕೇಳಿದವರು ಸಹ ಇದ್ದಾರೆ. ಭಗವದ್ಗೀತೆಯನ್ನು ವಿವರಿಸಿ ಹೇಳುತ್ತಿದ್ದರೆ ಅರ್ಥಮಾಡಿಕೊಳ್ಳದೆ, ಅಸೂಯದಿಂದ ಹಿಂದೂ ಪರಿಷತ್ ಎಂದು ಹೆಸರು ಇಟ್ಟುಕೊಂಡವರೆ ನೀವು ಪರಮತವನ್ನು ಬೋಧಿಸುತ್ತಿದ್ದೀರ ಎಂದಿದ್ದಾರೆ. ಹೀಗೆ ಎಷ್ಟೋ ಜನ ಎಷ್ಟೋ ವಿಧಗಳಲ್ಲಿ ಅಂದುಕೊಂಡರೂ ನನ್ನ ಲೆಕ್ಕದಲ್ಲಿ ನಾನು ಯಾರೋ ನಿಮಗೆ ಸ್ವಲ್ಪ ಹೇಳಬೇಕಾದ ಅವಶ್ಯವಿದೆ. ಇಂದೂ ಮತವು ಸನಾತನವಾದದ್ದು. ಇದು ಎಲ್ಲ ಮತಗಳಂತದ್ದಲ್ಲ. ಇದು ಯಾವಾಗ ಹುಟ್ಟಿದೆ ಎಂದು ಸಹ ಯಾರಿಗೂ ತಿಳಿದಿಲ್ಲ. ಆದರೂ ಈ ಮತ ಕ್ಷೀಣಿಸದೆ ಇರುವುದಕ್ಕೆ ಇಂದೂ ಮತದಲ್ಲಿ ಕಲಿಯುಗದಲ್ಲಿಯೇ ಕೇರಳ ರಾಷ್ಟ್ರದಲ್ಲಿ ಆದಿ ಶಂಕರಾ ಚಾರ್ಯರೆಂಬ ವ್ಯಕ್ತಿ ಹುಟ್ಟಿದ್ದನು. ಇಂಟರ್‌ನೆಟ್ ಸಮಾಚಾರದ ಪ್ರಕಾರ ಶಂಕರಾಚಾರ್ಯರು ಕ್ರಿಸ್ತಶಕ 788ರಲ್ಲಿ ಹುಟ್ಟಿ 820 ರಲ್ಲಿ ಮರಣಿಸಿದಂತೆ ಇದೆ. ಆತನು ಬದುಕಿರುವುದು ಕೇವಲ 32 ವರ್ಷಗಳು ಮಾತ್ರ. ಆತನು 27ನೇ ವರ್ಷದಿಂದ ತಾನು ಕಂಡುಕೊಂಡ ಅದ್ವೈತ ಸಿದ್ಧಾಂತವನ್ನು ಬೋಧಿಸಿದ್ದಾನೆ. ಆತನ ಅದ್ವೈತ ಸಿದ್ಧಾಂತವನ್ನು ಬೋಧಿಸಿರುವುದು ಕೇವಲ 5 ವರ್ಷಗಳು ಮಾತ್ರ. ಶಂಕರಾಚಾರ್ಯನು ಸತ್ತು ಹೋದ ನಂತರ 197 ವರ್ಷಗಳಿಗೆ ಅಂದರೆ ಕ್ರಿ.ಶ॥ 1017 ವರ್ಷದಲ್ಲಿ ರಾಮಾನುಜಾಚಾರ್ಯರು ಹುಟ್ಟಿದ್ದಾನೆ. ಆತನು 120 ವರ್ಷಗಳು ಬದುಕಿ ಕ್ರಿ.ಶ॥ 1137ನೇ ವರ್ಷದಲ್ಲಿ ಸತ್ತುಹೋಗಿದ್ದಾನೆ. ಆತನು ತಾನು ಕಂಡುಕೊಂಡ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡಿದ್ದಾನೆ. ಆತನ ನಂತರ 101 ವರ್ಷಗಳಿಗೆ 1238ನೇ ವರ್ಷದಲ್ಲಿ ಮಧ್ವಾಚಾರ್ಯರು ಹುಟ್ಟಿದ್ದಾರೆ. ಆತನು 1317ರ ವರೆಗೆ 79 ವರ್ಷಗಳು

ಬದುಕಿ ತನ್ನ ದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡಿದ್ದಾನೆ. ಮಧ್ವಾಚಾರ್ಯರ ಅನಂತರ 633 ವರ್ಷಗಳಿಗೆ ಅಂದರೆ 1951 ಸಂವತ್ಸರದಲ್ಲಿ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು ಹುಟ್ಟಿದರು. 27 ವರ್ಷಗಳ ವಯಸ್ಸು ಬಂದ ನಂತರ ಅಂದರೆ 1977 ರಿಂದ ಜ್ಞಾನ ಪ್ರಚಾರ ಮಾಡುತ್ತಾ, ತನ್ನ ತ್ರೈತ ಸಿದ್ಧಾಂತವನ್ನು ಪ್ರಚಾರ ಮಾಡುತ್ತಿದ್ದಾರೆ. **ತ್ರೈತ ಸಿದ್ಧಾಂತ ಆದಿಕರ್ತನೆಂದು, ಆಚಾರ್ಯ ಪ್ರಬೋಧಾನಂದ ಯೋಗೀಶ್ವರರೆಂದು ಹೆಸರಾದ ವ್ಯಕ್ತಿಯೆ ಈಗ ಈ ಗ್ರಂಥವನ್ನು ಬರೆಯುತ್ತಿರುವ ನಾವು,** ನಾನು ಸ್ವಚ್ಛವಾದ ಹಿಂದೂ ಧರ್ಮ ಸಿದ್ಧಾಂತಕರ್ತನಾಗಿರುವುದರಿಂದ ಇಲ್ಲಿ ಬರೆಯುವ ವಿಷಯಗಳೆಲ್ಲವು ಸತ್ಯಗಳೇ ಮತ್ತು ಶಾಸ್ತ್ರಬದ್ಧತೆಗಳೆಂದು ತಿಳಿಸುತ್ತಿದ್ದೇವೆ. ಎಲ್ಲಾದರು ದೆವ್ವಗಳೆನ್ನುವ ಹೆಸರಿನಿಂದ ಮೋಸಗಾರರು ಮೋಸ ಮಾಡಿದ ಮಾತ್ರಕ್ಕೆ ದೆವ್ವಗಳು ಇಲ್ಲೆನ್ನುವುದು ತಪ್ಪಾಗುತ್ತದೆ. ಆದ್ದರಿಂದ ದೆವ್ವಗಳು ನಿಜವೆ! ದೆವ್ವಗಳ ಸಂಘಟನೆಗಳು ನಿಜವೆ!! ಪರಿಶೋಧಿಸಿ ನೋಡಿದರೆ ಶಾಸ್ತ್ರಬದ್ಧತೆಗಳೆ!!!

ಈಗ ಆರಂಭದಲ್ಲಿ ಹೇಳುವುದೇನೆಂದರೆ! ನನಗೆ ಏಳು, ಎಂಟು ವರ್ಷಗಳ ವಯಸ್ಸಿನಿಂದ ಪ್ರತಿ ವಿಷಯದಲ್ಲಿಯೂ ಪರಿಶೋಧನಾ ದೃಷ್ಠಿ ಇರುತ್ತಿತ್ತು. ಅದನ್ನೇ ಒಂದು ವಿಧವಾಗಿ ಹೇತು ಶೋಧನಾ ದೃಷ್ಠಿ ಎನ್ನುತ್ತೇವೆ. ಆದ್ದರಿಂದ ಯಾವುದಾದರು ಪ್ರತ್ಯೇಕವಾದ ಸಂಘಟನೆ ಇದ್ದರೆ, ಅದನ್ನೇ ಪ್ರತ್ಯೇಕವಾಗಿ ಪ್ರಶ್ನಿಸಿಕೊಂಡು ಯೋಚಿಸುತ್ತಿದ್ದೆನು. ಕೆಲವರು ಅನುಭವಜ್ಞರು ಹೇಳಿದ್ದಾರೆಂದು ಅವರು ಹೇಳಿದ ಮಾತುಗಳನ್ನು ನಂಬದೆ, ನನಗೆ ಒಂದು ಅವಗಾಹನೆ ಬರುವವರೆಗು ನನ್ನ ಪ್ರಶ್ನೆಗಳಿಗೆ ಉತ್ತರ ಸಿಗುವವರೆಗೂ ಯೋಚಿಸುವುದು ರೂಢಿಯಲ್ಲಿತ್ತು. ಅಂತಹ ಸಮಯದಲ್ಲಿ ನನಗೆ ಎಂಟು ವರ್ಷಗಳ ವಯಸ್ಸು ನಡೆಯುತ್ತಿರುವಾಗ ಅನಂತಪುರ ಜಿಲ್ಲೆಯಲ್ಲಿ ವಜ್ರಗಳು ದೊರಕುವ ವಜ್ರಕರೂರಿನಲ್ಲಿ ನಿವಾಸ ಇರುವುದು ನಡೆದಿದೆ. ಅಲ್ಲಿಗೆ ಹತ್ತಿರದಲ್ಲಿರುವ ತಟ್ರಕಲ್ಲು ಎಂಬ ಗ್ರಾಮಕ್ಕೆ ಗ್ರಾಮ ದೇವತೆ ದೊಡ್ಡಮ್ಮ ಜಾತ್ರೆ ನಡೆಯುತ್ತಿರುವಾಗ ನಾನು ಹೋಗಬೇಕಾಯಿತು. ಆ ವಯಸ್ಸಿನಲ್ಲಿ ಜಾತ್ರೆ ಎಂದರೆ ಏನೊ, ಗ್ರಾಮ

ದೇವತೆ ಎಂದರೆ ಏನೊ ಸಹ ನನಗೆ ಗೊತ್ತಿರಲಿಲ್ಲ. ದೊಡ್ಡವರು ಹೋಗುತ್ತಿದ್ದರೆ ಅವರ ಹಿಂದೆ ಹೋಗಿದ್ದೆವು. ಅಷ್ಟೊತ್ತಿಗೆ ಅಲ್ಲಿ ಸ್ವಲ್ಪ ಭಾಗ ಜಾತ್ರೆ ನಡೆದು ಹೋಗಿತ್ತು. ಆ ಗ್ರಾಮದೊಳಗೆ ಹೋಗುತ್ತಲೆ ಗ್ರಾಮ ಮಧ್ಯೆದಲ್ಲಿ ಒಂದು ದೃಶ್ಯ ಕಾಣಿಸಿತು. ಅಲ್ಲಿ ಹತ್ತು ಅಡಿಗಳ ದೂರದಲ್ಲಿ ಒಂದು ಕೋಣದ ಮರಿಯ ತಲೆಯನ್ನು ಕಡಿದಿರುವುದನ್ನು ನೋಡಿದೆನು. ಮುಂಡ ಮಾತ್ರವಿದೆ, ತಲೆಯನ್ನು ದೂರದಲ್ಲಿರುವ ಗ್ರಾಮ ದೇವತೆ ಗುಡಿ ಹತ್ತಿರ ಇಟ್ಟಿದ್ದಾರೆ. ಹಾಗೆ ನಾಲ್ಕು ವಯಸ್ಸಿಗೆ ಬಾರದ ಚಿಕ್ಕ ಕರುಗಳನ್ನೇ ಕಡಿದಿರುವುದನ್ನು ನೋಡಿದೆನು. ಅಲ್ಲಿಗೆ ಅದೊಂದು ವಿಚಿತ್ರ ಸಂಘಟನೆಯಾಗಿ ನನಗೆ ತೋಚಿತು. ನಮ್ಮ ಹಿರಿಯರನ್ನು ಕೇಳಿದರೆ "ದೊಡ್ಡಮ್ಮ ದೇವತೆಗೆ ಕೋಣಗಳನ್ನು ಬಲಿ ಕೊಟ್ಟಿದ್ದಾರೆ" ಎಂದು ಹೇಳಿದರು ಆಗ ಅನೇಕ ಪ್ರಶ್ನೆಗಳು ನನ್ನಲ್ಲಿ ಬಂದಿವೆ. ಬಲಿ ಎಂದರೆ ಏನು? ಏಕೆ ಬಲಿ ಕೊಡಬೇಕು? ದೊಡ್ಡಮ್ಮ ಯಾರು? ಆಕೆಗೆ ಏಕೆ ಈ ಕೋಣಗಳ ರಕ್ತಪಾತ? ಮನುಷ್ಯರಿಂದ ಕರುಗಳನ್ನು ಕಠಿಣವಾಗಿ ಸಾಯಿಸಿದ ದೊಡ್ಡಮ್ಮ ದೇವತೆಯಾಗುತ್ತಾಳಾ? ಆ ದೊಡ್ಡಮ್ಮನಿಂದ ನಮಗೇನು ಕೆಲಸ? ನಾವೇಕೆ ಜಾತ್ರೆ ಮಾಡಬೇಕು? ಗ್ರಾಮ ಮಧ್ಯೆದಲ್ಲಿಯೆ ಏಕೆ ಜಾತ್ರೆ ಮಾಡಿದ್ದಾರೆ, ಹೀಗೆ ಎಷ್ಟೋ ಪ್ರಶ್ನೆಗಳು ಬಂದರೆ ಆಗ ಅವುಗಳಿಗೆ ಉತ್ತರ ಹೇಳುವವರು ಇಲ್ಲ. ಯಾರಿಗಾದರು ಕೇಳಿದರೆ ನಿನಗೇಕೊ ಇವೆಲ್ಲಾ ಎಂದು ಸುಮ್ಮನಿರಿಸುತ್ತಿದ್ದರು. ಆ ದಿನ ಸಾಯಂಕಾಲ ನಾಲ್ಕು ಗಂಟೆಗಳ ಸಮಯದಲ್ಲಿ ಕೆಲವರು ಗುಂಪಾಗಿ ಮೇಳ ತಾಳಗಳಿಂದ, ತಪ್ಪಡಿ ಮೊದಲಾದ ವಾದ್ಯಗಳಿಂದ ಊರಮೆರವಣಿಗೆಗೆ ಊರಿಗೆ ಸಮೀಪದಲ್ಲಿ ಇಳಿಯುವುದಕ್ಕೆ ಹತ್ತು ಅಡಿಗಳ ಅಗಲವಾದ ಮೆಟ್ಟಲುಗಳಿರುವ ಹೊಂಡದಂತಹ ದೊಡ್ಡ ಬಾವಿ ಹತ್ತಿರಕ್ಕೆ ಹೋದರು. ಆ ಬಾವಿಯೊಳಗೆ ಮುಖ್ಯವಾದವರು ಸುಮಾರು 30 ಮಂದಿ ವರೆಗು ಇಳಿದರು. ಉಳಿದವರೆಲ್ಲರು ಮೇಲಿಂದ ನೋಡುತ್ತಿದ್ದಾರೆ. ವಿಶಾಲವಾದ ಬಾವಿಯಾಗಿರುವು ದರಿಂದ ಮೇಲಿಂದ ನನಗೂ ಚೆನ್ನಾಗಿ ಕಾಣಿಸುತ್ತಿದೆ. ಬಾವಿಯೊಳಗೆ ಇಳಿದ ನಂತರ ಹೊಸ ಮಣ್ಣಿನ ಕೊಡವನ್ನು ನೀರಿನಿಂದ ತುಂಬಿ ಅದನ್ನು ಕಳಶದ ಹಾಗೆ ಅಲಂಕರಿಸಿ ಗುಂಪಿನೊಳಗಿನ ಒಬ್ಬ ವ್ಯಕ್ತಿಗೆ ಪ್ರತ್ಯೇಕವಾಗಿ ಹೂವಿನ

ಮಾಲೆ ಹಾಕಿ ಆ ಕಳಶವನ್ನು ಆತನ ತಲೆಮೇಲೆ ಎತ್ತಿದರು. ಆ ಕಳಶವನ್ನು ಮಹಾ ಸಂಭ್ರಮದಿಂದ ಕೆಲವರು ಹೆಜ್ಜೆಯನ್ನು ಹಾಕುತ್ತಾ ತಪ್ಪಡಿಗಳನ್ನು ಬಡಿಯುತ್ತಾ ತೆಗೆದುಕೊಂಡು ಬರುತ್ತಿದ್ದಾರೆ. ಕಳಶವನ್ನು ಎತ್ತಿಕೊಂಡ ಮನುಷ್ಯ ದೊಡ್ಡ ಮೀಸೆಗಳಿದ್ದು ಬಲವಾದ ಶರೀರದಿಂದಿರುವ ಸುಮಾರು 40 ವರ್ಷಗಳ ವಯಸ್ಸಿರುವವನು, ಹಾಗೆ ಬಹಳ ಗುಂಪಾಗಿ ಕುಣಿಯುತ್ತಾ ಸ್ವಲ್ಪ ದೂರ ಬಂದ ನಂತರ ಕಳಶವನ್ನು ಎತ್ತಿಕೊಂಡ ಮನುಷ್ಯ ನಿಂತುಕೊಂಡನು. ಆತನೊಂದಿಗೆ ಎಲ್ಲರೂ ಮುಂದಕ್ಕೆ ಹೋಗದೆ ನಿಂತುಕೊಂಡು ಎಲ್ಲರೂ ಆತನು ಏಕೆ ನಿಂತುಕೊಂಡಿದ್ದಾನೆಂದು ಆತನ ಕಡೆಗೆ ನೋಡತೊಡಗಿದರು.

ಹಾಗೆ ನೋಡುತ್ತಿರುವಾಗಲೆ ಆ ಮನುಷ್ಯನ ಕಣ್ಣಿನಲ್ಲಿ ಕಣ್ಣೀರು ಬರುತ್ತಿರುವುದು ಕಾಣಿಸುತ್ತಿದೆ. ಆತನು ಅಳುತ್ತಿದ್ದಾನೆಂದು ಅರ್ಥವಾಯಿತು. ಆಗ ಅಲ್ಲಿರುವ ಊರಿನ ಹಿರಿಯರು ಕೆಲವರು "ಏನು ತಾಯಿ ಏಕೆ ಅಳುತ್ತಿದ್ದೀಯ? ನಿನಗೇನು ನೋವಾಗಿದೆ" ಎಂದು ಪ್ರಶ್ನಿಸಿದರು. ಆಗ ಆತನು ಅಳುತ್ತಲೆ "ನಿಮಗೆ ನಾನು ಐದು ವರ್ಷಗಳಿಗೆ ಜ್ಞಾಪಕಕ್ಕೆ ಬಂದಿದ್ದೀನಾ, ನೀವು ನನ್ನನ್ನು ಮರೆತು ಹೋಗಿದ್ದೀರ" ಎಂದು ಅಂದಾಗ ಅಲ್ಲಿರುವವರು "ಇಲ್ಲ ತಾಯಿ ನಿನ್ನನ್ನು ಮರೆತುಹೋಗಿಲ್ಲ. ಬೆಳೆಗಳು ಸರಿಯಾಗಿ ಬೆಳೆಯದೆ ಹೋಗಿರುವುದರಿಂದ ಪ್ರತಿ ವರ್ಷ ನಿನಗೆ ಜಾತ್ರೆ ಮಾಡಲಾರದೆ ಹೋಗಿದ್ದೇವೆ. ಈಗಿನಿಂದ ನಮಗೆ ಎಷ್ಟು ಕಷ್ಟಗಳಿದ್ದರೂ ನಿನಗೆ ತಪ್ಪದೆ ಜಾತ್ರೆ ಮಾಡುತ್ತೇವೆ." ಎಂದು ವಿನಯವಾಗಿ ಹೇಳಿದರು. ಅಷ್ಟರಲ್ಲಿಯೇ ಕಳಶವನ್ನು ಎತ್ತಿಕೊಂಡಾತನು "ನಿಮಗೆ ಒಂದು ಸಂವತ್ಸರವೇ ಕಣೊ ಬೆಳೆಗಳು ಸರಿಯಾಗಿ ಬೆಳೆದಿಲ್ಲ, ಉಳಿದ ನಾಲ್ಕು ಸಂವತ್ಸರಗಳು ಬೆಳೆದಿದ್ದಾವಲ್ಲೊ? ಸರಿ ಈಗಾದರು ನಾನು ನಿಮಗೆ ಜ್ಞಾಪಕಕ್ಕೆ ಬಂದಿದ್ದೇನೆ. ಈಗಲಾದರೂ ನನ್ನ ಹಬ್ಬವನ್ನು ಸರಿಯಾಗಿ ಮಾಡಿದಿರಾ? ದೇವರ ಹೋತುಗಳು ಚಿಕ್ಕ ಕರುಗಳು ದೊರಕಿವೆಯೆ? ದೊಡ್ಡದು ಒಂದಾದರು ಇದೆಯಾ" ಎಂದನು. ಆಗ ಆ ಗ್ರಾಮದ ಹಿರಿಯರು "ನಿನಗೆ ಬಿಟ್ಟ ದೊಡ್ಡ ಹೋತು ಕಾಣಿಸದೆ ಎಲ್ಲೊ ಹೋಗಿದೆ. ಆದ್ದರಿಂದ ಚಿಕ್ಕ ಹೋತುಗಳನ್ನು ಕೊಟ್ಟಿದ್ದೇವೆ ತಾಯಿ. ನಮ್ಮ ತಪ್ಪುಗಳು ಏನಾದರು ಇದ್ದರೆ ಕ್ಷಮಿಸಮ್ಮಾ. ನೀನು

ನೋವು ಪಟ್ಟರೆ ಊರಿಗೆ ಒಳ್ಳೆಯದಲ್ಲಮ್ಮಾ, ಬರುವ ವರ್ಷ ದೊಡ್ಡ ಹೋತನ್ನು ಬಲಿಕೊಟ್ಟು ಹಬ್ಬ ಚೆನ್ನಾಗಿ ಮಾಡುತ್ತೇವೆ" ಎಂದು ಸರಿಪಡಿಸಿ ಹೇಳಿದರು. ಆಗ ಆ ವ್ಯಕ್ತಿ "ಸರಿ ನಾಳೆ ವರ್ಷ ಚೆನ್ನಾಗಿ ಮಾಡಿರಿ ಇಲ್ಲದೆ ಹೋದರೆ ನಾನು ಸುಮ್ಮನಿರುವುದಿಲ್ಲ" ಎಂದು ಹೇಳಿದಾಗ ಎಲ್ಲರೂ ಹಾಗೆ ಆಗಲಿ ತಾಯಿ ನಮ್ಮನ್ನು ದಯೆಯಿಂದ ನೋಡಮ್ಮಾ ಎಂದು ನಮಸ್ಕರಿಸಿದರು. ಹಾಗೆ ಹೇಳಿದ ನಂತರ ಆತನ ಕಣ್ಣಿನಲ್ಲಿ ನೀರು ಬರುವುದು, ನೋವಿಂದ ಅಳುತ್ತಾ ಮಾತನಾಡುವುದು ನಿಂತು ಹೋಯಿತು. ಮೊದಲು ಹೇಗಿದ್ದನೋ ಹಾಗೇ ದರ್ಪವಾಗಿ ಕಾಣಿಸುತ್ತಾ ಅಲ್ಲಿಂದ ನಡೆಯುವುದನ್ನು ಪ್ರಾರಂಭಿಸಿದನು.

ಈ ಸಂಘಟನೆಯನ್ನೆಲ್ಲಾ ಜಾಗರೂಕತೆಯಿಂದ ಗಮನಿಸಿದ ನನಗೆ ಎಷ್ಟೋ ಪ್ರಶ್ನೆಗಳು ಬಂದವು. ಅವು ಹೀಗಿವೆ. ದೊಡ್ಡ ದೊಡ್ಡ ಮೀಸೆಗಳನ್ನು ಇಟ್ಟುಕೊಂಡ ಗಂಡಸು ಹೆಂಗಸಿನ ಹಾಗೆ ಮೂತಿಯನ್ನು ಸೊಟ್ಟ ಇಟ್ಟುಕೊಂಡು ಅಳುವಹಾಗೆ ಅಳುವುದೇನು? ಗಂಡಸನ್ನು ಎಲ್ಲರೂ ಅಮ್ಮಾ, ತಾಯಿ ಎಂದು ಏಕೆ ಅನ್ನುತ್ತಿದ್ದಾರೆ? ಚಿಕ್ಕ ಮಕ್ಕಳು ಮುನಿಸಿದ ಹಾಗೆ ಆತನು ಮುನಿಸಿಕೊಂಡು ನನಗೆ ಜಾತ್ರೆ ಐದು ವರ್ಷಗಳಿಂದ ಮಾಡಲಿಲ್ಲ, ನನ್ನನ್ನು ಮರೆತು ಹೋಗಿದ್ದಾರೆನ್ನುವುದೇನು? ಇನ್ನೂ ವಿಚಿತ್ರವಾಗಿ ನನಗೆ ದೊಡ್ಡ ಕೋಣವನ್ನು ಬಲಿಕೊಡಲಿಲ್ಲ, ಎಲ್ಲ ಚಿಕ್ಕ ಕರುಗಳನ್ನೇ ಕೊಟ್ಟಿದ್ದೀರ ಅವು ನನಗೆ ಸಾಲವು ಎನ್ನುವುದೇನು? ಸ್ವಲ್ಪ ಹೊತ್ತಿನ ನಂತರ ಆತನನ್ನು ಎಲ್ಲರು ಗಂಡಸನ್ನು ಕರೆದ ಹಾಗೆ ಆತನೊಂದಿಗೆ ಸಮಾನವಾಗಿ ವ್ಯವಹರಿಸುತ್ತಿದ್ದಾರೆ. ಕಳಶವನ್ನು ಎತ್ತಿಕೊಂಡು ಮಾತನಾಡಿದಾಗ ಮಾತ್ರ ಹೆಂಗಸು ಮಾತನಾಡಿದ ಹಾಗೆ ವಿನಯವಾಗಿ, ಭಕ್ತಿಯಿಂದ ಮಾತನಾಡುವುದು ಏಕೆ? ಹೀಗೆ ಉತ್ತರಗಳಿಲ್ಲದ ಎಷ್ಟೋ ಪ್ರಶ್ನೆಗಳು ಬರತೊಡಗಿದವು. ಆ ದಿನ ನಮ್ಮ ಮನೆಯಲ್ಲಿ ಹಿರಿಯರನ್ನು ಕೇಳಿದರೆ ದೊಡ್ಡಮ್ಮ ತಾಯಿ ಕಳಶವನ್ನು ಎತ್ತಿಕೊಂಡ ಮನುಷ್ಯನೊಳಗೆ ಬಂದು ಆ ಸ್ವಲ್ಪಹೊತ್ತು ಮಾತನಾಡಿದ್ದಾಳೆ ಎಂದರು. ಅಷ್ಟೇ ಹೊರತು ಅವರು ಏನೂ ಹೇಳಿಲ್ಲ. ದೊಡ್ಡಮ್ಮ ಯಾರು? ಆಕೆ ಗಂಡಸಿನೊಳಗೆ ಬರುವುದೇನು?

ಗುಡಿಯೊಳಗಿನ ದೇವತೆ ದೊಡ್ಡಮ್ಮ ಆದರೆ ಅಲ್ಲಿಂದಲೆ ಮಾತನಾಡಬಹುದಲ್ಲ! ಮನುಷ್ಯನೊಳಗೆ ಬಂದು ಮಾತನಾಡುವುದು ನಡೆಯುತ್ತಾ? ಕಾಣಿಸದ ದೇವತೆ ಕಾಣಿಸುವ ಮನುಷ್ಯನೊಳಗೆ ಬರುತ್ತಾ? ದೇವತೆಗಳು ದೊಡ್ಡವರಾದಾಗ ಅವರಿಗಿಂತ ಚಿಕ್ಕವರಾದ ಮನುಷ್ಯರೊಳಗೆ ಬರುತ್ತಾರಾ? ಬಂದ ದೊಡ್ಡಮ್ಮ ಚಿಕ್ಕ ಕರುಗಳು ನನಗೆ ಸಾಲವು ಎನ್ನುವುದೇನು? ಆಕೆ ಅವುಗಳನ್ನು ತಿನ್ನುತ್ತಾಳಾ? ಎಂದು ಕೇಳಿದರೆ ಯಾರೂ ಅವುಗಳಿಗೆ ಸರಿಯಾದ ಉತ್ತರ ಹೇಳಲಿಲ್ಲ.

ಇಲ್ಲಿಯವರೆಗೂ ಹೇಳಿಕೊಂಡ ವಿಷಯ ಒಂದು ಗ್ರಾಮದೇವತೆಯದು. ಈಗ ಹೇಳಿಕೊಳ್ಳುವ ವಿಷಯ ಒಂದು ಪ್ರಾಂತದ ದೇವರದು. ಅನಂತಪುರ ಜಿಲ್ಲೆ, ಗುಂತಕಲ್ಲು ಪಟ್ಟಣಕ್ಕೆ ನಾಲ್ಕು ಕಿಲೋಮೀಟರುಗಳ ಸಮೀಪದಲ್ಲಿ ಕಸಾಪುರ ಎಂಬ ಗ್ರಾಮವಿದೆ. ಆ ಗ್ರಾಮದಲ್ಲಿ ಆಂಜನೇಯಸ್ವಾಮಿ ದೇವಸ್ಥಾನವಿದೆ. ನೆಟ್ಟಿಕಂಟಿ ಆಂಜನೇಯಸ್ವಾಮಿಯಾಗಿ ಹೆಸರುವಾಸಿಯಾದ ಆ ದೇವಾಲಯಕ್ಕೆ ಆ ಸುತ್ತಮುತ್ತ ಪ್ರಾಂತದವರೆ ಅಲ್ಲದೆ, ದೂರ ಪ್ರಾಂತದವರು ಸಹ ಭಕ್ತಿಯಿಂದ ಬರುತ್ತಿದ್ದಾರೆ. ದೇಶದಲ್ಲಿ ಎಷ್ಟೋ ಜಾಗಗಳಲ್ಲಿ ಎಷ್ಟೋ ಆಂಜನೇಯ ದೇವಸ್ಥಾನಗಳು ಇದ್ದರೂ ಕೆಲವು ಮಾತ್ರ ಹೆಸರಾಗಿರುವವು ಇವೆ. ಅಂತವುಗಳಲ್ಲಿ ಕಡಪ ಜಿಲ್ಲೆಯಲ್ಲಿ ಗಂಡಿ ಆಂಜನೇಯಸ್ವಾಮಿ ಹೆಸರುವಾಸಿಯಾಗಿದ್ದರೆ, ಅನಂತಪುರ ಜಿಲ್ಲೆಯಲ್ಲಿ ಕಸಾಪುರ ಆಂಜನೇಯಸ್ವಾಮಿ ಹೆಸರುವಾಸಿಯಾಗಿದ್ದಾನೆ. ಇಲ್ಲಿಯವರೆಗೂ ಗಂಡಿ ಆಂಜನೇಯಸ್ವಾಮಿಯನ್ನು ನಾನು ನೋಡಿಲ್ಲ. ಅಂತಹ ಹೆಸರುವಾಸಿಯಾದ ಗುಡಿಗೆ ಹೋಗಿಲ್ಲಾ ಎಂದು ನೀವು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಚಿಕ್ಕ ವಯಸ್ಸಿನಿಂದ ನನ್ನಲ್ಲಿ ಹೇತುವಾದ ಭಾವನೆಗಳು ಹೆಚ್ಚಿನದಾಗಿ ಇರುತ್ತಿದ್ದವು. ಎಲ್ಲರಹಾಗೆ ಭಕ್ತಿಭಾವ ಇಲ್ಲದಿದ್ದರು, ಚಿಕ್ಕ ವಯಸ್ಸಿನಲ್ಲಿ ದೊಡ್ಡವರ ಜೊತೆ ದೇವಾಲಯಗಳಿಗೆ ಹೋಗುವುದು ನಡೆದಿದೆ. ಅಲ್ಲಿ ನಡೆಯುವ ಕೆಲಸಗಳೆಲ್ಲವೂ ವಿಚಿತ್ರವಾಗಿ, ಸಮಾಧಾನವಿಲ್ಲದ ಪ್ರಶ್ನೆಗಳಾಗಿ ಕಾಣಿಸುತ್ತಿದ್ದವು. ಆದ್ದರಿಂದ ಹದಿನಾರು ವರ್ಷಗಳ ವಯಸ್ಸಿನಿಂದ ದೇವಾಲಯಗಳಿಗೆ ಹೋಗುವುದನ್ನು ಬಿಟ್ಟು ಹಾಕಿದೆವು. ಅವುಗಳ

ಮೇಲೆ ಇಷ್ಟವಿಲ್ಲದಿದ್ದರೂ, ಯಾರಾದರು ತಿಳಿದವರು ನಾವು ಹೋಗುತ್ತಿದ್ದೇವೆ, ನೀವು ನಮ್ಮ ಜೊತೆ ಬನ್ನಿ ಎಂದು ಕರೆದರೆ ಭಕ್ತಿಯಿಲ್ಲದ ನನ್ನ ಭಾವನೆಗಳನ್ನು ಹೊರಗಡೆ ಹೇಳಿಕೊಳ್ಳದೆ ನಾನು ಸಹ ಭಕ್ತಿಯಿರುವವನ ಹಾಗೆ ಅವರಹಿಂದೆ ಹೋಗುತ್ತಿದ್ದೆನು. ಅಲ್ಲಿ ಏನು ನಡೆಯುತ್ತಿರುತ್ತದೊ ನೋಡುತ್ತಿದ್ದೆನು. ಅದೇ ವಿಧವಾಗಿ ನನಗೆ ತಿಳಿದವರು ಕೆಲವರು ಗುಂಪಾಗಿ ಕಸಾಪುರ ಆಂಜನೇಯ ಸ್ವಾಮಿ ಹತ್ತಿರಕ್ಕೆ ಹೋಗುತ್ತಿದ್ದೇವೆ, ನೀವು ಸಹ ನಮ್ಮ ಜೊತೆ ಬನ್ನಿ ಎಂದು ಕರೆದರು. ಹಾಗೆ ಅವರ ಹಿಂದೆ ನಾವು ಹೋಗುವುದು ನಡೆದಿದೆ.

ದೆವ್ವಗಳನ್ನು ಕುರಿತು ಹೇಳುತ್ತೇನೆಂದು ಹೇಳಿ ದೇವತೆಗಳ ಕುರಿತು ಹೇಳುತ್ತೀರೆಂದು ಅಂದುಕೊಳ್ಳಬೇಡಿ ದೇವತೆಗಳ ಹತ್ತಿರ ಮೊದಲಿಡದೆ ದೆವ್ವಗಳ ಹತ್ತಿರಕ್ಕೆ ಬರಲಾರೆವು. ಆದ್ದರಿಂದ ದೇವತೆಗಳ ಹತ್ತಿರದಿಂದ ಮೊದಲಿಟ್ಟು ಹೇಳುವುದು ನಡೆಯುತ್ತಿದೆ. ಮನುಷ್ಯನ ಭಾವನೆಯಲ್ಲಿ ಗುಡಿಯಲ್ಲಿನ ದೇವರು ದೊಡ್ಡವನೆಂದು, ಸ್ಮಶಾನದಲ್ಲಿನ ದೆವ್ವ ಕಡಿಮೆಯೆಂದು ಹೇಳಿಕೊಳ್ಳುತ್ತಿದ್ದಾರೆ. ಆದರೆ ವಾಸ್ತವವಾಗಿ ಆ ವ್ಯತ್ಯಾಸವೇನೊ ತಿಳಿದುಕೊಳ್ಳುವುದಕ್ಕೆ ದೇವರನ್ನು, ದೆವ್ವವನ್ನು ಎರಡನ್ನು ಕುರಿತು ಹೇಳಬೇಕಾಗಿ ಬಂದಿದೆ. ಕಸಾಪುರದ ಆಂಜನೇಯಸ್ವಾಮಿ ಗುಡಿಯಲ್ಲಿನ ದೇವರಾದರೆ! ಇಲ್ಲಿನ ವಿಶೇಷವೇನೆಂದರೆ ಆ ದೇವರ ಮುಂದೆಯೆ ದೆವ್ವಗಳು ಸಹ ಇವೆ. ಉಳಿದ ಗುಡಿಗಳಲ್ಲಿ ದೇವತೆಗಳು ಮಾತ್ರ ಪ್ರತಿಮೆ ರೂಪದಲ್ಲಿ ಕಾಣಿಸುತ್ತಿರುತ್ತಾರೆ. ಅಲ್ಲಿ ದೆವ್ವಗಳು ಇರುವುದಿಲ್ಲ. ಕಸಾಪುರ ಗುಡಿಯಲ್ಲಿ ಆಂಜನೇಯ ಸ್ವಾಮಿಯನ್ನು ನೋಡಬಹುದು. ವಿವರವಾಗಿ ಹೇಳಿದರೆ ಆಂಜನೇಯಸ್ವಾಮಿ ಗುಡಿಯ ಬಳಿ ಮನುಷ್ಯರ ಶರೀರಗಳ ಮೇಲೆ ದೆವ್ವಗಳು ಆಕ್ರಮಿಸಿ ಮಾತನಾಡುತ್ತಿರುತ್ತಾರೆ. ಈ ವಿಷಯವನ್ನು ಇತರರಿಂದ ಕೇಳಿದ ನಾನು ಅದು ಎಷ್ಟು ವಾಸ್ತವವೊ ನೋಡುವುದಕ್ಕೆ ಅವಕಾಶ ಬಂದಿದೆ ಆದ್ದರಿಂದ ಅಲ್ಲಿಗೆ ಹೋಗಬೇಕಾಯಿತು.

ಅಲ್ಲಿ ಇನ್ನೊಂದು ವಿಚಿತ್ರವಿದೆ. ಅದೇನೆಂದರೆ! ಕೆಲವರು ಭಕ್ತರು ಆಂಜನೇಯಸ್ವಾಮಿಗೆ ಪಾದರಕ್ಷೆಗಳನ್ನು (ಚೆಪ್ಪಲಿಗಳನ್ನು) ಕಾಣಿಕೆಯಾಗಿ ತಂದು

ಕೊಡುತ್ತಾರೆ. ಆ ಚಪ್ಪಲಿಗಳು ಬಜಾರಿನಲ್ಲಿ ದೊರಕುವ ಚಪ್ಪಲಿಗಳ ಹಾಗೆ ಅಲ್ಲದೆ, ಮಾಮೂಲು ಚಪ್ಪಲಿಗಳಿಗಿಂತ ಅಳತೆಯಲ್ಲಿ ಎರಡು ಇಲ್ಲವೆ ಮೂರು ಪಟ್ಟು ದೊಡ್ಡದಾಗಿವೆ. ಅಷ್ಟು ದೊಡ್ಡ ಚಪ್ಪಲಿಗಳನ್ನು ಅದೇ ಕೆಲಸವಾಗಿ ಪ್ರತ್ಯೇಕವಾಗಿ ತಯಾರು ಮಾಡಿಸಿ ತಂದು ಇಡುತ್ತಾರೆ. ಆ ಚಪ್ಪಲಿಗಳನ್ನು ಏಕೆ ಕೊಡುತ್ತಾರೆಂದು ಕೇಳಿದಾಗ! "ಆಂಜನೇಯಸ್ವಾಮಿ ರಾತ್ರಿ ಹೊತ್ತು ಚಪ್ಪಲಿ ಧರಿಸಿ ಹೊರಗಡೆ ತಿರುಗಿ ಬರುತ್ತಾನೆ." ಎಂದು ಕೆಲವರು ಹೇಳಿದರು. ಅಷ್ಟೇ ಅಲ್ಲದೆ "ಹಾಗೆ ನಾವು ಕೊಟ್ಟ ಚಪ್ಪಲಿಗಳನ್ನು ಧರಿಸಿ ತಿರುಗಿ ಬರುವುದರಿಂದ ಆ ಚಪ್ಪಲಿ ಹಳೆಯವಾಗುತ್ತವೆ, ಸವೆದು ಹೋಗುತ್ತವೆ, ಕಿತ್ತು ಹೋಗುತ್ತವೆ" ಎಂದು ಸಹ ಹೇಳಿದರು. ಅವರು ಹೇಳಿದಹಾಗೆ ಗುಡಿ ಮುಂದೆ ಸ್ವಲ್ಪ ದೂರದಲ್ಲಿ ಅಂತಹ ಪಾದರಕ್ಷೆಗಳಿವೆ. ಅವುಗಳಲ್ಲಿ ಕೆಲವು ಹಳೆಯವು. ಕೆಲವು ಹೊಸವು ಇವೆ. ಕೆಲವರು ಹೇಳಿರುವುದನ್ನು ಕೇಳಿದ್ದೇವೆ, ಕೇಳಿದ ಮಾತ್ರಕ್ಕೆ ಅವು ಸತ್ಯವಾಗಬಹುದು, ಅಸತ್ಯವು ಆಗಬಹುದು. ಆದ್ದರಿಂದ ಚಪ್ಪಲಿಗಳ ವಿಷಯ ಸತ್ಯವಾ, ಅಸತ್ಯವಾ ಎಂದು ಹೇತುವಾದ ದೃಷ್ಠಿಯಿಂದ ನೋಡಲಾಯಿತು.

**"ಸತ್ಯವಾಗಲಿ, ಅಸತ್ಯವಾಗಲಿ ಮೊದಲು ನಂಬಿಕೆಯಿಂದಲೆ ಪ್ರಾರಂಭವಾಗುತ್ತದೆ." ಎನ್ನುವುದು ಸೂತ್ರ**. ನಂತರ ಆ ನಂಬಿಕೆ ಸತ್ಯವೂ ಆಗಬಹುದು ಅಥವಾ ಅಸತ್ಯವೂ ಆಗಬಹುದು. ವಿಚಕ್ಷಣಾ ಜ್ಞಾನದಿಂದ ಕೂಡಿಕೊಂಡಿರುವ ನಂಬಿಕೆ ಸತ್ಯವಾಗುತ್ತದೆ. ಸ್ವಲ್ಪವೂ ಸಹ ಜ್ಞಾನವಿಲ್ಲದೆ ಇರುವ ನಂಬಿಕೆ ಮೂಢನಂಬಿಕೆಯಾಗುತ್ತದೆ. ವಿಚಕ್ಷಣೆ ಇರುವಾಗ ಯಾವ ವಿಷಯವಾಗಲಿ ಸುಲಭವಾಗಿ ಕುರುಡನಂತೆ ನಂಬುವುದಿಲ್ಲ. ಆಂಜನೇಯಸ್ವಾಮಿ ಚಪ್ಪಲಿಗಳ ವಿಷಯುವನ್ನು ವಿಚಕ್ಷಣಾ ದೃಷ್ಠಿಯಿಂದ ನೋಡುವುದರಿಂದ ಅದು ಮೂಢನಂಬಿಕೆಯೆಂದು ತಿಳಿದುಹೋಯಿತು. ಮೂಢನಂಬಿಕೆ ಆ ವಿಷಯವನ್ನು ಅಸತ್ಯವೆಂದು, ಆಂಜನೇಯಸ್ವಾಮಿ ಪಾದರಕ್ಷೆಗಳನ್ನು (ಚಪ್ಪಲಿ) ಧರಿಸಿ ತಿರುಗುವುದಿಲ್ಲವೆಂದು, ಅವು ಸ್ವಲ್ಪ ಸವೆದಹಾಗೆ ಸ್ವಲ್ಪ ಕಿತ್ತು ಹೋದಹಾಗೆ ಕಾಣಿಸಿದರು ಹಾಗೆ ನಡೆಯುವುದಕ್ಕೆ ಕಾರಣ ಬೇರೆ ಇದೆಯೆಂದು, ಅಲ್ಲಿಗೆ ಹೋದ ಭಕ್ತರೆಲ್ಲರು ಅವುಗಳನ್ನು ತೆಗೆದುಕೊಂಡು ಕಣ್ಣಿಗೆ ಒತ್ತಿಕೊಂಡು

ಇಟ್ಟುಕೊಳ್ಳುವುದರಿಂದ ಅವು ಹಳೆಯದಾಗಿವೆಯೆಂದು ತಿಳಿಯುತ್ತಿದೆ. ನಿತ್ಯವು ನೂರಾರು ಜನ ಭಕ್ತರು ಸ್ವಾಮಿ ಚಪ್ಪಲಿಗಳನ್ನು ತೆಗೆದು ಇಡುವುದರಿಂದ ಕೆಳಗೆ ಸ್ವಲ್ಪ ಸೆಳೆತದ ಒತ್ತಡ ಏರ್ಪಟ್ಟಿರುವುದು ಹೊರತು, ಅವುಗಳನ್ನು ಧರಿಸಿ ತಿರುಗಿರುವುದರಿಂದಲ್ಲವೆಂದು ತಿಳಿಯುತ್ತದೆ. ಹಾಗೆ ನಿತ್ಯವು ಎಳೆದಾಡುವುದರಿಂದ ಮತ್ತು ಇಬ್ಬರು ವ್ಯಕ್ತಿಗಳು ಒಂದೇ ಚಪ್ಪಲಿಯನ್ನು ಹಿಡಿದುಕೊಂಡು ನಾನು ಮೊದಲು ನಾನು ಮೊದಲು ಎಂದು ಕಿತ್ತು ಎಳೆದಾಡುವುದರಿಂದ ಚಿಕ್ಕ ಚಿಕ್ಕ ಪಟ್ಟಿಗಳು ಕಿತ್ತು ಹೋಗಿವೆ. ಆ ವಿಷಯವನ್ನು ಆಲೋಚಿಸದೆ ಅಂಧಕಾರದಿಂದ ನಂಬಿದವರಿಗೆ ಆಂಜನೇಯಸ್ವಾಮಿ ಚಪ್ಪಲಿ ಧರಿಸಿ ರಾತ್ರಿ ಹೊತ್ತು ತಿರುಗಿ ಬಂದಹಾಗೆ, ವಿಚಕ್ಷಣೆಯಿಂದ ಆಲೋಚಿಸಿದವರಿಗೆ ಆಂಜನೇಯ ಸ್ವಾಮಿ ಚಪ್ಪಲಿಗಳನ್ನು ಧರಿಸಿಲ್ಲವೆಂದು ತಿಳಿಯುತ್ತದೆ. ಆಂಜನೇಯಸ್ವಾಮಿ ಚಪ್ಪಲಿಗಳು ಧರಿಸುವುದು ಅವಾಸ್ತವವೆಂದು ನಾವು ಹೇಳುವುದನ್ನು ನೋಡಿ ಕೆಲವರು ಆಸ್ತಿಕರು ನನ್ನನ್ನು ನಾಸ್ತಿಕನಾಗಿ ಲೆಕ್ಕಹಾಕಬಹುದು. ನಿಜ ಹೇಳಬೇಕೆಂದರೆ ನಾನು ನಾಸ್ತಿಕನು ಅಲ್ಲ. ಏಕೆಂದರೆ! ಆಂಜನೇಯಸ್ವಾಮಿಯನ್ನು ಇಲ್ಲ ಎಂದು ನಾನು ಅನ್ನಲಿಲ್ಲ! ಕಸಾಪುರದಲ್ಲಿನ ಗುಡಿ ಗೊಂಬೆಯಲ್ಲಿ ಆಂಜನೇಯಸ್ವಾಮಿ ಇದ್ದಾನೆಂದೇ ಹೇಳುತ್ತಿದ್ದೇವೆ. ಈ ನಮ್ಮ ಮಾತನ್ನು ಅನುಸರಿಸಿ ಕೆಲವರು ನಾಸ್ತಿಕರು ನನ್ನನ್ನು ಮೂಢನಂಬಿಕೆ ಇರುವವನೆಂದು ಅನ್ನಬಹುದು. ಅವರು ಹಾಗೆ ಅಂದರೂ ವಾಸ್ತವವಾಗಿ ನಾನು ಕುರುಡನಂತೆ ನಂಬುವವನಲ್ಲ. ಏಕೆಂದರೆ ಎಷ್ಟೋ ವಿಚಕ್ಷಣೆಯಿಂದ ಎಷ್ಟೋ ಪ್ರಶ್ನೆಗಳಿಗೆ ಉತ್ತರಗಳನ್ನು ಹೇಳುವವ ನಾಗಿದ್ದೇನೆ. **ಒಂದು ವಿಷಯವನ್ನು ವಿಚಕ್ಷಣಾ ರಹಿತವಾಗಿ ವಿಶ್ವಾಸಿಸುವವನು ಮೂಢ ವಿಶ್ವಾಸಿ (ಮೂಢನಂಬಿಕೆಯಿರುವವನು) ಒಂದು ವಿಷಯವನ್ನು ವಿಚಕ್ಷಣಾ ದೃಷ್ಟಿಯಿಂದ ನೋಡಿ ವಿಶ್ವಾಸಿಸುವವನು ಸತ್ಯವಾದಿ ಅಥವಾ ಹೇತುವಾದಿ ಆಗುವನು. ಒಂದು ವಿಷಯವನ್ನು ವಿಮರ್ಶನಾದೃಷ್ಟಿಯಿಂದ ವಿಶ್ವಾಸಿಸದವನು ನಾಸ್ತಿಕವಾದಿ ಅಥವಾ ಅಸತ್ಯವಾದಿ ಎಂದು ಹೇಳಲಾಗುವುದು.** ಇಲ್ಲಿ ಮೂಢ ನಂಬಿಕಸ್ತನಿಗೆ, ನಾಸ್ತಿಕನಿಗೆ ಯಾವ ದೊಡ್ಡ ವ್ಯತ್ಯಾಸವೂ ಇಲ್ಲ. ಮೂಢನಂಬಿಕಸ್ತನು ವಿಚಕ್ಷಣೆಯಿಲ್ಲದ **ವಿಶ್ವಾಸದಿಂದ** ಕೂಡಿಕೊಂಡಿದ್ದಾನೆ. ನಾಸ್ತಿಕನು ಸಹ

ವಿಚಕ್ಷಣೆಯಿಲ್ಲದ **ವಿಮರ್ಶೆಯಿಂದ** ಕೂಡಿಕೊಂಡಿದ್ದಾನೆ. ಈ ಎರಡು ಪಂಗಡಗಳಿಗೆ ಸೇರದವನು ನಾನು. ಆದ್ದರಿಂದ ಇತ್ತ ಆಸ್ತಿಕರಿಗೂ ಅತ್ತ ನಾಸ್ತಿಕರಿಗೂ ಮಧ್ಯದಲ್ಲಿ ಇರುತ್ತೇವೆ. ನಾವು ಹೇಳುವ ವಿಷಯಗಳನ್ನು ನೋಡಿ ಕೆಲವರು ತೊಂದರೆ ಪಟ್ಟು ನಮ್ಮನ್ನು ನಾಸ್ತಿಕರೆಂದು ಅಂದುಕೊಳ್ಳಬಹುದು. ಹಾಗೆ ಕೆಲವರು ಸಾಧಾರಣ ಆಸ್ತಿಕರ ಕೆಳಗೆ ಸಹ ಲೆಕ್ಕಹಾಕಬಹುದು. ಯಾರೇನಂದುಕೊಂಡರು ನಾವು ಸತ್ಯವನ್ನು ಹೇಳುತ್ತಿದ್ದೇವೆ, ಆದ್ದರಿಂದ ನೀವು ತೊಂದರೆಬಿದ್ದು ಒಂದು ನಿರ್ಣಯಕ್ಕೆ ಬಾರದೆ ಜಾಗ್ರತೆಯಿಂದ ಓದಿ ತಿಳಿದುಕೊಳ್ಳಬೇಕೆಂದು ಕೋರುತ್ತಿದ್ದೇವೆ.

ಚಿಕ್ಕ ವಯಸ್ಸಿನಲ್ಲಿ ದೊಡ್ಡಮ್ಮ ದೇವತೆಯನ್ನು ಒಬ್ಬ ಮನುಷ್ಯನ ಮೇಲೆ ನೋಡಿದೆನು. ಯುಕ್ತ ವಯಸ್ಸಿನಲ್ಲಿ ಆಂಜನೇಯಸ್ವಾಮಿ ಮುಂದೆ ಮನುಷ್ಯರ ಮೇಲೆ ದೆವ್ವಗಳನ್ನು ನೋಡಿದೆನು. ಹಾಗೆ ಆಂಜನೇಯ ಪ್ರತಿಮೆಯಲ್ಲಿ ನಿಕ್ಷಿಪ್ತವಾಗಿರುವ ಆಂಜನೇಯನೆನ್ನುವ ದೇವರನ್ನು ನೋಡಿದೆನು. ದೇವತೆಯನ್ನು, ದೇವರನ್ನು, ದೆವ್ವಗಳನ್ನು ನೋಡಿದ ನಾವು ಅವುಗಳಲ್ಲಿನ ಸತ್ಯಾಸತ್ಯಗಳನ್ನು ತಿಳಿಸುವುದಕ್ಕೆ ಪ್ರಯತ್ನಿಸುತ್ತಿದ್ದೇವೆ. ಕುರುಡಾಗಿ ವಿಶ್ವಾಸಿಸದೆ, ಕುರುಡಾಗಿ ವಿಮರ್ಶಿಸದೆ ಸಹೇತುಕವಾಗಿ ತಿಳಿಸುವುದೇ ನಮ್ಮ ಉದ್ದೇಶ. ವಿಚಕ್ಷಣೆಯಿಂದ ಕೂಡಿಕೊಂಡ ನಮ್ಮ ದೃಷ್ಠಿ ಪ್ರಕಾರ ಭೂಮಿ ಮೇಲೆ ಇರುವ ದೊಡ್ಡಮ್ಮ ಎನ್ನುವ ದೇವತೆಯಾಗಲಿ, ಆಂಜನೇಯಸ್ವಾಮಿ ಎನ್ನುವ ದೇವರಾಗಲಿ, ಸಾಧಾರಣ ದೆವ್ವವಾಗಲಿ ಎಲ್ಲರೂ ಒಂದೇ ಗುಂಪಿಗೆ ಸೇರಿದವರೆ. ಈಗ ಸ್ವಲ್ಪ ಅರ್ಥ ಮಾಡಿಕೊಳ್ಳುವದಕ್ಕಾಗಿ ದೆವ್ವದಿಂದ ಮೊದಲಿಟ್ಟು ಹೇಳಿಕೊಳ್ಳೋಣ.

ಪ್ರಪಂಚದಲ್ಲಿ ಒಬ್ಬ ಜೀವಿಯು ಹುಟ್ಟುತ್ತಿದ್ದಾನೆ. ಸ್ವಲ್ಪ ಕಾಲ ಬದುಕಿದ ನಂತರ ಸತ್ತುಹೋಗುತ್ತಿದ್ದಾನೆ. ಹುಟ್ಟುವುದು, ಸಾಯುವುದು ಜಗತ್ತಿಗೆ ತಿಳಿದ ಸತ್ಯ. ಮನುಷ್ಯನಾಗಿ ಹುಟ್ಟಿದವರಲ್ಲಿ ಎಷ್ಟು ದೊಡ್ಡ ಮೇಧಾವಿಯಾದರೂ, ಎಷ್ಟು ಧನಿಕನಾದರು, ಎಷ್ಟು ಬಲವಂತನಾದರೂ ಯಾವನಿಗು ತನ್ನ ಹುಟ್ಟುವಿಕೆಯನ್ನು ಕುರಿತು ತಿಳಿಯದು, ಹಾಗೆ ತನ್ನ ಸಾವನ್ನು ಕುರಿತು ಸಹ ತಿಳಿದಿಲ್ಲ. ವಿವರವಾಗಿ ಹೇಳಿಕೊಂಡರೆ ಹುಟ್ಟಿನಲ್ಲಿ ಜೀವಿಯು ಶರೀರದೊಳಗೆ

ಹೇಗೆ ಪ್ರವೇಶಿಸುತ್ತಾನೆಂದು ತಿಳಿಯದು, ಹಾಗೆ ಮರಣದಲ್ಲಿ ಶರೀರದಿಂದ ಜೀವಿಯು ಹೇಗೆ ಹೋಗುತ್ತಿದ್ದಾನೆಂದು ಸಹ ತಿಳಿದಿಲ್ಲ. ಶರೀರದೊಳಗೆ ಜೀವಿಯು ಬರುವುದು ಹೋಗುವುದು ಯಾರಿಗೂ ತಿಳಿಯದ ದೊಡ್ಡ ರಹಸ್ಯ. ಆ ರಹಸ್ಯವನ್ನು ತಿಳಿಯಬೇಕೆಂದರೆ ನಮ್ಮ ರಚನೆಯಲ್ಲಿನ **"ಜನನ ಮರಣ ಸಿದ್ಧಾಂತ"** ಎನ್ನುವ ಗ್ರಂಥವನ್ನು ಓದಬೇಕು. ಆ ಗ್ರಂಥದಲ್ಲಿ ಜೀವಿಯು ಜನ್ಮಿಸುವುದನ್ನು ಮತ್ತು ಮರಣಿಸುವುದನ್ನು ಕುರಿತು ತಿಳಿಸಿದ್ದೇವೆ. ಅದರಲ್ಲಿ ಜೀವನದಲ್ಲಿ **ಕೊನೆಯದಾದ ಮರಣವನ್ನು** ಕುರಿತು ಮಾತ್ರ ತಿಳಿಸಿದ್ದೇವೆ. ಆದರೆ ಜೀವನದಲ್ಲಿ **ಮಧ್ಯದಲ್ಲಿ ಬರುವ ಮರಣವನ್ನು** ಕುರಿತು ತಿಳಿಸಿಲ್ಲ. ಈ ಮಾತು ಕೇಳಿದ ಕೆಲವರಿಗೆ ಜೀವನದ ಕೊನೆಯಲ್ಲಿ ಮರಣವಿರಬಹುದು. ಆದರೆ ಜೀವನದಲ್ಲಿ ಮರಣವೇನೆಂದು ಆಶ್ಚರ್ಯವಾಗಬಹುದು. ಜೀವನದ ಕೊನೆಯಲ್ಲಿ ಬರುವುದು ಮರಣವಾದರೆ ಜೀವನದಲ್ಲಿ ಬರುವುದು ಅಕಾಲ ಮರಣವೆಂದು ಹೇಳುತ್ತಿದ್ದೇವೆ. ಇದನ್ನು ಅನುಸರಿಸಿ ನೋಡಿದರೆ ಜನ್ಮ ಒಂದೆಯಾದರೂ ಮರಣಗಳು ಮಾತ್ರ ಎರಡು ವಿಧಗಳಿವೆಯೆಂದು ಹೇಳಬಹುದು. ಇಲ್ಲಿ ಮುಖ್ಯ ಗಮನಿಕೆ ಏನೆಂದರೆ ಮರಣ ಪ್ರತಿ ಜೀವರಾಶಿಗೆ ಇದೆ. ಆದರೆ ಅಕಾಲ ಮರಣ ಕೆಲವು ಜೀವರಾಶಿಗಳಿಗೆ ಮಾತ್ರವೇ ಇರುತ್ತದೆ. ಮನುಷ್ಯನ ಶರೀರದಲ್ಲಿ ನಡೆಯುವ ಅಕಾಲ ಮರಣವನ್ನು ಕುರಿತು ತಿಳಿದುಕೊಳ್ಳಬೇಕೆಂದರೆ ಮೊದಲು ಮನುಷ್ಯನ ಶರೀರವನ್ನು ಕುರಿತು ತಿಳಿದುಕೊಳ್ಳಬೇಕು.

ಒಂದು ವಸ್ತ್ರ ಹೇಗೆ ತಯಾರಾಗಿದೆಯೆಂದು ಸವಿವರವಾಗಿ ತಿಳಿಯಬೇಕೆಂದರೆ ಹತ್ತಿ, ನೂಲು, ಮಗ್ಗವನ್ನು ಕುರಿತು ತಿಳಿದುಕೊಳ್ಳಬೇಕು. ಅದೇ ವಿಧವಾಗಿ ಒಬ್ಬ ಮನುಷ್ಯನ ಶರೀರವನ್ನು ಕುರಿತು ಸವಿವರವಾಗಿ ತಿಳಿದುಕೊಳ್ಳಬೇಕೆಂದರೆ ಪ್ರಕೃತಿ, ಪ್ರಕೃತಿ ಭಾಗಗಳು, ಕಾಣಿಸುವ ಹೊರಗಿನ ಶರೀರ, ಕಾಣಿಸದ ಒಳಗಿನ ಶರೀರವನ್ನು ಕುರಿತು ತಿಳಿದುಕೊಳ್ಳಬೇಕು. ಮನುಷ್ಯನ ಕಾಣಿಸುವ ಶರೀರವನ್ನು ಸ್ಥೂಲ ಶರೀರವೆಂದು, ಕಾಣಿಸದ ಶರೀರವನ್ನು ಸೂಕ್ಷ್ಮ ಶರೀರವೆಂದು ಕರೆಯುತ್ತಿದ್ದೇವೆ. ಮೊದಲು ಪ್ರಕೃತಿಯ ವಿವರವನ್ನು ಕುರಿತು ತಿಳಿದುಕೊಂಡರೆ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಐದು

ಭಾಗಗಳಾಗಿ ಇದೆ. ಪ್ರಕೃತಿಯಲ್ಲಿನ ಐದು ಭಾಗಗಳು ಒಂದೊಂದು ಐದು ಭಾಗಗಳಾಗಿ ಸೀಳಿ ಹೋಗಿ ಒಟ್ಟು 25 ಭಾಗಗಳಾಗಿ ಏರ್ಪಟ್ಟಿವೆ. ಆ 25 ಭಾಗಗಳು ಒಂದರೊಂದಿಗೆ ಒಂದು ಸೇರಿಹೋಗಿ 25 ಶರೀರ ಭಾಗಗಳು ಏರ್ಪಟ್ಟಿವೆ. ಅದರಲ್ಲಿ 10 ಭಾಗಗಳು ಕಾಣಿಸುವ ಶರೀರವಾಗಿ (ಸ್ಥೂಲಶರೀರ) 15 ಭಾಗಗಳು ಕಾಣಿಸದ ಶರೀರ ಭಾಗಗಳಾಗಿ (ಸೂಕ್ಷ್ಮ ಶರೀರವಾಗಿ) ತಯಾರಾಗಿವೆ. ಪ್ರಕೃತಿ ಜಡವಾದದ್ದು, ಅಂದರೆ ಚಲನೆ ಇಲ್ಲದಿರುವುದು, ಚೈತನ್ಯ ಇಲ್ಲದಿರುವುದು, ಶಕ್ತಿ ಇಲ್ಲದಿರುವುದು. ಪ್ರಕೃತಿಯಲ್ಲಿನ ಭಾಗಗಳಿಂದ ತಯಾರಾದ ಶರೀರ ಸಹ ಜಡವಾದದ್ದೆ. ಆತ್ಮ–ಶಕ್ತಿ **(ಆತ್ಮ ಚೈತನ್ಯ)** ಶರೀರದೊಂದಿಗೆ ಸೇರಿದಾಗಲೆ ಶರೀರದಲ್ಲಿ ಚಲನೆ ಏರ್ಪಡುತ್ತದೆ. ಆದ್ದರಿಂದ ಆತ್ಮ ಇಲ್ಲದ ಶರೀರ ಚಲನೆ ಇಲ್ಲದಾಗಿರುತ್ತದೆ. ಮನುಷ್ಯ ಸತ್ತು ಹೋದಾಗ ಆತ್ಮ ಶರೀರವನ್ನು ಬಿಟ್ಟು ಹೋಗುತ್ತದೆ. ಆದ್ದರಿಂದ ಮರಣಿಸಿದ ಮನುಷ್ಯನ ಶರೀರ ಚಲನೆ ಇಲ್ಲದಾಗುತ್ತದೆ. ತಾಯಿ ಗರ್ಭದಿಂದ ಹೊರಗಡೆ ಬಂದ ಶಿಶು ಶರೀರದೊಳಗೆ ಕೆಲವು ಸಂದರ್ಭಗಳಲ್ಲಿ ಆತ್ಮ ಸ್ವಲ್ಪ ಆಲಸ್ಯವಾಗಿ ಸೇರುತ್ತದೆ. ಅಂತಹ ಸಂದರ್ಭದಲ್ಲಿಯು ಸಹ ಆ ಶಿಶು ಚಲಿಸದೆ ಚೈತನ್ಯ ಇಲ್ಲದ್ದಾಗಿರುತ್ತದೆ. ಬಹಳ ಕಡೆ 5 ನಿಮಿಷಗಳು, 10 ನಿಮಿಷಗಳು, ಅರ್ಧಗಂಟೆ, ಗಂಟೆ ಇನ್ನೂ ಹೆಚ್ಚಿನ ಕಾಲ ಹುಟ್ಟಿದ ಶಿಶುವಿನೊಳಗೆ ಆತ್ಮ ಸೇರದ ಸಂದರ್ಭಗಳು ಇವೆ. ಅಂತಹ ಸಂದರ್ಭದಲ್ಲಿ ಶಿಶು ಗರ್ಭದಲ್ಲಿಯೆ ಸತ್ತುಹೋಗಿದೆಯೆಂದು ಬಹಳ ಜನ ಮೋಸ ಹೋಗುತ್ತಿದ್ದಾರೆ. ಹುಟ್ಟಿದ ಶಿಶುವಿನೊಳಗೆ ಆತ್ಮ ಸೇರಿದಾಗ ಶಿಶುವಿನಲ್ಲಿ ಚೈತನ್ಯ ಹೊಂದಿ ಅಳುವುದನ್ನು ಪ್ರಾರಂಭಿಸುತ್ತದೆ. ಆಗಲೆ ಶರೀರ ಸಜೀವ ವಾಗುತ್ತದೆ. ಅಲ್ಲಿಯವರೆಗು ಅದು ಜೀವವಿಲ್ಲದ ಶರೀರವೇ (ಶವವೆ). ಹಾಗೆ ಮರಣಿಸಿದ ನಂತರ ಆತ್ಮ ಅದರೊಂದಿಗೆ ಜೀವಾತ್ಮ ಇಬ್ಬರು ಹೊರಗಡೆ ಹೋಗುತ್ತಿದ್ದಾರೆ. ಆದ್ದರಿಂದ ಆಗಲೂ ಸಹ ಶರೀರದಲ್ಲಿ ಚಲನೆ ಇಲ್ಲದೆ ಹೋಗುತ್ತಿದೆ. ಆಗ ಆ ಶರೀರ ಜೀವವಿಲ್ಲದ ಶರೀರವೇ (ಶವವೆ). ವಿಚಿತ್ರವೇ ನೆಂದರೆ ಸತ್ತು ಹೋದ ನಂತರ ಜೀವಿಯಿಲ್ಲದ ಶರೀರವನ್ನು ಶವ ಎನ್ನುತ್ತಿದ್ದೇವೆ. ಹುಟ್ಟಿದಾಗ ಜೀವಿಯಿಲ್ಲದ ಶರೀರವನ್ನು ಶವ ಎಂದು ಯಾರೂ ಅನ್ನುವುದಿಲ್ಲ.

ಸಜೀವ ಶರೀರ ಎಂದರೆ ಜೀವಿಯು ನಿವಾಸವಿರುವ ಶರೀರವೆಂದು ಅರ್ಥ. ಜೀವಿಯಿರುವ ಜೀವನ 25 ಶರೀರ ಭಾಗಗಳಿಂದ ಕೂಡಿಕೊಂಡಿದೆ. ನಿತ್ಯವು ಸಜೀವ ಶರೀರವನ್ನು ನಾವು ನೋಡುತ್ತಿದ್ದರೂ ಅದರಲ್ಲಿ ಜೀವಿಯೊಂದಿಗೆ 25 ಭಾಗಗಳಾಗಿ ಶರೀರವಿದೆಯೆಂದು ತಿಳಿದಿಲ್ಲ. ಜೀವಿಯು ಸೂಕ್ಷ್ಮ ಶರೀರದಲ್ಲಿ ನಿವಾಸವಿರುವವನು. ಆ ಸೂಕ್ಷ್ಮ ಶರೀರ ಸ್ಥೂಲ ಶರೀರದಲ್ಲಿ ನಿಕ್ಷಿಪ್ತವಾಗಿರುತ್ತದೆ. ಕೆಳಗೆ ಸಜೀವ ಶರೀರದ ಭಾಗಗಳನ್ನು ಗಮನಿಸೋಣ.

1) ಕಣ್ಣು
2) ಮೂಗು
3) ನಾಲಿಗೆ
4) ಕಿವಿ
5) ಚರ್ಮ

} ಜ್ಞಾನೇಂದ್ರಿಯಗಳು

6) ಕೈಯಿ
7) ಕಾಲು
8) ಬಾಯಿ
9) ಗುದ
10) ಗುಹ್ಯ

} ಕರ್ಮೇಂದ್ರಿಯಗಳು

**ಮೇಲಿನ 10 ಭಾಗಗಳು ಸ್ಥೂಲ ಶರೀರ (ಕಾಣಿಸುವ ಶರೀರ)**

1) ದೃಷ್ಟಿ (ನೋಟ)
2) ಘ್ರಾಣ (ವಾಸನೆ)
3) ರುಚಿ
4) ಶಬ್ಧ
5) ಸ್ಪರ್ಶ

} ಇಂದ್ರಿಯಗಳ ಶಕ್ತಿಗಳು

| | |
|---|---|
| 6) ಉದಾನ ವಾಯು<br>7) ಸಮಾನ ವಾಯು<br>8) ವ್ಯಾನ ವಾಯು<br>9) ಪ್ರಾಣ ವಾಯು<br>10) ಅಪಾನ ವಾಯು | } ಪಂಚ ವಾಯುಗಳು |

| | |
|---|---|
| 11) ಮನಸ್ಸು<br>12) ಬುದ್ಧಿ<br>13) ಚಿತ್ತ<br>14) ಅಹಂ<br>15) ಜೀವಿ (ಜೀವಾತ್ಮ) | } ಅಂತಃಕರಣಗಳು |

**ಮೇಲಿನ 15 ಭಾಗಗಳು ಸೂಕ್ಷ್ಮ ಶರೀರ (ಕಾಣಿಸದ ಶರೀರ)**

ಹತ್ತು ಸ್ಥೂಲ ಭಾಗಗಳ ಒಳಗೆ ಹದಿನೈದು ಸೂಕ್ಷ್ಮ ಭಾಗಗಳು ಇವೆ. ಆದ್ದರಿಂದ ಹದಿನೈದು ಸೂಕ್ಷ್ಮ ಭಾಗಗಳನ್ನು ಇಲ್ಲಿಯವರೆಗು ಯಾರೂ ನೋಡಿಲ್ಲ. ಜೀವಾತ್ಮನಾದವನು ಶರೀರದಲ್ಲಿ ತಾನು ಹೇಗಿರುವುದು? ತನ್ನ ಆಕಾರ ಹೇಗಿದೆಯೆಂದು ತಿಳಿಯದೆ ಇದ್ದಾನೆ. ಈ ಗ್ರಂಥವನ್ನು ಓದುತ್ತಿರುವ ನೀನು ಸಹ ಜೀವಾತ್ಮನೆ. ಆದರೆ ನಿನ್ನ ರೂಪ ನಿನಗೆ ತಿಳಿಯದು. ಕನ್ನಡಿಯಲ್ಲಿ ನೋಡಿಕೊಂಡರೆ ನಿನ್ನ ಶರೀರದ ರೂಪ, ಅದರ ಅಂದ ಕಾಣಿಸುತ್ತದೆ. ಆದರೆ ನೀನು ಕಾಣಿಸುವುದಿಲ್ಲ. ನೀನೇ ಅಲ್ಲ ನಿನ್ನ ಶರೀರದಲ್ಲಿ ಮನಸ್ಸು, ಬುದ್ಧಿ, ಚಿತ್ತ, ಅಹಂಗಳು ಸಹ ಹೇಗಿವೆಯೆಂದು ತಿಳಿಯದು. ಹಾಗೆ ಎದುರಿಗಿರುವವನ ಶರೀರ ಕಾಣಿಸುತ್ತಿದೆ, ಆದರೆ ಒಳಗೆ ಸೂಕ್ಷ್ಮದೊಳಗಿನ ಮನಸ್ಸು, ಬುದ್ಧಿ ಕಾಣಿಸದು. **ಕಾಣಿಸುವ ಸ್ಥೂಲ ಶರೀರ ಕೆಲಸ ಮಾಡುವ ಪ್ರಿಂಟರ್‌ನಂತದ್ದು. ಕಾಣಿಸದ ಸೂಕ್ಷ್ಮ ಶರೀರ ಕೆಲಸ ಮಾಡಿಸುವ ಕಂಪ್ಯೂಟರ್‌ನಂತಹುದು. ಕಂಪ್ಯೂಟರ್‌ನ ಕೆಲಸ ಪ್ರಿಂಟರ್‌ನಲ್ಲಿ ಹೊರಬಿದ್ದಹಾಗೆ, ಸೂಕ್ಷ್ಮ ಶರೀರದ ಕೆಲಸ ಸ್ಥೂಲ ಶರೀರದ ಮೇಲೆ**

**ಕಾಣಿಸುವುದು**. ಇದನ್ನು ಅನುಸರಿಸಿ ನೋಡಿದರೆ ಒಂದು ಸಜೀವ ಶರೀರ, ಕಾಣಿಸುವ ಮತ್ತು ಕಾಣಿಸದ ಎರಡು ಭಾಗಗಳಾಗಿ ಇದೆಯೆಂದು ತಿಳಿಯುತ್ತಿದೆ. ಕಾಣಿಸದ ಸೂಕ್ಷ್ಮ ಶರೀರದೊಳಗೆ ಹೊರಗಿನ ವಿಷಯಗಳನ್ನು ಗ್ರಹಿಸುವ ಮನಸ್ಸು ಇದೆ. ಅವುಗಳನ್ನು ಯೋಚಿಸುವ ಬುದ್ಧಿಯೂ ಇದೆ. ಒಂದು ವಿಷಯವನ್ನು ಗ್ರಹಿಸುವ ಶಕ್ತಿ ಸೂಕ್ಷ್ಮ ಶರೀರಕ್ಕೆ ಇದೆಯೆಂದು ಅರ್ಥವಾಗುತ್ತಿದೆ. ಸ್ಥೂಲ, ಸೂಕ್ಷ್ಮ ಶರೀರಗಳಲ್ಲಿ ಸೂಕ್ಷ್ಮಕ್ಕೆ ಹೆಚ್ಚಿನ ಪ್ರಾಧಾನ್ಯತೆ ಇದೆ. ಸ್ಥೂಲ ಶರೀರ ಅಂದವಾಗಿ ಇರಬಹುದು, ಆದರೆ ಸೂಕ್ಷ್ಮ ಶರೀರದ ಅಂದ ಕಾಣಿಸುವುದಿಲ್ಲ. ಸೂಕ್ಷ್ಮಕ್ಕೆ ವಾಸ್ತವವಾಗಿ ಅಂದವಿರುವುದಿಲ್ಲ. ಸ್ಥೂಲ ಶರೀರ ಅಂದವಾಗಿ ಇರಬಹುದು ಅಥವಾ ಅಂದಹೀನವಾಗಿ ಇರಬಹುದು. ಸೂಕ್ಷ್ಮಕ್ಕೆ ಅಂದವಿರುವುದಿಲ್ಲ ಆದರೆ ಚಂದವಿರುತ್ತದೆ. ಕೆಲವರ ಸ್ಥೂಲ ಅಂದವಾಗಿ, ಕೆಲವರ ಸ್ಥೂಲ ಅಂದಹೀನವಾಗಿ ಇದ್ದಂತೆ, ಕೆಲವರ ಸೂಕ್ಷ್ಮವು ಚಂದವಾಗಿ ಇರಬಹುದು ಅಥವಾ ಚಂದಹೀನವಾಗಿ ಇರಬಹುದು. ಅಂದ ಎಂದರೆ ಎಲ್ಲರಿಗು ಗೊತ್ತು, ಆದರೆ ಚಂದ ಎಂದರೆ ಬಹಳ ಜನರಿಗೆ ಗೊತ್ತಿಲ್ಲ. ಅಂದ ಚಂದ ಎನ್ನುವ ಮಾತನ್ನು ಬಹಳ ಸಾರಿ ನಾವು ಕೇಳಿರುತ್ತೇವೆ. ಒಬ್ಬ ಯುವಕನಿಗೆ ಮದುವೆ ಸಮಯದಲ್ಲಿ ಆತನ ಹೆಂಡತಿಯನ್ನು ನೋಡಿ ಈಡು ಜೋಡು ಸರಿಹೋಗಿದೆ ಇಲ್ಲವೆ ಸರಿಹೋಗಿಲ್ಲ ಎಂದು ಅನ್ನುತ್ತಿರುತ್ತಾರೆ. ಆ ಮಾತಿನಲ್ಲಿ ಈಡು ಎಂದರೆ ವಯಸ್ಸು, ಜೋಡು ಎಂದರೆ ಎತ್ತರ ಎಂದು ಅರ್ಥ. ಮದುಮಗಳಿಗೆ ವಯಸ್ಸು 20 ಸಂವತ್ಸರಗಳಿದ್ದು ಮದುಮಗನಿಗೆ ವಯಸ್ಸು 40 ಸಂವತ್ಸರಗಳಾದರೆ ಅವರಿಗೆ ಈಡು ಸರಿಹೋಗಿಲ್ಲ ಎನ್ನಬಹುದು. ಹಾಗೆ ಮದುಮಗಳು ನಾಲ್ಕು ಅಡಿಗಳ ಎತ್ತರವಿದ್ದು, ಮದುಮಗ ಆರು ಅಡಿಗಳು ಎತ್ತರ ಇದ್ದರೆ ಅವರಿಗೆ ಜೋಡು ಸರಿಹೋಗಿಲ್ಲ ಎನ್ನುತ್ತಿರುತ್ತೇವೆ. ಅದೇ ವಿಧವಾಗಿ ಮದುಮಗ ಆದರೂ ಇಲ್ಲವೆ ಮದುಮಗಳಾದರೂ ಅಂದವಾಗಿಲ್ಲದೆ ಇದ್ದು ಜ್ಞಾನದಿಂದಿದ್ದರೆ, ಅಂದವಿಲ್ಲದೆ ಹೋದರು ಪರವಾಗಿಲ್ಲ ಚಂದವಿದೆಯೆಂದು ಅನ್ನುತ್ತಿದ್ದರು. ಒಂದು ವೇಳೆ ಅಂದವಾಗಿಲ್ಲದೆ, ಜ್ಞಾನವು ಸಹ ಇಲ್ಲದೇ ಹೋದರೆ ಅಂದವೂ ಇಲ್ಲ ಚಂದವೂ ಇಲ್ಲ ಎನ್ನುತ್ತಿದ್ದರು. ಇದನ್ನು ಅನುಸರಿಸಿ ನೋಡಿದರೆ

ಇಲ್ಲಿ ಚಂದ ಎಂದರೆ ದೈವಜ್ಞಾನವೆಂದು ತಿಳಿಯುತ್ತಿದೆ. ಈ ಕಾಲದಲ್ಲಿ ಕೆಲವರಿಗೆ ಅಂದವಿದ್ದರೂ, ಬಹಳ ಜನರಿಗೆ ಚಂದವಿಲ್ಲ.

ಈಗ ಅಸಲು ವಿಷಯಕ್ಕೆ ಬಂದರೆ ಸ್ಥೂಲ ಶರೀರಕ್ಕೆ ಸಂಬಂಧಿಸಿರುವುದು ಅಂದ, ಸೂಕ್ಷ್ಮ ಶರೀರಕ್ಕೆ ಸಂಬಂಧಿಸಿರುವುದು ಚಂದ ಎಂದು ತಿಳಿಯುತ್ತಿದೆ. ಅಂದ ಹುಟ್ಟಿನಿಂದಲೆ ಬರುತ್ತದೆ, ಚಂದ (ಜ್ಞಾನ) ಶ್ರದ್ಧೆಯಿಂದ ತಿಳಿದುಕೊಂಡಷ್ಟು ಬರುತ್ತದೆ. ಚಂದ (ಜ್ಞಾನ) ಮನಸ್ಸಿನ ಜ್ಞಾಪಕದಿಂದ ಬುದ್ಧಿ ಯೋಚನೆಯಿಂದ ಜೀವನದಲ್ಲಿ ಲಭಿಸುತ್ತದೆ. ಇತ್ತ ಪ್ರಪಂಚ ಜ್ಞಾನವಾಗಲಿ, ಅತ್ತ ದೈವಜ್ಞಾನವಾಗಲಿ ಕೇವಲ ಸೂಕ್ಷ್ಮ ಶರೀರ ಗ್ರಹಿಸಿಕೊಳ್ಳುವುದರಿಂದ ಲಭಿಸುತ್ತದೆ. ಸ್ಥೂಲ ಶರೀರದಲ್ಲಿರುವ ಸೂಕ್ಷ್ಮ ಶರೀರ ಹೊರಗಿನ ವಿಷಯವನ್ನು ಗ್ರಹಿಸಿಕೊಳ್ಳುತ್ತಿದೆ. ಆದ್ದರಿಂದ ಅದನ್ನು ಗ್ರಹ ಎನ್ನುತ್ತಿದ್ದೇವೆ. ಈ ಲೆಕ್ಕ ಪ್ರಕಾರ ನಾವು ಸಹ ಗ್ರಹಗಳೆ. ಈಗ ನಮಗೆ ಸ್ಥೂಲ ಶರೀರವೆನ್ನುವ ಗೃಹದಲ್ಲಿ ಸೂಕ್ಷ್ಮ ಶರೀರವೆನ್ನುವ ಗ್ರಹ ಇದೆ. ಖಗೋಳದಲ್ಲಿಯು ಸಹ ನವಗ್ರಹಗಳೆನ್ನುವ ಮಾತು ಕೇಳುತ್ತಿದ್ದೇವೆ. ಉದಾಹರಣೆಗೆ ಚಂದ್ರ, ಕುಜ ಗ್ರಹಗಳೆ. ಆ ಗ್ರಹಗಳಿಗು ಸಹ ಸ್ಥೂಲ ಶರೀರ ಗೋಳಗಳ ಆಕಾರದಲ್ಲಿ ಇದೆ. ಗೋಳಗಳ ಆಕೃತಿಯೆ ಅವುಗಳ ಸ್ಥೂಲಶರೀರ. ಚಂದ್ರನು ಬೆಳ್ಳನೆಯ ಚೌಳು ಮಣ್ಣಿರುವ ಗೋಳದಂತೆ ಕಾಣಿಸುತ್ತಾನೆ. ಹಾಗೆ ಕುಜನು ಕೆಂಪಗೆ ಕೆಂಪು ಮಣ್ಣಿರುವ ಗೋಳವಾಗಿ ಕಾಣಿಸುತ್ತಾನೆ. ಬಣ್ಣಗಳು, ಗೋಳಗಳು, ಆ ಗ್ರಹಗಳ ಸ್ಥೂಲ ಆಕಾರವಾದರೆ, ಅವು ನಮ್ಮ ಪಾಪ ಪುಣ್ಯಗಳನ್ನು ಗ್ರಹಿಸಿಕೊಳ್ಳುತ್ತಿವೆ, ಆದ್ದರಿಂದ ಅವುಗಳನ್ನು ಗ್ರಹಗಳು ಎನ್ನುತ್ತಿದ್ದೇವೆ. ಗ್ರಹಿಸಿಕೊಳ್ಳುವುದರಿಂದ ಮನುಷ್ಯನೂ ಗ್ರಹ, ಗೋಳವೂ ಗ್ರಹವೆ. ಇದೇ ವಿಧವಾಗಿ ಖಗೋಳದಲ್ಲಿನ ಗೋಳ ಗ್ರಹ ಆದಹಾಗೆ, ಗುಡಿಯಲ್ಲಿನ ಪ್ರತಿಮೆ ಸಹ ಗ್ರಹ ಆಗುತ್ತದೆ. ಗುಡಿಯಲ್ಲಿನ ಪ್ರತಿಮೆಯಲ್ಲಿಯು ಸಹ ಜೀವಾತ್ಮನಿದ್ದಾನೆ. ಗುಡಿಯಲ್ಲಿ ಯಾವುದೊ ಒಂದು ದೇವರಾಗಿಯೊ, ದೇವತೆಯಾಗಿಯೊ ಇರುವ ಪ್ರತಿಮೆಯಲ್ಲಿನ ಜೀವಿಯು ಗುಡಿಗೆ ಬರುವ ಭಕ್ತರ ಮನೋಭಾವನೆಗಳನ್ನು, ಅವರ ಕೋರಿಕೆಗಳನ್ನು ಗ್ರಹಿಸುತ್ತಿದ್ದಾನೆ. ಖಗೋಳದಲ್ಲಿ ದೂರವಾಗಿರುವ

ಗೋಳಗಳನ್ನು ಬಿಟ್ಟು ಹಾಕಿ ಇಲ್ಲಿ ಭೂಮಿ ಮೇಲೆಯೆ ಗ್ರಹಗಳು ಇತ್ತ ಗೃಹಗಳಲ್ಲಿಯು ಅತ್ತ ಗುಡಿಗಳಲ್ಲಿಯು ಇವೆ. **ವಾಸ್ತವಕ್ಕೆ ಗೃಹದೊಳಗಿನ ಚಲಿಸುವ ಶರೀರ ಆಕಾರಗಳಾದ ಮನುಷ್ಯರು, ಗುಡಿಗಳಲ್ಲಿನ ಚಲಿಸದ ಪ್ರತಿಮೆ ಆಕಾರಗಳಾದ ದೇವತೆಗಳು ಗ್ರಹಗಳೆ,** ಆದರೂ ಮನುಷ್ಯರು ಗುಡಿಯಲ್ಲಿನ ಪ್ರತಿಮೆಗಳನ್ನು ಗೌರವಿಸುತ್ತಿದ್ದಾರೆ, ಪೂಜಿಸುತ್ತಿದ್ದಾರೆ. ಆದ್ದರಿಂದ ಅವರನ್ನು ತಮ್ಮೊಂದಿಗೆ ಸಮಾನವಾಗಿ ಗ್ರಹಗಳು ಅಂದರೆ ಚೆನ್ನಾಗಿರುವುದಿಲ್ಲವೆಂದು ಪ್ರತಿಮೆ ಆಕಾರದಲ್ಲಿರುವ ದೇವತೆಗಳನ್ನು ವಿಗ್ರಹಗಳೆಂದಿದ್ದಾರೆ. ಇಲ್ಲಿ ಚೆನ್ನಾಗಿ ಅರ್ಥಮಾಡಿಕೊಳ್ಳಬೇಕಾಗಿರುವುದು ಏನೆಂದರೆ! ಮನುಷ್ಯನ ಶರೀರದಲ್ಲಿನ ಸೂಕ್ಷ್ಮ ಶರೀರವನ್ನು ಗ್ರಹ ಎನ್ನುತ್ತಿದ್ದೇವೆ. ಹಾಗೆ ಪ್ರತಿಮೆ ಶರೀರದೊಳಗಿನ ಸೂಕ್ಷ್ಮ ಶರೀರವನ್ನು ವಿಗ್ರಹ ಎನ್ನುತ್ತಿದ್ದೇವೆ. ಹಾಗೆ ಎನ್ನುವುದರಿಂದ ಸಾಧಾರಣ ಮನುಷ್ಯನಿಗಿಂತ ಗುಡಿಯಲ್ಲಿನ ದೇವತೆ ದೊಡ್ಡದೆಂದು ತಿಳಿಯುತ್ತದೆ.

ವಿಶೇಷವಿರುವ ಯಾವುದನ್ನಾದರು ಅದಕ್ಕಿಂತ ಮೊದಲು "ವಿ" ಎಂಬ ಅಕ್ಷರವನ್ನು ಸೇರಿಸಿ ಹೇಳಿದರೆ ಅದಕ್ಕೆ ದೊಡ್ಡತನವಿದೆಯೆಂದು ತಿಳಿಯುವುದು. ಮನುಷ್ಯ ಗ್ರಹಕ್ಕಿಂತ ಪ್ರತಿಮೆ ಗ್ರಹ ದೊಡ್ಡದು, ಆದ್ದರಿಂದ ದೇವತಾ ಪ್ರತಿಮೆಯನ್ನು ವಿಗ್ರಹ ಎನ್ನುತ್ತಿದ್ದೇವೆ. ಇಲ್ಲಿ ವಿಶೇಷ ಎನ್ನುವ ಪದವನ್ನು ಸೂತ್ರಬದ್ಧವಾಗಿ ತಿಳಿದುಕೊಂಡರೆ ವಿಗ್ರಹದವೊಂದು ಅರ್ಥ ಚೆನ್ನಾಗಿ ತಿಳಿಯುತ್ತದೆ. ಈಗ ಈ ಸೂತ್ರ ನಿಮಗೆ ಹೊಸದಾಗಿ ಕಾಣಿಸಿದರೂ ಇದು ಶಾಸ್ತ್ರೀಯತೆಯಿಂದ ಕೂಡಿದೆಯೆಂದು ತಿಳಿಯುತ್ತದೆ. ಭಾಗಿಸುವ ಸಂಖ್ಯೆಯಿಂದ, ಭಾಗಿಸಬೇಕಾದ ಸಂಖ್ಯೆ ಭಾಗಿಸಲ್ಪಟ್ಟು, ಕೊನೆಯಲ್ಲಿ ಉಳಿದ ಸಂಖ್ಯೆ, ಭಾಗಿಸುವ ಸಂಖ್ಯೆಗಿಂತ ಕಡಿಮೆ ಉಳಿದರೆ ಅದನ್ನು ಶೇಷ ಎನ್ನುತ್ತೇವೆ. ಭಾಗಿಸಲ್ಪಡುವ ಸಂಖ್ಯೆ ಭಾಗಿಸಲ್ಪಟ್ಟು ಕೊನೆಯಲ್ಲಿ, ಭಾಗಿಸುವ ಸಂಖ್ಯೆಗಿಂತ ಹೆಚ್ಚಿಗೆ ಉಳಿದರೆ ಅದನ್ನು ವಿಶೇಷ ಎನ್ನುತ್ತೇವೆ. ಹಾಗೆ ಭಾಗಿಸುವ ಸಂಖ್ಯೆಯಿಂದ ಭಾಗಿಸಲ್ಪಡುವ ಸಂಖ್ಯೆ ಭಾಗಿಸಲ್ಪಟ್ಟು ಕೊನೆಯಲ್ಲಿ ಭಾಗಿಸುವ ಸಂಖ್ಯೆಗಿಂತ ಕಡಿಮೆಯಾಗಲಿ, ಹೆಚ್ಚಾಗಲಿ ಉಳಿಯದೆ ಹೋದರೆ ಅದನ್ನು ಸಶೇಷ ಎನ್ನುತ್ತೇವೆ. ಈಗ ಕೆಳಗೆ ಉದಾಹರಣೆಯಾಗಿ ಶೇಷ, ವಿಶೇಷ, ಸಶೇಷ ಸಂಖ್ಯೆಗಳಿಂದ ನೋಡೋಣ.

| | | | |
|---|---|---|---|
| 4) 9 (2 | 4) 7 (1 | 3) 5 (1 | 4) 6 (1 |
| 8 | 4 | 3 | 4 |
| 1 ಶೇಷ | 3 ಶೇಷ | 2 ಶೇಷ | 2 ಶೇಷ |

| | | |
|---|---|---|
| 4) 8.1/2 (1 | 3) 6.1/2 (1 | 4) 9.1/2 (1 |
| 4 | 3 | 4 |
| 4.1/2 ವಿಶೇಷ | 3.1/2 ವಿಶೇಷ | 5.1/2 ವಿಶೇಷ |

| | | |
|---|---|---|
| 4) 8 (2 | 3) 6 (2 | 2) 8 (4 |
| 8 | 6 | 8 |
| 0 ಸಶೇಷ | 0 ಸಶೇಷ | 0 ಸಶೇಷ |

ಈ ವಿಧವಾಗಿ ಭೂಮಿ ಮೇಲೆ ಗ್ರಹಕ್ಕಿಂತ ವಿಗ್ರಹ ವಿಶೇಷ ಇರುವುದಾಗಿದೆ. ಗ್ರಹವಾಗಲಿ, ವಿಗ್ರಹವಾಗಲಿ ಸ್ಥೂಲ ಶರೀರದಲ್ಲಿ ಇರುವಾಗ ಅವುಗಳ ಸ್ಥೂಲ ಆಕಾರ ಮಾತ್ರ ಕಾಣಿಸುತ್ತಿದೆ. ಆದರೆ ಸೂಕ್ಷ್ಮವಾದ ಆಕಾರ ಕಾಣಿಸುವುದಿಲ್ಲ. ಈಗ ಮರಣಗಳ ವಿಷಯಕ್ಕೆ ಬರೋಣ. ಜೀವನದ ಕೊನೆಯಲ್ಲಿ ಬರುವುದು **ಮರಣವೆಂದು,** ಜೀವನ ಕಾಲದಲ್ಲಿಯೆ ಬರುವುದು **ಅಕಾಲ ಮರಣವೆಂದು** ಹೇಳಿದ್ದೇವಲ್ಲ! ಈ ಮಾತು ಕೇಳಿದ ಬಹಳ ಜನರಿಗೆ ಯಾರಿಗಾದರೂ ಮರಣ ಒಂದು ಬಾರಿಯೆ ಬರುತ್ತದೆ, ಎರಡು ಮರಣಗಳು ಹೇಗೆ ಇರುತ್ತವೆಂದು ಪ್ರಶ್ನೆಬರಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಯಾವ ಜೀವರಾಶಿಗಾದರೂ ಮೇಲಕ್ಕೆ ಕಾಣಿಸುವ ಶರೀರ ಒಂದೇ ಆದರೂ ಕಾಣಿಸದ ಶರೀರವೂ ಸಹ ಮತ್ತೊಂದು ಇದೆಯೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಆದ್ದರಿಂದ ಒಂದು ಜೀವರಾಶಿಗೆ ಜನ್ಮತಃ ಎರಡು ಶರೀರಗಳಿವೆಯೆಂದು, ಮೇಲಕ್ಕೆ ಕಾಣಿಸುವುದು ಸ್ಥೂಲ ಶರೀರವೆಂದು, ಕಾಣಿಸದೆ ಶರೀರದೊಳಗೆ ಅಡಗಿರುವುದನ್ನು ಸೂಕ್ಷ್ಮ ಶರೀರವೆಂದೂ ಸಹ ಹೇಳಿಕೊಂಡಿದ್ದೇವೆ. ಸೂತ್ರದ ಪ್ರಕಾರ ಜೀವಿಗೆ ಜನ್ಮತಃ ಬಂದಿರುವ ಸ್ಥೂಲ, ಸೂಕ್ಷ್ಮ ಶರೀರಗಳು ಎರಡು

ಒಂದು ಬಾರಿ ಜೀವಿಯನ್ನು ಬಿಟ್ಟು ಹೋದರೆ ಅದನ್ನು ಮರಣ ಎನ್ನುತ್ತೇವೆ. ಜೀವಾತ್ಮನಿಂದ ಎರಡು ಶರೀರಗಳು ಬಿಟ್ಟು ಹೋಗುವುದು ಜೀವಾತ್ಮನ ಜೀವನದ ಅಂತ್ಯದಲ್ಲಿ ನಡೆಯುತ್ತದೆ. ಮರಣದಲ್ಲಿ ಜೀವಿಯು ತನ್ನ ನಿವಾಸವಾದ ಎರಡು ಶರೀರಗಳನ್ನು ಕಳೆದುಕೊಂಡು ತಕ್ಷಣವೆ ಹೊಸ ನಿವಾಸವನ್ನು ಹೊಂದುವನು. ಅದನ್ನೇ ಜನ್ಮ ಎನ್ನುತ್ತಿದ್ದೇವೆ. ಇಲ್ಲಿ ಬಹಳ ಜನರಿಗೆ ತಿಳಿಯದಿರುವ ಶಾಸನ ಒಂದಿದೆ. ಆ ಶಾಸನ ಏನೆಂದರೆ! ಯಾವ ಜೀವಿಯಾದರೂ, ಎಲ್ಲಾದರು ಒಂದು ಕ್ಷಣವು ಸಹ ಶರೀರವನ್ನು ಬಿಟ್ಟು ಹೊರಗಡೆ ಇರುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ಮರಣಿಸಿದ ಜೀವಿಯು ಮರುಕ್ಷಣವೆ ಹೊಸ ಶಿಶು ಶರೀರದಲ್ಲಿ ಪ್ರವೇಶಿಸಿ ಜನ್ಮ ಹೊಂದುತ್ತಿದ್ದಾನೆ. ಇಲ್ಲಿ ಜೀವಿಯು ಮರಣದಿಂದ ನೇರವಾಗಿ ಹೊಸ ಜನ್ಮವನ್ನು ಹೊಂದುತ್ತಿದ್ದಾನೆ.

ಶಾಸನಗಳಿಂದ ಕೂಡಿಕೊಂಡಿರುವುದೇ ಶಾಸ್ತ್ರ. ಈಗ ನಾವು ಹೇಳಿ ಕೊಳ್ಳುವ ಶಾಸ್ತ್ರವನ್ನು ದೇವರು ಹೇಳಿರುವುದು. ಆದ್ದರಿಂದ ಇದರ ಹೆಸರು ಬ್ರಹ್ಮವಿದ್ಯಾಶಾಸ್ತ್ರ ಎಂದಿದ್ದೇವೆ. ದೇವರ ಶಾಸನಗಳ ಪ್ರಕಾರ ಮೇಲೆ ಮರಣವನ್ನು ಕುರಿತು ಹೇಳಿಕೊಂಡಿದ್ದೇವೆ. ಈಗ ಅಕಾಲ ಮರಣವನ್ನು ಕುರಿತು ಹೇಳಿ ಕೊಳ್ಳೋಣ. ಜೀವಿಗೆ ಪೂರ್ತಿ ಜೀವನ ಮುಗಿದು ಹೋಗದೇನೆ ಜೀವನದಲ್ಲಿ ಯಾವಾಗಲಾದರು ಸಂಭವಿಸುವುದನ್ನು ಅಕಾಲಮರಣ ಎನ್ನುತ್ತೇವೆ. ಅಕಾಲ ಮರಣದಲ್ಲಿ ಜೀವಿಯು ಎರಡು ಶರೀರಗಳಲ್ಲಿ ಕೇವಲ ಸ್ಥೂಲಶರೀರವನ್ನು ಮಾತ್ರ ಬಿಡುತ್ತಿದ್ದಾನೆ. ಸ್ಥೂಲ ಶರೀರವನ್ನು ಬಿಟ್ಟು ಸೂಕ್ಷ್ಮ ಶರೀರದಲ್ಲಿ ಜೀವಿಯು ನಿವಾಸವಿರುತ್ತಿದ್ದಾನೆ. ಒಂದು ಶರೀರವಿದೆ ಆದ್ದರಿಂದ ಜೀವಿಯು ಮತ್ತೊಂದು ಜನ್ಮಕ್ಕೆ ಹೋಗುವ ಅವಶ್ಯವಿಲ್ಲ. ಒಂದೇ ಜೀವನದಲ್ಲಿ ಸ್ಥೂಲವನ್ನು ಬಿಟ್ಟು ಸೂಕ್ಷ್ಮ ಶರೀರದೊಂದಿಗೆ ಕಾಲ ಕಳೆಯುತ್ತಿದ್ದಾನೆ. ಆ ವಿಧವಾಗಿ ಜೀವನದ ಅಂತ್ಯದವರೆಗು ಜೀವಿಸಬೇಕಾಗಿರುತ್ತದೆ. ಸ್ಥೂಲ ಶರೀರವನ್ನು ಬಿಟ್ಟಿರುವುದು ಹೊರಗಿನ ಪ್ರಜೆಗಳಿಗೆ ತಿಳಿಯುತ್ತದೆ. ಆದರೆ ಸೂಕ್ಷ್ಮದೊಂದಿಗೆ ಇರುವುದು ಯಾರಿಗು ತಿಳಿಯುವುದಿಲ್ಲ. ಆದ್ದರಿಂದ ಅಕಾಲ ಮರಣವನ್ನು ಹೊಂದಿದವನನ್ನು

ಸಹ ಮರಣಿಸಿದವನ ಕೆಳಗೆ ಪ್ರಜೆಗಳು ಜಮಕಟ್ಟುತ್ತಿದ್ದಾರೆ. ಅಕಾಲ ಮರಣ ಹೊಂದಿದವನು ಮರಣ ಹೊಂದದಿದ್ದರೂ, ಜೀವಿಸಿಯೇ ಇದ್ದರೂ, ಶರೀರ ಕಾಣಿಸುವುದಿಲ್ಲವಾದ್ದರಿಂದ ಅವನು ಮರಣಿಸಿದ್ದಾನೆಂದು, ಇನ್ನಿಲ್ಲವೆಂದು ಅಂದುಕೊಳ್ಳುತ್ತಿದ್ದಾರೆ. ಇಲ್ಲಿ ಓದು ಬಂದವನಿಗಾಗಲಿ, ಓದು ಬಾರದವನಿಗಾಗಲಿ, ಮೇಧಾವಿ ಅನ್ನುವವನಿಗಾಗಲಿ, ಸೂಕ್ಷ್ಮ ಕಾಣಿಸುವುದಿಲ್ಲ. ಆದರೆ ನಮಗೆ ಸೈನ್ಸ್ ಗೊತ್ತು, ಭೌತಿಕಶಾಸ್ತ್ರ ತಿಳಿದಿದೆ ಎನ್ನುವ ಶಾಸ್ತ್ರಜ್ಞರಿಗು ಸಹ ಅಕಾಲ ಮರಣವಾಗಲಿ, ಸೂಕ್ಷ್ಮ ಶರೀರವಾಗಲಿ ಅರ್ಥವಾಗುವುದಿಲ್ಲ. ಆದ್ದರಿಂದ ದೆವ್ವಗಳು ಇಲ್ಲ ಎಂದು ಬಹಳ ಜನ ವಿಜ್ಞಾನಿಗಳೆ ಹೇಳುತ್ತಿದ್ದಾರೆ. ದೆವ್ವ ಎಂದರೆ ಸೂಕ್ಷ್ಮವಾಗಿ ಕಣ್ಣಿಗೆ ಕಾಣಿಸದ ಜೀವರಾಶಿ ಎಂದು ತಿಳಿದಿಲ್ಲ. ದೆವ್ವಗಳು ಮನುಷ್ಯರಲ್ಲಿಯೆ ಅಲ್ಲ ಎಲ್ಲ ಜೀವರಾಶಿಗಳಲ್ಲಿಯು ಇವೆ. ಅರ್ಥ ಮಾಡಿಕೊಂಡರೆ ಕಾಣಿಸದ ಪ್ರಪಂಚ ಎಷ್ಟೋ ಇದೆ. ಅದನ್ನೇ ಕಾಣಿಸದ ಎರಡನೇ ಜಗತ್ತು ಎಂದು ನಾವು ಎನ್ನುತ್ತಿದ್ದೇವೆ. ಕೇವಲ ಭೌತಿಕ ವಾದ ಮಾಡುವವರಿಗೆ ಅಭೌತಿಕ ತಿಳಿಯದು. ಅಭೌತಿಕ (ಸೂಕ್ಷ್ಮ)ವನ್ನು ಕುರಿತು ತಿಳಿದುಕೊಳ್ಳಬೇಕೆಂದು ಪ್ರಯತ್ನ ಸಹ ಮಾಡದೆ, ಅದು ಇಲ್ಲವೇ ಇಲ್ಲ, ಇದ್ದರೆ ತೋರಿಸುತ್ತೀಯಾ ಎನ್ನುವ ಹೇತುವಾದದ ಮುಸುಗು ತಗುಲಿಸಿಕೊಂಡವರು ಕೆಲವರಿರಬಹುದು. ಅವರದು ಹೇತುವಾದ ಅಲ್ಲವೆಂದು ನಾನೀಗಲು ಸಹ ಹೇಳುತ್ತಿದ್ದೇನೆ. ಒಂದು ಯಥಾರ್ಥ ಸಂಘಟನೆಯ ಹಿಂದೆ ಅಡಗಿರುವ ಕಾರಣವನ್ನು ಹುಡುಕಿ ಅದರ ನಿಜ ಸ್ಥಿತಿಯನ್ನು ತಿಳಿದುಕೊಂಡು, ಸತ್ಯವನ್ನು ಪ್ರಕಟಿಸುವುದು ಹೇತುವಾದ. ಆದರೆ ತಾನು ಹಿಡಿದುಕೊಂಡ ಮೊಲಕ್ಕೆ ಮೂರೇಕಾಲು ಎಂದು ಮಂಡುತನದಿಂದ ವಾದಿಸುವುದು ಹೇತುವಾದವಲ್ಲ.

ದೆವ್ವ ಎನ್ನುವ ಪದ ಒರಟಾಗಿ ಕಾಣಿಸಿದರೂ ಅದು ದೇವರು ಎನ್ನುವ ಪದಕ್ಕೆ ವಿರುದ್ಧವಾಗಿ ಹುಟ್ಟಿದೆ. **ದೇವರು ಹುಡುಕಿದರೂ ತಿಳಿಯುವುದಿಲ್ಲ, ಕಾಣಿಸುವುದಿಲ್ಲ. ದೆವ್ವ ಹುಡಿಕಿದರೆ ತಿಳಿಯುತ್ತದೆ, ಕಾಣಿಸುತ್ತದೆ. ದೇವರು, ದೆವ್ವ ಎರಡು ಕಣ್ಣಿಗೆ ಕಾಣಿಸದವುಗಳೆ ಆದರೂ ದೇವರು ಶೋಧಿಸಿದರೂ ತಿಳಿಯುವುದಿಲ್ಲ, ದೆವ್ವ ಶೋಧಿಸಿದರೆ ತಿಳಿಯುತ್ತದೆ.** ಗುಡಿಯಲ್ಲಿರುವ ಪ್ರತಿಮೆ ಶರೀರದಲ್ಲಿಯು

ಸಹ ಸೂಕ್ಷ್ಮ ಶರೀರವಿದೆ, ಆದ್ದರಿಂದ ಅದನ್ನು ಸಹ ದೆವ್ವ ಎನ್ನಬೇಕಾಗಿ ಬಂದಿದೆ. ಹಾಗೆ ಚಲಿಸುವ ಜೀವರಾಶಿಗಳ ಶರೀರಗಳಲ್ಲಿಯು ಸಹ ಸೂಕ್ಷ್ಮ ಶರೀರವಿದೆ, ಆದ್ದರಿಂದ ಅದನ್ನು ಸಹ ದೆವ್ವಗಳು ಎಂದು ಹೇಳುತ್ತಿದ್ದೇವೆ. ಇದಕ್ಕಿಂತ ಮೊದಲು ಗ್ರಾಮ ದೇವತೆ ಮನುಷ್ಯನ ಶರೀರದೊಳಗೆ ಬಂದು ಮಾತನಾಡಿದ ವಿಷಯ ಹೇಳಿಕೊಂಡಿದ್ದೇವೆ. ಮರಣಿಸಿದ ಮನುಷ್ಯ ಎಂದರೆ ದೆವ್ವ, ಮನುಷ್ಯನ ಶರೀರದೊಳಗೆ ಬಂದು ಮಾತನಾಡಿದ ವಿಷಯವನ್ನು ಹೇಳಿಕೊಂಡಿದ್ದೇವೆ. ಇತ್ತ ಗುಡಿಯೊಳಗಿನ ದೇವತೆಯಲ್ಲದೆ, ಅತ್ತ ಸತ್ತುಹೋದ ಸೂಕ್ಷ್ಮವಾದ ಮನುಷ್ಯನಲ್ಲದೆ ನಾವು ನೋಡಿದ ಇತರೆ ಜೀವರಾಶಿ ವಿಷಯವನ್ನು ಈಗ ಹೇಳಿಕೊಳ್ಳೋಣ.

ಸುಮಾರು ಇಲ್ಲಿಗೆ 35 ವರ್ಷಗಳ ಹಿಂದೆ ತಾಡಿಪತ್ರಿಯಲ್ಲಿ ರೈಲ್ವೆ ಸ್ಟೇಷನ್ ಮಾಸ್ಟರ್ ಉದ್ಯೋಗ ಮಾಡುತ್ತಿರುವ ನಾಗೇಶ್ವರರಾವು ಎನ್ನುವವರು ನಾಗದೇವತೆಯ ಉಪಾಸಕನು, ನಾಗದೇವತೆಯನ್ನು ದೊಡ್ಡ ಮೆರವಣಿಗೆಯಿಂದ ತೆಗೆದುಕೊಂಡು ಹೋಗುತ್ತಿರುವಾಗ, ಇತರರು ನಾಗದೇವತೆಯನ್ನು ಪೂಜಿಸಿ, ತೆಂಗಿನಕಾಯಿಗಳನ್ನು ಸಮರ್ಪಿಸುವುದಕ್ಕೆ ನಿಲ್ಲಿಸಿ ಪೂಜಿಸುತ್ತಿರುವಾಗ, ಸುಮಾರು 150 ಮೀಟರುಗಳ ದೂರದಿಂದ ಆ ದೃಶ್ಯವನ್ನು ನೋಡುತ್ತಿದ್ದ 40 ಸಂವತ್ಸರಗಳ ವಯಸ್ಸಿರುವ ಮನುಷ್ಯನಿಗೆ ಮೈತುಂಬಿ ಕೆಳಗೆ ಬಿದ್ದು, ಹಾವಿನಂತೆ ಹರಿದಾಡುತ್ತ ಹಾವು ಬುಸುಗುಟ್ಟುವ ಹಾಗೆ ಬುಸುಗುಟ್ಟುವ ದೃಶ್ಯವನ್ನು ನೋಡಿದೆನು. ಆತನು ನೋಡುತ್ತಿರುವಾಗಲೆ ದೇವತೆಕಡೆಗೆ ಹರಿದಾಡುತ್ತ ಹೋದನು. ಅದನ್ನು ನೋಡಿದ ನಾಗದೇವತೆ ಉಪಾಸಕನು ನಾಗೇಶ್ವರರಾವು ನಾಗದೇವತೆಗೆ ನಮಸ್ಕರಿಸಿ, ಮೈತುಂಬಿದ ಮನುಷ್ಯನ ಮುಖದ ಮೇಲೆ ದೇವತೆಯ ತೀರ್ಥವನ್ನು ಚೆಲ್ಲಿದಾಗ ಅಲ್ಲಿಯವರೆಗೆ ಹಾವಿನ ಹಾಗೆ ಹರಿದಾಡುತ್ತಿದ್ದ ಮನುಷ್ಯ ಸಾಧಾರಣ ಮನುಷ್ಯನಾಗಿ ಬದಲಾಗಿ ಎದ್ದು ನಿಂತುಕೊಂಡನು. ಅಲ್ಲಿಯವರೆಗೆ ಆತನಿಗೆ ಏನು ನಡೆದಿದೆಯೆಂದು ತಿಳಿಯದು, ಆದರೆ ನಡೆದ ವಿಷಯವನ್ನು ಇತರರಿಂದ ತಿಳಿದುಕೊಂಡು ಆಶ್ಚರ್ಯಪಟ್ಟನು. ಈ ಸಂಘಟನೆಯನ್ನು ನೋಡಿದ ನಮಗೆ

ಅಲ್ಲಿ ಹಾವಿನವೊಂದು ಸೂಕ್ಷ್ಮ (ದೆವ್ವ) ಮನುಷ್ಯನ ಶರೀರದಲ್ಲಿ ಪ್ರವೇಶಿಸಿದೆಯೆಂದು ಅರ್ಥವಾಯಿತು. ಆ ವಿಷಯ ನಾಗದೇವತೆ ಉಪಾಸಕನಾದ ಆತನಿಗು ಸಹ ತಿಳಿಯಿತು. ಆದರೆ ಅಲ್ಲಿರುವ ಪ್ರಜೆಗಳಿಗೆ ಏನೂ ಅರ್ಥವಾಗಲಿಲ್ಲ.

ಇಂತದ್ದೆ ಮತ್ತೊಂದು ಸಂಘಟನೆಯನ್ನು ಸಹ ನೋಡಿದೆನು. 1997ನೇ ವರ್ಷದಲ್ಲಿ ಅನಂತಪುರ ಜಿಲ್ಲೆಯಲ್ಲಿಯೆ ಮಾರುಮೂಲೆ ಗ್ರಾಮ, ಹೆಸರು ಜ್ಞಾಪಕವಿಲ್ಲ. ಆ ಊರಿನ ಹೊರಗೆ ಈಶ್ವರಾಲಯ ಇದೆ. ಆ ಆಲಯದಲ್ಲಿ ಸುಮಾರು 40 ಜನ ಮನುಷ್ಯರೊಂದಿಗೆ ನಾವು ನಂಬಿಕೆಗಳು, ಮೂಢನಂಬಿಕೆಗಳು ಎನ್ನುವ ವಿಷಯವನ್ನು ಕುರಿತು ಮಾತನಾಡುತ್ತಿದ್ದೆವು. ಆ ವಿಷಯಗಳೇ ಈಗ **"ನಾಸ್ತಿಕರು–ಆಸ್ತಿಕರು"** ಎನ್ನುವ ಹೆಸರಿನ ಮೇಲೆ ನಾವು ಬರೆದ ಚಿಕ್ಕ ಗ್ರಂಥವು ಸಹ ಇದೆ. ಆ ದಿನ ಹಾಗೆ ಮಾತನಾಡುತ್ತಿರುವಾಗ ಅಲ್ಲಿದ್ದ ಹೆಂಗಸರಲ್ಲಿ ಒಬ್ಬರು ಎದ್ದು ಗರ್ಭಗುಡಿಯೊಳಗೆ ಹೋಗುವುದು ನಡೆಯಿತು. ಹಾಗೆ ಹೋಗುವುದನ್ನು ನೋಡಿದರೂ, ಅತ್ತ ನಾವು ಗಮನಕೊಡಲಿಲ್ಲ. ನಾವು ಮಾತನಾಡುತ್ತಿರುವಾಗ ಉಳಿದವರೆಲ್ಲ ಶ್ರದ್ಧೆಯಿಂದ ಕೇಳುತ್ತಿದ್ದಾರೆ. ಅಷ್ಟರಲ್ಲಿಯೇ ಗರ್ಭಗುಡಿಯಲ್ಲಿ ಹಾವು ಬುಸಗುಟ್ಟುವ ಹಾಗೆ ಶಬ್ಧ ಬರತೊಡಗಿತು. ಆಕಡೆ ನೋಡಿದರೆ ಒಳಗೆ ಹೋದ ಆಕೆ ಕೆಳಗೆ ಬಿದ್ದು ಹಾವಿನ ಹಾಗೆ ತಿರುಗುತ್ತಾ ಈಶ್ವರ ಲಿಂಗದ ಸುತ್ತ ತಿರುಗುತ್ತಿದ್ದಾಳೆ. ನಂತರ 20 ನಿಮಿಷಗಳಿಗೆ ಆಕೆ ಎದ್ದು ಬಂದಳು. ಹಾಗೆ ಬಂದ ಆಕೆ ಒಳಗಿನಿಂದ ಮಲ್ಲಿಗೆ ಹೂವಿನ ಮಾಲೆ ತಂದು ನಮ್ಮ ಕೊರಳಿಗೆ ಹಾಕಿ ಹೋದಳು. ಆ ಮಾಲೆಯಲ್ಲಿನ ಹೂವು ಆಗಲೆ ಬಿಡಿಸಿದ ಮೊಗ್ಗುಗಳಾಗಿವೆ. ಅಷ್ಟೇ ಅಲ್ಲದೆ ಒಂದು ಇಂಚಿಗೊಂದು ಹೂವು ಕಟ್ಟಿವೆ. ಅಲ್ಲೆಲ್ಲಿಯು ಆ ಹೂವುಗಳು ದೊರಕುವುದಿಲ್ಲವೆಂದು, ಅಷ್ಟು ತಾಜ ಮೊಗ್ಗುಗಳು ಆಗಲೆ ಕಟ್ಟಿದಹಾಗಿರುವುದನ್ನು ನೋಡಿ ಆಶ್ಚರ್ಯವೆಂದು ಅಲ್ಲಿರುವವರು ಹೇಳಿದರೂ ಅದನ್ನು ನಾವು ಗಮನಕ್ಕೆ ತೆಗೆದುಕೊಳ್ಳಲಿಲ್ಲ. ಆದರೆ ಅಲ್ಲಿ ಆಕೆಯ ಶರೀರದೊಳಗೆ ಹಾವಿನಗ್ರಹ ಅಥವಾ ಹಾವಿನ ಸೂಕ್ಷ್ಮ ಶರೀರ ಪ್ರವೇಶಿಸಿದೆಯೆಂದು, ಅದೇ ಈಶ್ವರ ಲಿಂಗದ ಸುತ್ತಾ ಹರಿದಾಡುತ್ತಾ ತಿರುಗಿದೆಯೆಂದು ನಮಗೆ ಅರ್ಥವಾಯಿತು.

ಈ ವಿಧವಾಗಿ ಇತರ ಜೀವರಾಶಿಗಳು ಸಹ ಮನುಷ್ಯನ ಶರೀರದೊಳಗೆ ಅಪರೂಪವಾಗಿ ಪ್ರವೇಶಿಸುವುದರಿಂದ ಮನುಷ್ಯರ ಸೂಕ್ಷ್ಮಗಳು, ದೇವತೆಗಳ ಸೂಕ್ಷ್ಮಗಳೆ ಅಲ್ಲದೆ, ಉಳಿದ ಜೀವರಾಶಿಗಳ ಸೂಕ್ಷ್ಮಗಳು ಸಹ ಇವೆಯೆಂದು ತಿಳಿದು ಬರುತ್ತದೆ. ಹೀಗೆ ಹಾವಿನ ಗ್ರಹ ವಿಷಯವೆ ಅಲ್ಲದೆ, ಒಂದು ಮೀನಿನ ಗ್ರಹದ ಘಟನೆಯನ್ನು ಸಹ ನಾವು 1975 ರಲ್ಲಿ ನೋಡಿದ್ದೆವು, ಇವೆಲ್ಲವನ್ನು ಒಂದು ಪರಿಶೋಧನೆ ರೂಪದಲ್ಲಿ ನೋಡಿದ್ದೇವೆ. ಕುರುಡು ತನದಿಂದ ಯಾವುದನ್ನು ನಂಬಲಿಲ್ಲ. ಒಂದೊಂದು ಸಂಘಟನೆಯಲ್ಲಿ ಸೂಕ್ಷ್ಮಗಳಿಗೆ ಸಂಬಂಧಿಸಿದ ಎಷ್ಟೋ ವಿಷಯಗಳು ತಿಳಿದಿವೆ. ನಮ್ಮ ಪರಿಶೋಧನೆಯನ್ನು ಹೊಸ ತಿರುವು ತಿರುಗಿಸಿದ ಆ ಸನ್ನಿವೇಶವನ್ನು ಕುರಿತು ವಿವರಿಸುತ್ತೇನೆ. ಒಬ್ಬ ವ್ಯಕ್ತಿ ಮಂತ್ರಾಲಯದ ಹತ್ತಿರ ತುಂಗಭದ್ರೆ ನದಿಯಲ್ಲಿ ಮೀನುಗಳನ್ನು ಹಿಡಿದುಕೊಂಡು ಬಂದಿದ್ದಾನೆ. ಅದರಲ್ಲಿ ಒಂದು ದೊಡ್ಡ ಮೀನು ಸಿಕ್ಕಿದೆ. ಅದು ಬಹಳ ಹೊತ್ತು ಪ್ರಾಣದಿಂದಿರುವಾಗ ಅದನ್ನು ನೆಲಕ್ಕೆ ಬಡಿದು ಆತನು ಸಾಯಿಸಿದನು. ಆತನು ಮುಸ್ಲಿಮ್ ಮತಸ್ಥನು. ದೇವತೆಗಳನ್ನು, ದೆವ್ವಗಳನ್ನು ನಂಬುವವನಲ್ಲ, ಆ ಮೀನನ್ನು ಸಾಯಿಸಿದ ಅರ್ಧಗಂಟೆಗೆ ಆತನಿಗೆ ಹೊಟ್ಟೆ ನೋವು ಬಂದಿದೆ. ಆತನು ಡಾಕ್ಟರು ಹತ್ತಿರ ಹೋಗಿ ಚಿಕಿತ್ಸೆ ಮಾಡಿಸಿಕೊಂಡರೂ ಸ್ವಲ್ಪವಾದರು ಕಡಿಮೆಯಾಗಲಿಲ್ಲ. ಆ ನೋವಿನಿಂದ ಆತನು ನರಳುತ್ತ ಮನೆಗೆ ಬಂದು ನೋವುಪಡುತ್ತಿದ್ದರೆ ಪಕ್ಕದ ಮನೆಯವರು ನನ್ನ ಹತ್ತಿರಕ್ಕೆ ಕರೆದುಕೊಂಡು ಬಂದರು. ಆ ವರ್ಷದಲ್ಲಿ ನಾನು "ರಿಜಿಸ್ಟರ್ ಮೆಡಿಕಲ್ ಪ್ರಾಕ್ಟೀಷನರ್" ಆಗಿ ಕೆಲಸ ಮಾಡುತ್ತಿದ್ದೆನು. ಆದ್ದರಿಂದ ವೈದ್ಯ ನಿಮಿತ್ತವಾಗಿ ಆತನು ನನ್ನ ಹತ್ತಿರಕ್ಕೆ ಬಂದಿದ್ದನು. ಮೊದಲು ಡಾಕ್ಟರು ಕೊಟ್ಟ ಪ್ರಿಸ್ಕ್ರಿಪ್ಷನ್ ಎಲ್ಲಾ ತೋರಿಸಿದನು. ಡಾಕ್ಟರು ಒಳ್ಳೆಯ ಔಷಧಿಗಳನ್ನು ಕೊಟ್ಟಹಾಗೆ ತಿಳಿಯಿತು. ಆದರೂ ಆತನು ನರಳುತ್ತಿರುವುದು ನೋಡಿ ನನಗೆ ಆಶ್ಚರ್ಯವೆನಿಸಿತು. ಆಗ ಆತನನ್ನು ಹೊಟ್ಟೆಯಲ್ಲಿ ಯಾವ ಕಡೆ ನೋವಿದೆಯೆಂದು ಪ್ರಶ್ನಿಸಿದೆನು. ಆತನು ಮೊದಲು ಬಲಗಡೆ ತೋರಿಸಿದನು. ನಂತರ ನಿಮಿಷದಲ್ಲಿಯೆ ಎಡಗಡೆ ಇದೆ ಎಂದನು. ಕರೆಕ್ಟಾಗಿ ಹೇಳು ಎಂದರೆ, ನಿಮಿಷ ನಿಮಿಷಕ್ಕು ನೋವಿನ ಜಾಗ ಬದಲಾಗುತ್ತಿದೆ

ಹೊಟ್ಟೆಯಲ್ಲಿ ಹಿಂಡಿದಂತ್ತಾಗುತ್ತಿದೆ ಎಂದನು. ಆಗ ಇದು ಶರೀರದಲ್ಲಿ ಹುಟ್ಟಿದ ನೋವಲ್ಲವೆಂದು ಅರ್ಥವಾಯಿತು.

ಆಗ ಆತನಿಂದ ವಿವರಗಳನ್ನು ಶೇಕರಿಸುವುದಕ್ಕೆ ಪ್ರಶ್ನೆಗಳನ್ನು ಕೇಳಿದೆನು.

**ಪ್ರಶ್ನೆ** :– ನಿನ್ನ ಹೊಟ್ಟೆಯಲ್ಲಿನ ನೋವು ಹೊಟ್ಟೆಯಲ್ಲಿ ಮಾತ್ರ ಇದೆಯಾ? ಇಲ್ಲವೆ ಮೇಲೆ ಶ್ವಾಶಕೋಶಗಳ ವರೆಗು ಇದೆಯಾ?

**ಉತ್ತರ** :– ಸ್ವಲ್ಪಹೊತ್ತು ಹೊಟ್ಟೆಯಲ್ಲಿ, ಸ್ವಲ್ಪಹೊತ್ತು ಹೊಟ್ಟೆಗೆ ಮೇಲಿನ ಭಾಗದ ಎದೆಯಲ್ಲಿ ನೋವು ಬರುತ್ತದೆ?

**ಪ್ರಶ್ನೆ** :– ಆಗಾಗ ಒಂದು ನಿಮಿಷವಾಗಲಿ, ಎರಡು ನಿಮಿಷಗಳಾಗಲಿ ನೋವು ಸ್ವಲ್ಪವಾದರೂ ಇಲ್ಲದೆ ಹೋಗಿ, ಚೆನ್ನಾಗಿದ್ದು ನಂತರ ಪ್ರಾರಂಭವಾಗಿ ವಿಪರೀತವಾಗಿ ನೋವು ಬರುತ್ತದಾ?

**ಉತ್ತರ** :– ಹೌದು ನೀವು ಹೇಳಿದಹಾಗೆ ಒಂದು ನಿಮಿಷ ನೋವಿಲ್ಲದೆ ಹೋಗಿ ನಂತರ ತಕ್ಷಣವೆ ಬರುತ್ತದೆ.

**ಪ್ರಶ್ನೆ** :– ಈ ನೋವು ಯಾವಾಗ ಪ್ರಾರಂಭವಾಗಿದೆ?

**ಉತ್ತರ** :– ಬೆಳಗ್ಗೆ 6–30 ಗಂಟೆಗಳಿಗೆ ರೈಲಿನಲ್ಲಿಯೆ ಬಂದಿದೆ.

**ಪ್ರಶ್ನೆ** :– ಎಲ್ಲಿಂದ ಪ್ರಯಾಣ ಮಾಡುತ್ತಿದ್ದೀಯ?

**ಉತ್ತರ** :– ಮಂತ್ರಾಲಯದಿಂದ.

**ಪ್ರಶ್ನೆ** :– ಅಲ್ಲಿಗೆ ಏಕೆ ಹೋಗಿದ್ದೆ?

**ಉತ್ತರ** :– ತುಂಗಭದ್ರ ನದಿಯಲ್ಲಿ ಮೀನುಗಳನ್ನು ಹಿಡಿಯುವುದಕ್ಕೆ ಹೋಗಿದ್ದೆ, ಅಲ್ಲಿ ನಮ್ಮವರು, ನಾನು ಮೀನುಗಳನ್ನು ರಾತ್ರಿ ಹಿಡಿದು, ನನ್ನ ಭಾಗದ ಮೀನುಗಳನ್ನು ನಾನು ತೆಗೆದುಕೊಂಡು ಬಂದಿದ್ದೇನೆ.

**ಪ್ರಶ್ನೆ** :– ಚಿಕ್ಕ ಮೀನುಗಳಾ? ದೊಡ್ಡ ಮೀನುಗಳಾ?

**ಉತ್ತರ** :– ದೊಡ್ಡ ಮೀನುಗಳು, ಒಂದೊಂದು ಕೇಜಿ ಮೇಲೆ, ಎರಡು ಕೇಜಿಗಳ ವರೆಗು ಇರುತ್ತವೆ.

**ಪ್ರಶ್ನೆ** :– ಎಲ್ಲಾ ಒಂದೇ ಜಾತಿಯ ಮೀನುಗಳಾ?

**ಉತ್ತರ** :– ಬೇರೆಬೇರೆ ಜಾತಿಯ ಮೀನುಗಳು ಸಿಕ್ಕಿವೆ. ನಾನು ಮಾತ್ರ ಒಂದೇ ಜಾತಿಯವುಗಳನ್ನು ತಂದುಕೊಂಡಿದ್ದೇನೆ.

**ಪ್ರಶ್ನೆ** :– ತಂದುಕೊಂಡ ಮಿನುಗಳು ಅವುಗಳಷ್ಟಕ್ಕವೆ ಸತ್ತು ಹೋಗುತ್ತವೆ. ಸ್ವಲ್ಪ ಬದುಕಿರುತ್ತವೆ. ಬಹಳ ಹೊತ್ತಿಗಾಗಲಿ ಸಾಯದೆ ಇರುವಂತವುಗಳು ಏನಾದರು ನಿನ್ನ ಹತ್ತಿರ ಕಾಣಿಸಿವೆಯಾ?

**ಉತ್ತರ** :– ಎರಡು ಕೇಜಿಗಳ ಮೀನು ಒಂದು ಬಹಳ ಹೊತ್ತು ಬದುಕೆ ಇದೆ. ರೈಲಿನಲ್ಲಿಯು ಸಹ ಚೀಲದಲ್ಲಿ ಒದ್ದಾಡುತ್ತಿದ್ದರೆ, ಹೊರಗೆ ತೆಗೆದು ನೆಲಕ್ಕೆ ಬಡಿದು ಸಾಯಿಸಿ ಚೀಲದಲ್ಲಿ ಹಾಕಿದೆನು.

**ಪ್ರಶ್ನೆ** :– ಹಾಗೆ ಮಾಡಿದ ನಂತರ ನಿನಗೆ ಹೊಟ್ಟೆನೋವು ಬಂದಿದೆಯಾ?

**ಉತ್ತರ** :– ಹೌದು ಅದನ್ನು ಸಾಯಿಸಿದ ಅರ್ಧಗಂಟೆಗೆ ನೋವು ಬಂದಿದೆ.

ಇಲ್ಲಿ ಅವನಿಗಿರುವ ಹೊಟ್ಟೆನೋವಿಗೆ ಇಷ್ಟು ಪ್ರಶ್ನೆಗಳು ಅವಶ್ಯವೆ! ಎಂದು ಕೆಲವರಂದುಕೊಳ್ಳಬಹುದು. ಪ್ರತಿಯೊಂದನ್ನು ಪ್ರಶ್ನಿಸಿ ಸತ್ಯವನ್ನು ತಿಳಿದುಕೊಳ್ಳುವುದೆ ಹೇತುಪದ್ಧತಿ ಎಂದು ಮೊದಲೆ ಹೇಳಿದ್ದೇನಲ್ಲ! ಸಾಧಾರಣವಾಗಿ ಡಾಕ್ಟರುಗಳು ನಿನಗೆ ನೋವು ಎಲ್ಲಿದೆ ಎಂದು ಕೇಳುತ್ತಾರೆ, ಹಾಗೆ ಮೊದಲು ನಾನು ಕೇಳಿದೆನು. ಸ್ವಲ್ಪ ಹೊತ್ತು ಹೊಟ್ಟೆಯಲ್ಲಿ, ಸ್ವಲ್ಪ ಹೊತ್ತು ಗುಂಡಿಗೆ ಮೇಲಿನ ಭಾಗದಲ್ಲಿ ನೋವು ಬರುತ್ತಿದೆ ಎಂದಾಗ ನನಗೆ ಮುಖ್ಯವಾದ ಆಧಾರ ದೊರಕಿತು. ಅದರ ಮೂಲವಾಗಿ ಅಷ್ಟು ಪ್ರಶ್ನೆಗಳು ಕೇಳಬೇಕಾಯಿತು. ಅಲ್ಲಿರುವ ನೋವಿಗೆ ತಕ್ಕ ಆಧಾರವೇನು ದೊರಕಿದೆಯೆಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ಉತ್ತರ, ಯಾವ ನೋವಾದರು ಹಾಗೆ ಅಷ್ಟು ಬೇಗ ಒಂದು ಜಾಗದಿಂದ ಮತ್ತೊಂದು ಜಾಗಕ್ಕೆ ಬದಲಾಗುವುದಿಲ್ಲ. ಹಾಗೆ ಬದಲಾಗಿದೆಯೆಂದರೆ ಅದು ಸಾಧಾರಣ ನೋವಲ್ಲವೆಂದು ಹೇಳಬಹುದು. ಪ್ರತಿ ಜಾತಿ ಜೀವರಾಶಿ ಸೂಕ್ಷ್ಮವಾಗಿ (ದೆವ್ವವಾಗಿ) ಇರುವುದಕ್ಕೆ ಅವಕಾಶ ವಿದೆಯೆಂದು ತಿಳಿದ ನಮಗೆ, ಅವು ಶರೀರದಲ್ಲಿ ಮೈಯೊಳಗೆ ಬರುವುದು ಅಥವಾ ಆಕ್ರಮಿಸುವುದು ನಡೆಯುತ್ತದೆಂದು ಸಹ ಗೊತ್ತು. ಅಷ್ಟೇ ಅಲ್ಲದೆ

ಮೇಲೆ ವಿವರಿಸಿದ ಮೀನಿನ ಸಂಘಟನೆಯಿಂದ ಶರೀರವನ್ನು ಆಕ್ರಮಿಸಿ ಮೇಲೆ ಕಾಣಿಸುವುದೆ ಅಲ್ಲ, ಶರೀರದೊಳಗೆ ಇದ್ದು ನೋವನ್ನು ಅನುಭವಿಸುವಂತೆ ಮಾಡುವುದು ಸಹ ನಡೆಯುತ್ತದೆಂದು ಅರ್ಥವಾಗಿದೆ. ಆತನು ಮೀನನ್ನು ಸಾಯಿಸಿದ ಅರ್ಧಗಂಟೆ ನಂತರ ಮೀನಿನ ಸೂಕ್ಷ್ಮ (ಗ್ರಹ) ಆತನ ಹೊಟ್ಟೆಯಲ್ಲಿ ಸೇರಿ ನೋವುಕೊಡುವುದನ್ನು ಶುರುಮಾಡಿದೆಯೆಂದು ತಿಳಿಯಿತು. ಅದು ಔಷಧಗಳಿಂದ ವಾಸಿಯಾಗುವುದಿಲ್ಲವೆಂದು ಸಹ ಅರ್ಥವಾಯಿತು. ಆದರೂ ಆ ನೋವನ್ನು ಐದು ನಿಮಿಷಗಳಲ್ಲಿ ಗುಣಪಡಿಸಿ ಕಳುಹಿಸಲಾಯಿತು. ಹಾಗೆ ಗುಣಪಡಿಸಿರುವುದು ನಂತರ ವಿವರವಾಗಿ ಹೇಳುತ್ತೇವೆ.

ಸಾಧಾರಣ ಮನುಷ್ಯನಿಗೆ ದೆವ್ವಗಳನ್ನು ಕುರಿತು ಎಂತಹ ಅವಗಾಹನೆಯು ಇಲ್ಲ. ಆಗಿರುವಾಗ ಅವುಗಳ ವಿಷಯದಲ್ಲಿ ಎಷ್ಟೋ ಪ್ರಶ್ನೆಗಳಿರುತ್ತವೆ, ಆದರೆ ಸರಿಯಾದ ಉತ್ತರಗಳು ದೊರಕಿರುವುದಿಲ್ಲ. ಆದ್ದರಿಂದ ಮನುಷ್ಯನಲ್ಲಿ ಉದ್ಭವಿಸುವ ಪ್ರಶ್ನೆಗಳೆಲ್ಲವುಗಳಿಗೆ ಉತ್ತರಗಳು ದೊರಕುವುದರಿಂದ ನಮ್ಮ ಮುಂದೆ, ನಮ್ಮ ಅನುಭವದಲ್ಲಿ ನಡೆದ ನೈಜ ಸಂಘಟನೆಗಳನ್ನು ವಿವರಿಸುತ್ತಾ ಈ ಗ್ರಂಥವನ್ನು ಬರೆಯಬೇಕೆಂದುಕೊಂಡಿದ್ದೇವೆ. ಮನುಷ್ಯನಲ್ಲಿ ಬರುವ ಪ್ರಶ್ನೆಗಳನ್ನು ನಾವೇ ಕೇಳುತ್ತಾ, ಅವುಗಳಿಗೆ ಉತ್ತರಗಳನ್ನು ಕೊಟ್ಟಿದ್ದೇವೆ. ಇನ್ನು ಪ್ರಶ್ನೆಗಳು ನೋಡೋಣ.

**ಪ್ರಶ್ನೆ** :– ದೆವ್ವವೆಂದರೆ ಏನು? ಭೂಮಿ ಮೇಲೆ ದೆವ್ವಗಳಿವೆಯೆ?

**ಉತ್ತರ** :– ದೇವರು ಎನ್ನುವ ಪದಕ್ಕೆ ವಿರುದ್ಧ ಪದವಾಗಿ ದೆವ್ವ ಎನ್ನುವ ಪದ ಹುಟ್ಟಿದೆ. ದೇವರು ಜೀವನದಲ್ಲಿ ತಿಳಿದುಬರುವುದಿಲ್ಲ. ದೆವ್ವ ತಿಳಿದುಬರುತ್ತದೆ. ದೆವ್ವವನ್ನೇ ಗ್ರಹ, ಸೂಕ್ಷ್ಮ ಶರೀರವೆಂದು ಸಹ ಕರೆಯುತ್ತಿದ್ದೇವೆ. ಕಾಣಿಸುವುದಿಲ್ಲವಾದ್ದರಿಂದ ಸೂಕ್ಷ್ಮವೆಂದು, ಗ್ರಹಿಸುವ ಶಕ್ತಿ ಇರುವುದರಿಂದ ಗ್ರಹವೆಂದು ಅನ್ನುತ್ತೇವೆ. ಜೀವವಿರುವ ಪ್ರತಿಯೊಂದು ಗ್ರಹಿಸಿಕೊಳ್ಳುವ ಸಾಮರ್ಥ್ಯ ವಿರುವುದಾಗಿದೆ. ಆದ್ದರಿಂದ ಪ್ರತಿ ಜೀವರಾಶಿಯನ್ನು ಗ್ರಹ ಎನ್ನಬಹುದು. ಆ ಲೆಕ್ಕ ಪ್ರಕಾರ ನಾವೆಲ್ಲಾ ಗ್ರಹಗಳೆ. ಹಾಗೆ ಕಾಣಿಸುವ ಶರೀರದಲ್ಲಿ ಕಾಣಿಸದ ಸೂಕ್ಷ್ಮ ಶರೀರವಾಗಿ ಇದ್ದೇವೆ, ಆದ್ದರಿಂದ ನಾವೆಲ್ಲಾ ಕಾಣಿಸುತ್ತಾ ಬದುಕುತ್ತಿರುವ

ದೆವ್ವಗಳೆ. ದೆವ್ವಗಳು ಎಂದರೆ ಸಿನಿಮಾದಲ್ಲಿ ಮೇಕಪ್ ಮಾಡಿ ತೋರಿಸಿದ ಹಾಗೆ ಯಾವುದೊ ವಿಕಾರ ರೂಪಗಳು ಅಲ್ಲ. ಭೂಮಿ ಮೇಲೆ ದೆವ್ವಗಳು ಇವೆ. ಅವುಗಳ ಅನುಭವಗಳು ಆಚರಣೆಗಳು ಎಷ್ಟೋ ಇವೆ. ಮನುಷ್ಯ ಅಕಾಲ ಮೃತ್ಯುವನ್ನು ಹೊಂದಿದರೆ ಆಯಸ್ಸು ಮುಗಿದು ಹೋಗುವವರೆಗು ಇರುವ ಸ್ಥಿತಿಯನ್ನು ದೆವ್ವ ಎನ್ನುತ್ತಿದ್ದೇವೆ.

**ಪ್ರಶ್ನೆ** :– ಸಾವಿರ ಮಂದಿ ಜನಸಂಖ್ಯೆಯಿರುವ ಊರಿನಲ್ಲಿ ಎಷ್ಟು ದೆವ್ವಗಳಿರುತ್ತವೆ?

**ಉತ್ತರ** :– ಸಾವಿರಕ್ಕಿಂತ ಸ್ವಲ್ಪ ಹೆಚ್ಚಾಗಲಿ, ಸ್ವಲ್ಪ ಕಡಿಮೆಯಾಗಲಿ ಇರಬಹುದು. ಮನುಷ್ಯ ದೆವ್ವಗಳೆ ಅಲ್ಲದೆ ಊರಿನಲ್ಲಿರುವ ಕೋಳಿಗಳು, ನಾಯಿಗಳು ಮೊದಲಾದವುಗಳೆಲ್ಲವು ಇರುತ್ತವೆ. ಒಂದು ವಿಧವಾಗಿ ಹೇಳಿದರೆ ಸುಮಾರು ಕಾಣಿಸುವ ಊರಿನಷ್ಟು ಕಾಣಿಸದ ಊರು ಸಹ ಇದಯೆಂದು ಹೇಳಬಹುದು. ಒಂದು ಊರು, ಒಂದು ದೇಶವೇ ಅಲ್ಲ ಒಟ್ಟಾರೆ ಪ್ರಪಂಚವೆಲ್ಲಾ ಸೂಕ್ಷ್ಮ ಶರೀರಗಳು ಜೀವನ ಸಾಗಿಸುತ್ತಿವೆ. ಆದ್ದರಿಂದ ಕಣ್ಣಿಗೆ ಕಾಣಿಸದ ಎರಡನೇ ಪ್ರಪಂಚ ಮತ್ತೊಂದು ಇಲ್ಲೇ ಇದೆಯೆಂದು ಹೇಳಬಹುದು. ಒಬ್ಬ ಮನುಷ್ಯನಾಗಲಿ, ಜಂತುವಾಗಲಿ, ಪಕ್ಷಿಯಾಗಲಿ ಪ್ರಾರಬ್ಧ ಕರ್ಮದಿಂದ ನಿರ್ಣಯಿಸಲ್ಪಟ್ಟ ಆಯಸ್ಸು ಮುಗಿದು ಸತ್ತುಹೋದರೆ ಮರು ಜನ್ಮಕ್ಕೆ ಹೋಗುತ್ತವೆಂದು, ಆಯಸ್ಸು ಮುಗಿಯದ ಮೊದಲೆ ಸತ್ತು ಹೋದರೆ ಅದೇ ಜನ್ಮದಲ್ಲಿ ಸೂಕ್ಷ್ಮವಾಗಿ (ದೆವ್ವವಾಗಿ) ಇರುತ್ತವೆಂದು ಮತ್ತೊಂದು ಬಾರಿ ಜ್ಞಾಪಕ ಮಾಡುತ್ತಿದ್ದೇವೆ. ಹಾಗೆ ಆಯಸ್ಸು ಮುಗಿಯದ ಮೊದಲು ಸತ್ತು ಹೋದ ಜೀವ ಜಾತಿಗಳು ಎಷ್ಟೋ ಇವೆ. ಆದರೆ ಅವೆಲ್ಲವು ಕಾಣಿಸದ ಜೀವ ಸಮುದಾಯವಾಗಿ ಅಂದರೆ ಕಾಣಿಸದ ಜಗತ್ತಾಗಿ ಇವೆ.

**ಪ್ರಶ್ನೆ** :– ಒಬ್ಬ ಮನುಷ್ಯ ಸ್ಥೂಲ ಶರೀರದಿಂದ ಬದುಕಿರುವಾಗ ಅವನಿಗೆ ಒಂದು ಕಾಲು ಇಲ್ಲ, ಆದ್ದರಿಂದ ಅವನು ಕುಂಟುತ್ತಾ ನಡೆಯುತ್ತಿದ್ದನು. ಅಂತವನು ಅಕಾಲ ಮೃತ್ಯುವಿನಿಂದ ಆಯಸ್ಸು ಮುಗಿಯದ ಮೊದಲೆ ಸತ್ತು ಹೋದರೆ ಅವನ ಸೂಕ್ಷ್ಮ ಚೆನ್ನಾಗಿ ನಡೆಯುತ್ತದಾ? ಇಲ್ಲವೆ ಆಗಲೂ ಸಹ ಕುಂಟುತ್ತಾ ನಡೆಯುತ್ತದಾ?

**ಉತ್ತರ** :- ಅಕಾಲ ಮೃತ್ಯು ಅಥವಾ ಅಕಾಲಮರಣ ಹೊಂದದ ಮೊದಲು ಅಂಗವೈಕಲ್ಯವಿರುವವನು ಸೂಕ್ಷ್ಮ ಶರೀರದೊಂದಿಗೆ ಕಳೆಯುವ ಜೀವನದಲ್ಲಿಯು ಸಹ ಅಂಗವೈಕಲ್ಯದಿಂದಲೆ ಬದುಕುವನು. ಅದಕ್ಕೆ ನಿರೂಪಣೆಯಾಗಿ ಒಂದು ಸಂಘಟನೆಯನ್ನು ಕುರಿತು ಹೇಳುವೆನು. ಅನಂತಪುರ ಜಿಲ್ಲೆ, ಪೆನುಗೊಂಡ ಹತ್ತಿರ ಒಂದು ಹಳ್ಳಿಯಲ್ಲಿ ಎಲ್ಲ ಅವಯವಗಳು ಚೆನ್ನಾಗಿರುವ ಒಬ್ಬ ಮನುಷ್ಯನಿಗೆ ದೆವ್ವ ಹಿಡಿದಿದೆ. ದೆವ್ವ ಹಿಡಿದ ಸಮಯದಲ್ಲಿ ಆತನು ಕುಂಟುತ್ತಾ ನಡೆಯುವನು. ದೆವ್ವ ಬಿಟ್ಟು ಹೋಗುತ್ತಲೆ ಕುಂಟದೆ ಚೆನ್ನಾಗಿ ನಡೆಯುತ್ತಿದ್ದನು. ಕಾಲು ಚೆನ್ನಾಗಿದ್ದರೂ ಶರೀರದಲ್ಲಿ ಅಂಗವೈಕಲ್ಯವಿರುವ ಗ್ರಹ ಇರುವಷ್ಟು ಸಮಯ, ಕಾಲಿಗೆ ಬಲವಿಲ್ಲದೆ ಹೋಗುತ್ತದೆ. ಕಾಲನ್ನು ಮುಳ್ಳಿನಿಂದ ಚುಚ್ಚಿದರೂ ಕಾಲಿನಲ್ಲಿ ಚೈತನ್ಯವಿಲ್ಲ. ಇದನ್ನು ಅನುಸರಿಸಿ ನೋಡಿದರೆ ಒಳಗಿರುವ ದೆವ್ವದ ಕರ್ಮ ಪ್ರಕಾರವೆ ಮೇಲಿನ ಶರೀರ ಸಹ ಕೆಲಸ ಮಾಡುತ್ತದೆಯೆಂದು ತಿಳಿಯುತ್ತಿದೆ.

ಜೀವಾತ್ಮನ ಕರ್ಮವನ್ನು ಅನುಸರಿಸಿ ಮೇಲಿನ ಶರೀರ ತಯಾರಾಗುತ್ತದೆಂದು ಹೇಳುವುದಕ್ಕೆ ಮತ್ತೊಂದು ಆಧಾರವನ್ನು ತಿಳಿಸುತ್ತಿದ್ದೇನೆ. ಯಾಡಿಕಿ ಎಂಬ ಗ್ರಾಮದಲ್ಲಿ ಇಲ್ಲಿಗೆ ಸುಮಾರು ಮೂವತ್ತು ವರ್ಷಗಳ ಕೆಳಗೆ ನಡೆದ ಸಂಘಟನೆಯನ್ನು ವಿವರಿಸಿಕೊಳ್ಳೋಣ. ಮದುವೆಯಾಗದ ಅಂದವಾದ 18 ವರ್ಷಗಳ ಯುವತಿಗೆ, ಆಗಾಗ ಆರೋಗ್ಯ ಚೆನ್ನಾಗಿರುತ್ತಿರಲಿಲ್ಲ, ಸ್ವಲ್ಪ ಕಾಲದಿಂದ ಡಾಕ್ಟರುಗಳ ಹತ್ತಿರ ತೋರಿಸಿದರೂ ಅನಾರೋಗ್ಯದಿಂದಲೆ ಇರುತ್ತಿದ್ದಳು. ಆ ಯುವತಿಗೆ ದೈವಜ್ಞಾನದ ಮೇಲೆ ಒಳ್ಳೆಯ ಆಸಕ್ತಿ ಇರುವುದರಿಂದ ನಾನು ಆ ಊರಿಗೆ ಹೋದಾಗ ಜ್ಞಾನವನ್ನು ಕೇಳುವುದಕ್ಕೆ ಆಕೆಯ ದೊಡ್ಡಮ್ಮನ ಮನೆಗೆ ಬಂದು ಅಲ್ಲಿ ಕೇಳಿ ಹೋಗುತ್ತಿದ್ದಳು. ಆ ಯುವತಿಯ ದೊಡ್ಡಮ್ಮ ಆ ಯುವತಿ ಆರೋಗ್ಯವನ್ನು ಕುರಿತು ನನಗೆ ಹೇಳಿದಳು. ನನಗೆ ಮಂತ್ರಗಳು ಬರುವುದಿಲ್ಲ. ನಾನು ಭೂತ ವೈದ್ಯನೂ ಅಲ್ಲ. ಆದರೂ ನನ್ನನ್ನು ನೋಡಿದರೆ ದೆವ್ವಗಳು ಓಡಿಹೋಗುತ್ತವೆಂದು, ನನ್ನಿಂದ ಎಷ್ಟೋ ಜನರ ಆರೋಗ್ಯ ಚೆನ್ನಾಗಿ ಆಗಿದೆಯೆಂದು ಆ ಯುವತಿಯ ದೊಡ್ಡಮ್ಮನಿಗೆ ಗೊತ್ತು. ಆದ್ದರಿಂದ ಆ

ಯುವತಿ ಆರೋಗ್ಯವನ್ನು ಕುರಿತು ನನ್ನ ಹತ್ತಿರ ಪ್ರಸ್ತಾವಿಸಿದರು. ನಾನು ಸಹ ಆ ಯುವತಿ ಜ್ಞಾನವನ್ನು ತಿಳಿದುಕೊಳ್ಳುವುದನ್ನು ನೋಡಿದ್ದೇನೆ. ನಾನು ಅಲ್ಲೋಪತಿ ಮತ್ತು ಹೋಮಿಯೊಪತಿ ಡಾಕ್ಟರು ಆಗಿರುವುದರಿಂದ ನಂತರ ಬಂದಾಗ ನೋಡಿ ಹೇಳುತ್ತೇನೆಂದು ಹೇಳಿದೆನು. ಎರಡು ತಿಂಗಳ ನಂತರ ಅಲ್ಲಿಗೆ ಹೋಗಬೇಕಾಯಿತು. ಆಗ ಯುವತಿಯನ್ನು ಆಕೆಯ ದೊಡ್ಡಮ್ಮನ ಸಮಕ್ಷಮದಲ್ಲಿ ನೋಡಿದೆನು. ಆಕೆಗೆ ಶರೀರದಲ್ಲಿ ಯಾವ ಲೋಪ ಇಲ್ಲವೆಂದು ಹೇಳಿದೆವು. ಆದರೂ ಆಕೆಗೆ ಆರೋಗ್ಯ ಚೆನ್ನಾಗಿಲ್ಲ, ಅದಕ್ಕೆ ಕಾರಣ ಏನಾಗಿರುತ್ತದೆಂದು ಆಲೋಚಿಸಿದೆವು. ನನಗೆ ಬಂದ ಆಲೋಚನೆ ಪ್ರಕಾರ ಸಾಯಂಕಾಲ ನೋಡುತ್ತೇವೆಂದು ಹೇಳಿದೆವು. ಹಾಗೆ ಸಾಯಂಕಾಲ ನೋಡಲಾಯಿತು. ಆಗ ಆಕೆ ಗುಂಡಿಗೆಯ ಬಡಿತದಲ್ಲಿ, ರಕ್ತ ಪ್ರಸಾರದಲ್ಲಿ ಬಹಳ ವ್ಯತ್ಯಾಸ ಕಾಣಿಸಿತು. ಆಗ ಆಕೆಯ ಶರೀರದೊಳಗೆ ಮತ್ತೊಂದು ಗ್ರಹ ಇದೆಯೆಂದು (ಸೂಕ್ಷ್ಮ ಶರೀರವಿದೆಯೆಂದು) ಅರ್ಥವಾಯಿತು. ಆ ವಿಷಯವನ್ನು ಆಕೆಯ ದೊಡ್ಡಮ್ಮನಿಗೆ ಹೇಳಿ, ಅದಕ್ಕೆ ತಕ್ಕ ಚಿಕಿತ್ಸೆಯನ್ನು ಮಂತ್ರಗಳು ಬರುವವರ ಹತ್ತಿರ ಮಾಡಿಸಿಕೊಳ್ಳಿರೆಂದು ಹೇಳಿದೆವು. ಅಷ್ಟೊತ್ತಿಗೆ ಎಲ್ಲ ವಿಧಗಳು ತೋರಿಸಿದ್ದೇವೆಂದು ಭೂತ ವೈದ್ಯರು ಸಹ ನೋಡಿದ್ದಾರೆಂದು, ತಾಯತಗಳನ್ನು ಕಟ್ಟಿಸಿದ್ದೇವೆಂದು ಹೇಳಿದರು.

ಆ ಯುವತಿಯ ಮನೆಯಲ್ಲಿ ಅವರ ತಾಯಿತಂದೆಯರಿಗೆ ಜ್ಞಾನದ ಮೇಲೆ ಆಸಕ್ತಿ ಇಲ್ಲ. ಆದರೂ ಆ ಯುವತಿಗೆ ದೈವಜ್ಞಾನದ ಮೇಲೆ ಆಸಕ್ತಿ ಇರುವುದರಿಂದ ಆ ರೋಗವನ್ನು ಕುರಿತು ಸ್ವಲ್ಪ ವಿಚಾರಿಸಬೇಕೆಂದುಕೊಂಡೆನು. ಆಗ ನಾನು ಕುಳಿತಿರುವ ಕುರ್ಚಿಗೆ ಎದುರುಗಡೆ ಮೂರು ಅಡಿ ದೂರದಲ್ಲಿ ಯುವತಿಯನ್ನು ಕುಳಿತುಕೊ ಎಂದು, ತಲೆಮೇಲಕ್ಕೆ ಎತ್ತಿ ನೇರವಾಗಿ ನನ್ನ ಕಡೆ ನೋಡೆಂದೆನು. ಆಗ ಆಕೆಗೆ ನನ್ನ ಕಡೆಗೆ ನೋಡಲಾಗಲಿಲ್ಲ. ನನ್ನ ಕಡೆ ನೋಡಿದರೆ ಒಳಗೆ ಅಡಗಿಕೊಂಡಿರುವ ದೆವ್ವ ಹೊರಗೆ ಬರುತ್ತದೆ. ಆದರೆ ಆಕೆಯ ಶರೀರದೊಳಗಿನ ಸೂಕ್ಷ್ಮ ಹೊರಗೆ ಬರಲಿಲ್ಲ. ಆಗ ನಾನೇ ಒಳಗೆ

ಅಡಗಿರುವ ಜೀವಿ (ದೆವ್ವ) ಹೊರಗೆ ಬಂದು ಮಾತನಾಡೆಂದು ಹೇಳಿದೆವು. ಹಾಗೆ ಹೇಳುತ್ತಿದ್ದಂತೆ ಬಹಳ ಭಯಪಡುತ್ತಾ ಆ ಯುವತಿ ಮಾತನಾಡಿದಳು. ಮೇಲೆ ನೋಡಲು ಯುವತಿ ಕಾಣಿಸಿದರು ಮಾತನಾಡುವುದು ದೆವ್ವ ಎಂದು ನನಗೂ, ಅಲ್ಲಿರುವವರೆಲ್ಲರಿಗೂ ಚೆನ್ನಾಗಿ ಅರ್ಥವಾಗಿದೆ. ಪಕ್ಕದಲ್ಲಿ ಕನಿಷ್ಠ 20 ಜನ ಹೆಂಗಸರು ಗಂಡಸರು ಇದ್ದಾರೆ. ಅವರೆಲ್ಲರಿಗು ದೆವ್ವ ಮಾತನಾಡುತ್ತಿದೆ ಯೆಂದು ಅರ್ಥವಾಗುವುದಕ್ಕೆ ಕಾರಣ ಆ ಯುವತಿ ಮಾತನಾಡುವ ಮಾತು ಸ್ಪಷ್ಟವಾಗಿ ಇಲ್ಲ. ಮೂತಿಡೊಂಕಾಗಿ ಪಾರ್ಶ್ವವಾಯು ಬಂದವನು ಮಾತನಾಡಿದ ಹಾಗೆ ಮಾತನಾಡುತ್ತಿದ್ದಾಳೆ. ಅಷ್ಟೇ ಅಲ್ಲ ಬಲಗಾಲು, ಬಲಗೈ ಸಹ ಸ್ವಲ್ಪವಾದರೂ ಕೆಲಸ ಮಾಡಲಿಲ್ಲ. ಒಟ್ಟಿನಲ್ಲಿ ಶರೀರಕ್ಕೆ ಪಾರ್ಶ್ವವಾಯು ಇದ್ದಹಾಗೆ ಅಲ್ಲಿರುವವರಿಗೆಲ್ಲರಿಗು ಅರ್ಥವಾಗಿದೆ. ಆಕೆಯೊಳಗೆ ಸೇರಿದ ವ್ಯಕ್ತಿಗೆ ಪಾರ್ಶ್ವ ವಾಯು ಇದೆಯೆಂದು, ಆದ್ದರಿಂದ ಆಕೆ ಶರೀರ ಹಾಗೆ ಆಗಿದೆಯೆಂದು ನನಗೆ ತಿಳಿಯಿತು. ಆಗ ಆ ದೆವ್ವವನ್ನು ಪ್ರಶ್ನಿಸಿದಾಗ, ಎಷ್ಟೋ ಆಸಕ್ತಿಕರವಾದ ವಿಷಯಗಳು ತಿಳಿದಿವೆ.

ಒಬ್ಬ ವ್ಯಕ್ತಿಗೆ 20 ವರ್ಷಗಳ ಯುಕ್ತ ವಯಸ್ಸಿನಲ್ಲಿಯೆ ಪಾರ್ಶ್ವವಾಯು (ಪೆರಾಲಸಿಸ್) ಬಂದು ಶರೀರದಲ್ಲಿ ಒಂದು ಕಡೆ ಕಾಲು, ಕೈ, ಬಾಯಿ ಬಿದ್ದುಹೋಗಿವೆ. ಆತನಿಗೆ ಮಾತನಾಡುವುದಕ್ಕೆ ಸಹ ಬಾಯಿ ಅನುಕೂಲಿಸು ವಂತಿಲ್ಲ. ಹಾಗೆ ಕಷ್ಟವಾಗಿ ಕುಂಟುತ್ತಾ ನಡೆಯುತ್ತಿದ್ದನು. ಆತನು ಬಿಕ್ಷೆ ಬೇಡಿ ತಿಂದು ಬದುಕುತ್ತಿದ್ದನು. ಆತನದ್ದು ತೆಲಂಗಾಣ ಪ್ರಾಂತ. ಬಿಕ್ಷಾಟನೆ ಮಾಡುತ್ತಾ ಅನಂತಪುರ ಜಿಲ್ಲೆಗೆ ಹೋಗಿದ್ದಾನೆ. ಯಾಡಿಕಿ ಎನ್ನುವ ಊರಿನಲ್ಲಿ ದೊಡ್ಡ ಗುಡಿ ಇದೆಯೆಂದು, ಅಲ್ಲಿಗೆ ಭಕ್ತರು ಬರುತ್ತಿರುತ್ತಾರೆಂದು ತಿಳಿದುಕೊಂಡು ಗುಡಿ ಮುಂದೆ ಕುಳಿತುಕೊಂಡರೆ ಕೆಲವರಾದರು ದಯೆಯಿಂದ ಹಣ ಕೊಡುತ್ತಾರೆಂದುಕೊಂಡನು. ಸರಿಯಾಗಿ ನಡೆಯಲಾರದ ಆತನು ಆ ಗುಡಿ ಮುಂದೆ ಇರುತ್ತಿದ್ದನು. ಅಲ್ಲಿ ಯಾರೂ ಹಣಕೊಡದೆ ಹೋಗುವುದರಿಂದ ಆ ಊರಿನಲ್ಲಿಯೆ ಸ್ವಲ್ಪ ತಿರುಗಿ ಯಾರಾದರು ಏನಾದರು ಇಟ್ಟರೆ ತಿಂದು

ಬದುಕುತ್ತಿದ್ದನು. ಆ ಕುಂಟ ಆ ಊರಿಗೆ ಬಂದ ಆರು ತಿಂಗಳಿಗೆ ಸತ್ತು ಹೋದನು. ಅದೂ ಅಕಾಲ ಮರಣ ಹೊಂದಿದ್ದಾನೆ. ಆದ್ದರಿಂದ ದೆವ್ವವಾಗಿ ಇದ್ದಾನೆ. ಇಲ್ಲಿ ಆತನು ಸತ್ತು ಹೋಗಿದ್ದಾನೆನ್ನುವ ಹೆಸರೆ ಆಗಲಿ, ಆತನ ಜೀವನ ಮಾತ್ರ ಯಥಾತಥ. ಸಾಯುವುದಕ್ಕಿಂತ ಮೊದಲು ಕಾಣಿಸುತ್ತಿದ್ದನು, ಸತ್ತುಹೋದ ಮೇಲೆ ಕಾಣಿಸುವುದಿಲ್ಲ. ಮನುಷ್ಯರಿಗೆ ಕಾಣಿಸದಿದ್ದರೂ, ಅವನೂ ಇದ್ದಾನೆ, ಅವನ ಜೀವನವೂ ಇದೆ. ಹಾಗೆ ಕಾಲಮರಣ ಬರುವವರೆಗು ಅಂದರೆ ಪೂರ್ತಿ ಆಯಸ್ಸು ಮುಗಿದು ಹೋಗುವವರೆಗು ಆತನು ಇರಬೇಕಾದ್ದೇ. ಆತನು ಬದುಕಿರುವಾಗ ಕಾಲು, ಕೈ ಸಹಕರಿಸದೆ ಎಷ್ಟು ದುರ್ಭಲ ಜೀವನವನ್ನು ಅನುಭವಿಸಿದ್ದಾನೊ, ಅಕಾಲ ಮರಣ ಹೊಂದಿದ ನಂತರ ಸಹ, ಹಾಗೆ ದುರ್ಭಲ ಜೀವನವನ್ನು ಅನುಭವಿಸುತ್ತಿದ್ದಾನೆ.

ಹಾಗೆ ಜೀವನ ಕಳೆಯುತ್ತಿದ್ದ ಆತನಿಗೆ ಒಂದು ದಿನ ಒಂದು ಹೊಸ ಆಲೋಚನೆ ಬಂದಿದೆ. ಅಲ್ಲಿಗೆ ಆತನ ವಯಸ್ಸು 25 ವರ್ಷಗಳು. ಆತನದ್ದು ಯುಕ್ತವಯಸ್ಸೆ ಆಗಿರುವುದರಿಂದ, ತನಗೆ ಒಬ್ಬ ಹುಡುಗಿ ಜೊತೆ ಬೇಕೆಂದುಕೊಂಡನು. ಬದುಕಿರುವಾಗ ಬಿಕ್ಷೆ ಬೇಡಿ ತಿನ್ನುವ ಆತನನ್ನು ನೋಡಿ, ಆತನ ಕಾಲು ಕೈ ನೋಡಿ ಯಾರು ಸಹ ಆತನಿಗೆ ಜೊತೆಯಾಗುವುದಿಲ್ಲ. ಆದರೆ ಈಗ ತನ್ನ ಇಷ್ಟ ಪ್ರಕಾರ ಜೊತೆ ಮಾಡಿಕೊಳ್ಳಬಹುದೆಂದು ಅಂದುಕೊಂಡನು. (ಇಲ್ಲಿ ಗಮನಿಸಬೇಕಾದ ವಿಷಯ ಒಂದಿದೆ ಗಂಡು ದೆವ್ವ ಬದುಕಿರುವ ಸ್ತ್ರೀ ಶರೀರದೊಳಗೆ ಸೇರಿ ಆಕೆಯನ್ನು ಅನುಭವಿಸಬಹುದು. ಹಾಗೆ ಸ್ತ್ರೀ ದೆವ್ವ ಬದುಕಿರುವ ಗಂಡಸಿನ ಶರೀರದೊಳಗೆ ಸೇರಿ ಆತನೊಂದಿಗೆ ಸಂಯೋಗ ಮಾಡಬಹುದು.) ತಕ್ಷಣವೆ ಯುಕ್ತ ವಯಸ್ಸಿನಲ್ಲಿರುವ ಹೆಣ್ಣು ಮಕ್ಕಳಿಗಾಗಿ ಹುಡುಕಲು ಪ್ರಾರಂಭಿಸಿದನು. ಅದೂ ಅಂದವಾದ ಹುಡಿಗಿಯೆ ಬೇಕೆಂದುಕೊಂಡನು. ಒಂದು ದಿನ 10ನೇ ತರಗತಿ ಓದುತ್ತಿದ್ದ ಹುಡುಗಿ ಕಾಣಿಸಿದಳು. ಎಲ್ಲರಿಗಿಂತ ಆ ಹುಡುಗಿ ಬಹಳ ಸುಂದರವಾಗಿ ಇದ್ದಾಳೆಂದು ಕೊಂಡ ಆತನು, ಆಕೆಯಲ್ಲಿ ಸೇರುವುದಕ್ಕೆ ಪ್ರಯತ್ನ ಮಾಡಿದನು. ಸುಮಾರು

ತಿಂಗಳ ನಂತರ ಒಂದು ದಿನ ಆ ಹುಡುಗಿ ಸ್ಕೂಲಿನಿಂದ ಬರುವ ಸಮಯದಲ್ಲಿ ಆಕೆಯೊಳಗೆ ಪ್ರವೇಶಿಸಿದನು. ಸ್ಕೂಲ್‌ನಿಂದ ಆಕೆ ಮನೆಗೆ ಬರುವ ದಾರಿ ಹೊಲದಲ್ಲಿ ಇದೆ. ಆ ದಾರಿಯಲ್ಲಿ ಆಕೆ ಒಬ್ಬಳೆ ಒಂಟಿಯಾಗಿ ಬರುತ್ತಿದ್ದಾಳೆ. ಅದೇ ಒಳ್ಳೆಯ ಅವಕಾಶ ಎಂದುಕೊಂಡನು. ಆತನು ಕುಂಟನಾಗಿರುವುದಿರಿಂದ ದಾರಿಯ ಪಕ್ಕದ ಹೊಲದ ಬದಿಯಲ್ಲಿ ಕಾದುಕೊಂಡು ಕುಳಿತುಕೊಂಡಿದ್ದಾನೆ. ಆಕೆ ಬರುತ್ತಿರುವಾಗ ಕಾಣಿಸದೆ ಅದೃಶ್ಯವಾಗಿರುವ ಆತನು, ಆ ಹುಡುಗಿಯ ಕಾಲು ಹಿಡಿದುಕೊಂಡಿದ್ದಾನೆ. ಆಗ ಅವಳು ಹೊಲದ ಬದಿಯಲ್ಲಿ ಕೆಳಗೆ ಬಿದ್ದಳು. ಆ ಹುಡುಗಿ ಬಿದ್ದು ಎದ್ದೇಳುವದರೊಳಗೆ ಆಕೆಯೊಳಗೆ ಸೇರಿಕೊಂಡಿದ್ದಾನೆ. ಓದುತ್ತಾ ಇದ್ದರೆ ಇದೊಂದು ವಿಚಿತ್ರವಾಗಿದೆ ಅಲ್ಲವೆ! ಪಕ್ಕದಲ್ಲಿದ್ದು ನೋಡಿದ ಹಾಗೆ ಹೇಳುತ್ತಿದ್ದೀಯ, ಇದೆಲ್ಲಾ ನಿನಗೇಗೆ ತಿಳಿದಿದೆಯೆಂದು ನೀವು ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ನನ್ನ ಉತ್ತರ ಹೀಗಿದೆ.

ಆ ಹುಡುಗಿಯ ದೊಡ್ಡಮ್ಮನ ಮನೆಯಲ್ಲಿ ನನ್ನ ಮುಂದೆ ಕುಳಿತು ಕೊಂಡಾಗ ಆಕೆಯಲ್ಲಿ ಬದಲಾವಣೆ ಬಂದಿದೆ. ಕಾಲು, ಕೈ ಕೆಲಸ ಮಾಡಲಿಲ್ಲ, ಬಾಯಿ ಸಹ ಸರಿಯಾಗಿ ಕೆಲಸ ಮಾಡಲಿಲ್ಲ ಎಂದು ಹೇಳಿದ್ದೇವಲ್ಲ! ಆಗ ಆಕೆಯ ಶರೀರದೊಳಗಿರುವ ಕುಂಟನು ಆಕೆ ಶರೀರದ ಮೇಲೆ ಬಂದು ಮಾತನಾಡುತ್ತಾ, ನಾನು ಪ್ರಶ್ನಿಸುವಾಗ ಸ್ವಲ್ಪ ಗತದಲ್ಲಿ ನಡೆದ ವಿಷಯವೆಲ್ಲಾ ಮಣಿ ಪೋಣಿಸಿದ ಹಾಗೆ ಹೇಳಿದನು. ಆತನು ಹೇಳಿರುವುದೆಲ್ಲಾ ವಾಸ್ತವವೆಂದು ತಿಳಿಯಿತು. ಆದ್ದರಿಂದ ಅದನ್ನು ನಿಮಗೆ ಹೇಳಿದ್ದೇವೆ. ಇದೆಲ್ಲಾ ಕೇಳಿದ ನಂತರ ನಾನು ಕೇಳಿದ ವಿಧಾನ, ಆತನು ಮಾತನಾಡಿದ ವಿಷಯ ಹೀಗಿದೆ.

**ನಾನು** :– ಚಿಕ್ಕ ವಯಸ್ಸಿನಲ್ಲಿರುವ ಅಂದವಾದ ಹುಡುಗಿಯನ್ನು ಪೀಡಿಸುವುದಕ್ಕಿಂತ ನಿನ್ನ ಹಾಗೆ ಸತ್ತುಹೋಗಿ ದೆವ್ವಗಳಾದ ಹೆಂಗಸರಿರುತ್ತಾರಲ್ಲ! ಅವರಲ್ಲಿ ಯಾರನ್ನಾದರು ಜೊತೆ ಮಾಡಿಕೊಳ್ಳಬಾರದಾ?

**ಕುಂಟ** :– ನಾನೂ ದೆವ್ವವೇ, ಅವರೂ ದೆವ್ವಗಳೇ, ಅವರಿಗೆ ನಾನು ಕಾಣಿಸುತ್ತಾ

ಇರುತ್ತೇನೆ. ನನ್ನನ್ನು ನೋಡಿ ಯಾರು ನನ್ನ ಹತ್ತಿರಕ್ಕೆ ಬರುತ್ತಾರೆ? ನಾನೇನಾದರೂ ಮಾತನಾಡಿದರೆ ಅವರೆ ನನ್ನನ್ನು ಒಡೆಯುತ್ತಾರೆ. ಆದ್ದರಿಂದ ಸತ್ತುಹೋದವರ ಸುದ್ದಿಗೆ ನಾನು ಹೋಗುವುದಿಲ್ಲ. ಬದುಕಿರುವವರಿಗೆ ನಾನು ಹೇಗೂ ಕಾಣಿಸುವುದಿಲ್ಲ. ಆದ್ದರಿಂದ ಅವರೊಳಗೆ ಕಳ್ಳನಾಗಿ ಸೇರಬಹುದು. ಸೇರಿದ ನಂತರ ಆ ಕೋರಿಕೆಯನ್ನು ತೀರಿಸಿಕೊಳ್ಳಬಹುದು. ಅದಕ್ಕೆ ಈ ಹುಡುಗಿಯೊಳಗೆ ಬಂದಿದ್ದೇನೆ.

**ನಾನು** :– ನಡೆಯುವುದೇನೊ ನಡೆದು ಹೋಗಿದೆ. ಈಗಲಾದರೂ ಆ ಹುಡುಗಿಯನ್ನು ಬಿಟ್ಟು ಹೋಗು, ನಿನ್ನ ಜೀವನ ಹೇಗೂ ಹಾಳಾಗಿ ಹೋಗಿದೆ. ಆಕೆಯ ಜೀವನವನ್ನು ಏಕೆ ನಾಶ ಮಾಡುತ್ತೀಯ?

**ಕುಂಟ** :– ನನಗೆ ಜೊತೆ ಬೇಕೆಂದೆ ಬಂದಿದ್ದೇನೆ. ಸ್ವಲ್ಪ ಕಾಲ ಹೀಗೆ ಆಕೆಯಲ್ಲಿ ಇದ್ದು ಈಕೆ ಚೆನ್ನಾಗಿ ಬಲಹೀನಳಾದ ನಂತರ ಈಕೆಯನ್ನು ಸಾಯಿಸುತ್ತೇನೆ. ಆಗ ಆಕೆಯು ಸಹ ನನ್ನ ಹಾಗೆ ದೆವ್ವವೆ ಆಗುತ್ತಾಳೆ. ಆಗ ಈಕೆಗೆ ನಾನು ಪರಿಚಯವಾಗಿರುವುದರಿಂದ ನನ್ನ ಹತ್ತಿರವೆ ಇರುತ್ತಾಳೆ. ನನಗೆ ಕಾಲು, ಕೈ ಸರಿಯಾಗಿಲ್ಲವಲ್ಲ! ಈಕೆ ಜೊತೆಗಿದ್ದರೆ ನನ್ನನ್ನು ಹಿಡಿದುಕೊಂಡು ನಡೆಸುತ್ತಾಳೆ, ಏನಾದರು ಕೆಲಸ ಮಾಡಿ ಇಡುತ್ತಾಳೆ.

**ನಾನು** :– ಎಷ್ಟೋ ಒಳ್ಳೆಯ ಭವಿಷ್ಯತ್ತಿರುವ ಹುಡುಗಿಯನ್ನು ಹೀಗೆ ಮಾಡುವುದು ಬಹಳ ಅನ್ಯಾಯ. ನಿನಗೆ ಬಹಳ ಪಾಪ ಬರುತ್ತದೆ, ನಾನು ಹೇಳಿದ ಹಾಗೆ ಕೇಳಿ ಈ ಹುಡುಗಿಯನ್ನು ಬಿಟ್ಟು ಹೋಗು. ಇಲ್ಲದೇ ಹೋದರೆ ಈ ವಿಷಯದಲ್ಲಿ ನಿನ್ನ ಮೇಲೆ ನನಗೆ ಕೋಪ ಬರುತ್ತದೆ.

**ಕುಂಟ** :– ದೊಡ್ಡವರು ನೀವೆ ಹಾಗಂದರೆ ಹೇಗೆ ಸ್ವಾಮಿ! ಕೈಲಾಗದವನು ನಾನು ಬದುಕುವುದು ಹೇಗೆ? ನನಗೆ ಆಸರೆಯಾಗಿ ಯಾರೊ ಒಬ್ಬರು ಇರಬೇಕು ತಾನೆ! ನಾನು ಯಾವ ಮಂತ್ರಗಾರರ ಬಳಿ ಹೊರಗೆ ಬಂದು ಮಾತನಾಡಲಿಲ್ಲ. ಆದರೆ ನಿಮ್ಮ ಹತ್ತಿರ ಮಾತ್ರ ಹಾಗೆ ಇರಲಾಗದೆ ಹೋದೆನು. ನಿಮ್ಮ ಮುಂದೆ

ಇರಲಾಗದೆ ಹೋಗುತ್ತಿದ್ದೇನೆ. ನೀವು ಅಂದುಕೊಂಡರೆ ನನಗೆ ನ್ಯಾಯವಾದರು ಮಾಡುತ್ತೀರ, ಅನ್ಯಾಯವಾದರು ಮಾಡುತ್ತೀರ.

**ನಾನು** :- ನಿನಗೆ ನ್ಯಾಯ ಮಾಡಿದರೆ, ಈ ಹುಡುಗಿಗೆ ಅನ್ಯಾಯ ಮಾಡಿದ ಹಾಗಲ್ಲವೆ! ಇದು ನಿನಗಾದರು ಪಾಪದ ಕೆಲಸ ಅಲ್ಲವೆ! ನೀನೆ ಆಲೋಚಿಸಿಕೊಂಡು ಹೇಳು.

**ಕುಂಟ** :- ನಾನು ಆಲೋಚಿಸಿಕೊಂಡು ನಿಮಗೆ ಹೇಳುವಷ್ಟು ದೊಡ್ಡವನಲ್ಲ. ನೀವು ಹೇಗೆ ಹೇಳಿದರೆ ಹಾಗೆ ಮಾಡುತ್ತೇನೆ. ಈ ಹುಡುಗಿಗೆ ದೈವಜ್ಞಾನದ ಮೇಲೆ ಆಸಕ್ತಿ ಇದೆ. ಆದರೂ ಸ್ವತಂತ್ರವಾಗಿ ಬಂದು ತಿಳಿದುಕೊಳ್ಳುವ ಅವಕಾಶವಿಲ್ಲ. ಅವರ ಅಮ್ಮ, ಅಪ್ಪನಿಗೆ ಜ್ಞಾನವೆಂದರೆ ಸರಿಹೋಗುವುದಿಲ್ಲ. ಈಗಲು ಸಹ ಅವರಿಗೆ ಗೊತ್ತಾಗದಂತೆ ಅವರ ದೊಡ್ಡಮ್ಮನ ಮನೆಗೆ ಜ್ಞಾನ ತಿಳಿದುಕೊಳ್ಳುವುದಕ್ಕೆ ಬಂದಿದ್ದಾಳೆ. ನನಗು ಸಹ ಜ್ಞಾನವನ್ನು ತಿಳಿದುಕೊಳ್ಳಬೇಕೆಂಬುದಿದೆ. ಈ ಹುಡುಗಿ ನನ್ನ ಹತ್ತಿರ ಇದ್ದರೆ ಇಬ್ಬರು ಬಂದು ಜ್ಞಾನವನ್ನು ತಿಳಿದುಕೊಳ್ಳಬಹುದು. ಈ ಹುಡುಗಿಗೆ ಯಾವ ಅಡಚಣೆಯು ಇರುವುದಿಲ್ಲ. ನಾನು ಈಕೆಗೆ ಯಾವ ಕಷ್ಟವನ್ನು ಕೊಡುವುದಿಲ್ಲ. ನೀವು ದಯೆ ಮಾಡಿ ನನ್ನನ್ನು ಏನು ಅನ್ನಬೇಡಿ, ನನಗೆ ಜ್ಞಾನವನ್ನು ತಿಳಿದುಕೊಳ್ಳುವ ಅವಕಾಶ ಕೊಡಿ.

**ನಾನು** :- ಎಲೈ! ನೀನು ನನ್ನನ್ನೇ ಇಕ್ಕಟ್ಟಿನಲ್ಲಿ ಇಡುತ್ತೀಯ. ನೀತಿ, ನ್ಯಾಯಗಳು ಪ್ರಪಂಚ ಸಂಬಂಧವಾದವುಗಳು. ಜ್ಞಾನ, ಧರ್ಮ ದೈವಸಂಬಂಧವಾದವುಗಳೆಂದು ನಾನೇ ಎಷ್ಟೋ ಜನರಿಗೆ ಹೇಳುತ್ತಿರುತ್ತೇನೆ. ಆಗಿರುವಾಗ ಪ್ರಕೃತಿ ಸಂಬಂಧವಾದ ನೀತಿ, ನ್ಯಾಯಕ್ಕಿಂತ ಹೆಚ್ಚಾಗಿ ಜ್ಞಾನ, ಧರ್ಮಗಳಿಗೆ ಬೆಲೆ ಕೊಡುತ್ತೇನೆ. ಆದ್ದರಿಂದ ನೀನು ಕೇಳುವುದಕ್ಕೆ ಸರಿಯಾದ ಪರಿಷ್ಕಾರ ಮಾರ್ಗ ಹೇಳುತ್ತೇನೆ ನೀನು ಹಾಗೆ ನಡೆದುಕೊ. ಹೇಳಬೇಕಾ? ನನ್ನ ಮಾತು ಕೇಳುತ್ತೀಯಾ?

**ಕುಂಟ** :- ಜ್ಞಾನದ ಪ್ರಕಾರ ಹೇಳುವ ನಿಮ್ಮ ಮಾತನ್ನು ತಪ್ಪದೇ ಕೇಳುತ್ತೇನೆ. ನೀವು ಹೇಗೆ ಹೇಳಿದರೆ ಹಾಗೆ ಮಾಡುತ್ತೇನೆ.

**ನಾನು :–** ಸರಿ, ನೀನು ಆ ಹುಡುಗಿಯಲ್ಲಿ ಇದ್ದರೂ ಪರವಾಗಿಲ್ಲ. ಆದರೆ ಈ ಹುಡುಗಿಗೆ ಮದುವೆ ಆಗಿ ಸಂತಾನವಾದ ನಂತರ ನಿನ್ನ ಹಿಂದೆ ಕರೆದುಕೊಂಡು ಹೋಗು, ಅಲ್ಲಿಯವರೆಗು ಈಕೆಗೆ ಯಾವ ನೋವು ಕೊಡಬಾರದು, ನೀನು ಸಾಯಿಸಬಾರದು. ಒಂದು ವೇಳೆ ನನ್ನ ಮಾತು ಕೇಳದೆ ಹೋದರೆ ನಿನಗೆ ಒಳ್ಳೆಯದಲ್ಲ ತಿಳಿದುಕೊ.

**ಕುಂಟ :–** ಇಲ್ಲ ಸ್ವಾಮಿ ನಿಮ್ಮ ಮಾತು ಗೆರೆ ದಾಟುವುದಿಲ್ಲ. ನೀವು ಹೇಳಿದಹಾಗೆ ನಡೆದುಕೊಳ್ಳುತ್ತೇನೆ. ಇಲ್ಲಿಗೆ ಮಾಡಿಕೊಂಡ ಪಾಪವನ್ನು ಅನುಭವಿಸುತ್ತಾ ಸಾಯುತ್ತಿದ್ದೇನೆ. ನಿಮ್ಮ ಮಾತನ್ನು ಅಲ್ಲ ಎಂದರೆ ನನಗೆ ದೊಡ್ಡ ಪಾಪವೆ ಬರುತ್ತದೆ.

ಸರಿ ಒಳಗೆ ಅಡಗಿಕೊ ಎಂದು ನಾನು ಹೇಳುತ್ತಲೆ ಆತನು ಅಡಗಿಕೊಂಡನು. ಆ ಹುಡುಗಿಗೆ ಜ್ಞಾಪಕ ಬಂದಿತು. ಆಗ ನೀನು ಜ್ಞಾನ ತಿಳಿದುಕೊಳ್ಳುತ್ತಾ ಇದ್ದರೆ ನಿನಗೆ ಒಳ್ಳೆಯದಾಗುತ್ತದೆಂದು ಆಕೆಗೆ ಹೇಳಿ ಬಂದೆವು. ನಂತರ ಸ್ವಲ್ಪ ಕಾಲಕ್ಕೆ ಆಕೆಗೆ ಮದುವೆಯಾಗುವುದೂ, ಆನಂತರ ಸ್ವಲ್ಪ ಕಾಲಕ್ಕೆ ಗರ್ಭಧರಿಸಿ ಗಂಡು ಮಗುವನ್ನು ಪ್ರಸವಿಸಿದ ನಂತರ ಆಕೆ ಸತ್ತುಹೋದಳು. ನಂತರ ಸ್ವಲ್ಪ ಕಾಲಕ್ಕೆ ಆಕೆ ಸತ್ತುಹೋಗಿದ್ದಾಳೆಂದು ನನಗೆ ತಿಳಿಯಿತು. ಬದುಕಿರುವವರೆ ಮರ್ಯಾದೆ ಕೊಡದ ಈ ಕಾಲದಲ್ಲಿ ಸತ್ತವನಾದರೂ, ಕುಂಟನಾದರು ನನ್ನ ಮಾತಿನ ಮೇಲೆ ಗೌರವದಿಂದ ಆತನು ನಡೆದುಕೊಂಡಿರುವುದಕ್ಕೆ ಸಂತೋಷಿಸಿದೆನು.

ಈ ಸಂಘಟನೆಯನ್ನು ಓದಿದ ನಂತರ, ನಿಮಗೆ ಎಷ್ಟೋ ಅನುಮಾನಗಳು, ಎಷ್ಟೋ ಪ್ರಶ್ನೆಗಳು ಬಂದಿರಬಹುದು. ಕೆಲವು ಸಂಶಯಗಳು ತೀರುವುದಕ್ಕೆ ನನ್ನನ್ನು ಕುರಿತು ಸ್ವಲ್ಪ ವಿವರವನ್ನು ಹೇಳಬೇಕೆಂದುಕೊಂಡಿದ್ದೇನೆ ನೋಡಿರಿ. ನಾನು ಮಂತ್ರಗಾರನಲ್ಲ, ನನಗೆ ಯಾವ ಮಂತ್ರಗಳು ಬರುವುದಿಲ್ಲ, ನನ್ನ ಹತ್ತಿರ ಶಕ್ತಿವಂತವಾದ ಮೂಲಿಕೆಗಳಾ(ಬದನಿಕೆಗಳಾ)ಗಲಿ, ತಾಯತಗಳಾಗಲಿ ಇರುವುದಿಲ್ಲ. ನನ್ನ ಹತ್ತಿರ ಇರುವುದೆಲ್ಲಾ ಒಂದೇ ಒಂದು ದೈವಜ್ಞಾನ ನನ್ನಲ್ಲಿರುವ

ಜ್ಞಾನವನ್ನು ಅನುಸರಿಸಿ ನೋಡಿ ದೆವ್ವಗಳು ಹೊರಬೀಳುವುದು, ಅವುಗಳಷ್ಟಕ್ಕವೇ ಹೊರಗೆ ಬಂದು ಮಾತನಾಡುತ್ತವೆ. ಕೆಲವು ಕಡೆ ದೆವ್ವಗಳು ಕೂದಲುಗಳನ್ನು ಬಿಟ್ಟುಕೊಂಡು ತೂಗಾಡುವುದೂ, ಕಣ್ಣು ದೊಡ್ಡದಾಗಿಸಿ ನೋಡುವುದು ಇರುತ್ತದೆ. ಆದರೆ ನನ್ನ ಹತ್ತಿರ ಯಾರೂ ಹಾಗೆ ಪ್ರವರ್ತಿಸಲಿಲ್ಲ. ಮಾಮೂಲಾಗಿ ಮನುಷ್ಯರು ಮಾತನಾಡಿದ ಹಾಗೆ ಮಾತನಾಡುವುದು, ಅದೂ ಭಯ ಭಕ್ತಿಗಳಿಂದ ಇರುತ್ತಾರೆ. ನಾವು ದೆವ್ವಗಳಿಗು ಸಹ ಜ್ಞಾನವೆ ಹೇಳಿದ್ದೇವೆ. ಅವರು ಸಹ ಕೇಳಿ, ಜೀವನವನ್ನು ಒಳ್ಳೆಯ ಮಾರ್ಗದಲ್ಲಿ ಕಳೆಯುತ್ತೇವೆಂದು ಹೇಳಿ ಹೋಗಿದ್ದಾರೆ. ನನ್ನ ಜೀವನ ಕಾಲದಲ್ಲಿ ದೆವ್ವಗಳೊಂದಿಗೆ ಅಲ್ಲದೆ ಸ್ವಲ್ಪ ಜನ ದೇವತೆಗಳೊಂದಿಗೆ, ದೊಡ್ಡ ಶಕ್ತಿಗಳೊಂದಿಗೆ ಮಾತನಾಡಲಾಗಿದೆ. ನಂತರ ಅವುಗಳೆಲ್ಲವನ್ನು ವಿವರಿಸುತ್ತೇನೆ. ಈಗ ಎಲ್ಲರಿಗು ಬರುವ ಪ್ರಶ್ನೆಗಳನ್ನು ವ್ಯಕ್ತಿಪಡಿಸಿ ಅವುಗಳಿಗೆ ಉತ್ತರವನ್ನು ಬರೆಯುತ್ತೇನೆ ನೋಡಿರಿ.

**ಪ್ರಶ್ನೆ :–** ಒಬ್ಬ ಮನುಷ್ಯನ ಶರೀರದೊಳಗೆ ಮತ್ತೊಬ್ಬ ಮನುಷ್ಯನ ದೆವ್ವ ಪ್ರವೇಶಿಸಿ ಮಾತನಾಡುವಾಗ ಮೊದಲನೆ ಮನುಷ್ಯ ಏನಾಗಿರುತ್ತಾನೆ? ಅವನ ಪರಿಸ್ಥಿತಿ ಏನು?

**ಉತ್ತರ :–** ಈ ವಿಷಯ ತಿಳಿಯಬೇಕೆಂದರೆ ಸಜೀವ ಶರೀರವನ್ನು ಕುರಿತು ಪೂರ್ತಿಯಾಗಿ ತಿಳಿದಿರಬೇಕು. ಹೊರಗೆ ಕಾಣಿಸುವ ಶರೀರದ ಹತ್ತು ಭಾಗಗಳು ಎಲ್ಲರಿಗು ಗೊತ್ತು. ಕಾಣಿಸದ ಶರೀರದ (ದೆವ್ವದ) ಹದಿನೈದು ಭಾಗಗಳನ್ನು ಕುರಿತು ತಿಳಿದುಕೊಂಡರೆ ಈ ವಿಷಯ ಸುಲಭವಾಗಿ ಅರ್ಥವಾಗುತ್ತದೆ. ಕಾಣಿಸದ ಭಾಗಗಳಲ್ಲಿ ಮುಖ್ಯವಾಗಿ ಮನಸ್ಸು, ಜೀವಿಯು ಶರೀರದಲ್ಲಿ ಎಲ್ಲಿವೆ, ಏನು ಮಾಡುತ್ತಿವೆಯೆಂದು ತಿಳಿದುಕೊಳ್ಳಬೇಕು. ಜೀವಿಯು ತಲೆ ಮಧ್ಯೆ ಭಾಗದಲ್ಲಿರುವ ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳಲ್ಲಿ ಕೆಳಗಿರುವ ಗುಣಚಕ್ರದಲ್ಲಿ ಇದ್ದಾನೆ. ಜೀವಿಯು ಗುಣಚಕ್ರದಲ್ಲಿದ್ದು ಅಲ್ಲಿಗೆ ಬಂದ ವಿಷಯಗಳನ್ನು ತಿಳಿದುಕೊಳ್ಳುವುದು, ಅನುಭವಿಸುವುದು ನಡೆಯುತ್ತಿದೆ. ಜೀವಿಗೆ ತಾನು ಇರುವ ಗುಣಚಕ್ರದವರೆಗು ಬಾರದ ವಿಷಯಗಳು ಯಾವುವು ತಿಳಿಯುವುದಿಲ್ಲ. ಇನ್ನು ಮನಸ್ಸು ವಿಷಯಕ್ಕೆ

ಬಂದರೆ, ಮನಸ್ಸು ಶರೀರದಲ್ಲಿ ಎರಡು ವಿಧಗಳಾಗಿ ವ್ಯಾಪಿಸಿರುತ್ತದೆ. ಒಂದು ವಿಧ ಎಚ್ಚರದಲ್ಲಿ ಶರೀರವೆಲ್ಲಾ ಮನಸ್ಸು ವ್ಯಾಪಿಸಿರುತ್ತದೆ. ಎರಡನೇ ವಿಧ ಶರೀರವೆಲ್ಲಾ ವ್ಯಾಪಿಸಿದ ಮನಸ್ಸು ನಿದ್ರೆಯಲ್ಲಿ ಮುಕಳಿಸಿಕೊಂಡು ಒಂದು ಚಿಕ್ಕ ಉಂಡೆಯಾಗಿ ತಯಾರಾಗಿ ಬ್ರಹ್ಮನಾಡಿಯಲ್ಲಿ ಸೇರಿಹೋಗುವುದು. ಎಚ್ಚರದಲ್ಲಿ ಶರೀರವೆಲ್ಲಾ ವ್ಯಾಪಿಸಿ, ಶರೀರ ಆಕಾರವನ್ನು ಹೋಲಿರುವ ಮನಸ್ಸು ನಿದ್ರೆಯಲ್ಲಿ ಒಂದು ಕಡೆ ಸೇರಿ ದುಂಡಾದ ಉಂಡೆಯಾಗಿ ತಯಾರಾಗುತ್ತಿದೆ. ಮನಸ್ಸು ಸಂಕೋಚ ಹೊಂದುವುದಕ್ಕೆ ಪ್ರಾರಂಭಿಸಿದಾಗ ಕೆಲವರಿಗೆ ಆಕಳಿಕೆಗಳು ಬರುತ್ತವೆ. ಮನಸ್ಸು ಶರೀರದಿಂದ ಮುದುಡಿಕೊಂಡು ಬ್ರಹ್ಮನಾಡಿಯಲ್ಲಿ ಸೇರಿಹೋದಾಗ ಶರೀರದಿಂದ ಜೀವಿಗೆ ಯಾವ ವಿಷಯಗಳು ತಿಳಿದು ಬರುವುದಿಲ್ಲ. ಏಕೆಂದರೆ ಶರೀರದಿಂದ ಬರುವ ಸಮಾಚಾರವನ್ನು ಯಾವುದನ್ನಾದರು ಶರೀರವೆಲ್ಲ ವ್ಯಾಪಿಸಿರುವ ಮನಸ್ಸೆ ಜೀವಿಗೆ ತಿಳಿಸಬೇಕಾಗಿರುತ್ತದೆ. ಮನಸ್ಸು ಶರೀರವೆಲ್ಲ ಇಲ್ಲದಾಗ ಜೀವಿಗೆ ಸಮಾಚಾರವಿರುವುದಿಲ್ಲ.

ಇತ್ತ ಎಚ್ಚರದಲ್ಲಾಗಲಿ, ಅತ್ತ ನಿದ್ರೆಯಲ್ಲಾಗಲಿ ಶರೀರವೆಲ್ಲಾ ಆತ್ಮ ವ್ಯಾಪಿಸಿದ್ದು ಶರೀರವನ್ನು ನಡೆಸುತ್ತದೆ. ನಿದ್ರೆಯಲ್ಲಿ ಜೀವಿಗೆ ಶರೀರದೊಂದಿಗೆ ಸಂಬಂಧ ಕಿತ್ತು ಹೋಗುತ್ತದೆ. ಹಾಗೆ ಮನಸ್ಸಿಗು ಸಹ ಶರೀರ ಸಂಬಂಧವಿಲ್ಲ. ನಿದ್ರೆಯಲ್ಲಿ ಮನಸ್ಸು, ಜೀವಿಯು ಇಬ್ಬರು ವಿಶ್ರಾಂತಿ ತೆಗೆದುಕೊಳ್ಳುತ್ತಾರೆ. ಒಂದು ಆತ್ಮ ಮಾತ್ರ ನಿದ್ರೆಯಲ್ಲಿ, ಎಚ್ಚರದಲ್ಲಿ ಒಂದೇ ಸ್ಥಿತಿಯಲ್ಲಿ ಇದೆ. ಮನಸ್ಸು ಶರೀರವೆಲ್ಲಾ ವ್ಯಾಪಿಸಿ, ಎಚ್ಚರದಲ್ಲಿದ್ದಾಗ ಹೊರಗಿನ ವಿಷಯಗಳನ್ನು ಜೀವಾತ್ಮನ ಹತ್ತಿರಕ್ಕೆ ಸೇರಿಸುವುದು ಮತ್ತು ಅವುಗಳನ್ನು ಜ್ಞಾಪಕದಲ್ಲಿ ಇಟ್ಟುಕೊಳ್ಳುವುದು ನಡೆಯುತ್ತದೆ. ಮನಸ್ಸು ಶರೀರದ ಮೇಲೆ ಇಲ್ಲದಿರುವಾಗ ಶರೀರದಲ್ಲಿನ ವಿಷಯಗಳು ಯಾವುವು ಮನಸ್ಸಿಗೆ ಗೊತ್ತಾಗುವುದಿಲ್ಲ. ಆದ್ದರಿಂದ ನಿದ್ರೆ ಹೋದ ನಂತರ ಶರೀರ ಯಾವಕಡೆ ತಿರುಗಿ ಮಲಗಿಕೊಂಡಿದೆ, ಯಾವ ಪಕ್ಕಕ್ಕೆ ಕದಲಿದೆ ಎಂದು ಸ್ವಲ್ಪವಾದರೂ ಮನಸ್ಸಿನ ಜ್ಞಾಪಕದಲ್ಲಿ ಇರುವುದಿಲ್ಲ. ಹಾಗೆ ಜೀವಿಗು ಸಹ ಏನು ತಿಳಿಯುವುದಿಲ್ಲ. ಈ ವಿಧವಾಗಿ ಒಂದು ಶರೀರದಲ್ಲಿನ ನಿದ್ರೆ, ಎಚ್ಚರಗಳ ವಿಧಾನವಿದೆ.

ಒಬ್ಬ ಮನುಷ್ಯ ನಿದ್ರೆ ಹೋಗುತ್ತಿರುವಾಗ ಅದರೊಳಗಿನ ಜೀವಿಗು, ಮನಸ್ಸಿಗೂ ಆ ಶರೀರದೊಂದಿಗೆ ಸಂಬಂಧವಿರುವುದಿಲ್ಲ. ಆದರೆ ಆ ಸಮಯದಲ್ಲಿ ಆ ಶರೀರ ಯಾವ ಜೀವಿಗಾಗಲಿ, ಯಾವ ಮನಸ್ಸಿಗಾಗಲಿ ಉಪಯೋಗ ಪಡಬಹುದು. ಈ ಸೂತ್ರದ ಪ್ರಕಾರ ಒಂದು ಶರೀರದೊಳಗಿನ ಮನಸ್ಸನ್ನು ನಿದ್ರೆಯೊಳಗೆ ತಳ್ಳಿ, ಮತ್ತೊಂದು ಜೀವಿಯ ಮನಸ್ಸು ಶರೀರವನ್ನು ಆಕ್ರಮಿಸಿ ಕೊಳ್ಳುವುದನ್ನು **'ಮೈದುಂಬುವುದು'** ಇಲ್ಲವೆ **'ಆವರಿಸಿರುವುದು'** ಎನ್ನುತ್ತೇವೆ. ಈಗ ಮೇಲೆ ಕೇಳಿದ ಪ್ರಶ್ನೆಗೆ ಸುಮಾರಾಗಿ ಉತ್ತರ ಬಂದಹಾಗೆ. ಒಂದು ಶರೀರದೊಳಗೆ ದೆವ್ವ ಸೇರಿದರೆ, ಆ ಮನುಷ್ಯನಲ್ಲಿರುವ ಮನಸ್ಸು ನಿದ್ರೆಯೊಳಗೆ, ಜೀವಿಯು ವಿಶ್ರಾಂತಿಯೊಳಗೆ ಹೋಗುತ್ತಿದ್ದಾನೆ. ಶರೀರದ ಮೇಲೆ ದೆವ್ವ ಇರುವವರೆಗು, ಆ ಜೀವಿಗೆ ಏನು ತಿಳಿಯುವುದಿಲ್ಲ. ದೆವ್ವ ಇರುವಾಗ ಏನು ಮಾತನಾಡಿರುವುದು, ಏನು ಮಾಡಿರುವುದು ಗೊತ್ತಾಗುವುದಿಲ್ಲ. ಆದ್ದರಿಂದ ದೆವ್ವ ಬಿಟ್ಟು ಹೋದ ನಂತರ ಅಲ್ಲಿ ಗುಂಪಾಗಿ ಸೇರಿದ ಮನುಷ್ಯರನ್ನು ನೋಡಿ ಏನು ನಡೆದಿದೆಯೆಂದು, ದೆವ್ವ ಬಿಟ್ಟ ಮನುಷ್ಯ ಕೇಳುತ್ತಿದ್ದಾನೆ.

**ಪ್ರಶ್ನೆ** :– ಒಬ್ಬ ಮನುಷ್ಯನ ಶರೀರದೊಳಗೆ ದೆವ್ವ ಸೇರಿ ಒಳಗೆ ಇದ್ದು ಯಾವಾಗಲಾದರು ಶರೀರದ ಮೇಲೆ ಬಂದು ಮಾತನಾಡುತ್ತದೆಂದು ತಿಳಿಸಿದ್ದೀರ ಯಾಡಿಕಿಯಲ್ಲಿ ಕುಂಟ ದೆವ್ವ ಹುಡುಗಿಯ ಶರೀರದೊಳಗೆ ಸೇರಿ ಶರೀರದೊಳಗೆ ಇದ್ದೂ ಯುವತಿಯನ್ನು ಅನಾರೋಗ್ಯ ಪಾಲು ಮಾಡಿದೆಯೆಂದು, ಎಲ್ಲಿಯೂ ಹೊರಗಡೆ ಬರಲಿಲ್ಲವೆಂದು ನಿಮ್ಮ ಮುಂದೆ ಹೊರಗೆ ಬಂದಿದೆಯೆಂದು ಹೇಳಿದ್ದೀರ. ಹಾಗೆ ಶರೀರದೊಳಗೆ ಹೇಗೆ ಇದೆ? ಎಲ್ಲಿ ಇದೆ? ವಿವರವಾಗಿ ಹೇಳಿರಿ.

ಉತ್ತರ :– ದೆವ್ವಗಳು (ಸೂಕ್ಷ್ಮ ಶರೀರಗಳು) ಒಂದು ಬಾರಿ ಶರೀರದಲ್ಲಿ ಸೇರಿ ಒಳಗೆ ಇದ್ದು, ಆಗಾಗ ಅಥವಾ ಯಾವಾಗಲಾದರೂ ಮೇಲಕ್ಕೆ ಬಂದು ಮಾತನಾಡುವವು ಒಂದು ವಿಧವಾಗಿದ್ದರೆ, ಕೆಲವು ಅವಶ್ಯ ಬಂದಾಗ ಮಾತ್ರ ಶರೀರದೊಳಗೆ ಸೇರಿ, ಹೊರಗೆ ಬಂದು ಮಾತನಾಡುವವು ಇವೆ. ಇನ್ನು

ಮೂರನೆ ವಿಧ ಹೇಗಿರುತ್ತವೆಂದರೆ! ಶರೀರದೊಳಗೆ ಸೇರಿದ ದೆವ್ವ ಆಗಾಗ ಶರೀರದ ಮೇಲೆ ಬರುತ್ತಾ ಹೋಗುತ್ತಾ, ಯಾವುದೊ ಒಂದು ಬಾರಿ ಮೇಲಕ್ಕೆ ಬಂದಿರುವುದು ಮತ್ತೆ ಶರೀರದಲ್ಲಿ ಅಡಗಿ ಕೊಳ್ಳುವುದಿಲ್ಲ. ಆ ಶರೀರದಲ್ಲಿ ಮೊದಲಿನಿಂದ ಇರುವ ಜೀವಿಯನ್ನು ಶಾಶ್ವತವಾಗಿ ನಿದ್ರೆಯಲ್ಲಿಯೆ ಮುಳುಗಿಸಿ, ತಾನೇ ಶರೀರವನ್ನು ಬಳಸಿಕೊಳ್ಳುತ್ತಾ, ಯಾರಿಗು ಅನುಮಾನ ಬಾರದ ಹಾಗೆ ಶಾಶ್ವತವಾಗಿ ಶರೀರದ ಮೇಲೆಯೆ ಇದ್ದು, ಮೊದಲಿರುವವನ ಹಾಗೆ ನಟಿಸುತ್ತಾ, ಎಲ್ಲರಲ್ಲಿ ಬೆರೆತುಹೋಗುವರು. ಇನ್ನು ನಾಲ್ಕನೆಯ ವಿಧ, ಒಂದು ಸಲ ಶರೀರದೊಳಗೆ ಸೇರಿದ ನಂತರ ಒಂದು ಬಾರಿಯಾದರೂ ಸಹ ಶರೀರದ ಮೇಲೆ ಬಾರದೆ, ಶಾಶ್ವಿತವಾಗಿ ಶರೀರದಲ್ಲೇ ಇರುವವು ಇವೆ. ಕೆಲವು ನೇರವಾಗಿ ಶರೀರದ ಮೇಲೆ ಬಂದು ಮತ್ತೆ ಹೊರಗಡೆ ಹೋಗುತ್ತವೆಂದು ಹೇಳಿದ್ದೇವಲ್ಲ! ಅವು ಶರೀರದಲ್ಲಿ ಇರುವ ಅವಶ್ಯವಿಲ್ಲ. ಇಂತಹ ಒಂದು ವಿಧದ ದೆವ್ವಗಳು ಹೊರತು ಉಳಿದವುಗಳು ಮೊದಲು ಶರೀರದೊಳಗೆ ಸೇರುತ್ತವೆಂದು ಹೇಳಿದ್ದೇವಲ್ಲ! ಹಾಗೆ ಸೇರಿರುವವು ಶರೀರದಲ್ಲಿ ಯಾವುದೊ ಒಂದು ಭಾಗದಲ್ಲಿ ನಿಂತಿರುತ್ತವೆ. ಹಾಗೆ ಶರೀರದಲ್ಲಿ ದೆವ್ವ ಎಲ್ಲಿ ನಿಂತಿರುತ್ತದೊ ಅಲ್ಲಿ ಶರೀರಕ್ಕೆ ನೋವುಬರುತ್ತಿರುತ್ತದೆ, ಇಲ್ಲವೆ ಅಲ್ಲಿನ ಭಾಗ ಅನಾರೋಗ್ಯಕ್ಕೆ ಗುರಿಯಾಗುತ್ತದೆ. ಒಬ್ಬ ವ್ಯಕ್ತಿಯಲ್ಲಿ ಪ್ರವೇಶಿಸಿದ ದೆವ್ವ ಶರೀರದೊಳಗಾಗಲಿ, ಇಲ್ಲವೆ ಶರೀರದ ಮೇಲಾಗಲಿ ಇರಬೇಕಾದ್ದೇ. ಶರೀರದ ಮೇಲಿದ್ದರೆ ಅನಾರೋಗ್ಯ ಇರುವುದಿಲ್ಲ. ಆದರೆ ಶರೀರದೊಳಗೆ ಇರುವಾಗಲೆ ಅನಾರೋಗ್ಯ ಆ ವ್ಯಕ್ತಿಗೆ ಕಾಣಿಸುತ್ತದೆ.

**ಪ್ರಶ್ನೆ :–** ದೆವ್ವಗಳು ಶರೀರದಲ್ಲಿ ನಿವಾಸಿಸಿದರೆ ಅನಾರೋಗ್ಯ ಬರುತ್ತದೆಂದು ಹೇಳಿದ್ದೀರಲ್ಲ! ಎಂತಹ ಅನಾರೋಗ್ಯ ಬರುತ್ತದೆ? ಅದು ಯಾವ ರೋಗವಾಗಿ ಯಾದರೂ ಕಾಣಿಸುತ್ತದಾ?

**ಉತ್ತರ :–** ದೆವ್ವ ಶರೀರದಲ್ಲಿ ಇರುವಾಗ ಬರುವ ಅನಾರೋಗ್ಯಗಳು ಅನೇಕ ವಿಧಗಳಾಗಿ ಇರುತ್ತವೆ. ಒಂದು ವಿಧದ ಅನಾರೋಗ್ಯ ಅಂದರೇನೆ ಒಂದು ವಿಧದ ರೋಗವೆಂದು ಅರ್ಥ. ಆದ್ದರಿಂದ ದೆವ್ವಗಳಿಂದ ಬರುವ ಅನಾರೋಗ್ಯಗಳು

ಅನೇಕ ರೋಗಗಳ ರೂಪದಲ್ಲಿ ಇರುತ್ತವೆ. **ಮನುಷ್ಯನಿಗೆ ಒಂದು ರೋಗ ಇದೆಯೆಂದರೆ ಅದು ದೆವ್ವದಿಂದಲಾದರು ಆಗಿರಬಹುದು ಅಥವಾ ಶರೀರದವೊಂದು ಲೋಪದಿಂದಾದರೂ ಆಗಬಹುದು.** ಪಾರ್ಶ್ವವಾಯುಗಳು ಅಥವಾ ಪಕ್ಷಪಾತ ವಾಯುಗಳು ನೂರಕ್ಕೆ ಎಪ್ಪತ್ತು ರಷ್ಟು ದೆವ್ವಗಳಿಂದ ಬರುತ್ತವೆ. ಹೊಟ್ಟೆನೋವು ನೂರಕ್ಕೆ ಐವತ್ತು ಭಾಗ ಸೂಕ್ಷ್ಮ ಶರೀರಗಳಿಂದಲೆ ಬರುತ್ತಿವೆ. ಹೀಗೆ ಅನೇಕ ವಿಧಗಳ ರೋಗಗಳು ಅನೇಕ ಭಾಗಗಳಾಗಿ ದೆವ್ವಗಳಿಂದಲೆ ಬರುತ್ತವೆ.

**ಪ್ರಶ್ನೆ** :- ದೆವ್ವಗಳಿಂದ ಬರುವ ರೋಗಗಳು ಗುಣವಾಗುತ್ತವೆಯೆ?

**ಉತ್ತರ** :- ದೆವ್ವಗಳಿಂದ ಬರುವ ಯಾವ ರೋಗವಾದರೂ, ಯಾವ ನೋವಾದರು ಔಷಧಗಳಿಂದ ಹೋಗುವುದಿಲ್ಲ. ಅವುಗಳಿಂದ ಬರುವ ರೋಗಗಳು ಯಾವುವೊ ಕೆಲವು ಮಾತ್ರ ಮಂತ್ರಗಳಿಗೆ, ಅಂತ್ರಗಳಿಗೆ ಹೋಗುತ್ತವೆ. ಬಹಳ ರೋಗಗಳು ಅಂತ್ರ, ಮಂತ್ರಗಳಿಗು ಸಹ ಹೋಗುವುದಿಲ್ಲ. ಅಂತಹ ರೋಗಗಳು ದೈವಜ್ಞಾನದಿಂದಲೆ ಹೋಗುತ್ತವೆ. ದೈವಜ್ಞಾನ ಇಲ್ಲದವರಿಗೆ ಮರಣ ತಪ್ಪುವುದಿಲ್ಲ.

**ಪ್ರಶ್ನೆ** :- ದೆವ್ವಗಳು ಯಾರಲ್ಲಾದರು ಸೇರುತ್ತವಾ? ಅಥವಾ ಕೆಲವರಲ್ಲಿ ಮಾತ್ರ ಸೇರುತ್ತವಾ?

**ಉತ್ತರ** :- ದೆವ್ವಗಳು ಎಲ್ಲರೊಳಗೆ ಸೇರುವುದಿಲ್ಲ. ದೈವಜ್ಞಾನವಿರುವವರಲ್ಲಿ ಅಸಲಿಗೆ ಸೇರುವುದಿಲ್ಲ. ದೈವಜ್ಞಾನ ಇಲ್ಲದವರಲ್ಲಿಯು ಸಹ ಕೆಲವರಲ್ಲಿ ಮಾತ್ರ ಸೇರುತ್ತವೆ. ಯಾವನ ಜಾತಕದಲ್ಲಿ ಬುಧಗ್ರಹ ವಿರುದ್ಧವಾಗಿ, ಅವನ ಆರನೆ ಸ್ಥಾನದಲ್ಲಿ ಇದ್ದರೂ ಅಥವಾ ಆರನೇ ಸ್ಥಾನವನ್ನು ನೋಡಿದರೂ ಅವನಿಗೆ ದೆವ್ವಗಳ ಕಾಟ ಜೀವನದಲ್ಲಿ ತಪ್ಪುವುದಿಲ್ಲವೆಂದು ಹೇಳಬಹುದು. ಇನ್ನು ದೈವಜ್ಞಾನ ಇಲ್ಲದಿದ್ದರೂ ಅವನಿಗೆ ಬುಧಗ್ರಹ ಅನುಕೂಲವಾಗಿ ಇರುವಾಗ ಅವನಿಗೆ ದೆವ್ವಗಳ ಪೀಡೆ ಇರುವುದಿಲ್ಲ.

**ಪ್ರಶ್ನೆ** :- ದೆವ್ವದಿಂದ ಬರುವ ರೋಗ ಹೆಚ್ಚುತ್ತಾ ಹೋಗಿ ಮರಣ ಸಹ ಬರಬಹುದಾ?

**ಉತ್ತರ :-** ಸತ್ತುಹೋದವರು ಬಹಳ ಜನ ಇದ್ದಾರೆ. ಕೆಲವು ದೆವ್ವಗಳು ಇಂತದ್ದೆ ದಿನ ಸಾಯಿಸುತ್ತೇನೆಂದು ಹೇಳಿ, ಸಾಯಿಸಿರುವವಗಳು ಸಹ ಇವೆ.

**ಪ್ರಶ್ನೆ:-** ದೆವ್ವದಿಂದ ಬಂದಿರುವ ರೋಗವನ್ನು ಡಾಕ್ಟರುಗಳು ಇದು ಇಂತದ್ದೆ ಎಂದು ಹೇಳುವುದಿಲ್ಲವೆ?

**ಉತ್ತರ :-** ಡಾಕ್ಟರುಗಳು ರೋಗದ ಹೆಸರು ಹೇಳಬಹುದು. ಆದರೆ ಹೇಗೆ ಬಂದಿದೆಯೆಂದು ಹೇಳಲಾಗುವುದಿಲ್ಲ. ತಮ್ಮ ಔಷಧಗಳು ಏಕೆ ಕೆಲಸಮಾಡುವುದಿಲ್ಲವೆಂದು ಸಹ ಹೇಳಲಾರರು. ಡಾಕ್ಟರುಗಳಿಗೆ ಅರ್ಥವಾಗದ ಹೊಸ ರೋಗಗಳನ್ನು ಸಹ ಮತ್ತೊಂದು ಜಾತಿಯ ದೆವ್ವಗಳು ಮನುಷ್ಯರಿಗೆ ಬರುವಹಾಗೆ ಮಾಡಬಲ್ಲವು. ಆಗಿರುವಾಗ ಒಂದು ದೈವಜ್ಞಾನವಲ್ಲದೆ ಆ ರೋಗಗಳಿಗೆ ಔಷಧವೆ ಇಲ್ಲ. ಎಲ್ಲಾ ಚೆನ್ನಾಗಿರುವಾಗ ಜ್ಞಾನದಿಂದ ನನಗೇನು ಅವಶ್ಯವೆಂದು ಅಂದುಕೊಳ್ಳುವವರನ್ನು ದೆವ್ವಗಳು ಭಯಂಕರವಾಗಿ ತಮ್ಮ ರೋಗಗಳಿಂದ ಸಾಯಿಸುತ್ತವೆ.

**ಪ್ರಶ್ನೆ :-** ದೆವ್ವಗಳಲ್ಲಿ ಜಾತಿಗಳಿವೆಯೆ?

**ಉತ್ತರ :-** ಮನುಷ್ಯರು ಮತ್ತು ಇತರೆ ಜೀವರಾಶಿಗಳಿಂದ ಅಕಾಲಮರಣದಿಂದ ತಯಾರಾದ ದೆವ್ವಗಳೆಲ್ಲ ಒಂದು ಜಾತಿಕೆಳಗೆ ಬರುತ್ತವೆ. ಮನುಷ್ಯರು ಆರಾಧಿಸುವ ದೇವತೆಗಳೆಲ್ಲರು ಮತ್ತೊಂದು ಜಾತಿ ದೆವ್ವಗಳಾಗಿವೆ. ಈ ಕಡೆ ಜೀವರಾಶಿಗಳು, ದೇವತೆಗಳೇ ಅಲ್ಲದೆ, ಮಹಾಭೂತಗಳೆನ್ನುವವು ಸಹ ಒಂದು ಜಾತಿಗೆ ಸೇರಿರುವವುಗಳೆಂದು ಹೇಳಬಹುದು. ಜೀವರಾಶಿಗಳ ದೆವ್ವಗಳ ಶಕ್ತಿ ಪರಿಮಿತಿಯಾದರೆ, ದೇವತೆಗಳೆನ್ನುವ ದೆವ್ವಗಳ ಶಕ್ತಿ ಬಹಳ ದೊಡ್ಡದು. ಇನ್ನು ಮಹಾಭೂತಗಳೆನ್ನುವವುಗಳ ಶಕ್ತಿ ಅಪರಿಮಿತ ಅಪಾರವಾದದ್ದು.

ಇಲ್ಲಿಯವರೆಗೆ ಹೇಳಿದ ಉತ್ತರಗಳಿಗೆ ತಕ್ಕ ವಿಧದಲ್ಲಿ ಮೂರು ವಿದಧ ಜಾತಿಗಳಿಂದ ನಡೆದ ನೈಜ ಸಂಘಟನೆಗಳನ್ನು ವಿವರಿಸುತ್ತೇವೆ ನೋಡಿರಿ. ಇಲ್ಲಿ ಹೇಳುವ ಸಂಘಟನೆಗಳೆಲ್ಲ ನನಗೆ ಪ್ರತ್ಯಕ್ಷವಾಗಿ ತಿಳಿದಿರುವಂತವುಗಳೆ. ಯಾರೊ

ಹೇಳಿದರೆ ಬರೆದಿರುವವುಗಳಲ್ಲ. ನಡೆದ ಸಂಘಟನೆಯ ಪೂರ್ತಿ ವಿವರ ನನಗೆ ತಿಳಿದರೂ, ಕೆಲವು ಕಡೆ ಪ್ರಾಂತಗಳ ಹೆಸರುಗಳು, ಊರ ಹೆಸರುಗಳು ಬರೆದು, ವ್ಯಕ್ತಿಗಳ ಹೆಸರು ಬರೆದಿಲ್ಲ. ಹೆಸರುಗಳು ಬರೆಯುವುದರಿಂದ ಆ ವ್ಯಕ್ತಿಗಳಿಗೆ ಗೌರವ ಲೋಪ ಏರ್ಪಡುತ್ತದೆಂದು ನಾವು ಬರೆದಿಲ್ಲವೆಂದು ಮೊದಲೇ ತಿಳಿಸುತ್ತಿದ್ದೇವೆ. **ಈಗ ತಿಳಿಸುವ ಸಂಘಟನೆ ಒಂದು ದೆವ್ವ ತನ್ನ ದ್ವೇಷ ಸಾಧಿಸುವುದಕ್ಕೆ ಮಾಸಿಹೋಗದ ಗುರುತಾಗಿ ಇದೆ.** ಇದು ಒಂದು ಆಸಕ್ತಿಯಿರುವ ಕಥೆಯಂತೆ ಇರುತ್ತದೆ ನೋಡಿರಿ.

1978 ನೇ ವರ್ಷದಲ್ಲಿ ನಾನೊಂದು ಪ್ರವೇಟು ಡಾಕ್ಟರಾಗಿ ಕಾಲಕಳೆಯುತ್ತಿದ್ದೆನು. ಆಗ ಆ ಕೆಲಸ ಮಾಡುತ್ತಿರುವುದು ಬದುಕುವುದಕ್ಕಾಗಿ ಅಲ್ಲ. ಬರುವ ರೋಗಿಗಳಲ್ಲಿ ಎಷ್ಟು ಜನರಿಗೆ ಶರೀರದಲ್ಲಿ ಸಹಜವಾಗಿ ಬಂದಿರುವ ರೋಗಗಳಿವೆ. ಎಷ್ಟು ಜನರಿಗೆ ದೆವ್ವಗಳಿಂದ ಬಂದಿರುವ ರೋಗಗಳಿವೆ? ಎಂದು ತಿಳಿದುಕೊಳ್ಳುವ ನಿಮಿತ್ತವಾಗಿ ಕೆಲಸ ಮಾಡುತ್ತಿದ್ದೆನು. ಸಹಜವಾಗಿ ಬಂದಿರುವ ರೋಗಗಳನ್ನಾದರು ರೋಗಿಗೆ ಖರ್ಚು ಇಲ್ಲದೆ ಸುಲಭವಾಗಿ ರೋಗ ಹೋಗುವ ವಿಧಾನವನ್ನು ಶೋಧಿಸುತ್ತಿದ್ದೆನು. ಅಂತಹ ಸಮಯದಲ್ಲಿ ನಮ್ಮ ಮನೆಯ ಹಿಂದೆ ಗಿಡದ ಕೆಳಗೆ 70 ಸಂವತ್ಸರಗಳ ಒಬ್ಬ ವೃದ್ಧಾಪ್ಯ ವಯಸ್ಸಿನ ವ್ಯಕ್ತಿ ಚಿಕ್ಕ ಮಕ್ಕಳಿಗೆ ಪ್ರವೇಟಾಗಿ ಓದಿಸುತ್ತ ತಿಂಗಳಿಗೆ ಅವರು ಕೊಡುವ ಸ್ವಲ್ಪ ಹಣದಲ್ಲಿಯೆ ಕಾಲ ಕಳೆಯುತ್ತಿದ್ದನು. ವಾಸ್ತವಕ್ಕೆ ಆತನದ್ದು ದಯನೀಯಸ್ಥಿತಿ. 30 ಜನ ಮಕ್ಕಳು ಒಬ್ಬೊಬ್ಬರು ಐದು ರೂಪಾಯಿಗಳನ್ನು ಕೊಟ್ಟರೂ ತಿಂಗಳಿಗೆ 150 ರೂಪಾಯಿಗಳೆ ಆತನ ಆದಾಯ. ಈಗಿನ ಕಾಲದೊಂದಿಗೆ ಲೆಕ್ಕಹಾಕಿದರೂ 450 ರೂಪಾಯಿಗಳ ಬೆಲೆಯೆ ಆಗುತ್ತದೆ. ಎರಡು ಇಲ್ಲವೆ ಮೂರು ದಿನಗಳಿಗೊಂದು ಬಾರಿ ಆತನ ಮಗ ಬಂದು ಹತ್ತು ಪೈಸೆಯೊ, ನಾಲ್ಕಾಣೆಯನ್ನೊ ಕೊಟ್ಟರೆ ತೆಗೆದುಕೊಂಡು ಹೋಗುತ್ತಿದ್ದನು. ಮಗ ಅಂದರೆ ಚಿಕ್ಕವನಲ್ಲ. ಸುಮಾರು 30 ಸಂವತ್ಸರಗಳ ವಯಸ್ಸಿರುವವನು. ಆ ವಯಸ್ಸಿನವನು ವಯಸ್ಸಾದ ಅಪ್ಪನಿಗೆ ಹಣಕೊಡಬೇಕು, ಆದರೆ ತಂದೆಯ ಹತ್ತಿರವೆ ಹಣ ತೆಗೆದುಕೊಳ್ಳುವುದೇನೆಂದು

ಅಂದುಕೊಳ್ಳಬಹುದು. ಆದರೆ ಆತನ ಪರಿಸ್ಥಿತಿ ಅಂತದ್ದು. ಆತನಿಗೆ ಬಲಗಾಲು, ಬಲಗೈ ಪಾರ್ಶ್ವವಾಯುವಿನಿಂದ ಬಿದ್ದು ಹೋಗಿವೆ, ಬಾಯಿ ಸಹ ಹಾಗೆ ಸೊಟ್ಟಾಗಿದ್ದು ಮಾತು ಸರಿಯಾಗಿ ಬರುವುದಿಲ್ಲ. ಅತಿ ಕಷ್ಟದಿಂದ ನಡೆಯುತ್ತಾ ಆಗಾಗ ತಂದೆಯ ಹತ್ತಿರಕ್ಕೆ ಕುಂಟುತ್ತಾ ಬರುತ್ತಿದ್ದನು.

ಆತನ ಪರಿಸ್ಥಿತಿಯನ್ನು ನೋಡಿದ ನಾನು, ಮೂಲಿಕಾ ಔಷಧವನ್ನು ಉಪಯೋಗಿಸಿ ಆತನ ಕಾಲು, ಕೈಯನ್ನು ಸ್ವಲ್ಪಮಟ್ಟಿಗಾದರೂ ಗುಣಪಡಿಸಬೇಕೆಂದುಕೊಂಡೆನು. ಆತನನ್ನು ಕರೆದು ನಿನಗೆ ನಾವು ಅನ್ನವನ್ನು ಇಡುತ್ತೇವೆ, ವೈದ್ಯವನ್ನು ಸಹ ಮಾಡುತ್ತೇನೆ ಇಲ್ಲೆ ಇರು ಎಂದು ಹೇಳಿ, ಕೊಳೆಯಾದ ಬಟ್ಟೆಗಳನ್ನು ತೆಗಿಸಿ ಹೊಸ ಬಟ್ಟೆಗಳನ್ನು ಕೊಟ್ಟೆವು. ತಲೆಯನ್ನು ಗುಂಡುಮಾಡಿಸಿ ಶುಭ್ರವಾಗಿ ಇರುವ ಹಾಗೆ ಮಾಡಿ, ಔಷಧವನ್ನು ಕೊಟ್ಟು ತಿನ್ನಲು ಹೇಳಿದೆವು. ಕೊಟ್ಟ ಔಷಧಕ್ಕೆ ಹತ್ತು ದಿನಗಳಿಗೆ ಸುಮಾರು ಅರ್ಧ ಬದಲಾವಣೆ ಕಾಣಿಸಬೇಕು. ಆದರೆ ಸ್ವಲ್ಪ ಬದಲಾವಣೆಯು ಸಹ ಕಾಣಿಸಲಿಲ್ಲ. ಆದ್ದರಿಂದ ಆತನನ್ನು ಪ್ರತ್ಯೇಕವಾಗಿ ನೋಡಬೇಕೆಂದುಕೊಂಡೆನು. ಒಂದು ದಿನ ಬೆಳಗ್ಗೆ 9 ಗಂಟೆಗೆ ನನ್ನ ಮುಂದೆ ಕುಳಿತುಕೊ ಎಂದೆನು. ಆತನ ಕಡೆ ಗಮನವಹಿಸಿ ನೋಡಿದೆನು. ಹಾಗೆ ನೋಡುತ್ತಿರುವಾಗ ಚಲನೆಯಿಲ್ಲದ ಆತನ ಬಲಗೈ ಅದಷ್ಟಕ್ಕದೆ ಮೇಲಕ್ಕೆ ಏಳಲಾರಂಭಿಸಿತು. ಬಲಗೈಯನ್ನು ಆತನು ಭುಜದವರೆಗು ಎತ್ತಿದನು. ಆಗ ನೀನು ಸ್ವಂತವಾಗಿ ಎತ್ತುತ್ತೀಯ ಎಂದು ಕೇಳಿದೆನು. ಇಲ್ಲ ಅದೇ ಮೇಲೇಳುತ್ತದೆಂದು ಆತನು ಹೇಳಿದನು. ಆಗ ಆತನ ಶರೀರದಲ್ಲಿ ಬೇರೆ ಯಾರೊ ಇದ್ದ ಹಾಗೆ ನನಗೆ ಅರ್ಥವಾಯಿತು. ಆಗ ಒಳಗಿರುವ ವ್ಯಕ್ತಿ ಹೊರಗೆ ಬಂದು ನನ್ನೊಂದಿಗೆ ಮಾತನಾಡೆಂದು ಹೇಳಿದೆನು. ತಕ್ಷಣವೆ ಒಳಗಿರುವವನು ಶರೀರದ ಮೇಲೆ ಬಂದು ಮಾತನಾಡಿದನು. ಆಗ ಶರೀರದ ಮೇಲೆ ಬಂದಿರುವ ಆತನು ಹೇಳಿದ ಮಾತುಗಳನ್ನು ಅನುಸರಿಸಿ ನೋಡಿದರೆ ನನಗೆ ತಿಳಿದ ಸಮಾಚಾರ ಈ ರೀತಿ ಇದೆ.

ಕಡಪ ಜಿಲ್ಲೆ ಮಡೂರು ಎನ್ನುವ ಊರಿನಲ್ಲಿ ವಿಶ್ವ ಬ್ರಾಹ್ಮಣ (ಬಡಗಿ) ಕುಲಕ್ಕೆ ಸೇರಿದ ಒಂದು ಕುಟುಂಬವಿತ್ತು. ಆಗಿನ ಕಾಲದಲ್ಲಿ ಆ ಊರು

ಎತ್ತಿನಗಾಡಿಗಳನ್ನು ಮಾಡುವುದರಲ್ಲಿ ಪ್ರಸಿದ್ಧಿ. ಅವರು ಬಡಗಿಯವರೆ ಆಗಿರುವುದರಿಂದ ಮರದ ಕೆಲಸ ಮಾಡುವುದರಲ್ಲಿ ಪ್ರಾವೀಣ್ಯತೆ ಹೊಂದಿ ಚೆನ್ನಾಗಿಯೆ ಬದುಕುತ್ತಿದ್ದರು. ಆ ಕುಟುಂಬದಲ್ಲಿ ತಾಯಿ ತಂದೆ 16 ವರ್ಷಗಳ ಮಗ ಇರುತ್ತಿದ್ದರು. ಮಗನ ಹೆಸರು ರಾಮಾಚಾರಿ, ತಂದೆಯ ಹೆಸರು ನಾರಾಯಣಾಚಾರಿ. ಮಗ ರಾಮಾಚಾರಿ ಗಾಡಿಗಳ ಕೆಲಸ ಮಾಡುತ್ತಾ ಚೆನ್ನಾಗಿ ಸಂಪಾದಿಸುತ್ತಿದ್ದನು. ರಾಮಾಚಾರಿಗೆ ಬಾಲ್ಯದಿಂದ ಒಬ್ಬ ಸ್ನೇಹಿತನು ಇರುತ್ತಿದ್ದನು. ಆತನ ಹೆಸರು ಪ್ರಭುದಾಸ್, ಆತನು ಹರಿಜನ. ಆತನು ಕ್ರೈಸ್ತ ಮತಕ್ಕೆ ಸೇರಿ ಪ್ರಭುದಾಸ್‌ನಾಗಿ ಹೆಸರು ಬದಲಾಯಿಸಿಕೊಂಡಿದ್ದನು. ರಾಮಾಚಾರಿ ಸಹ ಸ್ನೇಹಿತನ ಮಾತುಗಳನ್ನು ಕೇಳಿ ಕ್ರೈಸ್ತ ಮತವನ್ನು ಸ್ವೀಕರಿಸಿದ್ದಾನೆ. ಇವರಿಬ್ಬರು ಬಾಲ್ಯ ಸ್ನೇಹಿತರಾಗಿರುವುದರಿಂದ ಯುಕ್ತ ವಯಸ್ಸಿನಲ್ಲಿಯು ಸಹ ಅವರ ಸ್ನೇಹ ಚೆನ್ನಾಗಿ ಮುಂದುವರೆಯುತ್ತಿತ್ತು. ಇತ್ತ ರಾಮಾಚಾರಿ, ಅತ್ತ ಪ್ರಭುದಾಸ್ ಇಬ್ಬರಿಗೂ ಮದುವೆ ಆಗಲಿಲ್ಲ. ಹೀಗಿರುವಾಗ ಇಬ್ಬರಲ್ಲಿ ಮೊದಲು ಪ್ರಭುದಾಸ್‌ಗೆ ಮದುವೆ ನಿಶ್ಚಯವಾಯಿತು. ಪ್ರಭುದಾಸ್‌ಗೆ ಮದುವೆಯಾಗಿ ಒಂದು ವರ್ಷ ಕಳೆಯಿತು. ರಾಮಾಚಾರಿ ಆಗಾಗ ಪ್ರಭುದಾಸ್ ಮನೆಗೆ ಹೋಗಿ ಸ್ನೇಹಿತನೊಂದಿಗೆ ಕಾಲಕಳೆದು ಬರುತ್ತಿದ್ದನು. ಆಗಿರುವ ಸಮಯದಲ್ಲಿ ರಾಮಾಚಾರಿಗೆ ಪ್ರಭುದಾಸ್ ಹೆಂಡತಿಯೊಂದಿಗೆ ಅಕ್ರಮ ಸಂಬಂಧ ಏರ್ಪಟ್ಟಿತು. ಒಂದು ದಿನ ಪ್ರಭುದಾಸ್ ಮನೆಯಲ್ಲಿ ಇಲ್ಲದ ಸಮಯದಲ್ಲಿ ರಾಮಾಚಾರಿ ಪ್ರಭುದಾಸ್ ಹೆಂಡತಿ ಯೊಂದಿಗೆ ಹಾಸಿಗೆಯಲ್ಲಿ ಇರುವುದನ್ನು ಆಗಲೆ ಹೊರಗಿನಿಂದ ಬಂದ ಪ್ರಭುದಾಸ್ ನೋಡಿದನು. ಪ್ರಭುದಾಸ್ ನೋಡಿದ ವಿಷಯ ಪ್ರಭುದಾಸ್ ಹೆಂಡತಿಗಾಗಲಿ, ರಾಮಾಚಾರಿಗಾಗಲಿ ಗೊತ್ತಿಲ್ಲ. ತನಗೆ ಮುಖ್ಯವಾದ ಬಾಲ್ಯ ಸ್ನೇಹಿತನು, ತನ್ನ ಹೆಂಡತಿಯೊಂದಿಗೆ ಅಕ್ರಮ ಸಂಬಂಧ ಏರ್ಪಡಿಸಿಕೊಂಡಿರುವುದು ಪ್ರಭುದಾಸ್‌ಗೆ ಒಂದು ಷಾಕ್ ತಗುಲಿದಂತಾಗಿದೆ. ಅದಕ್ಕೆ ಸಹಿಸಿಕೊಳ್ಳಲಾಗದೆ ಅದೇ ದಿನ ಪ್ರಭುದಾಸ್ ಬಾವಿಯಲ್ಲಿ ಬಿದ್ದು ಸತ್ತುಹೋದನು. ಪ್ರಭುದಾಸ್ ಏಕೆ ಸತ್ತುಹೋಗಿದ್ದಾನೆನ್ನುವುದು ಸಹ ರಾಮಾಚಾರಿಗೆ ತಿಳಿಯದು

ಪ್ರಭುದಾಸ್ ಸತ್ತುಹೋದ ನಂತರ ಆರು ತಿಂಗಳಿಗೆ ರಾಮಾಚಾರಿಗೆ ಮದುವೆ ಆಗಿದೆ. ಮದುವೆಯಾದ ಆರು ತಿಂಗಳಿಗೆ ರಾಮಾಚಾರಿ ಆ ಊರು ಬಿಟ್ಟು ಕುಟುಂಬದೊಂದಿಗೆ ಸಹ ಅನಂತಪುರ ಜಿಲ್ಲೆ ತಾಡಿಪತ್ರಿಗೆ ಸೇರಿದನು. ತಾಡಿಪತ್ರಿಯಲ್ಲಿ ಬಡಗಿ ಕೆಲಸ ಮಾಡುತ್ತ ಹಣವನ್ನು ಸಂಪಾದಿಸಲು ಪ್ರಾರಂಭಿಸಿದನು. ರಾಮಾಚಾರಿ ಎಲ್ಲ ವಿಧಗಳಲ್ಲಿ ಸುಖವಾಗಿ ಕಾಲ ಕಳೆಯುತ್ತಿದ್ದಾನೆ. ತಾಡಿಪತ್ರಿಯನ್ನು ಸೇರಿದ ನಂತರ ಒಂದು ವರ್ಷಕ್ಕೆ ರಾಮಾಚಾರಿ ಒಂದು ದಿನ ತನ್ನ ಸ್ವಂತ ಊರಿಗೆ ಕುಟುಂಬ ಸಮೇತವಾಗಿ ಹೋಗಿದ್ದಾನೆ. ಅಲ್ಲಿಗೆ ಪ್ರಭುದಾಸ್ ಸತ್ತುಹೋಗಿ ಎರಡು ವರ್ಷಗಳಾಗಿವೆ. ಪ್ರಭುದಾಸ್ ಕಾಲಮರಣವಲ್ಲದೆ ಅಕಾಲಮರಣ ಹೊಂದಿದ್ದಾನೆ, ಆದ್ದರಿಂದ ಆತನು ಸೂಕ್ಷ್ಮ ಶರೀರದೊಂದಿಗೆ ಜೀವಿಸಿಯೆ ಇದ್ದಾನೆ. ಇತ್ತ ಸ್ಥೂಲ ಶರೀರವನ್ನು, ಅತ್ತ ಹೆಂಡತಿಯನ್ನು ಕಳೆದುಕೊಂಡ ಪ್ರಭುದಾಸ್ ಹೆಂಡತಿಯೊಂದಿಗೆ ಬಂದಿರುವ ರಾಮಾಚಾರಿಯನ್ನು ನೋಡಿದನು. ಸ್ನೇಹಿತನು ಮಾಡಿದ ದ್ರೋಹದಿಂದಲೇ ನಾನು ಹೀಗೆ ಎಲ್ಲ ವಿಧಗಳಲ್ಲಿ ಕೆಟ್ಟು ಹೋಗಿದ್ದೇನೆಂದು ರಾಮಾಚಾರಿ ಮೇಲೆ ಕೋಪ ಬಂದಿದೆ. ರಾಮಾಚಾರಿ ಬಂಗಾರದ ಉಂಗುರಗಳು, ಕತ್ತಿನಲ್ಲಿ ಸರಗಳಿದ್ದು ಹೆಂಡತಿಯೊಂದಿಗೆ ಸಂತೋಷದಿಂದ ಇದ್ದಾನೆ, ನಾನು ಏನೂ ಇಲ್ಲದೆ ಹೋಗಿದ್ದೇನೆ. ಇದಕ್ಕೆಲ್ಲದಕ್ಕು ಕಾರಣವಾದ ರಾಮಾಚಾರಿಯನ್ನು ಬಿಡಬಾರದು. ಆತನನ್ನು ಸುಖವಾಗಿ ಬದುಕಲು ಬಿಡಬಾರದೆಂದು, ಪ್ರಭುದಾಸ್ ಒಂದು ದಿನವೆಲ್ಲಾ ಆಲೋಚಿಸಿ ನಿರ್ಣಯ ತೆಗೆದುಕೊಂಡನು. ಮರುದಿನ ರಾಮಾಚಾರಿ ಮತ್ತೆ ತಾಡಿಪತ್ರಿಗೆ ಬಂದನು. ಆದ್ದರಿಂದ ಪ್ರಭುದಾಸ್‌ಗೆ ರಾಮಾಚಾರಿ ಮಡೂರಿನಲ್ಲಿ ಕಾಣಿಸಲಿಲ್ಲ. ಪ್ರಭುದಾಸ್ ರಾಮಾಚಾರಿಯನ್ನು ತಾಡಿಪತ್ರಿಗೆ ಹೋಗಿ ಸೇಡನ್ನು ಸಾಧಿಸಬೇಕೆಂದುಕೊಂಡನು. ಹಾಗೆ ಅಂದುಕೊಂಡ ಎರಡನೆಯ ದಿನವೇ ಹೊರಟು ತಾಡಿಪತ್ರಿಗೆ ಬಂದಿದ್ದಾನೆ. ತಾಡಿಪತ್ರಿಯಲ್ಲಿ ರಾಮಾಚಾರಿ ಎಲ್ಲಿರುವನೆಂಬುದು ಪ್ರಭುದಾಸ್‌ಗೆ ತಿಳಿದಿಲ್ಲ. ಆದ್ದರಿಂದ ಹತ್ತು ದಿನ ಊರೆಲ್ಲಾ ಹುಡುಕಿದನು, ಆದರೆ ರಾಮಾಚಾರಿ ಎಲ್ಲಿಯು ಕಾಣಿಸಲಿಲ್ಲ. ಕೊನೆಗೆ ಹನ್ನೊಂದನೆಯ ದಿನ ರಾಮಾಚಾರಿ ಪ್ರಭುದಾಸ್ ಕಣ್ಣಿಗೆ ಬಿದ್ದನು.

ಹತ್ತು ದಿನಗಳಿಂದ ರಾಮಾಚಾರಿಯನ್ನು ಹುಡುಕಿದ ಪ್ರಭುದಾಸ್, ಹನ್ನೊಂದನೆಯ ದಿನದಂದು ರಾತ್ರಿ 7–30 ಗಂಟೆಗೆ ರೈಲ್ವೆ ಸ್ಟೇಷನ್ ಕಡೆಯಿಂದ ಹೊರಟು ತಾಡಿಪತ್ರಿ ಕಡೆಗೆ ರೋಡಿನ ಮೇಲೆ ನಡೆದುಕೊಂಡು ಬರುತ್ತಿರುವಾಗ, ಸರಿಯಾಗಿ 8 ಗಂಟೆಗೆ ರಾಮಾಚಾರಿ ಪ್ರಭುದಾಸ್‌ಗೆ ಕರೆಂಟ್ ಸಬ್ ಸ್ಟೇಷನ್ ಹತ್ತಿರ ಎದುರಿಗೆ ಬರುತ್ತಾ ಕಾಣಿಸಿದನು. ಕೈಯಲ್ಲಿ ಮಿಕ್ಸರ್ ಪೊಟ್ಟಣವನ್ನು ಹಿಡಿದುಕೊಂಡು ರಾಮಾಚಾರಿ ನಡೆದು ಬರುವುದನ್ನು ಪ್ರಭುದಾಸ್ ನೋಡಿ, ರಾಮಾಚಾರಿಯ ಹಿಂದೆಯೆ ಬಂದನು. ರಾಮಾಚಾರಿಗೆ, ಪ್ರಭುದಾಸ್ ವಿಷಯ ಏನೂ ಗೊತ್ತಾಗಲಿಲ್ಲ. ಪ್ರಭುದಾಸ್ ಸೂಕ್ಷ್ಮ ಶರೀರದೊಂದಿಗೆ ಇದ್ದಾನೆ, ಆದ್ದರಿಂದ ಪ್ರಭುದಾಸ್ ರಾಮಾಚಾರಿಗೆ ಎದುರಾದ ವಿಷಯವಾಗಲಿ, ಪ್ರಭುದಾಸ್ ತನ್ನ ಹಿಂದೆ ಬರುತ್ತಿರುವುದಾಗಲಿ ರಾಮಾಚಾರಿಗೆ ಏನೂ ಗೊತ್ತಾಗಲಿಲ್ಲ. ಎಲಕ್ಟ್ರಿಕಲ್ ಸಬ್‌ಸ್ಟೇಷನ್‌ನಿಂದ ಅರ್ಧ ಕಿಲೋಮೀಟರು ದೂರದಲ್ಲಿ, ಶ್ರೀನಿವಾಸ ಪುರದಲ್ಲಿರುವ ತನ್ನ ಮನೆಗೆ ರಾಮಾಚಾರಿ ಬಂದು, ಹೆಂಡತಿಗೆ ಮಿಕ್ಸರ್ ಪೊಟ್ಟಣ ಕೊಟ್ಟು ಸ್ನಾನಕ್ಕೆ ಬಿಸಿನೀರು ಇಡು ಎಂದನು. ಹದಿನೈದು ನಿಮಿಷಗಳಲ್ಲಿ ನೀರು ರೆಡಿಯಾದಾಗ, ಬಾತ್‌ರೂಮಿನೊಳಗೆ ರಾಮಾಚಾರಿ ಹೋದನು. ಆಗ ಪ್ರಭುದಾಸ್ ಸಹ ರಾಮಾಚಾರಿ ಹಿಂದೆ ಬಾತ್‌ರೂಮಿನೊಳಗೆ ಹೋದನು. ರಾಮಾಚಾರಿ ಚೆಂಬಿನಲ್ಲಿ ನೀರು ತೆಗೆದುಕೊಂಡು ಮೈಮೇಲೆ ಹಾಕಿಕೊಂಡಾಗ, ಪ್ರಭುದಾಸ್ ರಾಮಾಚಾರಿ ಶರೀರದೊಳಗೆ ಪ್ರವೇಶಿಸಿದನು. ಆಗ ತಕ್ಷಣವೆ ರಾಮಾಚಾರಿ ಬಾತ್‌ರೂಮಿನಲ್ಲಿ ಕೆಳಗೆ ಬಿದ್ದು ಅಪಸ್ಮಾರಕ ಸ್ಥಿತಿ (ಕೋಮಾ) ಯೊಳಗೆ ಹೊರಟು ಹೋದನು. ರಾಮಾಚಾರಿ ಜ್ಞಾಪಕವಿಲ್ಲದೆ ಮಾತನಾಡದ ಸ್ಥಿತಿಯಲ್ಲಿರುವುದನ್ನು ಆತನ ಹೆಂಡತಿ ನೋಡಿ, ತಕ್ಷಣವೆ ಆಸ್ಪತ್ರೆಗೆ ತೆಗೆದುಕೊಂಡು ಹೋದರು. ಅಲ್ಲಿ ಎರಡು ದಿನ ಕೋಮಾದಲ್ಲಿಯೆ ರಾಮಾಚಾರಿ ಇದ್ದನು. ಮೂರನೇ ದಿನ ಸ್ವಲ್ಪ ಜ್ಞಾಪಕ ಬಂದಿದೆ. ಮೂರನೆ ದಿನಕ್ಕೆ ಜ್ಞಾಪಕ ಬಂದರೂ ಆತನಿಗೆ ಕಾಲು, ಕೈ, ಬಾಯಿ ಒಟ್ಟಾರೆ ಬಲಗಡೆ ಶರೀರ ಭಾಗವೆಲ್ಲ ಶಕ್ತಿ ಇಲ್ಲದೆ ಹೋದಹಾಗೆ ಆತನ ಹೆಂಡತಿಗೆ, ತಂದೆಗೆ ತಿಳಿಯಿತು. ಡಾಕ್ಟರುಗಳು ಪೆರಾಲಸಿಸ್ (ಪಾರ್ಶ್ವವಾಯು) ಬಂದಿದೆಯೆಂದು ಹೇಳಿದರು. ಅಂದಿನಿಂದ ರಾಮಾಚಾರಿ

ಮಂಚದಲ್ಲಿಯೆ ರೋಗಿಯಾಗಿ ಹಾಸಿಗೆ ಹಿಡಿದನು. ಆತನ ತಪಾಸಣೆಗಾಗಿ ಸಂಪಾದಿಸಿಕೊಂಡಿರುವುದೆಲ್ಲಾ ಕಳೆದುಕೊಂಡನು. ರಾಮಾಚಾರಿ ಸ್ವಲ್ಪಕಾಲಕ್ಕೆ ನಡೆದಾಡಿದನು. ಆದರೆ ಬಲಗೈ ಸ್ವಲ್ಪವೂ ಸಹ ಅಲುಗಾಡುತ್ತಿರಲಿಲ್ಲ. ಯಾವುದಾದರೂ ತಿನ್ನಬೇಕೆಂದರೆ ಎಡಗೈಯಿಂದ ತಿನ್ನುತ್ತಿದ್ದನು. ಏನೂ ಕೈಲಾಗದವನಾಗಿ ಬದಲಾದ ರಾಮಾಚಾರಿಯನ್ನು ನೋಡಿ, ಆತನ ಹೆಂಡತಿ ಆತನನ್ನು ಬಿಟ್ಟು ಹೊರಟುಹೋಗಿದ್ದಾಳೆ. ಕೊನೆಗೆ ಸಂಪಾದಿಸಿಕೊಂಡ ಹಣವನ್ನು, ಮದುವೆ ಮಾಡಿಕೊಂಡ ಹೆಂಡತಿಯನ್ನು ಕಳೆದುಕೊಂಡು ಕುಂಟನಾಗಿ ಉಳಿದುಹೋಗಿದ್ದಾನೆ. ತನ್ನನ್ನು ಆಶ್ರಯಿಸುವವರು ಯಾರೂ ಇಲ್ಲದೆ ಹೋಗಿರುವುದರಿಂದ ಕೊನೆಗೆ ರಾಮಾಚಾರಿ ಸಮಾಜದಲ್ಲಿ ಬಿಕ್ಷೆಬೇಡಿಕೊಂಡು ಬದುಕಬೇಕಾಗಿ ಬಂದಿದೆ.

ತಲೆಕೊಳೆಯಾಗಿ, ಬಟ್ಟೆಗಳು ಕೊಳೆಯಾಗಿ, ತಿಂಡಿ ಇಲ್ಲದ ಸಮಯದಲ್ಲಿ ನನಗೆ ಕಾಣಿಸಿದನು. ಆತನಿಗೆ ಪಾರ್ಶ್ವವಾಯುವಿನಿಂದ ಆ ವಿಧವಾಗಿ ಇದ್ದಾನೆಂದು ಅಂದುಕೊಂಡ ನಾನು, ಆತನ ಕಾಲಿಗೆ, ಕೈಗೆ ಚಿಕಿತ್ಸೆ ಮಾಡಬೇಕೆಂದು ನನ್ನ ಹತ್ತಿರ ಇಟ್ಟುಕೊಳ್ಳಲಾಗಿತ್ತು. ಆ ರೋಗದ ಮೇಲೆ ಅನುಮಾನ ಬಂದು ನೋಡಿದಾಗ ಆತನಲ್ಲಿ ಪ್ರಭುದಾಸ್ ಹೊರಬಿದ್ದನು. ಹಾಗೆ ಶರೀರದ ಮೇಲೆ ಬಂದ ಪ್ರಭುದಾಸ್ ಸ್ವಂತವಾಗಿ ಹೇಳಿದಾಗ ರಾಮಾಚಾರಿಯ ಇಷ್ಟು ಚರಿತ್ರೆ ತಿಳಿಯಿತು. ಇದೇನೊ ಕಥೆಯೆಂದು ಅಂದುಕೊಳ್ಳಬೇಡಿ. ನನ್ನ ಮುಂದೆ ನನಗೆ ತಿಳಿದ ಯಥಾರ್ಥ ಸಂಘಟನೆ ಇದು.

ಇದೆಲ್ಲಾ ಕೇಳಿದ ನಂತರ ಯಾರದು ನ್ಯಾಯ, ಯಾರದು ಅನ್ಯಾಯ ಎಂದು ಹೇಳಲಾಗದೆ ಹೋದೆವು. ರಾಮಾಚಾರಿಗೆ ಪ್ರಭುದಾಸ್‌ನಿಂದ ತನಗೆ ಹೀಗೆ ನಡೆದಿದೆಯೆನ್ನುವ ವಿಷಯ ತಿಳಿದಿಲ್ಲ. ಆ ವಿಷಯ ಪ್ರಭುದಾಸ್ ಮೊದಲು ಹೊರಗೆ ಬಂದು ನನಗೆ ಹೇಳಿದನು. ಆ ಸಮಯದಲ್ಲಿ ನಮ್ಮ ಪಕ್ಕದಲ್ಲಿ ಯಾರೂ ಇಲ್ಲ. ಆದ್ದರಿಂದ ಯಾರಿಗು ತಿಳಿಯುವ ಅವಕಾಶವೆ ಇಲ್ಲ. ಆಗ ನಾನು ಪ್ರಭುದಾಸ್‌ನೊಂದಿಗೆ ಹೀಗೆ ಹೇಳಿದೆನು.

**ನಾನು :–** ಪ್ರಭುದಾಸ್! ನೀನು ಅವಸರಪಟ್ಟು ಸತ್ತುಹೋಗಿರುವುದು ನೀನು ಮಾಡಿದ ದೊಡ್ಡ ತಪ್ಪು. ದೇವರುಕೊಟ್ಟ ಜೀವನವನ್ನು, ಕೆಲವು ದಿನಗಳ ಕೆಳಗೆ ಬಂದ ಹೆಂಡತಿಗೋಸ್ಕರ ತ್ಯಜಿಸಿಕೊಳ್ಳುವುದು ತಪ್ಪು. ಸಮಸ್ಯೆಗೆ ಪರಿಷ್ಕಾರ ಸಾವು ಅಲ್ಲ. ಸ್ವಲ್ಪ ಆಲೋಚಿಸಿರಬೇಕಾಗಿತ್ತು. ನೀನು ಸತ್ತು ಹೋಗಿರುವುದರಿಂದ ಆಗ ರಾಮಾಚಾರಿಗೆ ಯಾವ ನಷ್ಟವು ಆಗಲಿಲ್ಲ. ನಿನ್ನ ಜೀವನವೇ ನಾಶವಾಗಿ ಹೋಗಿದೆ. ಅದಕ್ಕೆ ನಿನಗೆ ಕಕ್ಷ ಏರ್ಪಟ್ಟು, ಅದು ಆತನಿಗೆ ಶಿಕ್ಷೆ ಆಗಿದೆ. ಇದೆಲ್ಲವನ್ನು ನೋಡಿದರೆ ರಾಮಾಚಾರಿದು ಮೊದಲ ತಪ್ಪು, ನಂತರ ನಿನ್ನದು ಎರಡನೇ ತಪ್ಪು. ನಿನ್ನ ಹೆಂಡತಿ ಹೋಗಿದ್ದಾಳೆ ಬೇರೆಯವರ ಹತ್ತಿರ ಇದ್ದಾಳೆ. ಹಾಗೆ ರಾಮಾಚಾರಿ ಹೆಂಡತಿ ಹೋಗಿದ್ದಾಳೆ ಬೇರೆಯವರ ಹತ್ತಿರ ಇದ್ದಾಳೆ. ನಿನ್ನ ಬಾಹ್ಯ ಜೀವನ ಹೋಗಿದೆ, ಸೂಕ್ಷ್ಮ ಜೀವನ ಉಳಿದಿದೆ. ಹಾಗೆ ಆತನ ಜೀವನ ನಾಶವಾಗಿದೆ, ಕುಂಟ ಜೀವನ ಉಳಿದಿದೆ. ನೀನು ಸತ್ತು ಬದುಕುತ್ತಿದ್ದೀಯ. ಈತನು ಬದುಕಿ ನಿತ್ಯವೂ ಸಾಯುತ್ತಿದ್ದಾನೆ. ನೀವಿಬ್ಬರು ಹೋದ ಜನ್ಮಗಳಲ್ಲಿ ಮಾಡಿಕೊಂಡ ಪಾಪವನ್ನು ಈ ರೂಪದಲ್ಲಿ ಅನುಭವಿಸುತ್ತಿದ್ದೀರ. ಕೆಲವು ವರ್ಷಗಳಿಗೆ ರಾಮಾಚಾರಿ ನನ್ನ ಹತ್ತಿರ ಬಂದಿದ್ದಾನೆ, ಆದ್ದರಿಂದ ನಾನು ನಿನಗೆ ಹೇಳುವುದೇನೆಂದರೆ ಇನ್ನು ಈತನನ್ನು ನೀನು ಬಿಟ್ಟುಹೋಗು, ಬಿಟ್ಟುಹೋದ ನಂತರ ದೈವಜ್ಞಾನ ತಿಳಿದುಕೊ, ನಿನ್ನ ಜೀವನಕ್ಕೆ ಒಂದು ಅರ್ಥ, ಪರಮಾರ್ಥ ಏರ್ಪಡುತ್ತದೆ.

**ಪ್ರಭುದಾಸ್ :–** ನೀವು ದೊಡ್ಡವರು, ಈತನ ಮೇಲೆ ನನಗೆ ಎಷ್ಟು ಕೋಪವಿದ್ದರೂ ನೀವು ಹೇಳಿದಹಾಗೆ ಈತನನ್ನು ಬಿಟ್ಟು ಹೋಗುತ್ತೇನೆ. ನಾನು ಇಲ್ಲಿಯವರೆಗು ಕತ್ತಿನಪಕ್ಕ ನರದ ಹತ್ತಿರ ಸೇರಿ ಅಲ್ಲಿ ನರವನ್ನು ಅಮುಕಿ ಇಟ್ಟಿದ್ದೆನು. ಆ ನರ ಪೂರ್ತಿಯಾಗಿ ಕೆಟ್ಟು ಹೋಗಿದೆ. ಆದ್ದರಿಂದ ನಾನು ಬಿಟ್ಟು ಹೋದರೂ ಈತನು ಪೂರ್ತಿಯಾಗಿ ನಡೆಯಲಾರನು. ಈಗಿರುವುದಕ್ಕಿಂತ ಸ್ವಲ್ಪ ಚೆನ್ನಾಗಿ ನಡೆಯುವನು. ಹಾಗೆ ಕೈ ಸ್ವಲ್ಪ ಮೇಲಕ್ಕೆ ಏಳಬಹುದು. ಅದೂ ನಿಮ್ಮ ಮುಂದೆ ಎಷ್ಟು ಎದ್ದಿದೆಯೊ ಅಷ್ಟೆ ಏಳುತ್ತದೆ. ಕೈ ಪೂರ್ತಿಯಾಗಿ ಬಾಯಿ ಹತ್ತಿರಕ್ಕೆ ಹೋಗುವುದಿಲ್ಲ. ಕೈಯಿಂದ ಅನ್ನವನ್ನು ತಿನ್ನಲಾರನು. ಇಲ್ಲಿಗೆ 75% ರಷ್ಟು

ಈತನ ನರ ಕೆಟ್ಟುಹೋಗಿದೆ. ಆದ್ದರಿಂದ ಉಳಿದ 25% ರಷ್ಟು ಮಾತ್ರ ಗುಣವಾಗುತ್ತದೆ. ನೀವು ಹೇಳಿದಹಾಗೆ ನಾನು ದೇವರ ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸುತ್ತೇನೆ. ಈಗ ನಮ್ಮ ಊರಿಗೆ ಹೋಗಿ, ಆಗಾಗ ಇಲ್ಲಿಗೆ ಬಂದು ಜ್ಞಾನ ತಿಳಿದುಕೊಳ್ಳುತ್ತೇನೆ. ನಮಸ್ಕಾರ, ಎಂದು ಹೇಳಿ ಪ್ರಭುದಾಸ್ ರಾಮಾಚಾರಿ ಶರೀರದಿಂದ ಹೊರಗೆ ಹೋದನು. ಆಗ ರಾಮಾಚಾರಿಗೆ ಜ್ಞಾಪಕ ಬಂದಿದೆ. ಅಷ್ಟೊತ್ತು ತಾನು ನಿದ್ರೆ ಹೋಗಿದ್ದೇನೆಂದು ಅಂದುಕೊಂಡಿದ್ದನು. ಆಗ ರಾಮಾಚಾರಿಯನ್ನು ನೋಡಿ ಹೀಗೆ ಹೇಳಿದೆನು. "ನಿನಗೆ ಪೂರ್ತಿ ಗುಣವಾಗುವುದಿಲ್ಲ, ಸ್ವಲ್ಪಮಟ್ಟಿಗೆ ನಡೆಯುತ್ತೀಯ, ಹಾಗೆ ಕೈ ಸ್ವಲ್ಪ ಎತ್ತುತ್ತೀಯ, ಮಾತು ಸ್ವಲ್ಪ ಚೆನ್ನಾಗಿ ಬರಬಹುದು. ಇನ್ನು ನೀನು ಇಲ್ಲಿಂದ ಹೊರಟು ಹೋಗಬಹುದು" ಎಂದು ಹೇಳಿ ಕಳುಹಿಸಿದೆನು. ಈ ಸಂಘಟನೆಯೆಲ್ಲಾ ಗಮನಿಸಿದರೆ ಎರಡು ಕುಟುಂಬಗಳು, ಎರಡು ತುಂಬಿದ ಜೀವನಗಳು ನಾಶನವಾದ ಹಾಗೆ ಅರ್ಥವಾಗುತ್ತದೆ. ಇಲ್ಲಿ ಭೂಮಿ ಮೇಲೆ ದೆವ್ವಗಳು ಇಲ್ಲ ಎನ್ನುವವರೆಲ್ಲಾ ಏನು ಹೇಳುತ್ತಾರೆ? ನಡೆದ ಮೇಲಿನ ಸಂಘಟನೆಯಲ್ಲಿ ಯಾವುದು ಅಸತ್ಯವಿಲ್ಲ. ಪ್ರಭುದಾಸ್ ಹೇಳಿರುವುದು ಹೊರಗಡೆ ಹೇಳದೆ, ರಾಮಾಚಾರಿ ತಂದೆಯನ್ನು ಕೇಳಿದರೆ ಆತನು ಹೇಳಿರುವುದಕ್ಕೆ ಪ್ರಭುದಾಸ್ ಹೇಳಿರುವುದಕ್ಕೆ ಪೂರ್ತಿಯಾಗಿ ಸರಿಹೋಗಿದೆ. ಆಗಿರುವಾಗ ಪ್ರಭುದಾಸ್ ಕಾಣಿಸದ ಸತ್ಯ, ರಾಮಾಚಾರಿ ಕಾಣಿಸುವ ಸತ್ಯ, ರಾಮಾಚಾರಿ ತಂದೆ ನಡೆದ ಸತ್ಯಕ್ಕೆ ಸಾಕ್ಷಿ. ಆದ್ದರಿಂದ ಇದನ್ನು ಯಾರೂ ಅಸತ್ಯವೆನ್ನಲಾರರು, ಹಾಗೆ ದೆವ್ವಗಳು ಅಸತ್ಯವೆನ್ನುವದಕ್ಕೆ ಅವಕಾಶವಿಲ್ಲ. ಮೇಧಸ್ಸು ಇರುವವರು ಹೇತುವಾದ ದೃಷ್ಟಿಯಿಂದ ಸತ್ಯವನ್ನು ಗ್ರಹಿಸಬೇಕೆಂದು ಕೋರುತ್ತಿದ್ದೇವೆ.

ಅನುಭವಕ್ಕೆ ಬರುವುದು ಯಾವುದಾದರೂ ವಿಜ್ಞಾನವೆ ಆಗುತ್ತದೆ. **ಒಂದು ವಿಧಾನವನ್ನು ವಿವರವಾಗಿ ತಿಳಿದುಕೊಳ್ಳುವುದನ್ನು ಜ್ಞಾನ** ಎನ್ನುತ್ತೇವೆ. **ಜ್ಞಾನದ ಪ್ರಕಾರ ಆಚರಿಸಿ ನಿರೂಪಣೆಗೆ ಬಂದರೆ, ಆಗ ಅದನ್ನು ವಿಜ್ಞಾನ** ಎನ್ನುತ್ತೇವೆ. ಆಚರಣೆಗಾಗಲಿ, ಅನುಭವಕ್ಕಾಗಲಿ ಬಾರದ ವಿಷಯ ವಿವರ ಜ್ಞಾನವೆ ಅಲ್ಲ. ಇದನ್ನು ಅನುಸರಿಸಿ ನೋಡಿದರೆ ಜ್ಞಾನ ತಿಳಿಯುವಂತದ್ದಾದರೆ ವಿಜ್ಞಾನ

ಅನುಭವಿಸುವುದು ಎಂದು ಹೇಳಬಹುದು. ಆದ್ದರಿಂದ ಜ್ಞಾನಕ್ಕೆ, ವಿಜ್ಞಾನಕ್ಕೆ ಅವಿನಾಭಾವ ಸಂಬಂಧ ಇದೆಯೆಂದು ಹೇಳಬಹುದು. ನಾವು ಹೇಳುವವು ಸತ್ಯವಾದವುಗಳು, ಅನುಭವರೀತ್ಯ ನಡೆದಿರುವಂತವುಗಳು. ಆದರೆ ನಮ್ಮ ರಚನೆಗಳಲ್ಲಿ ಜ್ಞಾನ, ವಿಜ್ಞಾನ ಎರಡೂ ಇವೆ. ಆದ್ದರಿಂದ ನಾವು 2004ನೇ ವರ್ಷದಲ್ಲಿ ಸ್ಥಾಪಿಸಿದ **"ಜ್ಞಾನ ವಿಜ್ಞಾನ ವೇದಿಕೆ"** ಎನ್ನುವ ಸಂಸ್ಥೆ ಪ್ರಕಟಣೆಗಳಲ್ಲಿ ಈ ಗ್ರಂಥ ಹೊರಗೆ ಬರುತ್ತಿದೆ.

ಯಾವುದೋ ಒಂದು ವಿಜ್ಞಾನವೆಂದು ಹೆಸರು ಇಟ್ಟುಕೊಂಡ ಕೆಲವು ಸಂಸ್ಥೆಗಳ ವ್ಯಕ್ತಿಗಳು, ಇತ್ತ ದೆವ್ವಗಳನ್ನು ಒಪ್ಪಿಕೊಳ್ಳುವುದಿಲ್ಲ, ಅತ್ತ ಮಂತ್ರಗಳನ್ನು ಒಪ್ಪಿಕೊಳ್ಳುವುದಿಲ್ಲ. ಅಂತವರಿಗೆ ಜ್ಞಾನವೆಂದರೆ ಹೇಗಿರುತ್ತದೊ ಮತ್ತು ವಿಜ್ಞಾನವೆಂದರೆ ಹೇಗಿರುತ್ತದೊ ಅರ್ಥವಾಗುವುದಕ್ಕೆ ಒಂದು ಚಿಕ್ಕ ಉದಾಹರಣೆಯನ್ನು ಹೇಳುತ್ತಿದ್ದೇನೆ ನೋಡಿರಿ. ನನ್ನಲ್ಲಿ ಪ್ರಶ್ನಿಸುವ ವಿಧಾನ ಎಂದರೆ ಹೇತುವಾದ ಪದ್ಧತಿ ಹೆಚ್ಚಾಗಿರುತ್ತದೆಂದು, ನಾನು ಈ ಗ್ರಂಥದಲ್ಲಿ ಮೊದಲೆ ಹೇಳಿದ್ದೇನೆ. ಪ್ರಶ್ನಿಸುತ್ತಿದ್ದೇವೆಂದರೆ ಉತ್ತರಕ್ಕಾಗಿ ಹುಡುಕುತ್ತಿದ್ದೇವೆಂದು ಅರ್ಥ. ಈ ಕಾಲದಲ್ಲಿ ಕೆಲವರು ಹೇತುವಾದ ಎಂದು ಹೆಸರು ಇಟ್ಟುಕೊಂಡವರು, ಪ್ರಶ್ನಿಸುವುದನ್ನು ಹೊರತು ಉತ್ತರವನ್ನು ನೋಡುವುದಿಲ್ಲ. ಪ್ರಶ್ನಿಸುವುದು, ಸರಿಯಾದ ಉತ್ತರವನ್ನು ಒಪ್ಪಿಕೊಳ್ಳುವುದು ಸಂಪೂರ್ಣ ಹೇತುವಾದವಾಗುತ್ತದೆ. ಅದರ ಪ್ರಕಾರ ಒಂದು ಪುಸ್ತಕದಲ್ಲಿ ಚೇಳು ಕಚ್ಚಿದರೆ, ಆ ವಿಷವನ್ನು ನಿವಾರಿಸುವುದಕ್ಕೆ ಒಂದು ಮೂಲಿಕೆಯನ್ನು ಔಷಧವಾಗಿ ಉಪಯೋಗಿಸುವ ವಿಧಾನವನ್ನು ಓದಿದೆನು. ಮೂಲಿಕೆ, ಚೇಳಿನ ವಿಷವನ್ನು ಇಲ್ಲದಂತೆ ಮಾಡಿ, ನೋವನ್ನು ನಿವಾರಿಸುತ್ತದೆ ಎಂದು ಹೇಳಿದ ವಿಧಾನವೆಲ್ಲಾ ನನಗೆ ತಿಳಿದಿದೆಯಾದ್ದರಿಂದ ಅದು ಆಗ ನನಗೆ ಜ್ಞಾನವಾಗಿದೆ, ತಿಳಿದುಬಂದಿದೆ ಯಾದ್ದರಿಂದ ಜ್ಞಾನವಾಗಿದೆ. ಆದರೆ ಅನುಭವಕ್ಕೆ ಬರಲಿಲ್ಲವಾದ್ದರಿಂದ ಅದು ನನ್ನ ಲೆಕ್ಕದಲ್ಲಿ ವಿಜ್ಞಾನವಾಗಲಿಲ್ಲ. ಅಲ್ಲಿ ಹೇಳಿದ ಮೂಲಿಕೆಯನ್ನು ಕೆಲವು ದಿನಗಳ ನಂತರ ಚೇಳು ಕಚ್ಚಿದ ಮನುಷ್ಯನಿಗೆ ಬಳಸಿ ನೋಡಿದೆನು. ಅಲ್ಲಿ

ತಿಳಿಸಿದ ಹಾಗೆ ವಿಷ ತಕ್ಷಣವೇ ಕಡಿಮೆಯಾಗಿ ನೋವಿಲ್ಲದೆ ಹೋಗಿದೆ. ಅದು ಅನುಭವಕ್ಕೆ ಬಂದಿದೆ ಆದ್ದರಿಂದ ನನಗಾಗಲಿ, ನನ್ನ ಪಕ್ಕದಲ್ಲಿದ್ದು ನೋಡಿದವರಿಗಾಗಲಿ ಅದು ವಿಜ್ಞಾನವೇ ಆಗುತ್ತದೆ.

ಅಷ್ಟೇ ಅಲ್ಲದೆ ಅದೇ ಪುಸ್ತಕದಲ್ಲಿ ಚೇಳು ಕಚ್ಚಿದಾಗ ನೋವು ನಿವಾರಣೆಗೆ ಮತ್ತೊಂದು ವಿಧಾನ ಸಹ ಇದೆ ಮೇಲೆ ಹೇಳಿದ ಮೊದಲ ವಿಧಾನದಲ್ಲಿರುವುದು ಗಿಡದ ಮೂಲಿಕೆ, ಮತ್ತೊಂದು ವಿಧಾನದಲ್ಲಿರುವುದು ಅಕ್ಷರಗಳ ಮಂತ್ರ. ಮೂಲಿಕೆ ಒಂದು ಪದಾರ್ಥ. ಮಂತ್ರ ಒಂದು ಶಬ್ದ. ಮೂಲಿಕೆಯ ಪದಾರ್ಥ ಕಾಣಿಸುವುದು, ಮಂತ್ರದ ಶಬ್ದ ಕೇಳಿಸುವಂತದ್ದು. ಎದುರಿಗಿರುವ ಮನುಷ್ಯನಿಗೆ ಕಾಣಿಸುವ ಶರೀರದ ಮೇಲೆ, ಕಾಣಿಸುವ ಮೂಲಿಕೆಯನ್ನು ಉಪಯೋಗಿಸಿದಾಗ ಎದುರಿನ ಮನುಷ್ಯನಿಗೆ ಕಾಣಿಸದ ನೋವು ಹೋಗಿದೆ. ಈಗ ಎದುರಿಗಿರುವ ಮನುಷ್ಯನಿಗೆ ಕಾಣಿಸುವ ಶರೀರದ ಮೇಲೆ ಕಾಣಿಸದ ಮಂತ್ರವನ್ನು ಉಪಯೋಗಿಸಿದರೆ, ಎದುರಿಗಿರುವ ಮನುಷ್ಯನಿಗೆ ಕಾಣಿಸದ ನೋವು ಹೋಗುತ್ತದೆ ಎಂದು ಇದೆ. ಮೊದಲು ಔಷಧ ಅನುಭವ ನಿರೂಪಣೆಗೆ ಬಂದು ವಿಜ್ಞಾನವಾಗಿದೆ, ಈಗ ಮಂತ್ರ ವಿಧಾನ ಜ್ಞಾನ ವಿಜ್ಞಾನವಾಗುತ್ತದೊ ಇಲ್ಲವೊ ಎಂದು ನೋಡಬೇಕಾಗಿದೆ. ಮಂತ್ರ ವಿಧಾನ ಜ್ಞಾನ ಏನೆಂದು ಇದೆಯೆಂದರೆ! ಈ ಮಂತ್ರವನ್ನು ಜ್ಞಾಪಕದಿಂದ ಹತ್ತು ಸಾವಿರ ಬಾರಿ ಜಪಿಸಿದರೆ ಮಂತ್ರಶಕ್ತಿ ಲಭಿಸುತ್ತದೆ. ನಂತರ ಯಾವಾಗಲಾದರೂ ಚೇಳು ವಿಷ ನಿವಾರಣೆಗೆ ಮಂತ್ರವನ್ನು ಹನ್ನೊಂದು ಬಾರಿ ಜಪಿಸಿ, ನೀರನ್ನು ಊದಿ ಆ ನೀರನ್ನು ಕುಡಿಸಿದರೆ, ಕುಡಿದವನಿಗೆ ವಿಷ ನಿವಾರಣೆ ಆಗುತ್ತದೆ ಎಂದು ಇದೆ. ಅದನ್ನು ತಿಳಿದುಕೊಂಡ ನಾನೆ ಅದು ವಿಜ್ಞಾನವೊ ಅಲ್ಲವೊ ನೋಡಬೇಕಾಗಿದೆ. ಆ ಮಂತ್ರದ ಒಂದೊಂದು ಪದಗಳು ಎರಡು ಅಕ್ಷರಗಳಾಗಿದ್ದೂ ಒಟ್ಟು ನಾಲ್ಕು ಪದಗಳಾಗಿ ಇದೆ. ಅದನ್ನು ಹೇಳಿದ ಹಾಗೆ ಜಪಿಸಿದ್ದೇವೆ. ನಂತರ ಸ್ವಲ್ಪ ದಿನಗಳಿಗೆ, ನನಗೆ ಪರಿಚಯವಿರುವ ವಿಜಯ್ ಕುಮಾರ್ ಯಾದವ್ ಮನೆಯಲ್ಲಿನ ನಾಯಿಗೆ ಚೇಳು ಕಚ್ಚಿದೆ. ಆ ನಾಯಿ ನೋವಿಗೆ ಅರಚುತ್ತಾ ಇರುವಾಗ ಅದನ್ನು ತೆಗೆದುಕೊಂಡು ಬಂದರು.

ಆಗ ಮಂತ್ರ ವಿಧಾನದಲ್ಲಿ ಇದ್ದಹಾಗೆ, ಸ್ವಲ್ಪ ನೀರನ್ನು ಗ್ಲಾಸಿನೊಳಗೆ ತೆಗೆದುಕೊಂಡು ಮಂತ್ರಿಸಿ ಅಗಲವಾದ ತಟ್ಟೆಯಲ್ಲಿ ಹಾಕಿ ನಾಯಿಗೆ ಕುಡಿಯುವ ಹಾಗೆ ಮಾಡಿದೆವು. ಸ್ವಲ್ಪ ನೀರನ್ನು ನಾಯಿ ಕುಡಿಯಿತು. ನಂತರ ಎರಡು ನಿಮಿಷಗಳಾಗುವುದರೊಳಗೆ ನಾಯಿ ಅರಚುವುದನ್ನು ನಿಲ್ಲಿಸಿತು. ಆ ಮರುದಿನವೆ 30 ವರ್ಷಗಳ ವಯಸ್ಸಿರುವ ವ್ಯಕ್ತಿ ಚೇಳು ಕಚ್ಚಿದೆಯೆಂದು ನೋವು ಪಡುತ್ತಾ ಬಂದನು. ಆತನಿಗು ಸಹ ಗ್ಲಾಸಿನಲ್ಲಿ ನೀರನ್ನು ಹಾಕಿ ಮಂತ್ರ ಹೇಳಿ ಕೊಟ್ಟಾಗ ತಕ್ಷಣವೆ ನೋವಿಲ್ಲದೆ ಹೋಗಿದೆ. ಆಗ ಪೂರ್ತಿಯಾಗಿ ಮಂತ್ರ ಕೆಲಸ ಮಾಡಿದೆಯೆಂದು ತಿಳಿಯಿತು. ಅದರಿಂದ ತಿಳಿದುಕೊಂಡ ಮಂತ್ರ ಜ್ಞಾನ ವಿಜ್ಞಾನ ರೂಪವಾಗಿದೆ. ಇದನ್ನು ಅನುಸರಿಸಿ ನೋಡಿದಾಗ, ಔಷಧವೆ ಅಲ್ಲದೆ, ಮಂತ್ರ ಸಹ ವಿಜ್ಞಾನದೊಂದಿಗೆ ಕೂಡಿಕೊಂಡಿದೆಯೆಂದು ಅರ್ಥವಾಯಿತು. ಈ ಸಂಘಟನೆಯಿಂದ ಜ್ಞಾನ, ವಿಜ್ಞಾನ ಎರಡು ಅವಿನಾಭಾವ ಸಂಬಂಧ ಹೊಂದಿವೆಯೆಂದು ತಿಳಿಯುತ್ತದೆ.

ನಾನು ಮಾಡಿ ನೋಡಿದ ಬಾಹ್ಯಾಚರಣೆಯಲ್ಲಿ ಚೇಳಿನ ವಿಷದ ಮೇಲೆ ಔಷಧಿ ಕೆಲಸ ಮಾಡಿದಹಾಗೆ, ಮಂತ್ರವು ಸಹ ಕೆಲಸ ಮಾಡಿದೆಯೆಂದು ತಿಳಿಯಿತು. ನಂತರ ನನ್ನ ಜೀವನದಲ್ಲಿ ಯಾರಿಗೂ ಔಷಧ ಕೊಡಲಿಲ್ಲ, ಮಂತ್ರವು ಓದಲಿಲ್ಲ. ನನ್ನ ಪರಿಶೋಧನೆಯಲ್ಲಿ ಕೇವಲ ನಿರೂಪಣೆ ನಿಮಿತ್ತವಾಗಿ ಮಾಡಿ ನೋಡಿ ಇವು ಸತ್ಯ ಎಂದು ತಿಳಿದುಕೊಂಡೆನು. ಕೆಲವರು ನಾವು ವಿಜ್ಞಾನಿಗಳು, ನಮ್ಮ ವಿಜ್ಞಾನದ ಪ್ರಕಾರ ದೆವ್ವಗಳು ಇಲ್ಲ, ಮಂತ್ರಗಳು ಇಲ್ಲ ಎನ್ನುತ್ತಿದ್ದಾರೆ. ಅಂತವರದ್ದು ಅಸತ್ಯವಾದನೆ ಎಂದು, ಅವರು ವಿಜ್ಞಾನಿಗಳೆ ಅಲ್ಲವೆಂದು ಹೇಳುತ್ತಿದ್ದೇವೆ. ಸತ್ಯವನ್ನು ಗ್ರಹಿಸದ ವಿಜ್ಞಾನಿಗಳಿಗೆ ಕಣ್ತೆರೆಸುವಂತೆ ಮಂತ್ರಗಳು, ದೆವ್ವಗಳು ಜೊತೆಯಾಗಿರುವ, ನಾನು ನೋಡಿದ ಒಂದು ನೈಜ ಸಂಘಟನೆಯನ್ನು ವಿವರಿಸುತ್ತಿದ್ದೇನೆ ನೋಡಿರಿ.

ನಾನು ತಾಡಿಪತ್ರಿಯಲ್ಲಿ ನಿವಾಸವಿರುವಾಗ ನಾನು ವೈದ್ಯ ಮಾಡಿರುವುದು ವರ್ಷವೇ ಆದರೂ ಬಹಳ ವಿಧಗಳ ರೋಗಗಳನ್ನು ನೋಡಿದೆನು. ನಾನು ತಪಾಸಣೆ ಮಾಡಿರುವುದು ಪರಿಶೋಧನೆ ನಿಮಿತ್ತವೆ ಆಗಲಿ ಜೀವನಕ್ಕಾಗಿ

ಅಲ್ಲ ಎಂದು ಮೊದಲೆ ಹೇಳಿದ್ದೇನೆ. ಆ ನೇತೃತ್ವದಲ್ಲಿ ನನ್ನ ಹತ್ತಿರಕ್ಕೆ ಬಂದ ರೋಗಿಗಳಲ್ಲಿ ಶರೀರದಲ್ಲಿ ವಾಸ್ತವ ರೋಗಗಳು ಶೇ.30 ರಷ್ಟು ಮಾತ್ರ ಇದ್ದಹಾಗೆ ತಿಳಿದಿದೆ. ಉಳಿದ ಶೇ.70 ರಷ್ಟು ಸ್ಥೂಲ ಶರೀರ ರೋಗಗಳು ಅಲ್ಲವೆಂದು, ಸೂಕ್ಷ್ಮ ಶರೀರ ರೋಗಗಳಿವೆಯೆಂದು ತಿಳಿಯಿತು. ಹಾಗೆ ಬಂದವರಲ್ಲಿ ಸುಮಾರು 45 ವರ್ಷಗಳ ವಯಸ್ಸಿರುವ ಒಬ್ಬ ಹೆಂಗಸನ್ನು ನನ್ನ ಹತ್ತಿರಕ್ಕೆ ಕರೆದುಕೊಂಡು ಬಂದರು. ಆಕೆಗೆ ವಾರಕ್ಕೆ ಒಂದುಬಾರಿ ಹೊಟ್ಟೆನೋವು ಬರುತ್ತದೆಂದು ತಿಳಿಸಿದರು. ಶರೀರದಲ್ಲಿ ಬರುವ ನೋವು ಯಾವುದಾದರೂ ಶರೀರದಲ್ಲಿ ಲೋಪ ಏರ್ಪಟ್ಟಾಗ ಬರಬಹುದು. ಆದರೆ ವಾರಕ್ಕೆ ಒಂದು ಬಾರಿ ಎನ್ನುವ ನಿಯಮ ಇರುವುದಿಲ್ಲ. ಹಾಗೆ ಇದೆಯೆಂದರೆ ಅದು ತಪ್ಪದೆ ಸೂಕ್ಷ್ಮ ಶರೀರಗಳ ಪೀಡನೆಯೆಂದೆ ನನಗೆ ಅರ್ಥವಾಯಿತು. ಇದು ರೋಗದಿಂದ ಬರುವ ಹೊಟ್ಟೆನೋವು ಅಲ್ಲ. ಔಷಧಿಗಳಿಗೆ ಹೋಗುವುದಿಲ್ಲ, ಮಂತ್ರಗಳು ಬರುವ ಮಾಂತ್ರಿಕರ ಹತ್ತಿರಕ್ಕೆ ಕರೆದುಕೊಂಡು ಹೋಗಲು ಆಕೆಯನ್ನು ಕರೆದುಕೊಂಡು ಬಂದವರಿಗೆ ಹೇಳಿದೆವು. ಅದಕ್ಕೆ ಅವರು "ನಾವು ಮಾಂತ್ರಿಕರೆಲ್ಲರ ಹತ್ತಿರಕ್ಕೆ ಹೋಗಿದ್ದೇವೆ ಎಲ್ಲಿಯೂ ಏನು ಸರಿಹೋಗಲಿಲ್ಲ, ನಂತರ ಕಸಾಪುರದ ಆಂಜನೇಯಸ್ವಾಮಿ ಹತ್ತಿರಕ್ಕೆ, ಪಪ್ಪೂರು ಶಿವಾಲಯ ಹತ್ತಿರಕ್ಕೆ, ಉಳಿದ ಬಹಳ ದೇವತೆಗಳ ಹತ್ತಿರಕ್ಕೆ ಸಹ ಹೋಗಿದ್ದೇವೆ. ಆದರೂ ಅಲ್ಲಿಯು ಸಹ ಏನು ವಾಸಿಯಾಗಲಿಲ್ಲ. ಕೊನೆಗೆ ಇದು ನಿವಾರಣೆ ಯಾಗುವುದಿಲ್ಲವೆಂದು ನಿರ್ಣಯ ಮಾಡಿಕೊಂಡು ಇದ್ದೇವೆ. ಈಗ ನಿಮ್ಮ ಹತ್ತಿರಕ್ಕೆ ಹೋದರೆ, ಏನಾದರೂ ತಪ್ಪದೆ ಚೆನ್ನಾಗಿ ಆಗುತ್ತದೆಂದು ನಮಗೆ ತಿಳಿದವರು ಹೇಳಿದರೆ ಆಸೆಯಿಂದ ನಿಮ್ಮ ಹತ್ತಿರಕ್ಕೆ ಬಂದಿದ್ದೇವೆ" ಎಂದರು.

ಅವರು ಹೇಳಿರುವುದನ್ನು ಕೇಳಿದ ನಂತರ ಅವರ ಮೇಲೆ ಸ್ವಲ್ಪ ಕರುಣೆ ಬಂದು, ಸರಿ ಸಾಯಂಕಾಲದವರೆಗು ಇರುವುದಕ್ಕೆ ಹೇಳಿ, ನಂತರ ಆ ದಿನ ಆಗುವುದಿಲ್ಲ ಬರುವ ಬುಧವಾರ ಬರಲು ಹೇಳಿ ಕಳುಹಿಸಿದೆವು. ಬುಧವಾರ ಬೆಳಗ್ಗೆ ಅವರು ಬಂದರು. ಆಗ 8 ಗಂಟೆಗೆ ತಯಾರಾಗಿ ಹೊಟ್ಟೆನೋವು ಬರುವ ಹೆಂಗಸನ್ನು ನನಗೆ ಎದುರಾಗಿ ಕುಳಿತುಕೊ ಎಂದು ಹೇಳಿ ಆಕೆ ಕಡೆಗೆ ನೋಡಿ, ಈಕೆಯ ಶರೀರದಲ್ಲಿ ವಾರಕ್ಕೊಂದು ಬಾರಿ ಬರುವ ಹೊಟ್ಟೆನೋವು

ಯಾವುದಾದರೆ ಇದೆಯೊ ಅದು ಈಗ ನನ್ನ ಮುಂದೆ ಬರಲು ಹೇಳಿದೆವು. ಕುಳಿತುಕೊಂಡಾಗ ಆಕೆಗೆ ಹೊಟ್ಟೆನೋವು ಇಲ್ಲ, ಆಕೆಗೆ ಪ್ರತಿ ಭಾನುವಾರ ಹೊಟ್ಟೆನೋವು ಬರುತ್ತಿತ್ತು. ಆ ದಿನ ಬುಧವಾರ, ಆದರೂ ನನ್ನ ಮಾತು ಕೇಳಿದ ನಿಮಿಷಕ್ಕೆ ಆಕೆಗೆ ಹೊಟ್ಟೆ ನೋವು ಬಂದಿದೆ. ಆಗ ಅಲ್ಲಿ ಸುಮಾರು ಹದಿನೈದು ಮಂದಿ ಜನರಿದ್ದಾರೆ. ಕರೆಯುತ್ತಲೆ ಆ ನೋವು ಬರುವುದು ಎಲ್ಲರಿಗು ಆಶ್ಚರ್ಯವೆನಿಸಿತು. ಎದುರುಗಡೆ ಕುಳಿತಿರುವ ಆಕೆಗೆ ಹೊಟ್ಟೆನೋವು ಜಾಸ್ತಿ ಇದೆ, ಎಂದು ಹೇಳಿ ನೋವು ಪಡುತ್ತಿದ್ದಾಳೆ. ಆಗ **"ಶರೀರದೊಳಗೆ ಹೊಟ್ಟೆನೋವಿಗೆ ಕಾರಣವಾದವರು ಯಾರಿದ್ದರೂ ಹೊರಗೆ ಬಂದು ನನ್ನೊಂದಿಗೆ ಮಾತನಾಡಬೇಕೆಂದು ಹೇಳುತ್ತಿದ್ದೇನೆ"** ಎಂದು ನಾನು ಅನ್ನುತ್ತಿದ್ದಹಾಗೆ ಒಳಗಿರುವ ಗ್ರಹ (ಸೂಕ್ಷ್ಮ ಶರೀರ) ಹೊರಗೆ ಬಂದಿತು. ಅಲ್ಲಿಯವರೆಗು ಸ್ವಲ್ಪ ಮುದುಡಿ ಕೊಂಡು ಕುಳಿತಿರುವ ಆಕೆ ತಕ್ಷಣವೆ ನೇರವಾಗಿ ಕುಳಿತುಕೊಂಡು ಒಂದು ಬಾರಿ ಜೋರಾಗಿ ನಕ್ಕಳು. ಆ ನಗುವನ್ನು ನೋಡಿ ಪಕ್ಕದಲ್ಲಿರುವವರಿಗು ಸಹ ಆಕೆ ಶರೀರದೊಳಗಿನ ದೆವ್ವ ಹೊರಗೆ ಬಂದಿದೆಯೆಂದು ಅರ್ಥವಾಯಿತು.

**ನಾನು** :– ನೀನು ಏಕೆ ನಕ್ಕಿರುವುದು ಹೇಳು?

**ಆಕೆ** :– ಎಷ್ಟೋ ಜನ ವಯಸ್ಸಾದ ಮುದುಕ ಮಂತ್ರಗಾರರು ಸಹ ನನ್ನನ್ನು ನೋಡಿ ಕೊನೆಗೆ ಓಡಿಹೋಗಿದ್ದಾರೆ. ನೀನು ಚಿಕ್ಕವನು, ನನ್ನನ್ನು ಕರೆದ ನಿನ್ನನ್ನು ನೋಡಿ ನಗು ಬಂದಿದೆ.

**ನಾನು** :– ಮಂತ್ರಗಾರರು ಮಂತ್ರಿಸಿ, ಧೂಪದ ಹೊಗೆ ಇಟ್ಟು, ಬೇವಿನ ಸೊಪ್ಪನ್ನು ಅಲ್ಲಾಡಿಸಿ ನಿನ್ನನ್ನು ಹೊರಗೆ ಕರೆದಿರುತ್ತಾರೆ. ಆದರೆ ನಾನು ನಿನ್ನನ್ನು ಮಂತ್ರಿಸಿದ್ದೇನಾ? ದೂಪ ಹಾಕಿದ್ದೇನಾ? ಬೇವಿನ ಸೊಪ್ಪಿನಿಂದ ಇಳೆತೆಗೆದಿದ್ದೇನಾ? ಒಂದು ಅಗರಬತ್ತಿಯನ್ನಾದರು ಹಚ್ಚಿದ್ದೇನಾ? ಮಾಂತ್ರಿಕರು ಮಾಡಿದಹಾಗೆ ನಾನೇನು ಮಾಡಲಿಲ್ಲವಲ್ಲ! ನೋವನ್ನು ಕರೆದಿದ್ದೇನೆ ಬಂದಿದೆ, ನೋವಿಗೆ ಕಾರಣವಾದ ನಿನ್ನನ್ನು ಕರೆದಿದ್ದೇನೆ ನೀನು ಬಂದಿದ್ದೀಯ. ನನ್ನ ಹತ್ತಿರ ನಿಂಬೆಕಾಯಿಗಳಿಲ್ಲ, ಕೋಳಿಗಳಿಲ್ಲ, ನಾನು ಮಾಂತ್ರಿಕನು ಅಲ್ಲ, ಮೇಲಾಗಿ ಚಿಕ್ಕ

ಹುಡುಗನು, ಹಾಗಿರುವಾಗ ನನ್ನ ಮಾತು ಕೇಳುತ್ತಲೆ ನೀನು ಹೊರಗೇಕೆ ಬಂದಿದ್ದೀಯ ಹೇಳು?

**ಆಕೆ** :– ಏನೊ! ದಯೆತೋರಿ ಬಂದಿದ್ದೇನೆ. ನನ್ನನ್ನು ಕರೆಯುವುದಕ್ಕೆ ಅಸಲಿಗೆ ನೀನು ಯಾರು?

**ನಾನು** :– ಆ ಪ್ರಶ್ನೆ ನಾನು ನಿನ್ನನ್ನು ಕೇಳಬೇಕು. ಅಸಲಿಗೆ ನೀನು ಯಾರು?

**ಆಕೆ** :– ನಾನು ಯಾರೆಂದು ಹೇಳಿದರೆ ಭಯಪಡುತ್ತೀಯ, ನಿನಗೆ ನಿದ್ರೆ ಬರುವುದಿಲ್ಲ.

**ನಾನು** :– ನನಗೆ ನಿದ್ರೆ ಬರುತ್ತದೊ, ಹೋಗುತ್ತದೊ ಅದನ್ನು ಪಕ್ಕಕಿಟ್ಟು, ನೀನು ಒಂದು ಬಾರಿ ನನ್ನ ಕಡೆ ನೋಡು ನಾನ್ಯಾರೊ ನಿನಗೆ ತಿಳಿಯುತ್ತದೆ.

(ಆಗ ಆಕೆ ತಲೆ ಎತ್ತಿ ನನ್ನ ಕಡೆ ನೋಡಿ ತಕ್ಷಣವೆ ತಲೆ ತಗ್ಗಿಸಿಕೊಂಡಳು. ಏನು ಮಾತನಾಡಲಿಲ್ಲ)

**ನಾನು** :– ಈಗ ಜಾಗ್ರತೆಯಿಂದ ಮಾತನಾಡು. ನಾನು ಕೇಳುವುದಕ್ಕೆ ನೇರವಾಗಿ ಉತ್ತರ ಹೇಳು. ನೀನು ಅಸತ್ಯವನ್ನು ಹೇಳಿದರು ನಾನು ಗ್ರಹಿಸಬಲ್ಲೆನು. ಇಲ್ಲಿಯವರೆಗೆ ಎಲ್ಲರಹತ್ತಿರ ಮಾತನಾಡಿದ ಹಾಗೆ ಮಾತನಾಡಿದ್ದೀಯ. ಈಗ ನಿನಗೆ ಅರ್ಥವಾಗಿದೆ. ಮಂತ್ರಗಾರನಲ್ಲವೆಂದು. ಆದ್ದರಿಂದ ನಾನು ಏನು ಕೇಳುವುದಿಲ್ಲ ಎಲ್ಲ ನೀನೆ ಹೇಳು.

(ಆಗ ಆಕೆಯ ಶರೀರದೊಳಗಿನ ದೆವ್ವ ಹೀಗೆ ಹೇಳುವುದನ್ನು ಪ್ರಾರಂಭಿಸಿತು)

ನಮ್ಮ ಊರಿನಲ್ಲಿ ನನ್ನನ್ನು ಎಲ್ಲರು ವೀರಪ್ಪ ಎಂದು ಕರೆಯುತ್ತಿದ್ದರು. ಇಲ್ಲಿಗೆ ಹತ್ತು ಕಿಲೋಮೀಟರುಗಳ ದೂರದಲ್ಲಿ ರೈಲು – ದಾರಿಯ ಪಕ್ಕದಲ್ಲಿಯೆ ನಮ್ಮ ಊರು ಇದೆ. ಆ ಊರಿನಲ್ಲಿ ಬಡಗಿ ಕೆಲಸ (ಚೆಕ್ಕೆ ಕೆಲಸ) ಮಾಡುತ್ತಿದ್ದೆನು. ಆ ಊರಿನಲ್ಲಿರುವವರೆಲ್ಲರು ನನ್ನನ್ನು ಮಾವ ಎಂದು ಕರೆಯುತ್ತಿದ್ದರು. ನಮ್ಮ

ಊರಿನಲ್ಲಿ ರೆಡ್ಡಿ ಕುಟುಂಬಗಳಿವೆ. ಅವುಗಳಲ್ಲಿ ಎರಡು ಮನೆಗಳು ದೊಡ್ಡ ಹೆಸರಿರುವ ಕುಟುಂಬಗಳು. ಅವರು ಬಹಳ ಧನಿಕರು. ಊರಿನಲ್ಲಿ ಎಲ್ಲರಿಗು ನನ್ನಿಂದ ಕೆಲಸ ಇರುತ್ತದೆ. ಆದ್ದರಿಂದ ಎಲ್ಲರ ಮನೆಗಳ ಹತ್ತಿರಕ್ಕೆ ಹೋಗಿ ಬರುತ್ತಿದ್ದೆನು. ಅದು ಆ ಊರಿನಲ್ಲಿ ನನಗಿರುವ ಸಂಬಂಧ. ಇನ್ನು ನನ್ನ ಸ್ವಂತ ವಿಷಯಕ್ಕೆ ಬಂದರೆ, ನಾನು ವಿಶ್ವ ಬ್ರಾಹ್ಮಣ ಕುಲದಲ್ಲಿ ಹುಟ್ಟಿದವ. ನನ್ನ ಅಸಲು ಹೆಸರು ವೀರಪ್ಪಾಚಾರಿ. ನಾನು ದೊಡ್ಡ ಮಾಂತ್ರಿಕನು. ಕಾಳಿಕಾದೇವಿ ಉಪಾಸಕನು. ಮಂತ್ರಸಿದ್ಧಿಯಿಂದ ಕಾಳಿಕಾ ದೇವಿಯನ್ನು ನನ್ನ ವಶಮಾಡಿ ಕೊಂಡವನು. ನಾನು ಸತ್ತು ಹೋದರೂ ಇಂದಿಗೂ ನಾನು ಮಂತ್ರ ಸಿದ್ಧನೆ, ಕಾಳಿಕಾದೇವಿ ನನ್ನ ವಶದಲ್ಲಿಯೆ ಇದ್ದಾಳೆ. ನಾನು ಹೇಳಿದ ಕೆಲಸ ಮಾಡುತ್ತಾಳೆ. ಇಲ್ಲಿಯವರೆಗೆ ಆಂಧ್ರ ದೇಶದಲ್ಲಿ ನನ್ನನ್ನು ಮೀರಿದ ಮಾಂತ್ರಿಕರು ಯಾರೂ ಇಲ್ಲ. ಯಾರಾದರೂ ಮಾಂತ್ರಿಕನು ನನ್ನನ್ನು ಬಿಡಿಸಬೇಕೆಂದು ಬಂದರೆ ಅಳಿಸಿ ಕಳುಹಿಸುತ್ತಿದ್ದೆನು. ನನ್ನ ಹತ್ತಿರಕ್ಕೆ ಬಂದವರೆಲ್ಲಾ ಭಯಪಟ್ಟು ಓಡಿ ಹೋಗಿದ್ದಾರೆ. ಮೊದಲು ನೀನು ಸಹ ಮಂತ್ರಗಾರನೆಂದೆ ಅಂದುಕೊಂಡು ನಿನ್ನನ್ನುನೋಡಿ ನಗು ಬಂದು ನಕ್ಕಿದೆನು. ನೀವು ಮಾಂತ್ರಿಕನು ಅಲ್ಲವೆಂದು ಈಗ ತಿಳಿಯಿತು. ನೀವು ಏನು ಕೇಳಿದರೂ ಮುಚ್ಚಿಡದೆ ಹೇಳುತ್ತೇನೆ.

**ನಾನು :–** ಅಷ್ಟು ದೊಡ್ಡ ಮಾಂತ್ರಿಕನು, ಕಾಳಿಕಾ ದೇವಿಯೆ ನಿನ್ನ ವಶದಲ್ಲಿರುವಾಗ ನಿನ್ನ ಹುದ್ದೆ ದೊಡ್ಡದಾಗಿರಬೇಕಲ್ಲ! ಚಿಲ್ಲರೆ ಮನುಷ್ಯನ ಹಾಗೆ ಈಕೆಯೊಳಗೆ ಏಕೆ ಸೇರಿದ್ದೀಯ?

**ವೀರಪ್ಪ :–** ನೀವು ಹೇಳಿದ ಹಾಗೆ ನನಗೆ ಚಿಲ್ಲರೆ ಬುದ್ಧಿಗಳಿವೆ. ಸುಂದರವಾದ ಹೆಣ್ಣು ಮಕ್ಕಳನ್ನು ನೋಡಿದರೆ ಆಕೆಯನ್ನು ಹೇಗಾದರೂ ಹೊಂದಬೇಕೆನ್ನುವುದೆ ನನ್ನ ಬಲಹೀನತೆ. ನಾನು ಬದುಕಿರುವಾಗ ನಮ್ಮ ಊರಿನಲ್ಲಿ ದೊಡ್ಡ ಕುಟುಂಬದಲ್ಲಿ ಈಕೆ ದೊಡ್ಡರೆಡ್ಡಿ ಹೆಂಡತಿ. ಈಕೆ ಮೇಲೆ ನನ್ನ ಕಣ್ಣು ಬಿದ್ದಿದೆ, ಈಕೆಯನ್ನು ಹೇಗಾದರೂ ಅನುಭವಿಸಬೇಕೆಂದು ಅಂದುಕೊಳ್ಳುತ್ತಿದ್ದೆನು. ಆದರೆ ಬದುಕಿರುವಾಗ ಯಾವಾಗಲೂ ಅವಕಾಶ ಸಿಗಲಿಲ್ಲ. ನಾನು ಸತ್ತುಹೋದ ನಂತರ ಯಾವ ಅಡಚಣೆಗಳು ಇಲ್ಲ, ಆದ್ದರಿಂದ ನಾನು ಈಕೆಯಲ್ಲಿ ಸೇರಿದ್ದೇನೆ.

**ನಾನು** :– ನೀನು ನಿನ್ನ ಇಷ್ಟ ಪ್ರಕಾರ ಈಕೆಯೊಳಗೆ ಬಂದಿದ್ದೀಯ ಸರಿ, ವಾರಕ್ಕೆ ಒಂದು ಬಾರಿ ಹೊಟ್ಟೆನೋವು ಬರುವುದೇನು? ಹಾಗೆ ಏಕೆ ಮಾಡುತ್ತಿದ್ದೀಯ?

**ವೀರಪ್ಪ** :– ನಾನು ಮಂತ್ರಗಾರನು, ಇಂದಿಗೂ ನಿಯಮ ನಿಷ್ಠೆಗಳಿಂದ ಮಂತ್ರಜಪ ಮಾಡುತ್ತಿದ್ದೇನೆ. ನನ್ನ ಮಂತ್ರ ಶಕ್ತಿಯನ್ನು ಕಳೆದುಕೊಂಡಿಲ್ಲ. ನನಗೆ ಒಂದು ನಿಯಮವಿದೆ. ಅದರ ಪ್ರಕಾರ ವಾರಕ್ಕೆ ಒಂದು ಬಾರಿ ಈಕೆಯನ್ನು ಹೊಂದುತ್ತಿದ್ದೇನೆ. ಆದ್ದರಿಂದ ಆಕೆಯ ಹೊಟ್ಟೆಯಲ್ಲಿ ನೋವು ಬರುತ್ತದೆ. ನಾನು ದೊಡ್ಡ ಮಂತ್ರಗಾರನಾದರೂ ನನಗೆ ಒಂದೇ ಒಂದು ಬಲಹೀನತೆ ಇದೆ.

**ನಾನು** :– ಆ ಬಲಹೀನತೆ ಏನು?

**ವೀರಪ್ಪ** :– ನನಗೆ ಒಂದು ಬಲಹೀನತೆ ಇದೆಯೆಂದು ನಾನು ಮೊದಲೆ ಹೇಳಿದ್ದೇನೆ. ನಿಮ್ಮ ಮುಂದೆ ಮುಚ್ಚಿಡದ ವಾಸ್ತವವೊಂದಿದೆ. ಅದೇನೆಂದರೆ ಈಕೆ ಮಗಳು ಬಹಳ ಸೌಂದರ್ಯವತಿ, ಯುಕ್ತ ವಯಸ್ಸಿನಲ್ಲಿದ್ದ ಆಕೆಯನ್ನು ನೋಡಿ ನನ್ನಲ್ಲಿ ಕೋರಿಕೆ ಹುಟ್ಟಿತು. ನಾನು ಇಷ್ಟು ದೊಡ್ಡ ಮಾಂತ್ರಿಕನಲ್ಲವೆ! ನನ್ನಿಂದ ಆಗದಿರುವುದೇನಿದೆ ಏನೊ ಒಂದು ಮಾಡಬೇಕು ಎಂದು ಅಂದುಕೊಳ್ಳುತ್ತಿದ್ದೆ. ಏನಾದರೂ ಹೊರಗಡೆ ತಿಳಿದರೆ ರೆಡ್ಡಿಯವರು ಸಾಯಿಸುತ್ತಾರೆನ್ನುವ ಭಯ ಮತ್ತೊಂದು ಕಡೆ ಇರುತ್ತಿತ್ತು. ಆ ಕೋರಿಕೆಯು ಸಹ ನಾನು ಸಾಯುವವರೆಗು ಈಡೇರಲಿಲ್ಲ.

**ನಾನು** :– ನಿನ್ನ ವಯಸ್ಸೆಷ್ಟು ? ನೀನು ಹೇಗೆ ಸತ್ತು ಹೋಗಿದ್ದೀಯ?

**ವೀರಪ್ಪ** :– ನನ್ನ ವಯಸ್ಸು 45 ವರ್ಷಗಳಿಗಿಂತ ಹೆಚ್ಚಿಗೆ ಇರುವುದಿಲ್ಲ. ನಾನು ಯಾವ ರೋಗದಿಂದಲೂ ಸಾಯಲಿಲ್ಲ. ಒಳ್ಳೆಯ ಆರೋಗ್ಯದಿಂದ ಇದ್ದೆನು. ಇಷ್ಟು ಬೇಗ ನಾನು ಸಾಯುತ್ತೇನೆಂದು ಯಾವಾಗಲೂ ಅಂದುಕೊಳ್ಳಲಿಲ್ಲ. ಇಂದಿಗೆ ಮೂರು ವರ್ಷಗಳ ಕೆಳಗೆ ಒಂದು ದಿನ ಮಳೆ ಚೆನ್ನಾಗಿ ಬಂದಿತ್ತು.

ಆ ದಿನ ರೆಡ್ಡಿಯವರ ಮನೆಯಲ್ಲಿ ದನಗಳ ಕೊಟ್ಟಿಗೆ ಮೇಲಿರುವ ತೊಲೆ ಹಸಿಮಣ್ಣು ಭಾರಕ್ಕೆ ಸ್ವಲ್ಪ ಮುರಿದಹಾಗೆ ಚಿಕ್ಕ ಗೆರೆ ಕಾಣಿಸಿತು. ತೊಲೆ ಮುರಿದುಹೋದರೆ ದನಗಳ ಮೇಲಿನ ಹೊದಿಕೆಯೆಲ್ಲಾ ಕೂಲಿಕೊಂಡು ಬೀಳುತ್ತದೆಂದು ಅಲ್ಲಿರುವವರು ನೊಗ [ಎತ್ತುಗಳ ಕುತ್ತಿಗೆ ಮೇಲೆ ಇಡುವ ಉದ್ದನೆಯ ಕಟ್ಟಿಗೆಯನ್ನು] ತೊಲೆಗೆ ಆನಿಸಿ ಇಟ್ಟಿದ್ದಾರೆ. ಆ ನೊಗ ತೊಲೆ ಮುರಿದು ಹೋಗದಂತೆ ಸಪೋಟಿಗಿ ಇತ್ತು. ಕಟ್ಟಿಗೆ ಕೆಲಸ ಮಾಡುವವನಾದ್ದರಿಂದ ಅದನ್ನು ಹೇಗೆ ಸರಿ ಮಾಡಬೇಕೆಂದು ಕೇಳುವುದಕ್ಕಾಗಿ ನನ್ನನ್ನು ರೆಡ್ಡಿ ಕರಿಯುತ್ತಿದ್ದಾನೆಂದು ಕೆಲಸದ ಆಳು ಬಂದು ಹೇಳಿದನು. ತಕ್ಷಣವೆ ನಾನು ಹೋಗಿದ್ದೇನೆ.

ಮನೆಗೆ ಹೋಗುತ್ತಲೆ ರೆಡ್ಡಿ ಕಾಫಿ ಕೊಡಿಸಿದನು. ಕಾಫಿ ಕುಡಿದ ನಂತರ ತೊಲೆಯನ್ನು ಏನು ಮಾಡಬೇಕೊ ನೋಡೆಂದನು, ಕಾಫಿ ಕುಡಿದ ನಂತರ ತೊಲೆ ಕೆಳಗೆ ಹೋಗಿ ನೋಡುತ್ತಿರುವಾಗ ಅಲ್ಲಿಯವರೆಗು ತೊಲೆಗೆ ಆಸರವಾಗಿ ಇಟ್ಟ ನೊಗ ಮುರಿದು ಹೋಗುವ ದೊಡ್ಡ ಶಬ್ದದಿಂದ ತೊಲೆ ಮುರಿದು ನನ್ನ ತಲೆ ಮೇಲೆ ಬೀಳುವುದು ಕ್ಷಣಗಳಲ್ಲಿ ನಡೆದುಹೋಯಿತು. ತೊಲೆ ನನ್ನ ಮೇಲೆ ಬೀಳುವುದೆ ಅಲ್ಲದೆ ಮೇಲಿನ ಹೊದಿಕೆಯೆಲ್ಲಾ ನನ್ನ ಮೇಲೆ ಕುಸಿದು ಬಿದ್ದಿತು. ನನ್ನ ತಲೆ ಸೀಳಿ ಹೋಗಿದೆ ನನಗೆ ಕ್ಷಣಗಳಲ್ಲಿ ಪ್ರಾಣ ಹೋಯಿತು. ಹೀಗೆ ಅಂದುಕೊಳ್ಳದ ಸಂಘಟನೆಯಿಂದ ನಾನು ಸತ್ತು ಹೋದೆನು. ನನ್ನ ಶರೀರ ಶಿಥಿಲವಾಗಿ ಹೋಗಿದೆ. ಸೂಕ್ಷ್ಮ ಶರೀರ ಉಳಿದಿದೆ. ಆಗ ಅಲ್ಲಿರುವವರೆಲ್ಲ ಮಣ್ಣನ್ನು, ಕಟ್ಟಿಗೆಗಳನ್ನು ತೊಲೆಯನ್ನು ತೆಗೆದು ಹಾಕಿದರು. ನಾನು ಎದ್ದು ಹೊರಗೆ ಬಂದೆನು. ಆದರೆ ಅಲ್ಲಿ ನನ್ನ ಶರೀರ ತಲೆ ಒಡೆದು ಬಿದ್ದಹಾಗೆ ನನಗೆ ಕಾಣಿಸುತ್ತಿದೆ. ನಾನು ಯಾರನ್ನು ಮಾತನಾಡಿಸಿದರು ಯಾರೂ ನನ್ನನ್ನು ಗಮನಿಸಲಿಲ್ಲ. ಆಗ ನಾನು ಸತ್ತು ಹೋಗಿದ್ದೇನೆಂದು, ಸತ್ತುಹೋಗಿ ದೆವ್ವವಾಗಿ ಇದ್ದೇನೆಂದು ನನಗೆ ಅರ್ಥವಾಯಿತು. ನನ್ನ ಸಾವನ್ನು ಕುರಿತು ಎರಡು ದಿನಗಳು ಚಿಂತಿಸಿದ ನಾನು ಮನುಷ್ಯನಿಗಿಂತ ದೆವ್ವವಾಗಿ ಇರುವುದೆ

ಚೆನ್ನಾಗಿದೆಯೆಂದುಕೊಂಡೆನು. ಅಲ್ಲಿಯವರೆಗು ನನ್ನಲ್ಲಿದ್ದ ಕೋರಿಕೆಯ ಪ್ರಕಾರ ಮೊದಲು ಈಕೆಯ ಮಗಳನ್ನು ಹೊಂದಿದೆನು. ಆಕೆ ಮನುಷ್ಯಳಾಗಿ ಅಲ್ಲದೆ, ನಾನು ಆಕೆಗೆ ಕಾಣಿಸುವ ಹಾಗೆ ಆಕೆಯನ್ನು ದೆವ್ವವಾಗಿ ಬದಲಾಯಿಸಿದರೆ ಇಬ್ಬರೂ ಸೇರಿ ಇರಬಹುದೆಂದುಕೊಂಡೆನು. ಹಾಗೆ ಅಂದುಕೊಂಡ ಸ್ವಲ್ಪಕಾಲಕ್ಕೆ ಆಕೆಯನ್ನು ಸಾಯಿಸಿ ನನ್ನಹಾಗೆ ದೆವ್ವವಾಗಿ ಬದಲಾಯಿಸಿಕೊಂಡಿದ್ದೇನೆ. ಆಕೆ ಆಕೆಯ ತಾಯಿ ಒಂದು ಜಾಗದಲ್ಲಿ ಇರದ ಹಾಗೆ ಮಗಳನ್ನು ಕೆಲವು ಮೈಲುಗಳ ದೂರದಲ್ಲಿರುವ ಬೆಟ್ಟದಲ್ಲಿ ಇಟ್ಟಿದ್ದೇನೆ. ವಾರದಲ್ಲಿ ಸ್ವಲ್ಪದಿನ ಅಲ್ಲಿ, ಸ್ವಲ್ಪ ದಿನ ಇಲ್ಲಿ ಇರುತ್ತೇನೆ.

**ನಾನು** :– ಈಕೆಯ ಮಗಳನ್ನು ಹೇಗೆ ಸಾಯಿಸಿದೆ?

**ವೀರಪ್ಪ** :– ಮೊದಲು ಶರೀರದಲ್ಲಿ ಸೇರಿ ಜೀರ್ಣಾಶಯವನ್ನು ಒತ್ತಿಟ್ಟುಕೊಂಡು ಹೊಟ್ಟೆನೋವು ಬರುವಂತೆ ಮಾಡಿದೆನು. ಡಾಕ್ಟರ್ ಹತ್ತಿರ ತೋರಿಸಿದರು, ಔಷಧ ಬಳಸಿದರು. ಆದರೆ ಏನು ಗುಣವಾಗಲಿಲ್ಲ. ನಾನು ಒತ್ತಿಡುವಷ್ಟು ನೋವು ಬರುತ್ತಿತ್ತು. ಕೊನೆಗೆ ಡಾಕ್ಟರುಗಳಿಗೆ ಏನೂ ಅರ್ಥವಾಗಲಿಲ್ಲ. ಜೀರ್ಣಾಶಯವನ್ನು ಅಮುಕಿದರೆ ನೋವು ಬರುತ್ತದೆ ಆದರೆ ಆಕೆ ಸಾಯಲಿಲ್ಲ. ಎಲ್ಲರ ದೃಷ್ಠಿಯನ್ನು ಹೊಟ್ಟೆನೋವಿನ ಮೇಲೆ ಇಟ್ಟು, ಒಳಗೆ ಉಸಿರಾಟದ ಚೀಲಗಳನ್ನು ಅಮುಕಿ ಉಸಿರಾಡದಂತೆ ಮಾಡಿ ಸಾಯಿಸಿದೆನು. ನಾನು ಸಾಯಿಸಿದೆನೆಂದು ಸತ್ತು ಹೋದ ಈಕೆ ಮಗಳಿಗೆ ಗೊತ್ತಿಲ್ಲ. ಆಕೆ ಸೂಕ್ಷ್ಮ ಶರೀರವಾಗಿ ಬದಲಾದ ನಂತರ ನಾನು ಕಾಣಿಸಿದೆನು. ಪರಿಚಯವಿದ್ದ ವ್ಯಕ್ತಿ ನಾನೊಬ್ಬನೆ. ಉಳಿದ ಸೂಕ್ಷ್ಮಗಳು ಕಾಣಿಸಿದರೂ ಅವರು ಪರಿಚಯವಿಲ್ಲ, ಆದ್ದರಿಂದ ಆಕೆ ನನ್ನೊಂದಿಗೆ ಮಾತನಾಡಬೇಕಾಗಿ ಬಂದಿದೆ. ಅಂದಿನಿಂದ ಆಕೆಯನ್ನು ನನ್ನ ಹತ್ತಿರವೆ ಇಟ್ಟುಕೊಂಡಿದ್ದೇನೆ.

**ನಾನು** :– ಇದೆಲ್ಲಾ ಪಾಪದ ಕೆಲಸವಲ್ಲವೆ? ನೀನು ಇನ್ಯಾರನ್ನಾದರು ಸಾಯಿಸಿದ್ದೀಯ?

**ವೀರಪ್ಪ :–** ಒಳಗೆ ಒಂದು ಕಡೆ ಪಾಪಬರುತ್ತದೆಂದು ಅನಿಸಿದರೂ, ನಾನು ಸತ್ತುಹೋದನಂತರ ಅಲ್ಲವೆ ಯಮಲೋಕಕ್ಕೆ ಹೋಗುವುದು. ಆಗ ಏನು ನಡೆಯುತ್ತದೊ ಯಾವನು ನೋಡಿದ್ದಾನೆ ಎಂದೆನಿಸಿತು. ಅನುಕೂಲವಾದ ಕೆಲಸವನ್ನು ಬಿಡಬಾರದೆಂದನಿಸಿತು. ಒಂದು ಸಮಯದಲ್ಲಿ ಕಾಳಿ ಮಾತೆಯನ್ನು ವಶಪಡಿಸಿಕೊಳ್ಳುವುದಕ್ಕೆ ಒಂಭತ್ತು ವರ್ಷಗಳ ಹುಡುಗಿಯನ್ನು ಸ್ಮಶಾನದಲ್ಲಿ ಕಡಿದು ಸಾಯಿಸಿದೆನು. ಅದು ಪಾಪವೆ ಅನಿಸಿದರು ದೇವತೆ ಕೋರಿಕೊಂಡಾಗ ನನ್ನದೇನು ತಪ್ಪು ಅಂದುಕೊಂಡೆನು. ಅಂತಹ ಬಲಿ ಕೊಟ್ಟ ನಂತರವೆ ಕಾಳಿಕಾದೇವಿ ನನಗೆ ವಶವಾದಳು.

**ನಾನು :–** ಇಷ್ಟು ಭಯಂಕರವಾದ ಕೆಲಸವನ್ನು ಸ್ವಲ್ಪವಾದರೂ ಪಶ್ಚಾತ್ತಾಪವಿಲ್ಲದೆ ಹೇಳುತ್ತಿದ್ದೀಯ. ನೀನು ಬಹಳ ಕಠಿಣಾತ್ಮನು. ನಿನಗೆ ಸಮಾಜವೆಂದರೂ, ಕಾನೂನು ಎಂದರೂ, ಪೊಲೀಸರೆಂದರೂ ಭಯ ಇಲ್ಲವೆ?

**ವೀರಪ್ಪ :–** ಹೊರಗಡೆ ತಿಳಿದರೆ ಭಯವೆ, ಗೊತ್ತಿಲ್ಲದೆ ಮಾಡಿದರೆ ಭಯವೇಕೆ? ಈಗಾದರೆ ಭಯ ಪಡಬೇಕಾದ ಕೆಲಸವಿಲ್ಲ. ನಾನು ಸತ್ತು ಹೋಗಿದ್ದೇನಲ್ಲಾ! ನನ್ನನ್ನು ಪೊಲೀಸರು ಏನು ಮಾಡುತ್ತಾರೆ? ಒಂಬತ್ತು ವರ್ಷಗಳ ಹುಡುಗಿ ಕಾಣಿಸದೆ ಹೋಗಿದ್ದಾಳೊ ಇಲ್ಲವೊ ವಿಚಾರಿಸಿಕೊಳ್ಳಬೇಕೆಂದು ಹೇಳಿರಿ. ಆ ಊರಿನಲ್ಲಿ ಕಾಣೆಯಾದ ಹುಡುಗಿಯನ್ನು ನಾನೆ ಸಾಯಿಸಿದ್ದೇನೆಂದು ಈಗ ಹೇಳುತ್ತಿದ್ದೇನಲ್ಲ! ಬದುಕಿರುವಾಗಲಾದರೆ ಕಾನೂನು ಪೊಲೀಸರು. ಈಗ ಅವರು ನನ್ನನ್ನು ಏನು ಮಾಡುತ್ತಾರೆ? ನೀವು ಎಲ್ಲ ಹೇಳಬೇಕು ಎಂದಿದ್ದೀರ, ಆದ್ದರಿಂದ ಇನ್ನೊಂದು ರಹಸ್ಯವನ್ನು ಸಹ ಹೇಳುತ್ತಿದ್ದೇನೆ. ಒಂದು ದಿನ ರಾತ್ರಿ ನಡೆದುಕೊಂಡು ನಮ್ಮ ಊರಿಗೆ ಬರಬೇಕೆಂದು ಬರುತ್ತಿದ್ದೇನೆ. ಆಗ ಅಷ್ಟು ರಾತ್ರಿ ವೇಳೆಯಲ್ಲಿ ಒಬ್ಬ ಹೆಂಗಸು ಎದುರಾದಳು. ಬಂಗಾರದ ಒಡವೆಗಳನ್ನು ಧರಿಸಿಕೊಂಡಿದ್ದಾಳೆ. ಆ ಹೆಂಗಸನ್ನು ನಿಲ್ಲಿಸಿ ಯಾರು ನೀನು ಎಂದು ಕೇಳಿದೆನು. ಆ ಹೆಂಗಸು ಅಳುತ್ತಾ ನನಗೆ ಬಲವಂತದ ಮದುವೆ ಮಾಡುತ್ತಿದ್ದಾರೆ. ಅದಕ್ಕೆ ಓಡಿ ಬಂದಿದ್ದೇನೆಂದು ಹೇಳಿದಳು. ಆಕೆ ಮದುಮಗಳೆಂದು, ಓಡಿ ಬಂದಿದ್ದಾಳೆಂದು

ಅರ್ಥವಾಯಿತು. ಎಲ್ಲಿಗೆ ಹೋಗಬೇಕೆಂದು ಕೇಳಿದೆನು. ಎಲ್ಲಿಗೆ ಹೋಗಬೇಕೊ ಗೊತ್ತಿಲ್ಲ. ಮೊದಲು ಅಲ್ಲಿಂದ ಓಡಿಹೋಗಬೇಕೆಂದನಿಸಿತು, ಬಂದಿದ್ದೇನೆ ಅಂದಳು. ಆಗ ನಾನು ನನ್ನ ಮನೆಗೆ ಬಾ! ಎರಡು ದಿನಗಳ ನಂತರ ಮದುವೆ ನಿಂತು ಹೋಗುತ್ತದಲ್ಲ! ಆಗ ನೀನು ಮನೆಗೆ ಹೋಗಬಹುದು ನಾನು ಸಹ ಬಂದು ಆ ಮದುವೆ ಬೇಡವೆಂದು ಹೇಳುತ್ತೇನೆ ಎಂದು ಅಂದಾಗ ಆಕೆ ನನ್ನ ಜೊತೆ ಬಂದಳು. ಅರ್ಧ ರಾತ್ರಿ ನಂತರ ಊರಿನೊಳಗೆ ಹೋದೆವು ಆದ್ದರಿಂದ ಯಾರೂ ನೋಡಲಿಲ್ಲ. ಆಕೆ ಮಲಗಿಕೊಂಡ ನಂತರ ಕೊಡಲಿಯಿಂದ ತಲೆಮೇಲೆ ಒಡೆದು ಸಾಯಿಸಿ, ಆಕೆ ಮೈಮೇಲಿರುವ ಒಡವೆಗಳನ್ನು ತೆಗೆದುಕೊಂಡೆನು. ನನ್ನ ಮನೆಯಲ್ಲಿಯೆ ಗುಂಡಿ ತೆಗೆದು ಅದರಲ್ಲಿ ಊತಾಕಿದೆನು. ಈ ವಿಷಯ ಸಹ ಯಾರಿಗೂ ಗೊತ್ತಿಲ್ಲ. ಈಗ ಹೇಳಿದರೂ ನನ್ನನ್ಯಾರು ಏನು ಮಾಡಲಾರರು. ಆದ್ದರಿಂದ ಹೇಳುತ್ತಿದ್ದೇನೆ. ನನ್ನ ಮಾತು ಅಸತ್ಯವೇನೊ ಎಂದು ಅಂದು ಕೊಳ್ಳುವುದಕ್ಕು ಸಹ ಅವಕಾಶವಿಲ್ಲ. ಏಕೆಂದರೆ ಈಗ ಹೋಗಿ ಗುಂಡಿ ತೆಗೆದು ನೋಡಿದರೂ, ನಾನು ಊತಿಟ್ಟ ಜಾಗದಲ್ಲಿ ಆಕೆಯ ಶವದ ಮೂಳೆಗಳು ದೊರಕುತ್ತವೆ. ನಾನು ಬದುಕಿರುವಾಗ ಈ ಎರಡು ಹತ್ಯೆಗಳನ್ನು ಮಾಡಿದ್ದೇನೆ. ಅವು ಇಬ್ಬರು ಹೆಂಗಸರನ್ನೆ. ನಾನು ಸತ್ತ ನಂತರ ಈಕೆಯ ಮಗಳನ್ನು ಮಾತ್ರ ಸಾಯಿಸಿದ್ದೇನೆ. ಇನ್ಯಾರನ್ನು ಸಾಯಿಸಲಿಲ್ಲ. ಒಟ್ಟು ಮೂವರನ್ನು ಮದುವೆ ಯಾಗದವರನ್ನೆ ಸಾಯಿಸಿದ್ದೇನೆ.

**ನಾನು :–** ನಿನ್ನ ಚರಿತ್ರೆ ಬೇಡ ಆದರೆ ಈಕೆಯ ಸಮಸ್ಯೆ ಹೇಳು. ಇವರು ದೇವತೆಗಳ ಹತ್ತಿರಕ್ಕೆ, ಮಾಂತ್ರಿಕರ ಹತ್ತಿರಕ್ಕೆ ಹೋಗಿ ತೋರಿಸಿದ್ದಾರಲ್ಲವೆ! ಆಗ ನೀನು ಏಕೆ ಬಿಟ್ಟು ಹೋಗಲಿಲ್ಲ?

**ವೀರಪ್ಪ :–** ಇವರು ನನಗೆ ವಿರುದ್ಧವಾಗಿ ಮಾಂತ್ರಿಕರ ಹತ್ತಿರಕ್ಕೆ, ದೇವತೆಗಳ ಹತ್ತಿರಕ್ಕೆ ಹೋಗಿದ್ದಾರೆ. ಆಗಿರುವಾಗ ಮಾಂತ್ರಿಕರಾಗಾಗಲಿ, ದೇವತೆಗಳಾಗಲಿ ನನ್ನನ್ನು ಏನು ಮಾಡಲಾಗಲಿಲ್ಲ. ಅವರನ್ನು ನಾನೇ ಹೆದರಿಸಿದ್ದೇನೆ. ನನಗೆ ಕಾಳಿಕಾದೇವತೆ ವಶದಲ್ಲಿದ್ದಾಳೆ ಆದ್ದರಿಂದ, ಉಳಿದ ದೇವತೆಗಳು ನನ್ನನ್ನು

ನೋಡಿ ಏನು ಮಾಡದೆ ಹೋಗಿದ್ದಾರೆ. ಗಂಡಿ ಆಂಜನೇಯಸ್ವಾಮಿ ಹತ್ತಿರಕ್ಕೆ ಹೋಗಿದ್ದಾರೆ. ಅಲ್ಲಿ ಆಂಜನೇಯನು ಹೆಸರುವಾಸಿಯಾಗಿರುವವನೆ, ಶಕ್ತಿವಂತನೆ ನನ್ನಹತ್ತಿರಕ್ಕೆ ಆತನು ಬಂದು ದಂಡಿಸಬೇಕೆಂದು ನೋಡಿದನು. ಆದರೆ ನಾನೆ ಆತನನ್ನು ಹುಷಾರ್ ಎಂದು ಎಚ್ಚರಿಸಿದೆನು. ನಾನು ಎಲ್ಲರ ಹಾಗೆ ಮನುಷ್ಯನಲ್ಲ, ನನ್ನ ಸುದ್ದಿಗೆ ಬಂದರೆ ನಿನ್ನ ಬಾಲ ಕಿತ್ತುಹೋಗುತ್ತದೆಂದು ಹೇಳಿದೆನು. ಆ ದಿನದಿಂದ ಗಂಡಿ ಆಂಜನೇಯನು ನನ್ನ ಕಡೆಗೆ ನೋಡಲಿಲ್ಲ. ಗಂಡಿಯಲ್ಲಿ ಒಂದು ತಿಂಗಳ ಕಾಲ ಇದ್ದು ಬಂದು, ಮತ್ತೆ ಸ್ವಲ್ಪದಿನಗಳಿಗೆ ಕಸಾಪುರದ ಆಂಜನೇಯಸ್ವಾಮಿ ಹತ್ತಿರಕ್ಕೆ ಹೋಗಿದ್ದಾರೆ. ಅಲ್ಲಿ ಆತನು ಎಲ್ಲ ದೆವ್ವಗಳನ್ನು ಹೊಡೆದಹಾಗೆ ನನ್ನನ್ನು ಸಹ ಹೊಡೆಯಬೇಕೆಂದು ನೋಡಿದನು. ನನ್ನ ತಂಟೆಗೆ ಬಂದರೆ ನಿನಗೆ ಮರ್ಯಾದೆ ಹೋಗುತ್ತದೆಂದು ಹೇಳಿದೆನು. ನಾನು ಮಂತ್ರಗಾರನು ಮತ್ತು ಕಾಳಿಕಾದೇವಿಯನ್ನು ವಶಪಡಿಸಿಕೊಂಡವನೆಂದು ಸಹ ಹೇಳಿದೆನು. ಅಷ್ಟೆ ಅಂದಿನಿಂದ ನನ್ನ ಪಕ್ಕದಲ್ಲಿರುವವನ ಹತ್ತಿರಕ್ಕೆ ಬಂದು, ನನ್ನನ್ನು ಬಿಟ್ಟು ನನ್ನ ಪಕ್ಕದಲ್ಲಿರುವವನನ್ನು ಹೊಡೆಯುತ್ತಿದ್ದನು.

ಪ್ರತಿ ದಿನ ಅಲ್ಲಿ ಬೆಳಗ್ಗೆ, ಸಾಯಂಕಾಲ ಆಂಜನೇಯಸ್ವಾಮಿ ದೆವ್ವಗಳನ್ನು ದಂಡಿಸುವುದನ್ನು ನೋಡುತ್ತಾ ಕುಳಿತುಕೊಳ್ಳುತ್ತಿದ್ದೆನು. ಒಂದು ದಿನ ಬೆಳಗ್ಗೆ 8 ಗಂಟೆ ಸಮಯದಲ್ಲಿ ಒಬ್ಬ ಬಾಣಂತಿ ದೆವ್ವವನ್ನು ಒಡೆಯುತ್ತಿರುವಾಗ ನೋಡಿದೆನು. ಆಕೆ ಸಹ ಒಳ್ಳೆ ಅಂದವಾಗಿದ್ದಾಳೆ. ಆಂಜನೇಯಸ್ವಾಮಿ ಆಕೆಯನ್ನು ಒಡೆಯುವುದು, ಆಕೆ ನಾನು ಹೋಗುತ್ತೇನೆ ಸ್ವಾಮಿ ಎಂದು ಹೇಳುವುದು, ಎರಡು ದಿನಗಳಿಂದ ಸುಳ್ಳು ಹೇಳುತ್ತೀಯೆಂದು ದಂಡಿಸುವುದು, ಇಲ್ಲ ಈ ದಿನವೆ ಸಾಯಂಕಾಲಕ್ಕೆ ಹೋಗುತ್ತೇನೆಂದು ಆಕೆ ಹೇಳಿದಳು. ಅದೆಲ್ಲಾ ನೋಡಿದ ನಾನು, ನಂತರ ಆ ಬಾಣಂತಿ ದೆವ್ವದ ಹತ್ತಿರಕ್ಕೆ ಹೋಗಿ ಆಕೆಯೊಂದಿಗೆ ಮಾತನಾಡಿದೆನು. ಆ ಬಾಣಂತಿ ದೆವ್ವದ್ದು ಉರವಕೊಂಡ ಹತ್ತಿರ ಚಿಕ್ಕ ಹಳ್ಳಿ. ಆಕೆ ಆ ಊರಿನೊಳಗೆ ಒಬ್ಬ ಹೆಂಗಸನ್ನು ಆಕ್ರಮಿಸಿದ್ದಾಳೆ. ಬಾಣಂತಿ ಹಿಡಿದುಕೊಂಡಿರುವವರು ಪೂರ್ತಿ ಬಡವರು ಅವರು ಮಂತ್ರಗಾರರ ಹತ್ತಿರಕ್ಕೆ ಹೋಗದೆ ಕಸಾಪುರಕ್ಕೆ ಬಂದಿದ್ದಾರೆ. ಅಲ್ಲಿ ಆಂಜನೇಯನು ಹೊಡೆಯುವ

ಏಟುಗಳಿಗೆ ಸಹಿಸಲಾರದೆ ಆ ಹೆಂಗಸನ್ನು ಬಾಣಂತಿ ಬಿಟ್ಟು ಹೋಗ ಬೇಕೆಂದುಕೊಂಡಂತೆ ನನಗೆ ತಿಳಿಯಿತು.

ಆಗ ನಾನು ಆಕೆಯೊಂದಿಗೆ ನೀನು ತಗುಲಿಕೊಂಡಿರುವುದು ಕೂಳಿಗೆ, ಬಟ್ಟೆಗೆ ಇಲ್ಲದವರನ್ನು, ನಾನು ತಗುಲಿಕೊಂಡಿರುವುದು ನಮ್ಮ ಊರಿನಲ್ಲಿಯೆ ಬಹಳ ಧನಿಕರು. ನಾನು ಇರುವ ಮನೆಯಲ್ಲಿ ಏನು ತಿನ್ನಬೇಕೆಂದರೂ ತಿನ್ನಬಹುದು ಎಲ್ಲ ಇವೆ. ನಮ್ಮವರಿಗೆ ಮಾವಿನ ತೋಟಗಳಿವೆ. ಎಷ್ಟು ಮಾವಿನ ಹಣ್ಣುಗಳನ್ನಾದರು ತಿನ್ನಬಹುದು. ಇಂತದ್ದು ಇಲ್ಲ ಅನ್ನದ ಹಾಗೆ, ಪ್ರತಿಯೊಂದು ನಾನಿರುವ ಮನೆಯಲ್ಲಿ ಇವೆ. ನನ್ನ ಜೊತೆ ಬಂದರೆ ಚೆನ್ನಾಗಿ ಸುಖಪಡೆಯ ಬಹುದು ಎಂದು ಹೇಳಿದೆನು. ಅದಕ್ಕೆ ಆಕೆ ನನ್ನ ಜೊತೆ ಬರುವುದಕ್ಕೆ ಒಪ್ಪಿಕೊಂಡಳು. ಆಗ ಆಕೆ ನಿಮ್ಮವರು ಹೋಗುವವರೆಗು ನೀನೂ ಇಲ್ಲಿಯೆ ಇರುತ್ತೀಯ ತಾನೆ! ಅಲ್ಲಿಯವರೆಗು ನಾನು ಇದ್ದರೆ ಆಂಜನೇಯಸ್ವಾಮಿ ಹೊಡೆಯುತ್ತಾನೆ, ನನ್ನಿಂದ ಹೊಡೆಸಿಕೊಳ್ಳಲು ಆಗುವುದಿಲ್ಲ ಎಂದು ಹೇಳಿದಳು. ಆ ಮಾತಿಗೆ ನಾನು ಆಕೆಗೆ ಧೈರ್ಯ ಹೇಳಿ ನೀನು ಭಯಪಡಬೇಕಾದ ಕೆಲಸವಿಲ್ಲ. ಆಂಜನೇಯಸ್ವಾಮಿ ನಿನ್ನನ್ನು ಏನು ಅನ್ನದೆ ಇರಬೇಕೆಂದರೆ, ನೀನು ಸಹ ನಾನಿರುವ ಈಕೆ ಶರೀರದೊಳಗೆ ಬಂದುಬಿಡು. ಇಬ್ಬರು ಸೇರಿ ಇರಬಹುದು, ನೀನು ಅವರನ್ನು ಬಿಟ್ಟು ಹೋದಹಾಗೆ ಇರುತ್ತದೆ. ನನ್ನ ಹತ್ತಿರವಿರುವುದರಿಂದ ನಿನ್ನನ್ನು ಆಂಜನೇಯನು ಏನು ಅನ್ನುವುದಿಲ್ಲ ಎಂದು ಹೇಳಿದೆನು. ಆಗ ಆ ಬಾಣಂತಿ ನಾನಿರುವ ಈಕೆ ಶರೀರದೊಳಗೆ ಬಂದಳು. ಇವರು ನನ್ನೊಬ್ಬನನ್ನು ಬಿಡಿಸಿಕೊಳ್ಳಬೇಕೆಂದು ಕಸಾಪುರಕ್ಕೆ ಹೋಗಿದ್ದರು, ನಾನು ಅಲ್ಲಿ ಇನ್ನೊಬ್ಬರನ್ನು ಜೊತೆಮಾಡಿಕೊಂಡು ಬಂದೆನು.

**ನಾನು** :– ಆದರೆ ಈಗ ಈಕೆ ಶರೀರದಲ್ಲೆ ನೀನಲ್ಲದೆ ಮತ್ತೊಬ್ಬರು ಸಹ ಇದ್ದಾರೆ.

**ವೀರಪ್ಪ** :– ಹೌದು. ನೀವು ಎಲ್ಲ ನಿಜ ಹೇಳಬೇಕೆಂದಿದ್ದೀರಲ್ಲ! ಆದ್ದರಿಂದ ಇದ್ದದ್ದು ಇದ್ದಹಾಗೆ ಹೇಳಿದ್ದೇನೆ.

**ನಾನು** :– ನೀನು ಈಗ ಒಳಗೆ ಅಡಗಿಕೊ, ಆಕೆಯನ್ನು ಹೊರಗೆ ಕಳುಹಿಸು. ನೀನು ಹೇಳಿರುವುದು ನಿಜವೊ ಅಲ್ಲವೊ ಈಗಲೆ ತಿಳಿಯುತ್ತದೆ.

(ಆಗ ಅಲ್ಲಿಯವರೆಗು ಮಾತನಾಡುತ್ತಿದ್ದ ವೀರಪ್ಪ ಒಳಗೆ ಹೋದನು. ತಕ್ಷಣವೆ ಒಳಗಿರುವ ಮತ್ತೊಂದು ದೆವ್ವ ಹೊರಗೆ ಬಂದಿತು. ಆ ದೆವ್ವ ಹೊರಗೆ ಬರುತ್ತಲೆ ಬಾಣಂತಿಯರು ಕಿವಿಗೆ ಗಾಳಿ ತಗುಲದಹಾಗೆ ತಲೆಗೆ ಬಟ್ಟೆ ಕಟ್ಟಿಕೊಂಡಹಾಗೆ ಸೀರೆ ಸೆರಗಿನಿಂದ ತಲೆಗೆ ಕಟ್ಟಿಕೊಂಡು ಭಯದಿಂದ ಕುಳಿತಳು. ವೀರಪ್ಪ ಒಳಗೆ ಹೋಗುತ್ತಲೆ ಅಲ್ಲಿಯವರೆಗು ಕಾಣಿಸುತ್ತಿದ್ದ ಮುಖದ ವಿಧಾನ ಕಾಣಿಸದೆ ಹೋಗಿದೆ. ಅಲ್ಲಿವರೆಗು ಕುಳಿತಿರುವ ಹಾಗಲ್ಲದೆ, ಭಯದಿಂದ ಹೆದರಿಕೊಂಡು ಕುಳಿತಳು, ಆ ಬದಲಾವಣೆಯನ್ನು ನೋಡಿ ಅಲ್ಲಿ ನೋಡುತ್ತಿರುವವರೆಲ್ಲಾ ಆಶ್ಚರ್ಯಪಟ್ಟರು)

**ನಾನು** :– ನೀನು ಏನು ಭಯಪಡಬೇಡ. ವೀರಪ್ಪ ಹೇಳಿರುವುದು ನಿಜವೇನಾ? ಇದ್ದದ್ದು ಇದ್ದಹಾಗೆ ಹೇಳು.

**ಬಾಣಂತಿ** :– ನಿಜ ಸ್ವಾಮಿ! ನನ್ನನ್ನು ಹೋಗೆಂದರೆ ಹೋಗುತ್ತೇನೆ, ನನ್ನ ತಪ್ಪು ಏನೂ ಇಲ್ಲ ಸ್ವಾಮಿ.

**ನಾನು** :– ವೀರಪ್ಪ ನಿನ್ನೊಂದಿಗೆ ಸಂಬಂಧ ಇಟ್ಟುಕೊಂಡಿರುವುದು ನಿಜವೇನಾ?

**ಬಾಣಂತಿ** :– ನನ್ನೊಂದಿಗೆ ಸಂಬಂಧ ಇಟ್ಟುಕೊಂಡಿರುವುದು ನಿಜ ಸ್ವಾಮಿ! ನಾನು ಬೇಡ ಎಂದರೂ ಕೇಳಲಿಲ್ಲ.

**ನಾನು** :– ನನ್ನೊಂದಿಗೆ ಹೇಳದೇ ಇನ್ನೂ ಏನಾದರೂ ಮುಚ್ಚಿಟ್ಟಿದ್ದಾನಾ?

**ಬಾಣಂತಿ** :– ವೀರಪ್ಪನಿಗೆ ಕೋಪ ಜಾಸ್ತಿ. ಆಗಾಗ ನನ್ನನ್ನು ಹೊಡೆಯುತ್ತಿರುತ್ತಾನೆ. ಈ ನಡುವೆ ತಿಂಗಳ ಕೆಳಗೆ ವೀರಪ್ಪನನ್ನು ಬಿಡಿಸಲು ಒಬ್ಬ ಮಾಂತ್ರಿಕನನ್ನು ಇವರು ಕರೆದುಕೊಂಡು ಬಂದಿದ್ದರು. ಆದರೆ ವೀರಪ್ಪ ಆ ಮಾಂತ್ರಿಕನನ್ನು ಬಹಳ ಕಷ್ಟ ಕೊಟ್ಟು ಕಳುಹಿಸಿದನು. ಆ ವಿಷಯವೊಂದು ಹೇಳಿಲ್ಲ.

**ನಾನು :–** ನೀನು ಒಳಗೆ ಹೋಗು, ನಾನು ವೀರಪ್ಪನೊಂದಿಗೆ ಮಾತನಾಡುತ್ತೇನೆ.

(ತಕ್ಷಣವೆ ಆಕೆ ಒಳಗೆ ಅಡಗಿಕೊಂಡಳು. ಆಕೆ ಹೋದ ತಕ್ಷಣವೆ ವೀರಪ್ಪ ಹೊರಗೆ ಬಂದನು. ಬಂದ ತಕ್ಷಣವೆ ಅಲ್ಲಿಯವರೆಗು ಆಕೆ ಕಟ್ಟಿಕೊಂಡ ತಲೆ ಬಟ್ಟೆಯನ್ನು ತೆಗೆದು ಹಾಕಿ ಸರಿಯಾಗಿ ಕುಳಿತನು. ಬಾಣಂತಿ ಇರುವಾಗ ಕಾಣಿಸಿದಷ್ಟು ವಿನಯ ಕಾಣಿಸಲಿಲ್ಲ. ಅಲ್ಲಿ ನೋಡುತ್ತಿರುವವರಿಗೆ ಆ ಬದಲಾವಣೆ ಸುಲಭವಾಗಿ ಕಾಣಿಸಿತು.)

**ನಾನು :–** ಆಕೆ ಹೇಳಿದ್ದು ಕೇಳಿದ್ದೀಯಾ? ಆ ಮಾಂತ್ರಿಕನನ್ನು ಏನು ಮಾಡಿದ್ದೀಯ?

**ವೀರಪ್ಪ :–** ಇವರು ದೊಡ್ಡ ಮಾಂತ್ರಿಕನು ಬೇಕೆಂದು ಹುಡುಕಿ ಹೈದರಾಬಾದ್ ನಿಂದ ಅವನನ್ನು ಕರೆದುಕೊಂಡು ಬಂದಿದ್ದರು. ಅವನು ಒಂದೇ ಸಾರಿ ಐದು ಸಾವಿರ ಹಣವನ್ನು ತೆಗೆದುಕೊಂಡನು. ಅದು ಅವನು ಬದುಕುವುದಕ್ಕೆಂದು ಕೊಂಡೆನು. ಆದರೆ ಅವನು ನಾನು ಇಷ್ಟು ದೊಡ್ಡವನು, ಅಷ್ಟು ದೊಡ್ಡವನೆಂದು ಜಂಬ ಕೊಚ್ಚಿಕೊಳ್ಳುತ್ತಾ ಹೇಳಿಕೊಳ್ಳುವುದೆ ಅಲ್ಲದೆ, ನನ್ನನ್ನು ಸೀಸೆಯೊಳಗೆ ಬಂಧಿಸಿ, ಸ್ಮಶಾನದಲ್ಲಿ ಊತಿಡುತ್ತೇನೆ ಎಂದನು. ಅದಕ್ಕೆ ಅವನ ಮೇಲೆ ನನಗೆ ಕೋಪ ಬಂದಿತು. ಆದರೂ ಅವನನ್ನು ನಾನು ಹೊಡೆಯಲಿಲ್ಲ.

**ನಾನು :–** ಏನು ಮಾಡಿದ್ದೀಯ ವಿವರವಾಗಿ ಹೇಳು?

**ವೀರಪ್ಪ :–** ಅವನು ನನ್ನನ್ನು ಬಿಡಿಸುವುದಕ್ಕೆ ಪೂಜೆ ಇಟ್ಟು, ನಡುಮನೆಯಲ್ಲಿ ರಂಗೋಲಿ ಹಾಕಿ, ರಂಗೋಲಿ ಮಧ್ಯೆದಲ್ಲಿ ಕೂರಿಸಿ, ನನ್ನನ್ನು ಹೊರಗೆ ಕರೆದನು. ನಾನು ಹೊರಗೆ ಬಂದೆನು. ನನ್ನ ಹೆಸರು ಕೇಳಿದರೆ ಹೇಳಿದೆನು. ನಂತರ ಏಕೆ ಬಂದಿದ್ದೀಯ? ಎಷ್ಟು ಕಾಲದಿಂದ ಇದ್ದೀಯ ಎಂದು ಕೇಳಿದನು. ಆಗ ಅವೆಲ್ಲ ನಿನಗೆ ಅನವಶ್ಯಕ. ನೀನು ಮಾಡುವ ಕೆಲಸ ಮಾಡಿ, ನಿನ್ನ ಹಣ ನೀನು ತೆಗೆದುಕೊಂಡು ಹೋಗು ಎಂದು ಹೇಳಿದೆನು. ಆದರೂ ಅವನು ನನ್ನನ್ನು ಕೀಳಾಗಿ ಮಾತನಾಡಿ, ಸೀಸೆ (ಬಾಟಲಿ)ಯಲ್ಲಿ ಬಂಧಿಸುತ್ತೇನೆಂದು ಮಂತ್ರಗಳನ್ನು

ಓದಲು ಪ್ರಾರಂಭಿಸಿದನು. ಆಗ ನನಗೆ ಕೋಪ ಬಂದು, ನಿನ್ನ ಮಂತ್ರಗಳು ದೊಡ್ಡವೊ, ನನ್ನ ಮಂತ್ರಗಳು ದೊಡ್ಡವೊ ನೋಡು ಎಂದು ಆ ಕೋಣೆಯಲ್ಲಿಯೆ ಒಂದು ಕಡೆ ಬೀಸೊಕಲ್ಲನ್ನು ತಿರುಗು ಎಂದು ಹೇಳಿದೆನು. ನಾನು ಹೇಳುತ್ತಲೆ ಕಲ್ಲು ಐದಾರು ಸುತ್ತು ತಿರುಗಿತು. ಅದನ್ನು ನೋಡಿದ ಆ ಮಾಂತ್ರಿಕನು ನನ್ನನ್ನು ನೋಡಿ ಭಯಪಟ್ಟನು. ಇನ್ನೊಂದು ವಾರಕ್ಕೆ ಬರುತ್ತೇನೆಂದು ಮನೆಯವರಿಗೆ ಹೇಳಿ, ಅಲ್ಲಿಂದ ಹೊರಟುಹೋದನು. ಅಷ್ಟೆ ನಾನೇನು ಮಾಡಲಿಲ್ಲ.

**ನಾನು** :– ನಾನು ಹೇಳಿದ ಹಾಗೆ ಕೇಳುತ್ತೀಯ ಇಲ್ಲವೆ ನಾನು ಮಾಂತ್ರಿಕನು, ನನಗೆ ಕಾಳಿಕಾದೇವಿ ಆಸರೆಯಾಗಿ ಇದ್ದಾಳೆ ಅನ್ನುತ್ತೀಯ?

**ವೀರಪ್ಪ** :– ನಿನ್ನನ್ನು ನೋಡಿ ಕಾಳಿಕಾದೇವಿ ರೂಮಿನ ಹೊರಗೆ ಇದ್ದಾಳೆ. ಒಳಗಡೆ ಬರುವುದಕ್ಕು ಸಹ ಭಯಪಟ್ಟು ಬರಲಿಲ್ಲ. ಆಯಮ್ಮನೆ ಭಯಪಟ್ಟಿರುವಾಗ ಇನ್ನು ನಾನೆಷ್ಟು. ನೀವು ಹೇಗೆ ಹೇಳಿದರೆ ಹಾಗೆಯೆ ನಡೆದುಕೊಳ್ಳುತ್ತೇನೆ.

(ಅಲ್ಲಿ ಅಲ್ಲಿಯವರೆಗು ಆ ವಿಚಿತ್ರ ನೋಡುತ್ತಿರುವರೆಲ್ಲರನ್ನು ಹೊರಗೆ ಕಳುಹಿಸಿ, ಬಾಗಿಲು ಮುಚ್ಚಿ ವೀರಪ್ಪನಿಗೆ ಮಾತ್ರ ಹೇಳಬೇಕಾಯಿತು)

**ನಾನು** :– ನಿನಗೆ ವಿರುದ್ಧವಾಗಿ ನಾನು ಏನು ಹೇಳುವುದಿಲ್ಲ. ನಿನ್ನನ್ನು ನಿನ್ನ ಕರ್ಮಕ್ಕೆ ಬಿಡುತ್ತೇನೆ. ಆದರೆ ಪ್ರತಿ ವಾರ ಈಕೆಗೆ ಬರುವ ಹೊಟ್ಟೆನೋವು ಬರಬಾರದು. ಹಾಗೆ ಬಂದರೆ ಮತ್ತೆ ಇವರು ನನ್ನ ಹತ್ತಿರಕ್ಕೆ ಬರುತ್ತಾರೆ. ಕಥೆ ಮತ್ತೆ ಮೊದಲಿಗೆ ಬರುತ್ತದೆ. ಹಾಗಾಗದೆ ನೀನು ಹೇಗಿದ್ದೀಯೊ ಹಾಗೆ ಇರು. ಹೊಟ್ಟೆನೋವು ಬಾರದೆ ಹೋದರೆ ಇವರ ಲೆಕ್ಕದಲ್ಲಿ ನೀನು ಹೋದಹಾಗೆ. ಆದುದರಿಂದ ನಾನು ಹೇಳಿದಹಾಗೆ ನಡೆದುಕೊ. ಏನಂತೀಯ.

**ವೀರಪ್ಪ** :– ನಾನು ಹೇಳುವುದು ಏನೂ ಇಲ್ಲ. ನೀವು ಹೇಳಿದ ಹಾಗೆ ಕೇಳುತ್ತೇನೆ. ಇನ್ನು ಒಳಗೆ ಹೋಗುತ್ತೇನೆ.

(ಕೊನೆಯದಾಗಿ ವೀರಪ್ಪ ನಮಸ್ಕಾರ ಮಾಡಿ ಅಡಗಿಕೊಂಡನು) ಇದೆಲ್ಲಾ ಒಂದು ವಿಚಿತ್ರ ಕಥೆಯಾಗಿ ಕಾಣಿಸಿದರೂ, ಇದು ನನ್ನ ಮುಂದೆ ನಡೆದ ಸತ್ಯ ಘಟನೆ. ಇದರಲ್ಲಿ ದೆವ್ವ ಅಸತ್ಯವೆಂದು ಎನ್ನುವುದಕ್ಕೆ ಅವಕಾಶವಿಲ್ಲ, ಹಾಗೆ ಮಂತ್ರಗಳು ಇಲ್ಲ ಎನ್ನುವುದಕ್ಕು ಸಹ ಅವಕಾಶವಿಲ್ಲ. ಕಲಿತುಕೊಂಡ ವಿದ್ಯೆ ಪೂರ್ತಿಮರಣ ಬರುವವರೆಗು ಹೋಗುವುದಿಲ್ಲ ಎನ್ನುವುದಕ್ಕೆ ಇದರಲ್ಲಿ ಆಧಾರ ಸಿಕ್ಕಿದೆ.

ಈಗ ಹೇಳುವ ಸಂಘಟನೆಯಲ್ಲಿ **ಮನುಷ್ಯನ ಶರೀರ ಒಂದು ವಾಹನವಂತದ್ದೆಂದು, ಅದನ್ನು ಹತ್ತಿದವನು ನಡೆಸಿದ ಹಾಗೆ ನಡೆಯುತ್ತದೆಂದು ತಿಳಿಯುತ್ತಿದೆ.** ಅಕಾಲ ಮೃತ್ಯುವನ್ನು ಹೊಂದಿದವರಿಗೆ ಸ್ಥೂಲ ಶರೀರ ಇರುವುದಿಲ್ಲ. ಕಾಣಿಸದ ಸೂಕ್ಷ್ಮ ಶರೀರ ಮಾತ್ರ ಇರುತ್ತದೆ. ನಮಗೆ ಸೂಕ್ಷ್ಮ ಶರೀರಗಳ (ದೆವ್ವಗಳ) ವಿಷಯ ತಿಳಿಯಬೇಕೆಂದರೆ ದೆವ್ವಗಳಿಂದಲೆ ತಿಳಿದುಕೊಳ್ಳಬೇಕು. ಒಂದು ಶರೀರದ ಮೇಲೆ ಬೇರೊಂದು ಸೂಕ್ಷ್ಮ ಶರೀರ ಬಂದಾಗ ಅವರನ್ನು ಪ್ರಶ್ನಿಸುವುದರ ಮುಖಾಂತರ ನಮಗೆ ಎಷ್ಟೋ ತಿಳಿಯದ ವಿಷಯಗಳನ್ನು ತಿಳಿದುಕೊಳ್ಳಬಹುದು. ಹಾಗೆ ಕಾಣಿಸುವ ಕೆಲಸಗಳಿಂದ ಸಹ ತಿಳಿಯದ ವಿಷಯಗಳನ್ನು ತಿಳಿದುಕೊಳ್ಳಬಹುದು. ಒಬ್ಬ ರೈಲ್ವೇ ಉದ್ಯೋಗಸ್ಥನ ಹೆಂಡತಿ ಶರೀರದ ಮೇಲೆ ಒಂದು ದೆವ್ವ ಬಂದಿದೆ. ಅದನ್ನು ವಿಚಾರಿಸಿದರೆ ಆ ದೆವ್ವದ ಹೆಸರು ಶಿವರಾಮಯ್ಯ ಎಂದು, ಹೆಸರನ್ನು ಕೇಳಿದಾಗ ಅದು ಗಂಡು ದೆವ್ವವೆಂದು ಅರ್ಥವಾಗುತ್ತದೆ. ಇನ್ನೂ ತಿಳಿದಿರುವುದೇನೆಂದರೆ ಶಿವರಾಮಯ್ಯ ಗತ ಜನ್ಮದಲ್ಲಿ ಬದುಕಿರುವಾಗ, ಈಗ ಹಿಡಿದುಕೊಂಡ ಈಕೆಯನ್ನು ಪ್ರೀತಿಸಿದ್ದನು. ಆತನು ಪ್ರೀತಿಸುತ್ತಿರುವುದು ಈಕೆಗು ಸಹ ಗೊತ್ತು. ಶಿವರಾಮಯ್ಯ ತಮ್ಮ ಹಿರಿಯರನ್ನು ಹುಡುಗಿ ಮನೆಗೆ ಮಾತುಕತೆಗೆ ಕಳುಹಿಸಿ, ಹಿರಿಯರ ಒಪ್ಪಿಗೆಯೊಂದಿಗೆ ಒಂದು ಮುಹೂರ್ತದಲ್ಲಿ ಮದುವೆ ಮಾಡಿಕೊಳ್ಳಬೇಕೆಂದುಕೊಂಡನು. ಆದರೆ ಅಷ್ಟರಲ್ಲಿಯೆ ಬಸ್ಸು ಅಪಘಾತದಲ್ಲಿ ಶಿವರಾಮಯ್ಯ ಸತ್ತುಹೋದನು. ಸತ್ತುಹೋದ ಶಿವರಾಮಯ್ಯ ಅಕಾಲ ಮೃತ್ಯವನ್ನು ಹೊಂದಿದನು, ಆದ್ದರಿಂದ ಕಾಣಿಸದ

ಮನುಷ್ಯನಾಗಿ ಇದ್ದನು. ಸಾಯುವುದಕ್ಕಿಂತ ಮೊದಲು ಒಂದು ನಾಟಕದಲ್ಲಿ ರಾವಣಬ್ರಹ್ಮ ಪಾತ್ರವನ್ನು ಚೆನ್ನಾಗಿ ಪ್ರಾಕ್ಟೀಸ್ ಮಾಡಿದ್ದನು. ಆದರೆ ಆ ನಾಟಕ ಮಾಡುವುದಕ್ಕಿಂತ ಮೊದಲೆ ಅಕಾಲವಾಗಿ ಮರಣಿಸಿದ್ದನು. ಶಿವರಾಮಯ್ಯ ಸತ್ತುಹೋದ ನಂತರ ಸ್ವಲ್ಪ ದಿನಗಳಿಗೆ ಆಕೆಗೆ ಮದುವೆಯಾಗಿದೆ. ಆ ಮದುವೆ ಯನ್ನು ನೋಡಿದ ಶಿವರಾಮಯ್ಯ ಬಹಳ ನೋವುಪಟ್ಟಿದ್ದನು. ಮದುವೆಯಾದ ನಂತರ ಶೋಭನದ ದಿನ ಆಕೆ ಗಂಡ, ಹೆಂಡತಿ ಹತ್ತಿರಕ್ಕೆ ಬರುತ್ತಿದ್ದ ಹಾಗೆ, ಶಿವರಾಮಯ್ಯ ಆಕೆಯ ಶರೀರದ ಮೇಲೆ ಬಂದು ಈಕೆ ನನ್ನವಳು, ನಿನ್ನವಳಲ್ಲ ಎನ್ನುತ್ತಿದ್ದನು. ಇದೆಲ್ಲಾ ಅರ್ಥವಾಗದ ಆಕೆಗಂಡ, ಎಲ್ಲಾಕಡೆ ತೋರಿಸಿ ಕೊನೆಗೆ ನನ್ನ ಹತ್ತಿರಕ್ಕೆ ಕರೆದುಕೊಂಡು ಬಂದನು, ಶಿವರಾಮಯ್ಯ ಹೊರಗೆ ಬಂದು ಮಾತನಾಡುತ್ತಿದ್ದಾನೆ. ಹಾಗೆ ಮತನಾಡುವ ಸಮಯದಲ್ಲಿ ಆಗಾಗ ಮೀಸೆಯನ್ನು ತಿರುವುತ್ತಾ ಕೈಯನ್ನು ಮೂತಿಮೇಲೆ ಇಟ್ಟುಕೊಳ್ಳುತ್ತಿದ್ದನು.

ಕಾಣಿಸುತ್ತಿರುವುದು ಹೆಂಗಸು, ಮಾತನಾಡುವುದು ಗಂಡಸು ಹವ್ಯಾಸಗಳು ಗಂಡಸಿನವೇ! ಆಗ ನಾವು, ನೀನು ಮೀಸೆ ತಿರುವುತ್ತೀಯ ಎಂದು ಕೇಳಿದೆವು. ಹೌದೆಂದು ಆತನು ಸಮಾಧಾನ ಹೇಳಿದನು. ಅಷ್ಟೇ ಅಲ್ಲದೆ ತಾನು ರಾವಣಬ್ರಹ್ಮ ಪಾತ್ರವನ್ನು ಕಲಿತುಕೊಂಡಿದ್ದೇನೆಂದು, ಆ ಪಾತ್ರದಲ್ಲಿ ಹೆಚ್ಚಿನದಾಗಿ ಮೀಸೆ ತಿರುವುತ್ತಿರುವ ಕೆಲಸವಿದೆಯೆಂದು, ಅದು ಹಾಗೆ ಅಭ್ಯಾಸವಾಗಿದೆಯೆಂದು ಹೇಳಿದನು. ರಾವಣ ಪಾತ್ರದಲ್ಲಿ ಪದ್ಯಗಳನ್ನು ಕಲಿತಿದ್ದರೆ ಹೇಳೆಂದು ಕೇಳಿದೆವು. ಆಗ ಮೇಲ್ಗಡೆ ಕಾಣಿಸುವ ಆಕೆ ರಾವಣನಾಗಿ ನಟಿಸುವುದನ್ನು ಪ್ರಾರಂಭಿಸಿದಳು. ಆಗ ಗದೆಯನ್ನು ಭುಜದ ಮೇಲೆ ಇಟ್ಟುಕೊಂಡಹಾಗೆ ಮಾಡಿ, ಎಡಗೈಯಿಂದ ಮೀಸೆಯನ್ನು ತಿರುವುತ್ತಾ ಪದ್ಯ ಹೇಳುವುದನ್ನು ಪ್ರಾರಂಭಿಸಿದಳು. ಗಂಭೀರ ಸ್ವರದಿಂದ ಪದ್ಯವನ್ನು ಹೇಳುವುದು ಎಲ್ಲರಿಗು ಆಶ್ಚರ್ಯವೆನಿಸಿತು. ನಂತರ ಶಿವರಾಮಯ್ಯನನ್ನು ಒಳಗೆ ಕಳುಹಿಸಿ, ಆಕೆಯನ್ನು ಪದ್ಯವನ್ನು ಕುರಿತು ಕೇಳಿದೆವು. ಪದ್ಯವೇನೊ ನನಗೆ ತಿಳಿದಿಲ್ಲವೆಂದು ಆಕೆ ಹೇಳಿದಳು. ಶಿವರಾಮಯ್ಯನನ್ನು ಕುರಿತು ಕೇಳಿದಾಗ ಎಲ್ಲಾ ನಿಜವೆಯೆಂದು ಆಕೆ ಹೇಳಿದಳು. ಶಿವರಾಮಯ್ಯನನ್ನು ಮೇಲಕ್ಕೆ ಕರೆದು ಕೇಳಿದರೆ ಮೊದಲು ಆಕೆಯನ್ನು ಪ್ರೀತಿಸಿದ್ದು ತಾನೆಯೆಂದು,

ಆದ್ದರಿಂದ ಆಕೆಯನ್ನು ಇತರರ ಹೆಂಡತಿಯಾಗಿ ಒಪ್ಪಿಕೊಳ್ಳದೆ ಹೋಗುತ್ತಿದ್ದೇನೆಂದು ಹೇಳಿದನು. ಆಕೆಯನ್ನು ಕೇಳಿದರೆ ಆತನು ಮದುವೆಯಾಗದ ಮೊದಲೆ ಸತ್ತುಹೋದನು. ಆದ್ದರಿಂದ ನನ್ನ ಇಷ್ಟದಿಂದಲೆ ನಾನು ಮದುವೆ ಮಾಡಿಕೊಂಡಿದ್ದೇನೆ. ಆದರೂ ಆತನು ನಮ್ಮ ಸಂಸಾರಕ್ಕೆ ಆತಂಕವಾಗಿದ್ದಾನೆ ಎನ್ನುತ್ತಿದ್ದಾಳೆ.

ಇದೆಲ್ಲಾ ನೋಡಿದರೆ, ಹೆಂಗಸಿನ ಶರೀರದ ಮೇಲೆ ಗಂಡಸಿನ ನಟನೆ ಬಂದಿದೆಯೆಂದರೆ, ಶರೀರದ ಮೇಲೆ ಯಾರಿದ್ದರೆ ಅವರು ಆಡಿಸಿದಂತೆ ಶರೀರ ಆಡುತ್ತದೆಂದು, ಅವರ ಲಕ್ಷಣಗಳು, ಅಭ್ಯಾಸಗಳು ಶರೀರದ ಮೇಲೆ ಕಾಣಿಸುತ್ತವೆಂದು ಅರ್ಥವಾಗುತ್ತಿದೆ. ಸ್ಥೂಲ ಶರೀರ ಕೇವಲ ಆಟದ ಗೊಂಬೆಯಂತದ್ದೆಂದು, ಆಡಿಸುವವನನ್ನು ಅನುಸರಿಸಿ ಆಡುತ್ತದೆಂದು ಹೇಳುವುದೆ ಅಲ್ಲದೆ, ಶರೀರ ಆಡಿಸುವವನ ಲಕ್ಷಣಗಳು ಹೊಂದುತ್ತದೆಂದು ಸಹ ತಿಳಿಯುತ್ತದೆ. ಈ ಮಾತನ್ನು ಬಲಪಡಿಸುತ್ತ ಮತ್ತೊಂದು ಸಂಘಟನೆಯನ್ನು ಈಗ ಹೇಳಿಕೊಳ್ಳೋಣ. ಒಬ್ಬ ಹೆಣ್ಣು ಮಗಳನ್ನು ಅನಾರೋಗ್ಯ ಕಾರಣದಿಂದ ನನ್ನ ಹತ್ತಿರಕ್ಕೆ ಅವರ ಬಂಧುಗಳು ಕರೆತಂದರು, ರೋಗಗಳೆಲ್ಲ ಶರೀರ ಲೋಪದಿಂದ ಏರ್ಪಡುವುದಿಲ್ಲವೆಂದು, ಶರೀರದಲ್ಲಿ ದೆವ್ವಗಳು ಕಲ್ಪಿಸುವುದರಿಂದ ಏರ್ಪಡುವವು ಬಹಳ ಇವೆಯೆಂದು ಮೊದಲೆ ಹೇಳಿದ್ದೇವೆ. ಈ ಸೂತ್ರದ ಪ್ರಕಾರ 22 ಸಂವತ್ಸರಗಳ ಆಕೆಗೆ ಯಾವ ರೋಗವಿಲ್ಲವೆಂದು ತಿಳಿಯಿತು. ಇನ್ನು ಹುಡುಕಬೇಕಾದ್ದು ದೆವ್ವ ಏನಾದರು ಶರೀರದಲ್ಲಿ ಇದೆಯಾ ಎಂದು ನೋಡಬೇಕು. ಹಾಗೆ ನೋಡಿದರೆ ಆಕೆಗೆ ದೆವ್ವ ವಿದ್ದಹಾಗೆ ನಿರ್ಧಾರವಾಯಿತು. ಹೇಗೆ ನಿರ್ಧಾರ ಮಾಡಿದ್ದೀರೆಂದು, ಅದಕ್ಕೇನಾದರು ಲ್ಯಾಬ್ ಟೆಸ್ಟ್ ಇದೆಯಾ ಎಂದು ಕೆಲವರು ಕೇಳಬಹುದು. ದೆವ್ವಗಳು ಲ್ಯಾಬ್‌ನಲ್ಲಿ ಯಾವ ಟೆಸ್ಟಿಗೂ ಸಿಗುವುದಿಲ್ಲ. ಅದನ್ನು ಕಂಡು ಹಿಡಿಯುವುದಕ್ಕೆ ಚಿಕ್ಕ ಸೂತ್ರವಿದೆ. ಅದೇನೆಂದರೆ! ಬೇರೊಂದು ಸೂಕ್ಷ್ಮಶರೀರ, ಒಂದು ಶರೀರದಲ್ಲಿದ್ದಾಗ ಆ ಶರೀರದಲ್ಲಿ ಇರುವವು ಎರಡು ಸೂಕ್ಷ್ಮಗಳಾಗುತ್ತವೆ. ಎರಡು ಸೂಕ್ಷ್ಮ ಶರೀರಗಳು ಒಂದು ಸ್ಥೂಲಶರೀರದಲ್ಲಿದ್ದಾಗ ಗುಂಡಿಗೆಯ ವೇಗ ಹೆಚ್ಚಾಗಿರುತ್ತದೆ. ಒಂದೇ ಪದ್ಧತಿಯಲ್ಲಿ ಗುಂಡಿಗೆ

ಬಡಿದುಕೊಳ್ಳುವುದಿಲ್ಲ. ಆದ್ದರಿಂದ ಗುಂಡಿಗೆಯ ವೇಗ ಹೆಚ್ಚು ಕಡಿಮೆ ಇರುತ್ತದೆ. ನೂರಕ್ಕೆ ಎಪ್ಪತ್ತು ಜನರಲ್ಲಿ ಮಣಿಕಟ್ಟಿನ ಹತ್ತಿರ ನಾಡಿ ಹೆಚ್ಚಾಗಿ, ಕಡಿಮೆಯಾಗಿ ವೇಗವಾಗಿ ಕಾಣಿಸುತ್ತದೆ. ಇನ್ನು ಶೇ.30 ರಷ್ಟು ಜನರಿಗೆ ದೆವ್ವ ಒಳಗೆ ಇದ್ದಾಗ ನಾಡಿಯಲ್ಲಿ ವ್ಯತ್ಯಾಸ ಕಾಣಿಸುವುದಿಲ್ಲ. ಅದಕ್ಕೆ ಕಾರಣ, ಶರೀರದಲ್ಲಿ ಸೇರಿದ ದೆವ್ವ ಬ್ರಹ್ಮನಾಡಿಗೆ (ಬೆನ್ನು ಮೂಳೆಗೆ) ದೂರವಾಗಿ ಇದ್ದರೆ ಗೊತ್ತಾಗುವುದಕ್ಕೆ ಅವಕಾಶವಿರುವುದಿಲ್ಲ. ಉದಾಹರಣೆಗೆ ಭುಜದಲ್ಲಾಗಲಿ, ಕೈಯಲ್ಲಾಗಲಿ, ಕಾಲಿನಲ್ಲಾಗಲಿ ಇದ್ದರೆ ಅವುಗಳ ಸ್ಪಂದನೆ ನಾಡಿಯಲ್ಲಿ ಕಾಣಿಸುವುದಿಲ್ಲ. ಕುತ್ತಿಗೆಯಿಂದ ಕೆಳಗಿನ ಹೊಟ್ಟೆಯವರೆಗು ದೆವ್ವ ಎಲ್ಲಿದ್ದರೂ ನಾಡಿಯಲ್ಲಿ ಗೊತ್ತಾಗುತ್ತದೆ. ಹೆಚ್ಚಿನ ಭಾಗ ಹೊಟ್ಟೆಯಲ್ಲಾಗಲಿ, ಎದೆ ಭಾಗದಲ್ಲಾಗಲಿ, ಮನುಷ್ಯರಲ್ಲಿ ಸೂಕ್ಷ್ಮ ಶರೀರಗಳು ನಿವಾಸ ಏರ್ಪಡಿಸಿಕೊಳ್ಳುತ್ತವೆ. ಆದ್ದರಿಂದ ದೆವ್ವಗಳಿಂದ ಬರುವ ಅನಾರೋಗ್ಯ ಸಮಸ್ಯೆಗಳೆಲ್ಲ ಹೆಚ್ಚಾಗಿ ಹೊಟ್ಟೆಯಲ್ಲಿಯು ಎದೆಯಲ್ಲಿಯು ಇರುತ್ತದೆ.

ನನ್ನ ಹತ್ತಿರಕ್ಕೆ ಕರೆತಂದ ಹೆಣ್ಣು ಮಗಳಿಗೆ ಹೊಟ್ಟೆನೋವು ಸಮಸ್ಯೆ. ಆ ನೋವಿಗೆ ಕಾರಣ ಯಾವ ಟೆಸ್ಟ್‌ಗಳಿಗು, ಯಾವ ಸ್ಕ್ಯಾನಿಂಗ್‌ಗಳಿಗು ಗೊತ್ತಾಗುವುದಿಲ್ಲ. ನಾನು ನೋಡಿದಾಗ ನಾಡಿ ಜೋರಾಗಿ, ನಿಧಾನವಾಗಿ ಎರಡು ವಿಧಗಳಲ್ಲಿ ಆಡುತ್ತಿರುವುದರಿಂದ ಆ ನೋವು ದೆವ್ವದಿಂದ ಬಂದಿದೆ ಯೆಂದು ಅರ್ಥವಾಯಿತು. ಆಗ ಆ ದೆವ್ವವನ್ನು ಹೊರಗೆ ಕರೆದೆವು. ನಾವು ಕರೆದರೆ ನೂರಕ್ಕೆ ತೊಂಭತ್ತು ಜನರಿಗೆ ದೆವ್ವಗಳು ಹೊರಬರುತ್ತವೆ. ಅದರ ಪ್ರಕಾರ ಆ ದೆವ್ವ ಹೊರಗೆ ಬಂದಿದೆ. ಹಾಗೆ ದೆವ್ವ ಹೊರಬರುತ್ತಲೆ, ಆಕೆಯಲ್ಲಿ ಒಂದು ವಿಚಿತ್ರ ಕಾಣಿಸಿತು. ಆ ವಿಚಿತ್ರ ಏನೆಂದರೆ! ದೆವ್ವ ಮೇಲೆ ಬಾರದವರೆಗು ನನ್ನ ಎದುರಿಗೆ ಕುಳಿತಿರುವ ಆಕೆಯ ಕಣ್ಣುಗಳು ಚೆನ್ನಾಗಿಯೆ ಇದ್ದವು. ದೆವ್ವ ಹೊರಗೆ ಬಂದ ನಂತರ ಆಕೆ ಕಣ್ಣುಗಳಲ್ಲಿ ವ್ಯತ್ಯಾಸ ಬಂದಿದೆ. ಒಂದು ಕಣ್ಣು ಚೆನ್ನಾಗಿದೆ, ಒಂದು ಕಣ್ಣು ಮಾತ್ರ ಮೆಳ್ಳೆ ಕಣ್ಣಿನ ಹಾಗೆ ಒಂದು ಪಕ್ಕಕ್ಕೆ ತಿರುಗಿದೆ. ನೋಡುತ್ತಲೆ ಕಣ್ಣಲ್ಲಿ ವ್ಯತ್ಯಾಸ ಕಾಣಿಸಿತು. ದೆವ್ವ ಒಳಗೆ ಹೋಗುತ್ತಿದ್ದಹಾಗೆ, ಅಲ್ಲಿವರೆಗು ಪಕ್ಕಕ್ಕಿದ್ದ ಕಣ್ಣು ಮತ್ತೆ ಯಥಾಸ್ಥಾನದೊಳಗೆ ಬಂದು, ಕಣ್ಣುಗಳು

ಚೆನ್ನಾಗಿ ಇದ್ದಹಾಗೆ ಕಾಣಿಸುತ್ತಿವೆ. ಅರ್ಧ ಗಂಟೆ ನಂತರ ಎರಡನೆ ಬಾರಿ ದೆವ್ವವನ್ನು ಹೊರಗೆ ಕರೆದರೆ ಆಗಲೂ ಸಹ ಕಣ್ಣು ಮೆಳ್ಳಗಣ್ಣಿನ ಹಾಗೆ ಬದಲಾಗಿದೆ. ಇದನ್ನು ಅನುಸರಿಸಿ ನೋಡಿದರೆ ಸತ್ತುಹೋಗಿ ದೆವ್ವವಾಗಿ ಬದಲಾದ ವ್ಯಕ್ತಿಗೆ ಮೊದಲೆ ಮೆಳ್ಳೆಗಣ್ಣು ಇದ್ದಿತೆಂದು, ಆ ವ್ಯಕ್ತಿ ಸತ್ತುಹೋದ ನಂತರ ಸಹ ಸೂಕ್ಷ್ಮ ಶರೀರಕ್ಕೆ ಮೆಳ್ಳೆಗಣ್ಣು ಇದೆಯೆಂದು, ಸೂಕ್ಷ್ಮ ಶರೀರ ಯಾವ ಶರೀರದಲ್ಲಿ ಸೇರಿದರೆ, ಆ ಶರೀರಕ್ಕಿದ್ದ ಕಣ್ಣು ಸಹ ಮೆಳ್ಳೆಗಣ್ಣಿನ ಹಾಗೆ ಬದಲಾಗುತ್ತದೆಂದು ತಿಳಿಯುತ್ತದೆ. ಈ ರೀತಿ ಎಷ್ಟೋ ಘಟನೆಗಳನ್ನು ನೋಡಿದ ಅನುಭವಗಳೂ, ಎಷ್ಟೋ ದೆವ್ವಗಳೊಂದಿಗೆ ಮಾತನಾಡಿದ ಅನುಭವಗಳೂ ನಮಗೆ ತಿಳಿಯದ ದೆವ್ವಗಳ ರಹಸ್ಯಗಳನ್ನು ಅರ್ಥವಾಗುವ ಹಾಗೆ ಮಾಡುತ್ತಿವೆ.

ಮೊದಲು ಹೇಳಿದ ರೈಲ್ವೇ ಎಂಪ್ಲಾಯ್ ಹೆಂಡತಿಗೆ ಹಿಡಿದ ಶಿವ ರಾಮಯ್ಯನ ಹವ್ಯಾಸಗಳನ್ನು ಅನುಸರಿಸಿ, ಒಂದು ಸೂಕ್ಷ್ಮ ಶರೀರಕ್ಕಿರುವ ಹವ್ಯಾಸಗಳು ಆ ಸೂಕ್ಷ್ಮ ಶರೀರ ಪ್ರವೇಶಿಸಿದ ಶರೀರಕ್ಕು ಸಹ ಬರುತ್ತವೆಂದು ತಿಳಿದುಹೋಗಿದೆ. ಹಾಗೆ ಈಗ ಹೇಳಿಕೊಂಡ ಮೆಳ್ಳೆಕಣ್ಣು ವಿಷಯವನ್ನು ಅನುಸರಿಸಿ ನೋಡಿದಾಗ ಒಂದು ಸೂಕ್ಷ್ಮ ಶರೀರಕ್ಕೆ ಯಾವ ಲೋಪವಿರುತ್ತದೊ ಆ ಲೋಪವು ಆ ಸೂಕ್ಷ್ಮ ಶರೀರ ಪ್ರವೇಶಿಸಿದ ಶರೀರಕ್ಕು ಸಹ ಕಾಣಿಸುತ್ತದೆಂದು ತಿಳಿದು ಹೋಗಿದೆ. ಈಗ ಒಂದು ಸೂಕ್ಷ್ಮ ಶರೀರಕ್ಕೆ (ದೆವ್ವಕ್ಕೆ) ಒಂದು ಪದಾರ್ಥದ ಮೇಲೆ ಇದ್ದ ಎಲರ್ಜಿಯಾಗಲಿ, ರಿಯಾಕ್ಷನ್ ಆಗಲಿ ಇರುವುದಾದರೆ, ಆ ಸೂಕ್ಷ್ಮ ಶರೀರ ಇತರರ ಶರೀರಗಳನ್ನು ಸೇರಿದಾಗ ಇರುತ್ತವೊ, ಇಲ್ಲವೊ ನೋಡೋಣ.

ನಮಗೆ ಹತ್ತಿರದಲ್ಲಿರುವ ಒಂದು ಗ್ರಾಮದಲ್ಲಿ ಒಂದು ಬ್ರಾಹ್ಮಣ ಕುಟುಂಬ ಇತ್ತು. ಆ ಮನೆಯ ಯಜಮಾನ ಆ ಊರಿಗೆ ಗ್ರಾಮ ಅಧಿಕಾರಿಯಾಗಿ ಕೆಲಸ ಮಾಡುತ್ತಿದ್ದನು. ಆತನ ವಯಸ್ಸು ಅರವತ್ತು ವರ್ಷಗಳ ಮೇಲೆ ಇದೆ. ಆತನ ಹೆಂಡತಿಗೆ ವಯಸ್ಸು 60 ಸಂವತ್ಸರಗಳಿವೆ. ಆ ಕುಟುಂಬದಲ್ಲಿನ ಆಕೆಯ ಗಂಡು ಮಕ್ಕಳು ನನಗೆ ಚೆನ್ನಾಗಿ ಪರಿಚಯವಿರುವ ವ್ಯಕ್ತಿಗಳು. ಒಂದು ದಿನ

ಆಕೆ ಮಗ ನನ್ನ ಹತ್ತಿರಕ್ಕೆ ಬಂದು, ನಮ್ಮ ಅಮ್ಮನಿಗೆ ದೆವ್ವ ಆಗಾಗ ಬಂದು ಸೇರಿ ಹೋಗುತ್ತಾ ಇರುತ್ತದೆ. ಆ ದೆವ್ವ ಯಾರೊ ಅಲ್ಲ ಸ್ವಂತ ನಮಗೆ ದೊಡ್ಡಮ್ಮ, ನಮ್ಮ ಅಮ್ಮನಿಗೆ ಸ್ವಂತ ಅಕ್ಕ ಆಗುತ್ತಾಳೆ. ನಮ್ಮ ಅಮ್ಮನ ಮೇಲೆ ಆಕೆಗೆ ಹೆಚ್ಚಿನ ಪ್ರೀತಿ ಇದೆ. ಆಕೆ ಸತ್ತುಹೋಗಿ ಹತ್ತು ವರ್ಷಗಳಾಗಿವೆ. ಸತ್ತು ಹೋದ ಆಕೆ ಹಾಗೆ ನಮ್ಮ ಹತ್ತಿರಕ್ಕೆ ಬರುವುದು ಒಳ್ಳೆಯದಲ್ಲ ಎಂದುಕೊಂಡಿದ್ದೇವೆ. ನಾವು ನಿಷ್ಠೆಯಿಂದ ಪೂಜೆ ಮಾಡಿಕೊಳ್ಳುತ್ತೇವೆ. ಅಂತಹ ಮನೆಯೊಳಗೆ ದೆವ್ವ ಬರುವುದು ಅರಿಷ್ಟ ಎಂದುಕೊಂಡಿದ್ದೇವೆ. ಆಕೆಯನ್ನು ಬರಬೇಡವೆಂದು ಹೇಳಿದರೂ ನಮ್ಮ ಮಾತು ಕೇಳುತ್ತಿಲ್ಲ. ನಿಮ್ಮ ಹತ್ತಿರಕ್ಕೆ ಕರೆದುಕೊಂಡು ಬರುತ್ತೇವೆ. ಯಾವುದೊ ಒಂದು ವಿಧದಲ್ಲಿ ಹೇಳಿ ಕಳುಹಿಸಿ. ನಿಮ್ಮ ಮಾತಾದರು ಕೇಳುತ್ತಾಳೇನೊ ಎಂದು ಕೇಳಿದರು. ಮೊದಲಿನಿಂದ ಪರಿಚಯವಿರುವ ವ್ಯಕ್ತಿಗಳಾಗಿರುವುದರಿಂದ ಸರಿ ಕರೆದುಕೊಂಡು ಬನ್ನಿ ಹೇಳಿ ನೋಡೋಣ ಎಂದೆವು.

ಒಂದು ದಿನ ಸಾಯಂಕಾಲ, ಆಕೆಯನ್ನು ಕರೆದುಕೊಂಡು ಬಂದರು. ಆಕೆ ಮೊದಲೆ ನನ್ನನ್ನು ನೋಡಿದ ವ್ಯಕ್ತಿಯಾಗಿರುವುದರಿಂದ, ಚೆನ್ನಾಗಿದ್ದೀರ ಎಂದು ನನ್ನನ್ನು ಮಾತನಾಡಿಸಿದಳು. ನಿನ್ನ ಆರೋಗ್ಯ ಹೇಗಿದೆಯಮ್ಮ ಎಂದು ನಾನು ಕೇಳಿದೆನು. ಅದಕ್ಕೆ ಆಕೆ ದೆವ್ವದ ಪೀಡೆ ಒಂದು ಬಿಟ್ಟರೆ ಆರೋಗ್ಯವೆಲ್ಲಾ ಚೆನ್ನಾಗಿಯೆ ಇದೆಯಪ್ಪಾ ಎಂದಳು. ನನ್ನ ಮುಂದೆ ಆಕೆಯನ್ನು ಕೂರಿಸಿಕೊಂಡು ಆಕೆಗೆ ದೆವ್ವವಿದೆಯೆಂದು ಮೊದಲೆ ತಿಳಿದಿರುವುದರಿಂದ ನೇರವಾಗಿ ಆ ದೆವ್ವವನ್ನೆ ಹೆಸರಿಟ್ಟು ಕರೆದೆನು. ಕರೆದ ನಂತರ ಕುಳಿತಿರುವ ಆಕೆ ಆಕಳಿಸುತ್ತಾ ಆಕಳಿಸುತ್ತಾ ಮೆಲ್ಲನೆ ನಿದ್ರೆಮತ್ತಿನೊಳಗೆ ಜಾರಿಕೊಂಡಳು. ಹಾಗೆ ಎರಡು ನಿಮಿಷಗಳಿಗೆ ಆಕೆ ನಿದ್ರೆಯೊಳಗೆ ಹೋದರೆ, ಒಳಗಿರುವ ದೆವ್ವ ಶರೀರದ ಮೇಲೆ ಬಂದು ಮಾತನಾಡುವುದನ್ನು ಪ್ರಾರಂಭಿಸಿತು. ಬಂದ ದೆವ್ವಕ್ಕೆ ತಾಂಬೂಲವನ್ನು ಹಾಕಿಕೊಳ್ಳುವ ಅಭ್ಯಾಸವಿದೆಯಂತೆ. ಬದುಕಿದ್ದಾಗ ಗಂಟೆ ಗಂಟೆಗು ಎಲೆ, ಅಡಿಕೆಯನ್ನು ಕುಟ್ಟಿ ಹಾಕಿಕೊಳ್ಳುತ್ತಿದ್ದಳಂತೆ. ಈಗ ಶರೀರದ ಮೇಲೆ ಬರುತ್ತಲೆ

ನನಗೆ ಎಲೆ, ಅಡಿಕೆ, ಸುಣ್ಣ ಕೊಡಿ ಎಂದು ಕೇಳುವುದನ್ನು ಪ್ರಾರಂಭಿಸಿದಳು. ಯಾವಾಗ ಮೇಲಕ್ಕೆ ಬಂದರೂ ಹಾಗೆ ಕೇಳುತ್ತಾಳಂತೆ. ಆಗ ಅಲ್ಲೆ ಪಕ್ಕದಲ್ಲಿದ್ದ ಎಲೆ, ಅಡಿಕೆ, ಸುಣ್ಣ ಕೊಟ್ಟೆವು. ಎಲೆ, ಅಡಿಕೆಯನ್ನು ಕುಟ್ಟಿ ಕೊಡಿ ಎಂದು ಕೇಳಿದರೆ ಹಾಗೆಯೆ ಕೊಟ್ಟೆವು. ತಾಂಬೂಲವನ್ನು ಬಾಯೊಳಗೆ ಇಟ್ಟುಕೊಂಡ ನಂತರ ಆಕೆ ಮಾತನಾಡುವುದಕ್ಕೆ ಪ್ರಾರಂಭಿಸಿ ನನ್ನೊಂದಿಗೆ ಹೀಗೆ ಅಂದಳು.

**ದೆವ್ವ :–** ನಿನಗೆ ಇವರು ಚೆನ್ನಾಗಿ ಗೊತ್ತಲ್ವಾ! ನೀನಾದರು ಹೇಳಬಾರದಾ! ನಾನು ಆಗಾಗ ನನ್ನ ತಂಗಿಯ ಹತ್ತಿರಕ್ಕೆ ಬಂದರೆ ಇವರಿಗೇನು ನಷ್ಟ? ಈಗ ನಿನ್ನ ಹತ್ತಿರಕ್ಕೆ ತಂದಿದ್ದಾರೆ, ಸರಿ! ನನಗೆ ಇಲ್ಲಿಗೆ ಬಂದಿರುವುದಕ್ಕೆ ಏನು ತೊಂದರೆ ಇಲ್ಲ. ಇದಕ್ಕು ಮೊದಲು ಊರಿನಲ್ಲಿ ಮನೆಯ ಹತ್ತಿರಕ್ಕೆ ಒಬ್ಬ ಮಂತ್ರಗಳ ಸಾಯಬನನ್ನು ಕರೆದುಕೊಂಡು ಬಂದಿದ್ದರು. ಅವನು ನನ್ನನ್ನು ನಾನಾ ರೀತಿಯಲ್ಲಿ ಮಾತನಾಡಿ, ನೀನು ಹೋಗದೆ ಹೋದರೆ ಮಾಂಸದ ತುಣುಕನ್ನು ನಿನ್ನ ಬಾಯಲ್ಲಿ ಇಡುತ್ತೇನೆಂದನು. ಇದೇನಾದರು ಒಳ್ಳೆಯ ಕೆಲಸವೇನಾ ನೀನೆ ಇವರನ್ನು ಕೇಳು.

(ಆಗ ಆಕೆಯ ತಂಗಿಯ ಮಕ್ಕಳ ಹತ್ತಿರ ಹಾಗೆ ಏಕೆ ಮಾಡಿದ್ದೀರ? ದೊಡ್ಡವರೊಂದಿಗೆ ಹಾಗೆ ಮಾತನಾಡುವುದು ಒಳ್ಳೆಯದಲ್ಲವಲ್ಲ! ಎಂದೆನು. ಅದಕ್ಕೆ ಅವರು ದೆವ್ವ ಬಿಡಿಸುವವನೆಂದರೆ ಆತನನ್ನು ಕರೆದುಕೊಂಡು ಬಂದೆವು. ಆತನು ಹೇಳಿ ನೋಡಿದನು. ಈಯಮ್ಮ ನಾನು ಹೋಗುವುದೇ ಇಲ್ಲ ಎಂದಳು. ಅದಕ್ಕೆ ಅವನು ಮಾಂಸದ ತುಣಕನ್ನು ತೋರಿಸಿ ಬಾಯಲ್ಲಿ ಇಡುತ್ತೀನೆಂದು ಹೇಳಿದನು. ಆ ಮಾತು ಎನ್ನುತ್ತಲೆ ಅವನನ್ನು ಈಕೆ ಸುಮ್ಮನೆ ಬಿಟ್ಟಾಳಾ? ಪಕ್ಕದಲ್ಲೆ ಇದ್ದ 20 ಕೇಜಿಗಳ ರುಬ್ಬುವ ಗುಂಡನ್ನು ಅವನ ಮೇಲೆ ಹಾಕುತ್ತೇನೆಂದು ಮೇಲಕ್ಕೆ ಎತ್ತಿದಳು. ಆ ಗುಂಡನ್ನು ಎತ್ತುತ್ತಿದ್ದ ಹಾಗೆ ಅವನು ಎದ್ದು ಓಡಿದನು. ಅವನು ಹೊರಗೆ ಓಡಿದರೂ ಬಿಡದೆ ಈಕೆ ಗುಂಡನ್ನು ಎತ್ತಿಕೊಂಡೆ ಹೊರಗೆ ಹೋದಳು. ಅವನು ಓಡುತ್ತಲೆ ಇದ್ದಾನೆ. ಅಷ್ಟು ತೂಕ ಗುಂಡನ್ನು ಎತ್ತಿಕೊಂಡು ಹಿಂದೆ ಬಿದ್ದಿದ್ದಾಳೆ. ನಾವೆಲ್ಲಾ ಓಡಿಹೋಗಿ ಗಟ್ಟಿಯಾಗಿ ಹಿಡಿದುಕೊಂಡು ಕಲ್ಲನ್ನು

ಕೆಳಗೆ ಹಾಕಿಸಿದೆವು. ಇನ್ನು ಯಾರಿಂದಲು ಆಗುವುದಿಲ್ಲವೆಂದು ನಿಮ್ಮ ಹತ್ತಿರಕ್ಕೆ ಕರೆ ತಂದಿದ್ದೇವೆ.)

**ನಾನು :–** ಇವರು ಹೇಳುವುದೆಲ್ಲಾ ನಿಜವೇನಾ? 20 ಕೇಜಿಗಳ ಗುಂಡನ್ನು ಎತ್ತಿಕೊಂಡು ಓಡಿದ್ದೀಯಾ?

**ದೆವ್ವ :–** ಅವನು ಸಿಕ್ಕಿದ್ದರೆ ಅವನನ್ನು ಗುಂಡಿನಿಂದಲೆ ಸಾಯಿಸುತ್ತಿದ್ದೆ. ಅವನು ಹತ್ತಿ ಹೊಲದಲ್ಲಿ ಬಿದ್ದು ಓಡಿಹೋದನು. ಅಷ್ಟರಲ್ಲಿ ಇವರು ಬಂದು ಹಿಂದಿನಿಂದ ನನ್ನನ್ನು ಹಿಡಿದುಕೊಂಡರು.

**ನಾನು :–** ನೋಡಮ್ಮಾ, ನೀನು ದೊಡ್ಡವಳು ನಿನಗೆ ಹೇಳುವಂತವರಲ್ಲ. ಆದರೂ ನಿನಗೆ ಜ್ಞಾಪಿಸುವುದು ಏನೆಂದರೆ? ಪ್ರತಿ ಮನುಷ್ಯ ಭೂಮಿ ಮೇಲೆ ಸ್ವಲ್ಪ ಕಾಲವೆ ಬದುಕಿ ಸತ್ತುಹೋಗುತ್ತಾನೆ. ಕೆಲವರಿಗೆ ಸತ್ತುಹೋದ ನಂತರ ಸ್ವಲ್ಪಕಾಲ ಸೂಕ್ಷ್ಮ ಶರೀರದಲ್ಲಿ ಬದುಕುವುದಕ್ಕೆ ಅವಕಾಶ ಇರುತ್ತದೆ. ಕೆಲವರು ಸತ್ತ ತಕ್ಷಣವೆ ಮರು ಜನ್ಮಕ್ಕೆ ಹೋಗುತ್ತಾರೆ. ಸಾಯುತ್ತಿದ್ದ ಹಾಗೆ ಎರಡನೆ ಜನ್ಮಕ್ಕೆ ಹೋಗುವವರಿಗಿಂತ, ಸ್ವಲ್ಪಕಾಲ ಸೂಕ್ಷ್ಮ ಶರೀರದೊಂದಿಗೆ ಅದೇ ಜನ್ಮದಲ್ಲಿರುವುದು ಒಳ್ಳೆಯದೆ. ಏಕೆಂದರೆ ಆ ಜನ್ಮದಲ್ಲಿ ಬದುಕಿರುವಾಗ ತನ್ನ ಜೀವನ ಹೇಗೆ ಕಳೆದಿದೆ ಎಂದು ಜ್ಞಾಪಕ ತಂದುಕೊಂಡು ನೋಡಿಕೊಳ್ಳುವುದಕ್ಕೆ ಅವಕಾಶವಿದೆ. ಬದುಕಿರುವಾಗ ದೈವಜ್ಞಾನ ತಿಳಿದುಕೊಳ್ಳುವ ಬಯಕೆ ಇಲ್ಲದೆ ಬದುಕಿದ್ದರೂ, ಸೂಕ್ಷ್ಮವಾಗಿ ಇರುವಾಗ ದೈವಜ್ಞಾನ ತಿಳಿದುಕೊಳ್ಳುವ ಅವಕಾಶ ಇರುತ್ತದೆ. ಅದರಿಂದ ತನ್ನ ತಪ್ಪನ್ನು ತಿಳಿದುಕೊಂಡು ದೈವಜ್ಞಾನವನ್ನು ತಿಳಿದುಕೊಳ್ಳಬಹುದು. ಸತ್ತುಹೋಗಿ ದೆವ್ವವಾಗಿ ಇರುವಾಗ ಸಹ ನೀನು ನನ್ನ ತಂಗಿ ಎನ್ನುತ್ತೀಯ. ಅವರೇನೊ ನಿನ್ನನ್ನು ಪೀಡೆ ಎನ್ನುತ್ತಿದ್ದಾರೆ. ಅವರು ಅಷ್ಟಾಗಿ ಹೀಯಾಳಿಸಿಕೊಂಡಾಗ ನೀನೇಕೆ ಇವರ ಹತ್ತರ ಇರಬೇಕು. ಒಳ್ಳೆಯ ಅವಕಾಶವಿರುವ ಕಾಲದಲ್ಲಿಯು ಸಹ ದೇವರನ್ನು ತಿಳಿದುಕೊಳ್ಳದೆ ಹೋದರೆ, ದೆವ್ವವಾಗಿ ಬದಲಾಗಿ ತನ್ನ ತಪ್ಪನ್ನು ತಾನು ತಿಳಿದುಕೊಳ್ಳದ ಹಾಗೆ. ಜನ್ಮಕ್ಕೆ ಹೋದರೆ ತನ್ನ ತಪ್ಪನ್ನು ಗುರುತು ಮಾಡಿಕೊಳ್ಳುವ ಜ್ಞಾಪಕವೆ ಇರುವುದಿಲ್ಲ.

ಅಂತವರಿಗಿಂತ ತಾನು ಕಳೆದ ಜೀವನವನ್ನು ಗುರುತು ಮಾಡಿಕೊಂಡು, ಒಳ್ಳೆಯ ಜೀವನವನ್ನು ಕಳೆಯುವುದಕ್ಕೆ ಅವಕಾಶವಿರುವ ಸೂಕ್ಷ್ಮ ಶರೀರದಲ್ಲಿದ್ದು, ಒಂದು ಕ್ಷಣ ವೃಥಾ ಮಾಡಿದರೂ, ಅದು ಆ ಜನ್ಮಕ್ಕೆ ಬಹಳ ನಷ್ಟವೇ ಆಗುತ್ತದೆ.

ಈಗ ನೀನು ಸೂಕ್ಷ್ಮವಾಗಿ ಕಾಲ ಕಳೆಯುತ್ತಿದ್ದೀಯ. ಯಾವ ಅಡಚಣೆಯು ಇಲ್ಲ. ಕಳೆದ ಕಾಲವನ್ನು ಕುರಿತು ಯೋಚಿಸಿಕೊ, ಮಾಡಿದ ತಪ್ಪುಗಳಿಗೆ ಪ್ರಾಯಶ್ಚಿತ್ತವಾಗಿ ದೈವಜ್ಞಾನ ತಿಳಿದುಕೊ. ನಾನು ಇದಕ್ಕಿಂತ ಹೆಚ್ಚಿಗೆ ಹೇಳುವುದಿಲ್ಲ. ನಿನಗೆ ನಾನು ಹೇಳಿರುವುದು ಒಳ್ಳೆಯದೆನಿಸಿದರೆ ಹೀಗೆ ಬರುವುದು ಬಿಟ್ಟು ಜ್ಞಾನ ತಿಳಿದುಕೊಳ್ಳುವುದಕ್ಕೆ ಕಾಲವನ್ನು ವಿನಿಯೋಗಿಸಿಕೊ ಇಲ್ಲದೆ ಹೋದರೆ ನಿನ್ನ ಇಷ್ಟ.

**ದೆವ್ವ :–** ನೀನು ಹೇಳಿದ ಹಾಗೆ ಇಲ್ಲಿಯವರೆಗು ಯಾರೂ ಹೇಳಲಿಲ್ಲ. ಎಲ್ಲಿಗೆ ಹೋದರೂ ದೆವ್ವ ಅಂದರೇನೆ ಬಹಳ ನೀಚವಾಗಿ ನೋಡುತ್ತಿದ್ದಾರೆ. ಮನುಷ್ಯ ಯೋಗ್ಯತೆಯನ್ನಾಗಲಿ, ಬಂಧುತ್ವವನ್ನಾಗಲಿ, ವಯಸ್ಸನ್ನಾಗಲಿ, ಸಾಟಿ ಮನುಷ್ಯನೆಂದಾಗಲಿ ನೋಡದೆ ಪೊರಕೆಯಿಂದ ಹೊಡಿ, ಚಪ್ಪಲಿಯಿಂದ ಹೊಡಿ, ಹೊಗೆ ಇಡು ಎನ್ನುವವರೆ ಹೊರತು ಮರ್ಯಾದೆ ಕೊಟ್ಟು ಮಾತನಾಡಿಸುವವರೆ ಇಲ್ಲ. ನಮ್ಮವರು ಸಹ ನನಗೆ ಏನೂ ಮರ್ಯಾದೆ ಕೊಡಲಿಲ್ಲ. ಹಾಗಿರುವಾಗ ನಾನು ಬರುವುದು ಸಹ ನನ್ನ ಬುದ್ಧಿ ಕಡಿಮೆ ಆಗುತ್ತದೆ. ಈಗಿನಿಂದ ದೈವಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸುತ್ತೇನೆ.

(ಎಂದು ಹೇಳಿ ಅಕ್ಕ ಅಡಗಿಕೊಂಡು ತಂಗಿ ನಿದ್ರೆಯಿಂದ ಎಚ್ಚರ ಗೊಂಡಳು. ಇದೆಲ್ಲಾ ಒಂದು ಗಂಟೆಕಾಲ ನಡೆದಿದೆಯೆಂದುಕೊಳ್ಳುತ್ತೇನೆ. ದೆವ್ವ ಹೋಗಿ ಮನುಷ್ಯಳಿಗೆ ಜ್ಞಾಪಕ ಬಂದ ಎರಡು ನಿಮಿಷಗಳಿಗೆ ತಂಗಿ ವಾಂತಿ ಮಾಡಿಕೊಂಡಳು ಏಕೆ ಹಾಗೆ ತಕ್ಷಣವೆ ವಾಂತಿ ಮಾಡಿಕೊಂಡಳು ಎಂದು ಕೇಳಿದಾಗ ಆಕೆ ಮಕ್ಕಳು ಹೀಗೆ ಹೇಳಿದರು. ನಮ್ಮ ಅಮ್ಮನಿಗೆ ತಾಂಬೂಲ ಸರಿಹೋಗುವುದಿಲ್ಲ. ನಮ್ಮ ದೊಡ್ಡಮ್ಮನಿಗೆ ಸರಿಹೋಗುತ್ತದೆ. ನಮ್ಮ ದೊಡ್ಡಮ್ಮ ತಾಂಬೂಲವಿಲ್ಲದೆ ಇರುವುದಿಲ್ಲ. ಹೀಗೆ ನಮ್ಮ ದೊಡ್ಡಮ್ಮ ಬಂದಾಗ ತಾಂಬೂಲ

ಕೊಟ್ಟರೂ, ಆಕೆ ಹೋದ ನಂತರ ನಮ್ಮ ಅಮ್ಮನ ಶರೀರದಲ್ಲಿ ಅದು ಸರಿಹೋಗುವುದಿಲ್ಲ. ತಕ್ಷಣವೆ ಹೊಟ್ಟೆಯಲ್ಲಿ ತಿರುವಿ ವಾಂತಿಗೆ ಬರುತ್ತದೆಂದು ಹೇಳಿದರು. ಇದೆಲ್ಲಾ ಗಮನಿಸಿ ನೋಡಿದರೆ, ಅಕ್ಕ ಸೂಕ್ಷ್ಮ ತಂಗಿಯ ಶರೀರವನ್ನು ಆಕ್ರಮಿಸಿರುವಾಗ ಆ ಸೂಕ್ಷ್ಮಕ್ಕೆ ತಾಂಬೂಲ ಸರಿಹೋಗುತ್ತದೆ. ಆದ್ದರಿಂದ ತಂಗಿಯ ಶರೀರದಲ್ಲಿ ತಾಂಬೂಲವಿದ್ದಾಗ ಯಾವ ಅಲರ್ಜಿ ಇಲ್ಲ, ರಿಯಾಕ್ಷನ್ ಇಲ್ಲ. ಅಕ್ಕ ಸೂಕ್ಷ್ಮ, ತಂಗಿಯ ಶರೀರವನ್ನು ಬಿಟ್ಟು ಹೋದ ನಂತರ ತಂಗಿಯ ಸೂಕ್ಷ್ಮವನ್ನು ಅನುಸರಿಸಿ ನೋಡಿದಾಗ, ತಂಗಿಯ ಶರೀರದಲ್ಲಿ ತಾಂಬೂಲ ಎಲರ್ಜಿಯಿಂದ ರಿಯಾಕ್ಷನ್ ಆಗಿ ವಾಂತಿ ಬಂದಿದೆ. ಇದನ್ನು ಅನುಸರಿಸಿ ನೋಡಿದಾಗ ಯಾವ ಶರೀರಗಳಲ್ಲಾಗಲಿ ಆಹಾರ ಪ್ರತ್ಯೇಕತೆಗಳು, ಆಹಾರ ಎಲರ್ಜಿಗಳು ಇರುವುದಿಲ್ಲವೆಂದು, ಕೇವಲ ಶರೀರದಲ್ಲಿ ಜೀವಿಸುವ ಜೀವಾತ್ಮನನ್ನು ಅನುಸರಿಸಿ, ಜೀವಾತ್ಮನ ಕರ್ಮವನ್ನು ಅನುಸರಿಸಿ, ಶರೀರಕ್ಕೆ ಎಲರ್ಜಿಗಳು, ರಿಯಾಕ್ಷನ್‌ಗಳು ಇರುತ್ತವೆಂದು ತಿಳಿಯುತ್ತಿದೆ.

ಇಲ್ಲಿಯವರೆಗೆ ತಿಳಿದುಕೊಂಡ ಶಿವರಾಮಯ್ಯ ಮೀಸೆಯನ್ನು ತಿರುವಿಸುವ ಅಭ್ಯಾಸವಾಗಲಿ, ದೆವ್ವ ಹಿಡಿದಾಗ ಬಂದ ಮೆಳ್ಳೆಕಣ್ಣಾಗಲಿ, ಈಗ ಹೇಳಿದ ತಾಂಬೂಲದ ರಿಯಾಕ್ಷನ್ ಆಗಲಿ ಶರೀರಕ್ಕೆ ಇರುವವುಗಳಲ್ಲವೆಂದು, ಶರೀರದಲ್ಲಿರುವ ಜೀವಾತ್ಮನನ್ನು ಅನುಸರಿಸಿ ಇರುವವೆಂದು, ಅನುಭವ ಪೂರ್ವಕವಾಗಿ, ಪ್ರತ್ಯಕ್ಷವಾಗಿ ತಿಳಿದುಹೋಗಿದೆ. ಇಷ್ಟು ಪ್ರತ್ಯಕ್ಷ ಸಾಕ್ಷಿಗಳಿದ್ದರು ದೆವ್ವಗಳನ್ನು ಒಪ್ಪಿಕೊಳ್ಳದ ಕೆಲವರು ನಾಸ್ತಿಕರಿದ್ದಾರೆ. ಅವರ ಅಂತರಂಗದಲ್ಲಿ ದೆವ್ವಗಳು ನಿಜವೆಯೆಂದು ಅವರಿಗೆ ಅರ್ಥವಾದರೂ, ತಾನು ಹಿಡಿದುಕೊಂಡ ಮೊಲಕ್ಕೆ ಮೂರೇಕಾಲು ಎನ್ನುವ ಹಾಗೆ ವಾದಿಸುತ್ತಾರೆ. ತಿಳಿಯದಿದ್ದವರಿಗಾದರೂ ಹೇಳಬಹುದು. ತಿಳಿದವರಿಗಾದರೂ ಹೇಳಬಹುದು, ತಿಳಿದರೂ, ತಿಳಿದಿಲ್ಲವೆನ್ನುವ ವರಿಗೆ ಏನು ಹೇಳಲಾಗುವುದಿಲ್ಲ. ಏಕೆಂದರೆ ಅವನಿಗೆ ತಿಳಿದರೂ ತಿಳಿದಿಲ್ಲವೆನ್ನು ವುದು, ಅರ್ಥವಾದರೂ ಅರ್ಥವೆ ಇಲ್ಲೆನ್ನುವುದು ಅವರ ಕೆಲಸ. ಅಂತವರಿಗೆ ಹೇಳುವುದಕ್ಕಿಂತ ಹೇಳದಿರುವುದೆ ಒಳ್ಳೆಯದು.

ಶರೀರದಲ್ಲಿ ರೋಗಗಳು ಬರುವುದು ಸಹಜ. ಆದರೆ ಎಲ್ಲ ರೋಗಗಳು ಆಸ್ಪತ್ರೆಯಲ್ಲಿ ಡಾಕ್ಟರುಗಳ ಹತ್ತಿರವೆ ಗುಣವಾಗುವುದಿಲ್ಲ. ಅದಕ್ಕೆ ಕಾರಣ, ರೋಗಗಳ ರೂಪದಲ್ಲಿ ಇರುವವೆಲ್ಲ ರೋಗಗಳಲ್ಲ. ಈಗ ಅಂತಹ ರೋಗವನ್ನು ಕುರಿತು ಒಂದು ಸಂಘಟನೆಯ ಮುಖಾಂತರ ತಿಳಿದುಕೊಳ್ಳೋಣ. ಅನಂತಪುರ ಜಿಲ್ಲೆಯ ಗಂಗಾವರಮು ಎನ್ನುವ ಊರಿನಲ್ಲಿ ರಾಮಣ್ಣ ಚೌದರಿ ಎಂಬ ವ್ಯಕ್ತಿಗೆ ಪ್ರತಿ ಬುಧವಾರ ಸಾಯಂಕಾಲ ಏಳುಗಂಟೆಗೆ ವಾಯಿ (ಮೂರ್ಛೆ) ಬರುತ್ತಿತ್ತು. ಅದು ಐದರಿಂದ ಹತ್ತು ನಿಮಿಷಗಳ ವರೆಗು ಇದ್ದು ಹೋಗುತ್ತಿತ್ತು. ಹಾಗೆ ಸುಮಾರು ಒಂದೂವರೆ ವರ್ಷದಿಂದ ನಡೆದಿದೆ. ಡಾಕ್ಟರುಗಳ ಹತ್ತಿರಕ್ಕೆ ಹೋಗಿ ತೋರಿಸಿಕೊಂಡರೆ ಆ ರೋಗಕ್ಕೆ ಯಾವುದೊ ಒಂದು ಹೆಸರಿಟ್ಟು, ಅದು ಹಾಗೆ ಬರುತ್ತದೆ. ಅದಕ್ಕೆ ಈ ಔಷಧಗಳನ್ನು ಬಳಸಿದರೆ ಬರುವುದಿಲ್ಲವೆಂದು ಹೇಳಿ, ತಿಂಗಳ ಪರ್ಯಂತರ ಔಷಧಗಳು ಕೊಟ್ಟರೂ ಅದು ಮಾತ್ರ ಬಾರದೆ ಹೋಗಲಿಲ್ಲ. ಕೊನೆಗೆ ಅವರು ನನ್ನ ಹತ್ತಿರಕ್ಕೆ ಬಂದು ಹೀಗೆ ಹೇಳಿದರು. "ಪ್ರತಿ ಬುಧವಾರ ಸಾಯಂಕಾಲ ಏಳುಗಂಟೆಗೆ ವಾಯಿ (ಫಿಟ್ಸ್) ಬರುವುದರಿಂದ ಆ ದಿನ, ಆ ಸಮಯಕ್ಕೆ ಕೆಲಸಗಳನ್ನೆಲ್ಲಾ ಬಿಟ್ಟು ಮನೆಯಲ್ಲಿಯೆ ಇರಬೇಕಾಗುತ್ತದೆ. ಇಲ್ಲಿಯವರೆಗು ಯಾವ ಔಷಧಗಳನ್ನು ಬಳಸಿದರೂ ಗುಣವಾಗಲಿಲ್ಲ" ಅವರ ಮಾತುಗಳನ್ನು ಕೇಳಿದ ನಾನು ಸ್ವಲ್ಪ ಆಲೋಚಿಸಿದಾಗ ರೋಗಕ್ಕೆ ಬುಧವಾರವೆಂದಾಗಲಿ, ಏಳುಗಂಟೆಗಳೆ ಎಂದಾಗಲಿ ನಿಯಮವಿರುವುದಿಲ್ಲ. ಹಾಗೆ ಇದೆ ಎಂದರೆ ಅದು ಶರೀರ ರೋಗವಲ್ಲವೆಂದು, ಸೂಕ್ಷ್ಮ ಶರೀರ ರೋಗವೆಂದು ಅರ್ಥವಾಯಿತು. ಆಗ ಆತನನ್ನು ಕೆಲವು ಪ್ರಶ್ನೆಗಳನ್ನು ಕೇಳಿದೆನು.

**ನಾನು** :– ಈ ರೋಗ ಎಷ್ಟು ದಿನಗಳಿಂದ ಬರುತ್ತಿದೆ?

**ರಾಮಣ್ಣ** :– ಸುಮಾರು ಒಂದೂವರೆ ವರ್ಷದಿಂದ ಬರುತ್ತಿದೆ.

**ನಾನು** :– ಮೊಟ್ಟ ಮೊದಲು ಬಂದಾಗ ಇನ್ನೂ ಏನಾದರೂ ನಡೆದಿದೆಯಾ ಅಥವಾ ಏನಾದರು ನಡೆದ ನಂತರ ಈ ರೋಗ ಬಂದಿದೆಯಾ?

**ರಾಮಣ್ಣ :–** ಮೊದಲು ಬಂದಾಗ ಏನು ನಡೆದಿದೆಯೋ ನೆನಪಿಲ್ಲ.

**ನಾನು :–** ಈ ರೋಗ ಬರುವ ಮುನ್ನ ಅಮಾವಾಸ್ಯೆ ದಿನವಾಗಲಿ, ಹುಣ್ಣಿಮೆ ದಿನವಾಗಲಿ, ಭಾನುವಾರದ ದಿನವಾಗಲಿ ನಿನಗೇನಾದರು ಪ್ರತ್ಯೇಕವಾಗಿ ನಡೆದಿದೆಯಾ.

**ರಾಮಣ್ಣ :–** ನನಗೆ ಏನು ನಡೆದಿಲ್ಲ, ಆದರೆ ಅಮಾವಾಸ್ಯೆ ದಿನ ಎನ್ನುವುದು ನನಗೆ ಚೆನ್ನಾಗಿ ಜ್ಞಾಪಕವಿದೆ.

**ರಾಮಣ್ಣ :–** ನಮ್ಮ ಪಕ್ಕದ ಊರಿನಲ್ಲಿ ಭತ್ತದ ಮಿಷನ್ ಇದೆ. ಆ ದಿನ ಭತ್ತವನ್ನು ಆ ಮಿಷನ್‌ಗೆ ತೆಗೆದುಕೊಂಡು ಹೋಗಿದ್ದೆನು. ದಾರಿ ಮಧ್ಯದಲ್ಲಿ ಸ್ವಲ್ಪ ತಡವಾಗಿ ಅಲ್ಲಿಗೆ ಹೋಗುವ ಹೊತ್ತಿಗೆ ಸಾಯಂಕಾಲ ಕತ್ತಲಾಗುವ ಸಮಯವಾಯಿತು. ಮಿಷನ್ನಿನವರು ಲೈಟುಗಳನ್ನು ಹಾಕಿದ್ದಾರೆ. ಈ ದಿನ ಅಮಾವಾಸ್ಯ ಮಿಷನ್‌ಗೆ ಪೂಜೆ ಮಾಡಬೇಕು. ನಾಳೆ ಬಂದರೆ ಭತ್ತ ಹಾಕುತ್ತೇವೆ, ಈಗ ಹಾಕುವುದಿಲ್ಲ ಎಂದರು. ಎಷ್ಟು ಕೇಳಿಕೊಂಡರೂ ಅವರು ಕೇಳಲಿಲ್ಲ. ಆ ದಿನ ಮನೆಗೆ ಬಂದೆನು, ಮರುದಿನ ನಾನು ಹೋಗಲಿಲ್ಲ, ನಮ್ಮವರು ಹೋದರು.

**ನಾನು :–** ದಾರಿಯಲ್ಲಿ ಏಕೆ ಆಲಸ್ಯವಾಗಿತ್ತು?

**ರಾಮಣ್ಣ :–** ಗಾಡಿ ವಾಲುಬಿದ್ದಿತ್ತು. ನಾನು ಒಬ್ಬನೇ ಆಗಿರುವುದರಿಂದ ಬಹಳ ಹೊತ್ತು ಇದ್ದು, ದಾರಿಯಲ್ಲಿ ಐದಾರು ಜನ ಬಂದ ನಂತರ, ಗಾಡಿಯನ್ನು ಮೇಲಕ್ಕೆತ್ತಿ ಭತ್ತದ ಮೂಟೆಗಳೆಲ್ಲವನ್ನು ಮತ್ತೆ ಗಾಡಿಯೊಳಗೆ ಹಾಕಿಕೊಂಡು, ಬರುವ ಹೊತ್ತಿಗೆ ಸಾಯಂಕಾಲವಾಗಿ ಹೋಯಿತು.

**ನಾನು :–** ಈ ರೋಗ ಅಮಾವಾಸ್ಯೆ ನಂತರ ಬಂದಿರುವ ಹಾಗೆ ಜ್ಞಾಪಕವಿದೆಯಾ?

**ರಾಮಣ್ಣ :–** ಅಮಾವಾಸ್ಯೆ ಹೋದ ನಂತರವೆ, ಅದೇ ತಿಂಗಳಲ್ಲಿ ಬಂದಿದೆ, ಆದರೆ ಎಷ್ಟು ದಿನಗಳಿಗೆ ಬಂದಿದೆಯೊ ಜ್ಞಾಪಕವಿಲ್ಲ.

(ಇದೆಲ್ಲಾ ಕೇಳಿದ ನಂತರ ಏನೂ ಅರ್ಥವಾಗಲಿಲ್ಲ. ಆದರೂ ಆತನ ಬಲಗೈ ನಾಡಿಯನ್ನು ನೋಡಿದೆನು. ನಾಡಿ ಬಡಿದುಕೊಳ್ಳುವುದನ್ನು ಅನುಸರಿಸಿ ನೋಡಿದರೆ ಆತನ ಶರೀರದಲ್ಲಿ ಮತ್ತೊಂದು ಸೂಕ್ಷ್ಮ ಶರೀರವಿದ್ದ ಹಾಗೆ ಅರ್ಥವಾಯಿತು. ಆಗ ಆತನನ್ನು ನನ್ನ ಮುಂದೆ ಕುಳಿತುಕೊ ಎಂದು ಆತನ ಕಡೆ ನೋಡಿದೆನು. ಹಾಗೆ ನೊಡುತ್ತಿರುವಾಗ ಒಂದು ನಿಮಿಷದಲ್ಲಿಯೆ, ರಾಮಣ್ಣ ಶರೀರದಲ್ಲಿನ ಸೂಕ್ಷ್ಮ ಶರೀರ, ಶರೀರದ ಮೇಲಕ್ಕೆ ಬಂದಹಾಗೆ ಅರ್ಥವಾಯಿತು. ಆಗ ನಮ್ಮ ಸಂಭಾಷಣೆ ಹೀಗಿದೆ ನೋಡಿರಿ)

**ನಾನು** :– ನೀನು ಯಾರೊ ತಿಳಿದುಕೊಳ್ಳಬಹುದಾ?

**ಸೂಕ್ಷ್ಮ** :– ನನ್ನನ್ನು ಏಕೆ ಹೊರಗೆ ಎಳೆದಿದ್ದೀರ ?

**ನಾನು** :– ಮೊದಲು ನನ್ನ ಪ್ರಶ್ನೆಗೆ ಉತ್ತರ ಹೇಳು. ನಂತರ ನಿನ್ನ ಪ್ರಶ್ನೆಗೆ ಉತ್ತರ ಹೇಳುತ್ತೇವೆ.

**ಸೂಕ್ಷ್ಮ** :– ನಾನು ಸುಬ್ಬಲಕ್ಷ್ಮಿ. ನಾನು ಸತ್ತುಹೋಗಿ ಏಳು ವರ್ಷಗಳಾಗಿವೆ.

**ನಾನು** :– ಸುಬ್ಬಲಕ್ಷ್ಮಿ ನೀನು ಏಕೆ ಸತ್ತುಹೋಗಿದ್ದೀಯ? ನಿನ್ನ ವಯಸ್ಸೆಷ್ಟು?

**ಸುಬ್ಬಲಕ್ಷ್ಮಿ** :– ನನಗೆ ಇಲ್ಲಿಗೆ 24 ಇಲ್ಲವೆ 25 ವರ್ಷಗಳ ವಯಸ್ಸಿರುತ್ತದೆ. ನಾನು ರೋಗ ಬಂದು ಸಾಯಲಿಲ್ಲ. ಬೇರೆಯವರು ನನ್ನನ್ನು ಸಾಯಿಸಿದ್ದಾರೆ.

**ನಾನು :–** ನಿನಗೆ ಈಗ 25 ಸಂವತ್ಸರಗಳ ವಯಸ್ಸಾದರೆ, ನೀನು ಸತ್ತುಹೋಗಿ ಏಳು ವರ್ಷಗಳಾದರೆ, 18 ವರ್ಷ ವಯಸ್ಸಿನಲ್ಲಿಯೆ ನೀನು ಸತ್ತುಹೋಗಿರಬೇಕು ಅಷ್ಟೇನಾ?

**ಸುಬ್ಬಲಕ್ಷ್ಮಿ** :– ಅಷ್ಟೆ. ನಾನು ಸತ್ತುಹೋಗಲಿಲ್ಲ, ನನ್ನನ್ನು ಸಾಯಿಸಿದರು. ಆದರೂ ನಾನು ಬದುಕೆ ಇದ್ದೇನೆ. ಈಗ ನನ್ನನ್ನು ಯಾರೂ ಸಾಯಿಸಲಾರರು. ನಾನೇ ಅವರನ್ನು ಸಾಯಿಸುತ್ತೇನೆ.

**ನಾನು** :– ನಿನ್ನ ಹಿಂದೆ ನಮಗೆ ತಿಳಿಯದಿರುವುದು ಬಹಳ ಇದ್ದಹಾಗಿದೆ. ಅವಶ್ಯವಾದರೆ ನಿನಗೆ ನಾನು ಸಹ ಸಹಾಯ ಮಾಡುತ್ತೇನೆ. ನಿನ್ನನ್ನು ಯಾರು ಸಾಯಿಸಿದ್ದಾರೆ?

**ಸುಬ್ಬಲಕ್ಷ್ಮಿ** :– ನೀವು ಹಿರಿಯರು. ನೀವು ನನಗೆ ಸಹಾಯ ಮಾಡುತ್ತೇನೆಂದಿದ್ದೀರ. ಬಹಳ ಸಂತೋಷ. ನನ್ನದು ಬಡಕುಟುಂಬ. ನನ್ನ ತಾಯಿ ತಂದೆಯರು ನನ್ನನ್ನು ಚೆನ್ನಾಗಿ ಓದಿಸಬೇಕೆಂದುಕೊಂಡಿದ್ದರು. ನಮ್ಮ ಅಮ್ಮನಿಗೆ ನನ್ನ ಮೇಲೆ ಹೆಚ್ಚಿನ ಪ್ರೀತಿ. ನಮ್ಮ ಊರಿಗೆ ಪಕ್ಕದಲ್ಲಿರುವ ಊರಿನಲ್ಲಿ ಹೈಸ್ಕೂಲು ಇದೆ. ಅಲ್ಲಿ ನಾನು ಹತ್ತನೇ ತರಗತಿ ಓದುತ್ತಿದ್ದೆನು. ಪ್ರತಿ ದಿನ ಕಾಲ್ನಡಿಗೆಯಲ್ಲಿ ಶಾಲೆಗೆ ಹೋಗಿ ಬರುತ್ತಿದ್ದೆನು. ನಮ್ಮ ಊರಿನಿಂದ ನನ್ನ ಜೊತೆಗೆ ಶಾಲೆಗೆ ಬರುವವರಿದ್ದರು. ಆದರೆ ಒಂದು ದಿನ ನನಗೆ ಮನೆಯಲ್ಲಿಯೆ ತಡವಾಗಿತ್ತು. ನನ್ನ ಜೊತೆಗಿರುವವರು ನಾನು ಬರುವುದಿಲ್ಲ ಎಂದು ಹೇಳಿರುವುದರಿಂದ ಅವರು ಹೊರಟು ಹೋದರು. ನಂತರ ಸ್ವಲ್ಪ ತಡವಾದರೂ ಪರವಾಗಿಲ್ಲ ಹೇಳಿಕೊಳ್ಳಬಹುದೆಂದು ಹೊರಟು ಬಂದೆನು. ಶಾಲೆಯಿರುವ ಊರಿನ ಹತ್ತಿರತ್ತಿರಕ್ಕೆ ಬಂದೆನು. ಅಷ್ಟರಲ್ಲಿ ಇಬ್ಬರು ಯುವಕರು ಮೋಟಾರ್ ಸೈಕಲ್‌ನಲ್ಲಿ ಎದುರಾದರು. ಅವರಿಬ್ಬರು ನಾನು ಹೋಗುವ ಊರಿನವರೆ. ರೆಡ್ಡಿ (ಕಮ್ಮ) ಕುಲಕ್ಕೆ ಸೇರಿದವರು. ಅವರು ನನ್ನ ಪಕ್ಕದಲ್ಲೆ ನಿಂತರು. ಏಕೆ ತಡವೆಂದು ಕೇಳಿದರು, ನಾನು ಮಾತನಾಡಲಿಲ್ಲ. ನನ್ನ ದಾರಿಯಲ್ಲಿ ನಾನು ಬರುತ್ತಿದ್ದೇನೆ. ಅಷ್ಟರಲ್ಲಿ ಒಬ್ಬನು ಹಿಂದಿನಿಂದ ಬಂದು ನನ್ನ ಬಾಯಿ ಮುಚ್ಚಿದನು, ಎರಡನೆಯವನು ಕಾಲುಗಳನ್ನು ಹಿಡಿದುಕೊಂಡು ಎತ್ತಿ ಪಕ್ಕದಲ್ಲೇ ಇದ್ದ ತೊಗರಿ ಹೊಲಕ್ಕೆ ತೆಗೆದುಕೊಂಡು ಹೋದರು. ಬಾಯಲ್ಲಿ ಕರ್ಚೀಫ್ ಇಟ್ಟು, ಉಡುದಾರದಿಂದ ಕೈಗಳನ್ನು ಮೇಲಕ್ಕಿಟ್ಟು ಕಟ್ಟಿದರು. ಅಲ್ಲಿ ಮುಳ್ಳಿನ ಗಿಡಗಳು ಹೆಚ್ಚಾಗಿ ಇರುವುದರಿಂದ ರೋಡಿನೊಳಗೆ ಏನೂ ಕಾಣಿಸುವುದಿಲ್ಲ. ನಂತರ ಒಬ್ಬನು ಮೋಟಾರ್ ಸೈಕಲ್‌ನ ಹತ್ತಿರವಿದ್ದು, ಒಬ್ಬರ ನಂತರ ಒಬ್ಬರು ನನ್ನ ಮೇಲೆ ಹತ್ಯಾಚಾರ ಮಾಡಿದರು. ನಂತರ ವಿಷಯ ತಿಳಿದರೆ ಪ್ರಮಾದವೆಂದು ನನ್ನನ್ನು ನಿರ್ಧಾಕ್ಷಿಣ್ಯವಾಗಿ ಕುತ್ತಿಗೆ ಹಿಚುಕಿ ಸಾಯಿಸಿದರು, ಶವವನ್ನು ದಾರಿ ಪಕ್ಕದಲ್ಲಿದ್ದ ಬಾವಿಯೊಳಗೆ ಹಾಕಿದರು.

ಹಾಗೆ ಅವರು ನನ್ನನ್ನು ಬಲವಂತವಾಗಿ ಸಾಯಿಸಿದರು. ಆದರೂ ಆ ವಿಷಯ ಇಲ್ಲಿಯವರೆಗು ಯಾರಿಗೂ ತಿಳಿಯದು. ನಮ್ಮ ಅಮ್ಮ ನಾನೆ ಬಾವಿಯೊಳಗೆ ಬಿದ್ದಿದ್ದೇನೆಂದು ಅಂದುಕೊಂಡಿದ್ದಾಳೆ. ಅವರು ಹೇಗೆ ಸಾಯಿಸಿದರು ದೇವರು ನನ್ನನ್ನು ಸಜೀವವಾಗಿಯೆ ಉಳಿಸಿದ್ದಾನೆ. ದೇವರು ನನ್ನನ್ನು ಸಜೀವವಾಗಿ, ಅವರ ಮೇಲೆ ಸೇಡು ತೀರಿಸಿಕೊಳ್ಳಲು ಉಳಿಸಿದ್ದಾನೆಂದು ಕೊಂಡೆನು. ನಂತರ ಸ್ವಲ್ಪ ದಿನಗಳಿಗೆ ಅವರಿಬ್ಬರನ್ನು ಸಾಯಿಸಿದೆನು. ನನ್ನನ್ನು ಸಾಯಿಸಿದ್ದು ರೆಡ್ಡಿಗರೆ (ಕಮ್ಮ ಕುಲದವರೆ) ಆದ್ದರಿಂದ ಆ ಕುಲಸ್ತರೆಂದರೆ ನನಗೆ ಕೋಪ. ಒಂದು ಅಮಾವಾಸ್ಯೆ ದಿನ ಈ ರಾಮಣ್ಣ ಎತ್ತಿನಗಾಡಿಯನ್ನು ಹೊಡ್ಕೊಂಡು ಆ ದಾರಿಯಲ್ಲಿ ಬರುವುದನ್ನು ನೋಡಿದೆನು. ದಾರಿ ಪಕ್ಕದಲ್ಲಿಯೆ ಬಾವಿ ಇದೆಯೆಂದು ಹೇಳಿದೆನಲ್ಲ! ನಾನು ಆಗಾಗ ಅಲ್ಲಿಯೆ ಇರುತ್ತೇನೆ. ಆ ದಿನ ಅಲ್ಲೆ ಇದ್ದು ರಾಮಣ್ಣನನ್ನು ನೋಡಿ ಸಾಯಿಸಬೇ ಕೆಂದುಕೊಂಡೆನು. ನಂತರ ಆತನೇನು ಮಾಡಿದ್ದಾನೆಂದು ಅಂದುಕೊಂಡೆನು. ರಾಮಣ್ಣ ರೆಡ್ಡಿಯವನಲ್ಲವೆ ಅದಕ್ಕೆ ಬಿಡಬಾರದೆಂದುಕೊಂಡೆನು. ಅಲ್ಲಿಗೆ ಬರುತ್ತಿದ್ದ ಹಾಗೆ ಗಾಡಿಯನ್ನು ಬೀಳುವಹಾಗೆ ಮಾಡಿದೆನು. ಅಲ್ಲಿ ಬೀಳುವ ಅವಕಾಶವೆ ಇಲ್ಲ. ಆದರೂ ಬಿದ್ದಿದೆ ಅಂದುಕೊಂಡನು. ಈತನು ಒಂಟಿಯಾಗಿ ಬಹಳ ಹೊತ್ತು ಅಲ್ಲಿಯೆ ಇದ್ದಾನೆ. ಮನುಷ್ಯರು ಬಂದ ನಂತರ ಗಾಡಿಯನ್ನು ಮೇಲಕ್ಕೆತ್ತಿ ಹೊಡ್ಕೊಂಡು ಹೋದರು. ಗಾಡಿ ವಾಟ ಬಿದ್ದಾಗ ರಾಮಣ್ಣ ಸಹ ಕೆಳಗೆ ಬಿದ್ದನು. ಆಗ ಸ್ವಲ್ಪ ಮಬ್ಬು ಬಂದಹಾಗೆ ಆಗಿದೆ. (ಜ್ಞಾಪಕ ಇಲ್ಲದಂತಾಗಿದೆ) ಆಗಲೆ ನಾನು ಆತನೊಳಗೆ ಸೇರಿಕೊಂಡೆನು. ಆಗಿನಿಂದ ಈತನಲ್ಲಿಯೆ ಇದ್ದೇನೆ. ರಾಮಣ್ಣ ಕೆಳಗೆ ಬಿದ್ದಿದ್ದು ಬಾವಿ ಹತ್ತಿರವೆ. ನನ್ನ ಮಾತು ನಿಜವೊ? ಅಲ್ಲವೊ? ಅನ್ನುವುದಕ್ಕೆ ಆತನಿಗೆ ಜ್ಞಾಪಕ ಬಂದ ನಂತರ ಕೇಳಿರಿ. ಇನ್ನೊಂದು ವಿಷಯ ಆತನು ನಿಮಗೆ ಹೇಳಲಿಲ್ಲ. ಆತನು ಹೆಂಡತಿಯೊಂದಿಗೆ ಸಂಸಾರ ಮಾಡುತ್ತಿಲ್ಲ. ಹೆಂಡತಿಯೊಂದಿಗೆ ಶರೀರ ಸಂಬಂಧವೆ ಇಲ್ಲ. ಅದಕ್ಕೆ ಕಾರಣ ನಾನೆ. ಆತನ ಗಂಡಸುತನವನ್ನು ನಾನೇ ಅನುಭವಿಸುತ್ತಿದ್ದೇನೆ. ಆದ್ದರಿಂದ ಆತನ ಹೆಂಡತಿಯೊಂದಿಗೆ ರಾಮಣ್ಣನಿಗೆ ಸಂಬಂಧ ಇಲ್ಲದೆ ಹೋಗಿದೆ. ಈತನಿಗೆ

ಪ್ರತಿ ಬುಧವಾರ ವಾಯು ಬರುವಹಾಗೆ ಮಾಡುತ್ತಿರುವುದು ನಾನೇ ಎಂದು ಯಾರಿಗೂ ಗೊತ್ತಿಲ್ಲ. ಹಾಗೆ ಬರುವುದರಿಂದ ಅದು ಮೇಲಕ್ಕೆ ಕಾಣಿಸುವ ಕಾರಣವಾಗಿದೆ. ಅದರಿಂದಲೆ ಈತನ ಗಂಡಸುತನ ಹೋಗಿದೆಯೆಂದು ಅಂದುಕೊಂಡಿದ್ದಾರೆ. ಈತನು ಡಾಕ್ಟರುಗಳನ್ನು ಕೇಳಿದರೆ ಅವರು ವಾಯಿ ಬರುವುದರಿಂದ ಹಾಗೆ ಆಗಿದೆಯೆಂದು ಹೇಳಿದರು. ನೀವು ದೊಡ್ಡವರು ಈಗ ನೀವೆ ಹೇಳಿರಿ, ನಾನು ಮಾಡಿರುವುದು ತಪ್ಪಾ?

**ನಾನು :–** ತಪ್ಪೆಂದು ನಾನು ಹೇಳುವುದಿಲ್ಲ. ಈಗ ಏನು ಮಾಡಬೇಕೆಂದು ಕೊಂಡಿದ್ದೀಯ.

**ಸುಬ್ಬಲಕ್ಷ್ಮಿ :–** ನಾನು ಮಾಡಬೇಕಾಗಿರುವುದು ಮಾಡಿದ್ದೇನೆ. ನನ್ನನ್ನು ಸಾಯಿಸಿದವರನ್ನು ಸಾಯಿಸಿದ್ದೇನೆ. ಈತನ ವಿಷಯಕ್ಕೆ ಬಂದರೆ, ಹೆಂಡತಿಗೆ ಅರಿಶಿಣ ಕುಂಕುಮ ಉಳಿಸಬೇಕೆಂದುಕೊಂಡಿದ್ದೇನೆ. ನಾನು ಮನುಷ್ಯಳೆ ತಾನೆ! ನನಗೂ ಕೋರಿಕೆಗಳು ಇರುತ್ತವಲ್ಲ! ಆದ್ದರಿಂದ ನಾನು ಈತನನ್ನು ಬಿಡುವುದಿಲ್ಲ, ಹಾಗೆಂದು ಸಾಯಿಸುವುದಿಲ್ಲ. ನೀವು ಮೊದಲೆ ನನಗೆ ಸಹಾಯ ಮಾಡುತ್ತೇನೆಂದು ಹೇಳಿದ್ದೀರ. ಆದ್ದರಿಂದ ನನ್ನನ್ನು ನನ್ನ ದಾರಿಯಿಂದ ಸರಿದುಕೊಳ್ಳೆಂದು ಹೇಳಬೇಡಿರಿ. ದಯೆಮಾಡಿ ನನ್ನನ್ನು ಕೆಟ್ಟವಳೆಂದು ಅನ್ನದೆ ಬಿಟ್ಟಾಕಿದರೆ ನೀವು ನನಗೆ ಸಹಾಯ ಮಾಡಿದಂತಾಗುತ್ತದೆ.

**ನಾನು :–** ಸುಬ್ಬಲಕ್ಷ್ಮಿ ನೀನು ಬಹಳ ತಿಳಿವಳಿಕೆಯುಳ್ಳವಳು. ನಾನು ನಿನಗೆ ಒಳ್ಳೆಯದು ಮಾಡಿದರೂ ಸ್ವಲ್ಪ ಹೇಳುವುದಿದೆ. ನಿನಗೆ ಒಂಟಿಯಾಗಿ ನಂತರ ಹೇಳುತ್ತೇನೆ. ಮೊದಲು ನೀನು ಒಳಗೆ ಹೋಗಿ ರಾಮಣ್ಣನನ್ನು ಹೊರಗೆ ಕಳುಹಿಸು ಆತನೊಂದಿಗೆ ಮಾತನಾಡಬೇಕು.

(ಸುಬ್ಬಲಕ್ಷ್ಮಿ ಅಡಗಿಕೊಂಡು ರಾಮಣ್ಣ ಹೊರಗೆ ಬಂದನು. ಅಲ್ಲಿಯವರೆಗು ಅಲ್ಲೇನು ನಡೆದಿದೆಯೆಂದು ಆತನಿಗೆ ತಿಳಿಯದು. ಅಲ್ಲಿಯವರೆಗು ಆತನು ನಿದ್ರೆಯಲ್ಲಿದ್ದು ಎದ್ದಿದ್ದಾನೆ. ಆಗ ರಾಮಣ್ಣನನ್ನು ಕೆಲವು ಮಾತುಗಳು ಕೇಳಿದೆನು).

**ನಾನು** :- ನೀನು ಭತ್ತ ತೆಗೆದುಕೊಂಡು ಹೋದ ಆ ದಾರಿ ಪಕ್ಕದಲ್ಲಿಯೆ ಬಾವಿ ಇದೆ ಅಲ್ಲವೆ! ಆ ಬಾವಿ ಹತ್ತಿರವೆ ನಿನ್ನ ಗಾಡಿ ಬಿದ್ದಿದೆಯಾ?

**ರಾಮಣ್ಣ** :- ದಾರಿ ಪಕ್ಕದಲ್ಲಿ ಬಾವಿ ಇರುವ ಮಾತು ನಿಜ, ನಾನು ಅಲ್ಲಿ ಬಿದ್ದಿರುವುದು ಸಹ ನಿಜ.

**ನಾನು** :- ನಿನಗೆ ಗಂಡಸುತನ ಕಡಿಮೆ ಯಾದ ಮಾತು ವಾಸ್ತವವೇನಾ?

**ರಾಮಣ್ಣ** :- ನಿಜ ಆದರೂ ಆ ಮಾತು ನಾನು ಹೇಳಿಲ್ಲವಲ್ಲ! ನಿಮಗೇಗೆ ತಿಳಿಯಿತು? ಡಾಕ್ಟರುಗಳಿಗೆ ಹೇಳಿಕೊಂಡರೂ ಪ್ರಯೋಜನವಿಲ್ಲ.

**ನಾನು** :- ರಾತ್ರಿ ಹೊತ್ತು ಶೃಂಗಾರಕ್ಕೆ ಸಂಬಂಧಿಸಿದ ಸ್ವಪ್ನಗಳು ಬರುತ್ತವೆಯೆ?

**ರಾಮಣ್ಣ** :- ಹೌದು ಬರುತ್ತವೆ.

**ನಾನು** :- ನಿನಗೆ ವಾಯಿ ಬಂದಾಗ ಆ ಸ್ವಲ್ಪ ಹೊತ್ತು ಹೇಗಿರುತ್ತದೆ.

**ರಾಮಣ್ಣ** :- ಅದು ಬರುವಾಗ, ಹಾಗೆ ಬಿಟ್ಟು ಹೋಗುವಾಗ ಶರೀರವೆಲ್ಲಾ ಒಂದು ತರಹದ ಜೋಮು ಇರುವಹಾಗೆ ಅನಿಸುತ್ತದೆ. ಮಧ್ಯದಲ್ಲಿ ಏನೂ ಗೊತ್ತಾಗುವುದಿಲ್ಲ.

(ಅಲ್ಲಿ ರಾಮಣ್ಣನನ್ನು ಕರೆದುಕೊಂಡು ಬಂದ ಆತನ ಬಂಧುಗಳನ್ನು ಹೊರಗೆ ಹೋಗಲು ಹೇಳಿದೆನು. ಅಷ್ಟೊತ್ತಿಗೆ ರಾಮಣ್ಣ ಬಂಧುಗಳೆಲ್ಲರಿಗು ರಾಮಣ್ಣನ ರೋಗವನ್ನು ಕುರಿತು ತಿಳಿದುಹೋಗಿದೆ. ಅವರು ಸುಬ್ಬಲಕ್ಷ್ಮಿ ಹೇಳಿದ ಮಾತುಗಳೆಲ್ಲ ಕೇಳಿರುವುದರಿಂದ ಪ್ರತಿ ವಿಷಯವು ನಾನು ಹೇಳದಿದ್ದರೂ ಅವರಿಗೆ ತಿಳಿದುಹೋಗಿದೆ. ಎಲ್ಲರು ಹೊರಗೆ ಹೋದ ನಂತರ ಸುಬ್ಬಲಕ್ಷ್ಮಿಯನ್ನು ಮತ್ತೆ ಮೇಲೆ ಬರಲು ಹೇಳಿದಾಗ ಆಕೆ ಮತ್ತೆ ಬಂದಳು)

**ನಾನು** :- ಸುಬ್ಬಲಕ್ಷ್ಮಿ! ನಿನಗೆ ಬಹಳ ಅನ್ಯಾಯ ಆಗಿದೆ. ಅದೂ ಚಿಕ್ಕ ವಯಸ್ಸಿನಲ್ಲಿಯೆ ನಡೆದಿರುವುದು ಬಹಳ ಚಿಂತಿಸಬೇಕಾದ ವಿಷಯ. ಇಲ್ಲಿಯವರೆಗು ನಡೆದಿರುವುದರಲ್ಲಿ ನಿನ್ನ ತಪ್ಪೇನು ಇಲ್ಲ. ನೀನು ಕೇಳಿದಹಾಗೆ ನಾನೇನು ಅನ್ನುವುದಿಲ್ಲ. ಆದರೂ ದೈವಜ್ಞಾನ ತಿಳಿದ ಮನುಷ್ಯನಾಗಿ ನಿನಗೆ

ನಾನು ಸ್ವಲ್ಪ ಹೇಳಬೇಕಾಗಿದೆ. ಜೀವನ ಎಂದರೆ ಕಷ್ಟಸುಖಗಳ ಮಿಶ್ರಣ. ಅದರಲ್ಲಿ ಪ್ರತಿ ಮನುಷ್ಯ ತನ್ನ ಕಷ್ಟವನ್ನು ಕುರಿತೊ, ಸುಖವನ್ನು ಕುರಿತೊ ಚಿಂತಿಸುತ್ತಾ ಕಾಲ ಕಳೆಯುತ್ತಿದ್ದಾನೆ. ಪ್ರಸ್ತುತ ನೀನು ಸಹ ನಿನಗೆ ಆದ ಕಷ್ಟವನ್ನು ಕುರಿತು ಚಿಂತಿಸುತ್ತ, ಅದಕ್ಕೆ ಒಂದು ಪ್ರತೀಕಾರವೆಂದು ಅದರಲ್ಲಿಯೆ ನಿನ್ನ ಜೀವನವನ್ನು ಕಳೆಯುತ್ತಿದ್ದೀಯ. ಇದು ಸಹಜವಾಗಿ, ಸರ್ವಸಾಧಾರಣವಾಗಿ ಎಲ್ಲರಿಗು ಇರುವಂತವುಗಳೆ. ಹಾಗೆ ಜೀವಿತ ಕಾಲವನ್ನು ವ್ಯರ್ಥ ಮಾಡಿಕೊಳ್ಳದೆ ಮನುಷ್ಯನ ಜೀವನಕ್ಕೆ ಒಂದು ಅರ್ಥ, ಪರಮಾರ್ಥ ಉಂಟಾಗಬೇಕೆಂದರೆ ಯಾವ ಮನುಷ್ಯನಾದರೂ ದೈವಜ್ಞಾನವನ್ನು ತಿಳಿದುಕೊಳ್ಳಬೇಕು. ಈಗ ನೀನು ಪ್ರತೀಕಾರದ ಮೇಲೆ ಇಟ್ಟುಕೊಂಡ ಶ್ರದ್ಧೆಯನ್ನು ತಿರುಗಿಸಿ ದೈವಜ್ಞಾನದ ಮೇಲೆ ಇಟ್ಟುಕೊ, ಸತ್ತುಹೋದ ನಂತರ ಜೀವನ ಸ್ವಲ್ಪಜನರಿಗೆ ಮಾತ್ರವೆ ಇರುತ್ತದೆ. ಅಂತಹ ಜೀವನವನ್ನು ದೈವದಕಡೆ ತಿರುಗಿಸಿಕೊಂಡರೆ, ಪ್ರಪಂಚದಲ್ಲಿ ಬದುಕುವವರಿಗಿಂತ, ಸೂಕ್ಷ್ಮ ಪ್ರಪಂಚದಲ್ಲಿ ಬದುಕುವ ನಿಮ್ಮಂತವರು ಜ್ಞಾನವನ್ನು, ಜ್ಞಾನಶಕ್ತಿಯನ್ನು ಎಷ್ಟಾದರೂ ಸಂಪಾದಿಸಿಕೊಳ್ಳಬಹುದು. ಪ್ರಪಂಚದಲ್ಲಿ ಬದುಕಿರುವವರಿಗಿರುವ ಅಡಚಣೆಗಳು ನಿಮಗಿರುವುದಿಲ್ಲ. ಆದ್ದರಿಂದ ನೀನು ದೇವರ ಜ್ಞಾನವನ್ನು ಸಂಪಾದಿಸಿಕೊ! ಜೀವನಕ್ಕೆ ಪವಿತ್ರತೆಯನ್ನು ಕೈಗೂಡಿಸಿಕೊ. ಹಾಗಲ್ಲದೆ ಈಗಿನ ಹಾಗೆ ಬದುಕುತ್ತಿದ್ದರೆ ಜೀವನದಲ್ಲಿ ಪಾಪಗಳು, ಪುಣ್ಯಗಳು ಇವಲ್ಲದೆ ಬೇರೇನೊ ಬರುವುದಿಲ್ಲ. ಈ ಜನ್ಮದಲ್ಲಿ ನಿನಗೆ ಆದ ಅನ್ಯಾಯ, ಹೋದ ಜನ್ಮದಲ್ಲಿ ನೀನು ಮಾಡಿಕೊಂಡ ಪಾಪ. ಪಾಪಪುಣ್ಯ ಪರಂಪರೆಗಳಿಂದ ಸುಖದುಃಖಗಳ ಸರಪಳಿ ಜೀವನ ಹೊರತು ಏನು ಇರುವುದಿಲ್ಲ. ಪಾಪ ಪುಣ್ಯಗಳನ್ನು, ಕರ್ಮವನ್ನು ನಿರ್ಮೂಲನೆ ಮಾಡುವುದಕ್ಕೆ ಜ್ಞಾನ ಒಂದೇ ಆಯುಧವೆಂದು ತಿಳಿದುಕೊ. ಈಗ ನಾನು ಹೇಳಿದ ಮಾತುಗಳನ್ನು ಜೀವನದ ಅಂತ್ಯದವರೆಗು ನೆನಪಲ್ಲಿಟ್ಟುಕೊ. ಹಾಗೆ ಜ್ಞಾಪಕವಿರುವುದಕ್ಕೆ ನೀನು ನಾನು ಹೇಳಿದಹಾಗೆ ಬದಲಾವಣೆ ಹೊಂದಿ ಈಗಿನಿಂದ ಪ್ರವರ್ತಿಸು. ಇಲ್ಲಿಯವರೆಗು ಇಲ್ಲದಿರುವುದು, ನನ್ನ ಹತ್ತಿರದಿಂದ ಹೋದ ನಂತರ ಇರಬೇಕಾಗಿರುವುದು ಏನೆಂದರೆ, ನೀನು ಪ್ರತಿ ಬುಧವಾರ ರಾಮಣ್ಣನಿಗೆ ಬರುವಹಾಗೆ ಮಾಡುವ ವಾಯನ್ನು ಇಂದಿನಿಂದ ಬರುವಂತೆ

ಮಾಡಬೇಡ. ಅದು ನಿನ್ನ ಕೈಯಲ್ಲಿನ ಕೆಲಸ. ನಾನು ಹೇಳಿದ ವಿಧಾನ ನಿನಗೆ ಒಪ್ಪಿಗೆಯೆ?

**ಸುಬ್ಬಲಕ್ಷ್ಮಿ :–** ಸ್ವಾಮಿ! ನೀವು ನನ್ನ ಜೀವನಕ್ಕೆ ಕಣ್ತೆರೆಸಿದ್ದೀರ. ನನ್ನ ಜೀವನದಲ್ಲಿ ನಿಮ್ಮ ಮಾತನ್ನು ಎಂದಿಗೂ ಮರೆಯುವುದಿಲ್ಲ. ನೀವು ಹೇಳಿದಹಾಗೆ ನಡೆದುಕೊಳ್ಳುತ್ತೇನೆ. ಎಂದು ಹೇಳಿ ಆಕೆ ಆ ದಿನ ಹೊರಟು ಹೋದಳು. ನಂತರದ ಸಮಾಚಾರ ತಿಳಿಯದು.

ಒಬ್ಬ ಮನುಷ್ಯ ಕಾಲ ಮೃತ್ಯುವನ್ನು ಹೊಂದಿದರೆ ಮರುಜನ್ಮಕ್ಕೆ, ಅಕಾಲ ಮೃತ್ಯುವನ್ನು ಹೊಂದಿದರೆ ಜೀವನಕ್ಕೆ ಹೋಗಬೇಕಾಗಿರುತ್ತದೆ. ಇನ್ನೂ ಸ್ವಲ್ಪ ವಿವರವಾಗಿ ಹೇಳಿಕೊಂಡರೆ, ಜೀವಿಯು ಕರ್ಮವನ್ನು ಅನುಭವಿಸುವುದಕ್ಕೆ ಹುಟ್ಟುತ್ತಿದ್ದಾನೆ. ಜೀವಾತ್ಮನಿಂದ ಅನುಭವಿಸಲ್ಪಡುವ ಕರ್ಮ ಎರಡು ವಿಧಗಳಾಗಿ ಇದೆ. ಒಂದು ಮಾನಸಿಕ ಕರ್ಮ, ಎರಡು ಶಾರೀರಕ ಕರ್ಮ. ಅವುಗಳನ್ನೇ ಇನ್ನೊಂದು ವಿಧವಾಗಿ ಹೇಳಿಕೊಂಡರೆ ಸೂಕ್ಷ್ಮ ಕರ್ಮ, ಸ್ಥೂಲ ಕರ್ಮ ಎಂದು ಸಹ ಅನ್ನಬಹುದು. ಮಾನಸಿಕ ಕರ್ಮ ಅಥವಾ ಸೂಕ್ಷ್ಮ ಕರ್ಮ ಎನ್ನುವುದು ಒಳಗೆ ಸೂಕ್ಷ್ಮ ಶರೀರದಿಂದ ಅನುಭವಿಸುವುದು. ಹಾಗೇ ಶಾರೀರಕ ಕರ್ಮ ಅಥವಾ ಸ್ಥೂಲಕರ್ಮ ಎನ್ನುವುದು ಸ್ಥೂಲಶರೀರದಿಂದ ಅನುಭವಿಸುವಂತದ್ದು. ಎರಡು ವಿಧಗಳ ಕರ್ಮಗಳು ಮಿಶ್ರಣವಾಗಿ ಇರುವವನು, ಆಯಸ್ಸು ಮುಗಿದುಹೋಗಿ ಮರಣ ಹೊಂದುವನು, ಅದನ್ನೇ ಕಾಲಮರಣ ಎನ್ನುತ್ತೇವೆ. ಒಂದು ವೇಳೆ ಶಾರೀರಕ ಕರ್ಮ (ಸ್ಥೂಲಕರ್ಮ) ಮೊದಲೆ ಮುಗಿದು ಹೋಗಿ, ಕೇವಲ ಸೂಕ್ಷ್ಮ ಕರ್ಮ ಉಳಿದರೆ ಅವನಿಗೆ ಸ್ಥೂಲ ಶರೀರ ಅವಶ್ಯವಿಲ್ಲ. ಉಳಿದ ಮಾನಸಿಕ ಕರ್ಮವನ್ನು (ಸೂಕ್ಷ್ಮ ಕರ್ಮವನ್ನು) ಸೂಕ್ಷ್ಮ ಶರೀರದೊಂದಿಗೆ ಅನುಭವಿಸಬೇಕಾಗಿರುತ್ತದೆ. ಆದ್ದರಿಂದ ಅವನಿಗೆ ಆಯಸ್ಸು ಮುಗಿದುಹೋಗದ ಮೊದಲೆ ಅಕಾಲ ಮರಣ ಬರುತ್ತದೆ. ಅಕಾಲ ಮರಣದಲ್ಲಿ ಸ್ಥೂಲ ಶರೀರ ಹೋಗಿ ಸೂಕ್ಷ್ಮ ಶರೀರ ಮಾತ್ರ ಉಳಿಯುತ್ತದೆ. ಮುಖ್ಯವಾಗಿ ಹೇಳಿಕೊಂಡರೆ ಅಕಾಲಮರಣ ಹೊಂದಿದವರಲ್ಲಿ ಮತ್ತೊಂದು

ವಿಧದವರು ಸಹ ಇದ್ದಾರೆ. ಉದಾಹರಣೆಗೆ ಒಬ್ಬನು ಜನ್ಮಿಸಿದ ನಂತರ 80 ವರ್ಷಗಳು ಬದುಕಬೇಕಾಗಿರುತ್ತದೆ. ಆದರೆ ಅವನಿಗೆ 20 ವರ್ಷಗಳಿಗೆ ಶಾರೀರಕ ಕರ್ಮ ಮುಗಿದುಹೋಗಿ, 10 ವರ್ಷಗಳು ಮಾನಸಿಕ ಕರ್ಮ ಅನುಭವಿಸಿ, ನಂತರ 50 ವರ್ಷಗಳು ಶಾರೀರಕ ಕರ್ಮ ಅನುಭವಿಸಬೇಕಾಗಿರುತ್ತದೆ. ಅಂತವನು 20 ವರ್ಷಗಳಿಗೆ ಅಕಾಲಮೃತ್ಯು ಹೊಂದಿ, ಎಲ್ಲರ ದೃಷ್ಠಿಯಲ್ಲಿ ಸತ್ತು ಹೋಗುವನು. ನಂತರ 10 ವರ್ಷಗಳು ಸೂಕ್ಷ್ಮ ಶರೀರದೊಂದಿಗೆ (ದೆವ್ವವಾಗಿ) ಇರುವನು. 30 ವರ್ಷಗಳ ವಯಸ್ಸಿನ ನಂತರ, 50 ವರ್ಷಗಳ ಕಾಲ ಮತ್ತೆ ಸ್ಥೂಲ ಶರೀರದೊಂದಿಗೆ ಬದುಕಬೇಕಾಗುತ್ತದೆ.

ಇಲ್ಲೊಂದು ಪ್ರಶ್ನೆ ಯಾರಿಗಾದರೂ ಬರಬಹುದು. ಅದೇನೆಂದರೆ! 20 ವರ್ಷಗಳ ನಂತರ ಸ್ಥೂಲ ಶರೀರ ಹೇಗೆ ಬರುತ್ತದೆ? ಎಂದು ಕೇಳಬಹುದು. ಇದಕ್ಕೆ ಸಮಾಧಾನ ಸಿಗಬೇಕೆಂದರೂ, ಮತ್ತು ಸಿಕ್ಕಿರುವ ಸಮಾಧಾನ ಅರ್ಥವಾಗಬೇಕೆಂದರೂ, ಭೂಮಿ ಮೇಲೆ ನಡೆದ ಕೆಲವು ಯಥಾರ್ಥ ಸಂಘಟನೆಗಳನ್ನು ನೋಡಬೇಕಾಗುತ್ತದೆ. ಅವು ಹೇಗೆ ನಡೆದಿವೆ ಎಂದರೆ! ಹೊಸದಾಗಿ ಮದುವೆಯಾದ ಜೋಡಿ ಧರ್ಮವರಂ ಶಿವಾನಗರದಲ್ಲಿನ ತಮ್ಮ ಬಂಧುಗಳ ಮನೆಗೆ ಹೋಗಿದ್ದಾರೆ. ನಾಲ್ಕು ದಿನಗಳ ನಂತರ ಹೊಸ ಜೋಡಿಯಾದ ಹೆಂಡತಿ ಶೇಷಮ್ಮ, ಗಂಡ ಪೋಲಯ್ಯ ಅನಂತಪುರಕ್ಕೆ ಬರಬೇಕೆಂದು ಧರ್ಮವರ ಶಿವಾನಗರದಿಂದ ಹೊರಟರು. ಕದಿರಿ ಗೇಟ್ ಹತ್ತಿರದಿಂದ ರೈಲ್ವೆ ರೋಡ್ ಪಕ್ಕ ಕಾಲ್ನಡಿಗೆಯಲ್ಲಿ ನಡೆದುಕೊಂಡು ರೈಲ್ವೇ ಸ್ಟೇಷನ್ ಕಡೆ ಬರುತ್ತಿದ್ದಾರೆ. ಗೇಟ್‌ಗೆ, ಸ್ಟೇಷನ್‌ಗೆ ಮಧ್ಯದಲ್ಲಿ ಬಂದ ನಂತರ ಹೆಂಡತಿ ಕಲ್ಲು ಎಡವಿಕೊಂಡು ಕೆಳಗೆ ಬಿದ್ದಳು. ಮುಂದೆ ಹೋಗುತ್ತಿದ್ದ ಗಂಡ ತಕ್ಷಣವೆ ಬಂದು ಹೆಂಡತಿಯನ್ನು ಮೇಲೆತ್ತಿದನು. ನಂತರ ಸ್ಟೇಷನ್‌ಗೆ ಹೋಗಿ ರೈಲು ಹತ್ತಿ ಹೋದರು. ಅಲ್ಲಿಂದ ಸುಮಾರು ಹತ್ತು ದಿನಗಳ ನಂತರ ಹೆಂಡತಿಗೆ ಸ್ವಲ್ಪ ಆರೋಗ್ಯ ಸರಿ ಇಲ್ಲದೆ ಹೋಯಿತು. ಅದರಿಂದ ಆಕೆ ನನಗೆ ಚೆನ್ನಾಗಿಲ್ಲವೆಂದು ಹೆಚ್ಚಾಗಿ ಮಲಗುತ್ತಿದ್ದಳು. ಆಗಾಗ ಡಾಕ್ಟರ್ ಹತ್ತಿರಕ್ಕೆ ಹೋಗಿ

ತೋರಿಸಿಕೊಂಡು ಬರುತ್ತಿದ್ದರು. ಹೀಗೆ ಒಂದು ವರ್ಷ ಕಾಲ ಕಳೆದಿದೆ, ಹೆಂಡತಿ ಶೇಷಮ್ಮನಿಗೆ ಆರೋಗ್ಯ ಸರಿ ಇಲ್ಲವೆಂದು ಗಮನಿಸಿದ ಗಂಡ ಪೋಲಯ್ಯ ದೊಡ್ಡ ಡಾಕ್ಟರುಗಳ ಹತ್ತಿರಕ್ಕೆ ಕರೆದುಕೊಂಡು ಹೋದನು. ಅಲ್ಲಿಯು ಸಹ ಆರೋಗ್ಯ ಸರಿಹೋಗಲಿಲ್ಲವೆಂದು ಇತರರ ಸಲಹೆ ಪ್ರಕಾರ ಆಕೆಗೆ ಮಂತ್ರಗಾರರ ಹತ್ತಿರ ತಾಯತಗಳನ್ನು ಸಹ ಕಟ್ಟಿಸಿದನು. ಆದರೂ ಆಗಾಗ ಆರೋಗ್ಯ ಚೆನ್ನಾಗಿಲ್ಲವೆಂದನಿಸುತ್ತಿತ್ತು. ಕೊನೆಗೆ ನನ್ನ ಹತ್ತಿರಕ್ಕೆ ಬಂದರು. ನನ್ನ ಹತ್ತಿರಕ್ಕೆ ಬಂದ ನಂತರ ಶೇಷಮ್ಮನ ಶರೀರದಲ್ಲಿ ಮತ್ತೊಂದು ಸೂಕ್ಷ್ಮ ಶರೀರವಿದ್ದಹಾಗೆ ನನಗೆ ಅರ್ಥವಾಯಿತು. ಒಂದು ಶರೀರದಲ್ಲಿ ಅದರ ಸೂಕ್ಷ್ಮ ಶರೀರ ಒಂದು ಯಾವಾಗಲೂ ಇರುವುದು ಸಹಜ. ಬೇರೊಂದು ಸೂಕ್ಷ್ಮ ಶರೀರ ಸೇರಿದರೆ ಒಟ್ಟು ಎರಡು ಸೂಕ್ಷ್ಮ ಶರೀರಗಳು ಶರೀರದಲ್ಲಿ ಇದ್ದಂತಾಗುತ್ತದೆ. ಹಾಗಿರುವಾಗ ನಾಡಿ ಬಡಿದುಕೊಳ್ಳುವುದರಲ್ಲಿ ವ್ಯತ್ಯಾಸವಿರುತ್ತದೆ. ಅದನ್ನು ಅನುಸರಿಸಿ ನೋಡಿದಾಗ ಶರೀರದಲ್ಲಿ ಮತ್ತೊಂದು ಸೂಕ್ಷ್ಮ ಶರೀರವಿದೆಯೆಂದು ಅರ್ಥವಾಗುವುದು. ಹಾಗಿರುವವರಲ್ಲಿ ಶರೀರ ಒಬ್ಬರ ಸ್ವಂತ ಮನೆಯಾದರೆ, ಮತ್ತೊಬ್ಬರದು ಪರರ ಮನೆಯಾಗುತ್ತದೆ. ಜನ್ಮದಲ್ಲಿ ಶರೀರದಲ್ಲಿ ಸೇರಿದ ಜೀವಾತ್ಮನಿಗೆ ಆ ಶರೀರ ಸ್ವಂತ ಮನೆಯಂತೆ ಲೆಕ್ಕಿಸಲ್ಪಡುತ್ತದೆ. ಹಾಗೆ ಒಬ್ಬ ಜೀವಾತ್ಮನಿರುವ ಶರೀರದೊಳಗೆ, ಯಾರಾದರು ಬೇರೊಬ್ಬ ಜೀವಾತ್ಮನು ಯಾವಾಗಾದರು ಪ್ರವೇಶಿಸಿದರೆ, ಅವನು ಇತರರ ಮನೆಯೊಳಗೆ ಬಂದಂತಾಗುತ್ತದೆ. ಆದ್ದರಿಂದ ಅಕಾಲಮೃತ್ಯು ಹೊಂದಿದವರಿಗೆ ಶರೀರ ಇಲ್ಲದೆ ಹೋಗಿದೆ ಆದ್ದರಿಂದ ಅವರಿಗೆ ಸ್ವಂತ ಮನೆ ಇಲ್ಲದಹಾಗೆ.

ಶರೀರಗಳ ವಿಷಯ ಬಿಟ್ಟು, ಹೊರಗಿನ ಪ್ರಪಂಚದಲ್ಲಿನ ಮನುಷ್ಯರು ನಿವಾಸ ಮಾಡುವ ಮನೆಗಳನ್ನು ಕುರಿತು ಮಾತನಾಡಿಕೊಳ್ಳೋಣ. ಒಬ್ಬನು ಕಷ್ಟಪಟ್ಟು ಸ್ವಂತ ಮನೆಯನ್ನು ಸಂಪಾಧಿಸಿಕೊಂಡು ಅದರಲ್ಲಿ ನಿವಾಸ ಮಾಡುತ್ತಿದ್ದನು. ಇರುವ ಮನೆಯನ್ನು ಬಾಕಿಗಳ ಕಾಟಕ್ಕೆ ಮಾರಿ, ಮನೆಯನ್ನು ಕಳೆದುಕೊಂಡವನು ಮತ್ತೊಬ್ಬನಿದ್ದಾನೆ. ಸ್ವಂತ ಮನೆ ಇರುವವನ ಹೆಸರು

ವೆಂಕಟರಾಮ. ಮನೆಯನ್ನು ಕಳೆದುಕೊಂಡವನ ಹೆಸರು ಬಿಕಾರಿ ಅಂಜಯ್ಯ. ಸ್ವಂತ ಮನೆಯಿರುವ ವೆಂಕಟರಾಮನ ಮನೆಗೆ, ಮನೆಯಿಲ್ಲದ ಬಿಕಾರಿ ಅಂಜಯ್ಯ ಆಗಾಗ ಹೋಗಿ ಬರುತ್ತಿದ್ದನು. ಒಂದು ದಿನ ವೆಂಕಟರಾಮನ ಮನೆಗೆ ಬಿಕಾರಿ ಅಂಜಯ್ಯ ಬಂದನು. ಮನೆಯಲ್ಲಿ ವೆಂಕಟರಾಮನ ಪಕ್ಕದಲ್ಲಿ ಅಂಜಯ್ಯ ಕುಳಿತಿರುವಾಗ, ತರಕಾರಿ ಮಾರುವ ಪುಲ್ಲಯ್ಯ ಬಂದನು. ಇಬ್ಬರನ್ನು ಮನೆಯಲ್ಲಿ ನೋಡಿದ ಪುಲ್ಲಯ್ಯನಿಗೆ ಯಾರು ಮನೆ ಯಜಮಾನಿ, ಯಾರು ಹೊರಗಿನ ಮನುಷ್ಯ ಎಂದು ಅರ್ಥವಾಗಲಿಲ್ಲ. ನಂತರ ತಿಂಗಳಿಗೆ ತರಕಾರಿ ಪುಲ್ಲಯ್ಯ ಮತ್ತೆ ಬಂದನು. ಆದಿನ ಹೊರಗಿನ ರೂಮಿನಲ್ಲಿ ವೆಂಕಟರಾಮ ಇದ್ದನು, ಒಳಗಿನ ರೂಮಿನಲ್ಲಿ ಬಿಕಾರಿ ಅಂಜಯ್ಯ ಇದ್ದಾನೆ. ಬಿಕಾರಿ ಅಂಜಯ್ಯ ತರಕಾರಿ ಪುಲ್ಲಯ್ಯನೊಂದಿಗೆ ಮಾತನಾಡಿ ತರಕಾರಿಗಳನ್ನು ತೆಗೆದುಕೊಂಡನು. ನಂತರ ತಿಂಗಳಿಗೆ ಮತ್ತೆ ಪುಲ್ಲಯ್ಯ ತರಕಾರಿ ತಂದಾಗ, ಆ ದಿನ ವೆಂಕಟರಾಮ ಅಸಲಿಗೆ ಕಾಣಿಸಲಿಲ್ಲ. ಅಂಜಯ್ಯ ಮಾತ್ರವೆ ಮನೆಯಲ್ಲಿದ್ದಾನೆ. ಆ ದಿನವೂ ಸಹ ಪುಲ್ಲಯ್ಯನೊಂದಿಗೆ ಅಂಜಯ್ಯನೇ ಮಾತನಾಡಿದನು. ಈ ವಿಧವಾಗಿ ಮೂರು ಬಾರಿ ನೋಡಿದ ಪುಲ್ಲಯ್ಯನಿಗೆ, ಬಿಕಾರಿ ಅಂಜಯ್ಯನೇ ಮನೆಯ ಯಜಮಾನನೆಂದು ಅರ್ಥವಾಗಿದೆ.

ಶರೀರ ವಿಷಯದಲ್ಲಿಯು ಪರಿಶೀಲಿಸಿದರೆ ಅಕಾಲ ಮೃತ್ಯುವನ್ನು ಹೊಂದಿದವನನ್ನು ಶರೀರವೆನ್ನುವ ಮನೆಯನ್ನು ಕಳೆದುಕೊಂಡ ಬಿಕಾರಿ ಅಂಜಯ್ಯನಾಗಿ ಹೇಳಬಹುದು. ಅಂತವನು ವೆಂಕಟರಾಮನ ಮನೆಯನ್ನು ಸೇರಿ, ಸ್ವಲ್ಪಕಾಲಕ್ಕೆ ವೆಂಕಟರಾಮನನ್ನು ಹೊರಗೆ ಹಾಕಿ, ಪುಲ್ಲಯ್ಯನಿಗೆ ತಾನೆ ಮನೆ ಯಜಮಾನನೆಂದು ಕಾಣಿಸಿದ ಹಾಗೆ, ಜನ್ಮದೊಂದಿಗೆ ಶರೀರ ಹೊಂದಿದ 'X' ಎನ್ನುವ ಜೀವಿಯನ್ನು, ಮಧ್ಯದಲ್ಲಿ ಶರೀರವನ್ನು ಕಳೆದುಕೊಂಡ 'Y' ಎನ್ನುವ ಜೀವಿಯು, ಶರೀರದಿಂದ ಹೊರಗೆ ಕಳುಹಿಸಿ 'Z' ಎನ್ನುವವನಿಗೆ ಶರೀರವಿರುವವನ ಹಾಗೆ ಕಾಣಿಸಬಹುದು. ಸರಿಯಾಗಿ ಅದೇ ವಿಧಾನ ಭೂಮಿ ಮೇಲೆ ಅಲ್ಲಲ್ಲಿ ನಡೆದ ಹಾಗೆ ಕಾಣಿಸುತ್ತಿದೆ. ಇಲ್ಲಿ ಶೇಷಮ್ಮ ಶರೀರದೊಳಗೆ,

ಭಾರತಿ ಎನ್ನುವ ಮತ್ತೊಂದು ಸೂಕ್ಷ್ಮ ಶರೀರ ಪ್ರವೇಶಿಸಿ, ಸ್ವಲ್ಪ ದಿನಗಳಿಗೆ ಶೇಷಮ್ಮನನ್ನು ಹೊರಗೆ ಹಾಕಿ, ಶೇಷಮ್ಮ ಶರೀರವನ್ನು ಸ್ವಂತ ಮಾಡಿಕೊಂಡ ವಿಚಿತ್ರವನ್ನು ಈ ಸಮಾಚಾರದಲ್ಲಿ ನೋಡಬಹುದು.

ಶೇಷಮ್ಮ ಶರೀರದೊಳಗೆ ಪ್ರವೇಶಿಸಿದ ಸೂಕ್ಷ್ಮ ಶರೀರವನ್ನು (ದೆವ್ವವನ್ನು) ಹೊರಗೆ ಕರೆದು, ಕೇಳಿದಾಗ ಕೆಲವು ತಿಳಿಯದ ವಿಷಯಗಳು ಹೊರಬಿದ್ದಿವೆ. ಅವು ಏನೆಂದರೆ! ಧರ್ಮವರಂನಲ್ಲಿನ ಬಂಧುಗಳ ಮನೆಯಿಂದ ಹೊರಟುಬಂದ ಶೇಷಮ್ಮ, ಪೋಲಯ್ಯ ರೈಲ್ವೇ ಲೈನು ಪಕ್ಕದಲ್ಲಿ ಬರುತ್ತಿರುವಾಗ ಆ ದಾರಿಯಲ್ಲಿದ್ದ ಭಾರತಿ ಎನ್ನುವ 20 ವರ್ಷಗಳ ವಯಸ್ಸಿರುವ ಯುವತಿ, ಶೇಷಮ್ಮನನ್ನು ನೋಡಿದಳು. ಶೇಷಮ್ಮನ ಮುಂದೆ ನಡೆಯುತ್ತಿರುವ ಪೋಲಯ್ಯನನ್ನು ಸಹ ನೋಡಿದಳು. ಶೇಷಮ್ಮನ ಅಲಂಕಾರವನ್ನು ನೋಡಿ ಹೊಸದಾಗಿ ಮದುವೆಯಾಗಿದೆಯೆಂದು ಗ್ರಹಿಸಿದಳು. ಶೇಷಮ್ಮನನ್ನು ನೋಡುತ್ತಲೆ ಆಕೆಯೊಳಗೆ ಪ್ರವೇಶಿಸಬೇಕೆಂದು ಅಂದುಕೊಂಡಳು. ಶೇಷಮ್ಮನ ಹಿಂದೆ ಸ್ವಲ್ಪ ದೂರ ನಡೆದ ಭಾರತಿ, ಶೇಷಮ್ಮನನ್ನು ಕೆಳಗೆ ಬೀಳುವಂತೆ ತಳ್ಳಿದಳು. ಆಕೆ ಕೆಳಗೆ ಬಿದ್ದು ಏಳುವುದರೊಳಗೆ ಭಾರತಿ ಆಕೆಯೊಳಗೆ ಸೇರಿದಳು. ಹಾಗೆ ಶೇಷಮ್ಮನ ಶರೀರದೊಳಗೆ ಸೇರಿದ ಭಾರತಿ, ಸ್ವಲ್ಪಕಾಲ ಪ್ರಯತ್ನ ಮಾಡಿ ಕೊನೆಗೆ ಶೇಷಮ್ಮ ನಿದ್ರೆ ಹೋದಾಗ ಬ್ರಹ್ಮನಾಡಿಯಲ್ಲಿ ಸೇರಿ ಶರೀರವೆಲ್ಲ ವ್ಯಾಪಿಸಿಕೊಂಡಳು. ಬ್ರಹ್ಮನಾಡಿಯಲ್ಲಿ ಸೇರಿದ ಭಾರತಿ ಸೂಕ್ಷ್ಮಶರೀರ, ಸ್ಥೂಲ ಶರೀರವನ್ನು ಆಕ್ರಮಿಸಿಕೊಂಡು ನಿಧಾನವಾಗಿ ಪೋಲಯ್ಯನೊಂದಿಗೆ ಶೇಷಮ್ಮನ ಹಾಗೆ ನಟಿಸುತ್ತಾ ಮಾತನಾಡಲು ಪ್ರಾರಂಭಿಸಿದಳು. ಮೇಲೆ ಕಾಣಿಸುವ ಶರೀರವನ್ನು ಅನುಸರಿಸಿ ಪೋಲಯ್ಯ, ಭಾರತಿಯನ್ನು ಶೇಷಮ್ಮ ಮಾತನಾಡುತ್ತಿರುವುದೆಂದು ಅಂದುಕೊಂಡನು.

ಶೇಷಮ್ಮನ ಶರೀರದಲ್ಲಿರುವ ಭಾರತಿ ಸ್ವಲ್ಪ ಹೊತ್ತು ಮಾತನಾಡಿದ ನಂತರ ಪೋಲಯ್ಯ ತನ್ನ ಹೆಂಡತಿ ಶೇಷಮ್ಮನ ಹತ್ತಿರ ಪ್ರವರ್ತಿಸುವಹಾಗೆ ಪ್ರವರ್ತಿಸಿದನು. ಭಾರತಿ ಮದುವೆ ಯಾಗದ ಮೊದಲೆ 17 ವರ್ಷಗಳಿಗೆ ಸತ್ತು

ಹೋಗಿದ್ದಾಳೆ. ಅಲ್ಲಿಯವರೆಗು ಪುರುಷರ ಸ್ಪರ್ಶ ತಗಲದ ಭಾರತಿಗೆ, ಪೋಲಯ್ಯ ಮುಟ್ಟಿಕೊಳ್ಳುವುದು ಹೊಸ ಅನುಭೂತಿಯಾದರೂ ಅದು ಆಕೆಗೆ ಸುಖವಾಗಿ ತೋಚಿತು. ಭಾರತಿ ಆ ವಿಧವಾಗಿ ಮೊಟ್ಟ ಮೊದಲು ಪುರುಷ ಸಂಪರ್ಕ ಸುಖವನ್ನು ಹೊಂದಿದಳು. ಆಗಿನಿಂದ ಶೇಷಮ್ಮನ ಶರೀರದಲ್ಲಿ ಶೇಷಮ್ಮ ಸ್ವಲ್ಪಕಾಲವಿದ್ದರೆ, ಸ್ವಲ್ಪಕಾಲ ಭಾರತಿ ಇರುತ್ತಿದ್ದಳು. ಮೊದಲು ಶೇಷಮ್ಮ ನಿದ್ರೆಹೋಗುವಾಗ ಮಾತ್ರವೆ ಆಕೆಯ ಶರೀರದೊಳಗೆ ತೂರುತ್ತಿದ್ದಳು. ಕಾಲಕಳೆಯುತ್ತಾ, ಕಳೆಯುತ್ತಾ ಭಾರತಿ ಪ್ರಯತ್ನ ಮಾಡಿ ಶೇಷಮ್ಮನನ್ನು ಬಲವಂತವಾಗಿ ನಿದ್ರೆಯೊಳಗೆ ಕಳುಹಿಸುತ್ತಿದ್ದಳು. ಹಾಗೆ ಸ್ವಲ್ಪಕಾಲ ಕಳೆದ ನಂತರ ಶೇಷಮ್ಮನನ್ನು ಎಚ್ಚರಗೊಳ್ಳದ ಹಾಗೆ ಮಾಡಿದಳು. ಆ ವಿಧವಾಗಿ ಶರೀರದಲ್ಲಿ ಇಬ್ಬರೂ ಇದ್ದಾಗ ಪೋಲಯ್ಯ ನನ್ನ ಹತ್ತಿರಕ್ಕೆ ಬಂದರು. ಶರೀರದಲ್ಲಿ ಇಬ್ಬರಿರುವುದನ್ನು ತಿಳಿದುಕೊಂಡ ನಾನು, ಒಳಗೆ ಅಡಗಿರುವ ಸೂಕ್ಷ್ಮವನ್ನು ಮಾತನಾಡೆಂದು ಹೇಳಿದಾಗ ಶೇಷಮ್ಮನ ಶರೀರದಿಂದ ಭಾರತಿಯೆ ಮಾತನಾಡುತ್ತ ನಾನು ಭಾರತಿ ಮಾತನಾಡುತ್ತಿದ್ದೇನೆಂದು, ಆಗಲೆ ಶರೀರದ ಮೇಲೆ ಬಂದಹಾಗೆ ನಮ್ಮನ್ನು ನಂಬಿಸಿ ಮಾತನಾಡಿದಳು. ಪೋಲಯ್ಯನ ಹೆಂಡತಿ ಶೇಷಮ್ಮ ಎಂದು ತಿಳಿದ ನಾನು ಆಗ ಸೇರಿದ ಭಾರತಿ ಮಾತನಾಡುತ್ತಿದ್ದಾಳೆಂದು, ನಂತರ ಶೇಷಮ್ಮ ಶರೀರದ ಮೇಲೆ ಬರುತ್ತಾಳೆ ಎಂದುಕೊಂಡೆನು. ಆದರೆ ಭಾರತಿಯೆ ಎಲ್ಲಕಾಲದಲ್ಲಿ ಶರೀರದ ಮೇಲೆ ಇದ್ದಾಳೆಂದು ಗ್ರಹಿಸಲಾರದೆ ಹೋದೆನು.

ಶೇಷಮ್ಮನ ಶರೀರದಲ್ಲಿ ಭಾರತಿ, ಶೇಷಮ್ಮನನ್ನು ಬ್ರಹ್ಮನಾಡಿಯೊಳಗೆ ಹೋಗುವ ಹಾಗೆ ಮಾಡುತ್ತಿರುವುದರಿಂದ, ಶೇಷಮ್ಮನಿಗೆ ಮೊದಲು ಆರೋಗ್ಯ ಚೆನ್ನಾಗಿರುತ್ತಿರಲಿಲ್ಲ. ಕೊನೆಗೆ ಶೇಷಮ್ಮ ಒಳಗೆ, ಭಾರತಿ ಹೊರಗೆ ಇರುವುದರಿಂದ ಸ್ವಲ್ಪ ಆರೋಗ್ಯದ ಸಮಸ್ಯೆ ಕಡಿಮೆ ಯಾಗಿದೆ. ಯಾರಾದರೂ ಮೇಲಕ್ಕೆ ಕಾಣಿಸುವ ಶರೀರವನ್ನು ನೋಡಿ ಇಂತಹ ಮನುಷ್ಯನೆಂದು ಗುರುತಿಸುತ್ತೇವೆ. ಹಾಗೆ ನಾನು ಸಹ ಮೇಲಕ್ಕೆ ಕಾಣಿಸುವ ಶೇಷಮ್ಮ ಶರೀರವನ್ನು ಅನುಸರಿಸಿ ನೋಡಿದಾಗ ಆಕೆ ಶೇಷಮ್ಮ ಎಂದುಕೊಂಡೆನು. ಆದರೆ ಇರುವುದು ಭಾರತಿ ಎಂದು

ಗುರುತಿಸಲಾರದೆ ಹೋದೆನು. ನನ್ನ ಹತ್ತಿರಕ್ಕೆ ಬಂದ ಪೋಲಯ್ಯ ದಂಪತಿಗಳನ್ನು 9 ದಿನಗಳು ಇಲ್ಲಿಯೆ ನಿದ್ರೆಮಾಡಿ ಹೋಗೆಂದೆನು. ಶೇಷಮ್ಮನಾಗಿ ಕಾಣಿಸುವ ಭಾರತಿ ನನ್ನನ್ನು ನೋಡಿದರೆ  ನಡುಗುತ್ತ ಇರುತ್ತಿದ್ದಳು. ಆಕೆಯ ಕಣ್ಣುಗಳಲ್ಲಿ ಭಯದಿಂದ ಕೂಡಿದ ನೋಟ ಕಾಣಿಸುತ್ತಿತ್ತು. ಆಕೆಯ ಪ್ರವರ್ತನೆಯಲ್ಲಿಯು ಸಹ ಸ್ವಲ್ಪ ಬದಲಾವಣೆ ಕಾಣಿಸುತ್ತಿತ್ತು. ಇವೆಲ್ಲವನ್ನು ಗಮನಿಸುತ್ತಿದ್ದ ನನಗೆ, ಶೇಷಮ್ಮನ ಮೇಲೆ ಸ್ವಲ್ಪ ಅನುಮಾನಬಂದಿತು. ಒಂದು ದಿನ ನೀನು ಯಾರು ಹೇಳು ಎಂದು ಕೇಳಿದೆನು. ಆಗ ನಾನು ಶೇಷಮ್ಮನೆಂದು ಸುಳ್ಳು ಹೇಳಿದಳು. ನೀನು ಶೇಷಮ್ಮ ಅಲ್ಲ ಶೇಷಮ್ಮನ ಶರೀರದಲ್ಲಿ ಸ್ಥಾನವನ್ನೇರ್ಪಡಿಸಿಕೊಂಡು ನನ್ನನ್ನು ಸಹ ಮೋಸ ಮಾಡಿದ್ದೀಯ. ನಿಜ ಹೇಳು ಇಲ್ಲದೆ ಹೋದರೆ ನೀನ್ಯಾರೆಂದು ನಾನೇ ಹೇಳುತ್ತೇನೆ ಎಂದು ಅಂದಾಗ! ಆಗ ತಾನು ಭಾರತಿಯೆಂದು ಒಪ್ಪಿಕೊಂಡಳು. ಅಷ್ಟೇ ಅಲ್ಲದೆ ಶೇಷಮ್ಮನನ್ನು ಶರೀರದಲ್ಲಿ ಅಡಗಿಸಿಟ್ಟು, ಶರೀರವೆಲ್ಲವನ್ನು ತಾನೇ ಆಕ್ರಮಿಸಿಕೊಂಡಿದ್ದೇನೆಂದು, ನಾನು ಭಾರತಿಯೆಂದು ಗೊತ್ತಾಗದ ಹಾಗೆ ಶೇಷಮ್ಮನೆಂದೇ ಪೋಲಯ್ಯನನ್ನು ಸಹ ನಂಭಿಸಿ, ಆತನಿಗೆ ತಾನೇ ಹೆಂಡತಿಯಾಗಿದ್ದೇನೆಂದು ಹೇಳಿದಳು. ಭಾರತಿ ನನ್ನನ್ನು ಸಹ ಮೋಸ ಮಾಡಿರುವುದಕ್ಕೆ ನನಗೆ ಬಹಳ ಕೋಪ ಬಂದಿತು. ಆಕೆ ಹೇಳಿದ ಮಾತುಗಳನ್ನು ಅನುಸರಿಸಿ ನೋಡಿದರೆ, ಮೊದಲು ಶರೀರವನ್ನು ಕಬ್ಜಾ ಮಾಡದ (ಆಕ್ರಮಿಸಿಕೊಳ್ಳದ) ಮುನ್ನವೇ ಮನೆಯಲ್ಲಿರುವವರನ್ನು, ಹೊರಗಿನವರನ್ನು, ಬಂಧುಗಳನ್ನು ಎಲ್ಲರನ್ನು ಚೆನ್ನಾಗಿ ಗ್ರಹಿಸಿದ್ದಾಳೆ. ಶೇಷಮ್ಮ ಯಾರೊಂದಿಗೆ ಹೇಗೆ ಮಾತನಾಡುತ್ತಿದ್ದಳೊ ಚೆನ್ನಾಗಿ ಗಮನಿಸಿದ್ದಾಳೆ. ಹಾಗೆ ಶೇಷಮ್ಮ ಮಾಡುವ ಕೆಲಸವನ್ನು ಸಹ ಸ್ವಲ್ಪ ಕಲಿತುಕೊಂಡಿದ್ದಳು. ಹೀಗೆ ಎಲ್ಲದರಲ್ಲಿಯು ತರಬೇತಿ ಹೊಂದಿದ ನಂತರ ಶೇಷಮ್ಮನನ್ನು ಶರೀರದ ಮೇಲೆ ಬಾರದ ಹಾಗೆ ನಿದ್ರೆಯೊಳಗೆ ಅಡಗಿಸಿಟ್ಟಿದ್ದಾಳೆ. ಶೇಷಮ್ಮನನ್ನು ಅಪಸ್ಮಾರಕ ಸ್ಥಿತಿಯಲ್ಲಿ ಒಳಗೆ ಇರುವ ಹಾಗೆ ಮಾಡಿದ ಭಾರತಿ, ಯಾರಿಗೂ ಅನುಮಾನ ಬಾರದೆ ಎಲ್ಲ ವಿಧಗಳಲ್ಲಿ ಶೇಷಮ್ಮನ ಹಾಗೆ ನಟಿಸುವುದನ್ನು ಪ್ರಾರಂಭಿಸಿದಳು. ಕೆಲವು ದಿನಗಳಿಗೆ ಎಲ್ಲಾ ಸುಲಭವಾಗಿ ಹೋಗಿದೆ. ನನ್ನ ಹತ್ತಿರಕ್ಕೆ ಬಂದಾಗ ಮೇಲಕ್ಕೆ ಬಂದಹಾಗೆ ನಟಿಸಿ ತಾನು

ಭಾರತಿಯೆಂದು ಹೇಳಿದಳು. ಆಗ ಶೇಷಮ್ಮ ಪಕ್ಕಕ್ಕೆ ಹೋಗಿ ಭಾರತಿ ಬಂದಿದ್ದಾಳೆಂದು ತಿಳಿದೆನು. ನಂತರ ನನಗೆ ಅನುಮಾನ ಬಂದಿರುವುದರಿಂದ ಕೊನೆಗೆ ಭಾರತಿ ರಹಸ್ಯ ಹೊರಬಂದಿತು.

ಈ ವಿಷಯವೆಲ್ಲವನ್ನು ಕೇಳಿದ ಗಂಡ ಪೋಲಯ್ಯ ಆಶ್ಚರ್ಯಪಟ್ಟನು. ಕೆಲವು ದಿನಗಳಿಂದ ದೆವ್ವದೊಂದಿಗೆ ಸಂಸಾರ ಮಾಡುತ್ತಿದ್ದೇನೆಂದು ತಿಳಿದುಕೊಂಡನು. ಆಕೆ ಮೋಸ ಮಾಡಿರುವುದಕ್ಕೆ ಇತ್ತ ಗಂಡನಿಗೆ, ಅತ್ತ ನನಗೂ ಇಬ್ಬರಿಗೂ ಭಾರತಿ ಮೇಲೆ ಕೋಪ ಬಂದಿತು. ಶೇಷಮ್ಮನನ್ನು ಬಿಟ್ಟು ಹೋಗೆಂದು ಭಾರತಿಗೆ ಜೋರಾಗಿ ಹೇಳಿದೆನು. ಅಷ್ಟೇ ಅಲ್ಲದೆ ನನ್ನನ್ನು ಮೋಸ ಮಾಡಿದಕ್ಕೆ ಶಿಕ್ಷೆಯಾಗಿ ಒಂದು 20 ಕೇಜಿ ತೂಕವಿರುವ ಕಲ್ಲನ್ನು ಭಾರತಿ ತಲೆಮೇಲೆ ಇಟ್ಟು, ನಾನು ಇನ್ನು ಸಾಕು ಎನ್ನುವವರೆಗು ಕುಳಿತು ಮೇಲೇಳು ಎಂದೆನು. ಆಕೆ 20 ಅಥವಾ 30 ಬಾರಿಗಿಂತ ಹೆಚ್ಚಾಗಿ ಕುಳಿತು ಏಳುವುದಿಲ್ಲ, ನಂತರ ಕೈಲಾಗದು, ಆದ್ದರಿಂದ ಭಯಪಟ್ಟು ಶಿಕ್ಷೆಯನ್ನು ಅನುಭವಿಸದೆ ಶರೀರವನ್ನು ಬಿಟ್ಟು ಹೋಗುತ್ತದೆಂದು ಅಂದುಕೊಂಡು ಆ ವಿಧವಾಗಿ ಹೇಳಿದೆನು. ಪಕ್ಕದಲ್ಲಿ ರಂಗಾರೆಡ್ಡಿ ಎನ್ನುವ ವ್ಯಕ್ತಿಯನ್ನು ಇಟ್ಟು, ಎಷ್ಟುಬಾರಿ ಕುಳಿತು ಏಳುವುದು ಲೆಕ್ಕಹಾಕೆಂದು ಹೇಳಿದೆನು. ಆಕೆ ಕುಳಿತು ಏಳುತ್ತಲೆ ಇದ್ದಾಳೆ. ರಂಗಾರೆಡ್ಡಿ ಲೆಕ್ಕಹಾಕುತ್ತಲೆ ಇದ್ದಾನೆ. ಲೆಕ್ಕ ಹಾಕುವ ಸಂಖ್ಯೆ 200 ಕ್ಕೆ ಸೇರಿದೆ. ಒಬ್ಬ ಹೆಣ್ಣುಮಗಳು ತಲೆಮೇಲೆ ತೂಕವನ್ನು ಹೊತ್ತು, ಎರಡು ನೂರು ಬಾರಿ ಕುಳಿತು ಏಳುವುದೇ ಅಲ್ಲದೆ ಇನ್ನೊಂದು ನೂರು ಸಲವಾದರೂ ಲೆಕ್ಕ ಇಲ್ಲದೆ ಮಾಡುವಂತಿದ್ದಾಳೆ. ಅದನ್ನು ನೋಡಿದ ನಾನು ಇಷ್ಟು ಸಲ ಹೇಗೆ ಕುಳಿತು ಎದ್ದಿದ್ದೀಯ? ಎಂದು ಕೇಳಿದೆನು. ಅದಕ್ಕೆ ಆಕೆ ತಾನು ಸತ್ತುಹೋಗದ ಮೊದಲು, ಬಾವಿಗಳನ್ನು ತೋಡುವ ಕೆಲಸಕ್ಕೆ ಹೋಗುತ್ತಿದ್ದೇನೆಂದು, ಮೆಟ್ಟಿಲುಗಳ ಮೇಲೆ ಕೆಳಗಿನಿಂದ ಮೇಲೆ ವರೆಗು 30 ಕೇಜಿಗಳ ತೂಕವಿರುವ ಮಣ್ಣಿನ ಪುಟ್ಟಿಗಳನ್ನು ಹೋರುತ್ತಿದ್ದೆನೆಂದು, ಆದ್ದರಿಂದ ಈ ಕೆಲಸ ಸುಲಭವಾಯಿತೆಂದು ಹೇಳಿದಳು. ಅದನ್ನು ಕೇಳಿದ ನಾನು ಶಿಕ್ಷೆಗಳು

ಈಕೆಗೆ ಕೆಲಸಕ್ಕೆ ಬರುವುದಿಲ್ಲವೆಂದು ಅಂದುಕೊಂಡೆನು. ನಂತರ ಭಾರತಿಗೆ ಒಂದು ಮಾತು ಹೇಳಿದೆನು. ಅದೇನೆಂದರೆ! ನಿನಗೆ ಒಂದು ತಿಂಗಳ ದಿನಗಳ ಕಾಲಾವಕಾಶ ಕೊಡುತ್ತೇನೆ. ಅಷ್ಟರೊಳಗೆ ನೀನು ಶೇಷಮ್ಮನ ಶರೀರವನ್ನು ಬಿಟ್ಟು ಧರ್ಮವರಂ ಹೋಗು ಎಂದು ಹೇಳಿ ಕಳುಹಿಸಿದೆನು.

ತಿಂಗಳ ನಂತರ ಮತ್ತೆ ನನ್ನ ಹತ್ತಿರಕ್ಕೆ ಬಂದಾಗ ಭಾರತಿಯೆ ಶರೀರದ ಮೇಲೆ ಇದ್ದಾಳೆಂದು ಗ್ರಹಿಸಿದ ನಾನು, ಶೇಷಮ್ಮನನ್ನು ಕುರಿತು ಕೇಳಿದೆನು. ಶೇಷಮ್ಮ ಸತ್ತು ಹೋಗಿದ್ದಾಳೆಂದು ಭಾರತಿ ಹೇಳಿದಳು. ಆಗ ಆಕೆ ಕೈ ನಾಡಿಯನ್ನು ಪರೀಕ್ಷಿಸಿ ನೋಡಿದೆನು. ಶರೀರದಲ್ಲಿ ಇಬ್ಬರಿರುವಾಗ ಬಡಿದುಕೊಳ್ಳುವ ನಾಡಿಯಂತೆ ಕಾಣಿಸಲಿಲ್ಲ. ಅದನ್ನು ಅನುಸರಿಸಿ ನೋಡಿದಾಗ ಶರೀರದಲ್ಲಿ ಭಾರತಿ ಒಬ್ಬಳೆ ಇದ್ದಾಳೆಂದು, ಶೇಷಮ್ಮ ಸತ್ತುಹೋಗಿರುವುದು ವಾಸ್ತವವೆಂದು ಅರ್ಥವಾಯಿತು. ಆ ವಿಷಯ ನನಗೆ ಒಬ್ಬನಿಗೆ ಗೊತ್ತು, ಆಕೆ ಗಂಡನಿಗೆ ಗೊತ್ತಿಲ್ಲ. ನಾನು ಆ ವಿಷಯವನ್ನು ಕುರಿತು ಮಾತನಾಡದೆ ಭಾರತಿ ಹೋಗಿದ್ದಾಳೆ, ಶೇಷಮ್ಮ ಇದ್ದಾಳೆ ಎಂದು ಪೋಲಯ್ಯನಿಗೆ ಹೇಳಿದೆನು. ಇಲ್ಲಿಯವರೆಗು ನಡೆದ ಭಾರತಿ ವಿಷಯ ಶೇಷಮ್ಮನಿಗೆ ತಿಳಿಯಬಾರದೆಂದು, ಆಕೆಗೆ ನಡೆದ ವಿಷಯ ಏನೂ ಗೊತ್ತಿಲ್ಲವೆಂದು, ನೀನು ಸಹ ಎಂದಿಗೂ ಹೇಳಬೇಡವೆಂದು ಹೇಳಿ ಕಳುಹಿಸಿದೆನು. ಅಂದಿನಿಂದ ಅವರ ಸಂಸಾರ ಯಥಾರೀತಿ ನಡೆದು ಹೋಗಿದೆ. ಅವರಿಗೆ ನಾಲ್ಕು ಜನ ಮಕ್ಕಳು ಹುಟ್ಟಿದ್ದಾರೆಂದು ತಿಳಿಯಿತು. ಆದರೆ ಇಲ್ಲಿಯವರೆಗು ಭಾರತಿಯೊಂದಿಗೆ ಸಂಸಾರ ಮಾಡುತ್ತಿದ್ದೇನೆಂದು ಪೋಲಯ್ಯನಿಗೆ ತಿಳಿಯದು.

ಇದೆಲ್ಲಾ ಒಂದು ಸಿನಿಮಾ ಕಥೆಯಂತೆ ಇದೆ ಅಲ್ಲವೆ! ಹೌದು ಹಾಗೆ ಎನಿಸುತ್ತಿದೆ. ಯಾರಿಗೆ ಹೇಗೆ ಅನಿಸಿದರೂ ಇದು 30 ವರ್ಷಗಳ ಕೆಳಗೆ ಯಥಾರ್ಥವಾಗಿ ನಡೆದ ಸಂಘಟನೆ. ಇದು ನಂಬಶಕ್ಯವಲ್ಲ ದೆವ್ವಗಳು ಮನುಷ್ಯರಲ್ಲಿ ಸೇರಿ ಸಂಸಾರವನ್ನು ಸಹ ಮಾಡುತ್ತವೆಯೆ! ಎಂದು ಆಶ್ಚರ್ಯವಾಗಿ ನೀವು ಕೇಳಬಹುದು. ಸಂಸಾರ ಮಾಡುವುದೇ ಅಲ್ಲ ಮಕ್ಕಳನ್ನು ಸಹ ಹೆತ್ತಿದ್ದಾರೆ.

ಇದೇನೊ ಅಪರೂಪವಾದದ್ದು ಹೀಗೆ ಎಲ್ಲಿಯೂ ನಡೆಯುವುದಿಲ್ಲ ಎಂದು ಅಂದುಕೊಳ್ಳ ಬೇಡಿ. ಹೀಗೆ ನಡೆಯುವವು ಭೂಮಿ ಮೇಲೆ ನೂರಕ್ಕೆ ಒಂದರಿಂದ ಐದು ಸಂಸಾರಗಳಿವೆಯೆಂದು ಹೇಳಬಹುದು. ಸಂಸಾರಗಳೆ ಅಲ್ಲದೆ ವ್ಯಕ್ತಿಗಳು ಸಹ ಕೆಲವರು ಹಾಗೆ ಇದ್ದಾರೆ. ಉದಾಹರಣೆಗೆ ಸತ್ಯನಾರಾಯಣ ರಾಜ ಎನ್ನುವ ಹುಡುಗನ ಶರೀರದೊಳಗೆ, ಒಬ್ಬ ದೊಡ್ಡ ವ್ಯಕ್ತಿಯವೊಂದು ಸೂಕ್ಷ್ಮ ಶರೀರ ವಾರಕ್ಕೆ ಒಂದು ಬಾರಿ, ಅದೂ ಗುರುವಾರ ದಿನದಂದು ಪ್ರವೇಶಿಸಿ, ಒಂದು ಗಂಟೆಕಾಲ ಮಾತ್ರವಿದ್ದು ಮೇಲಕ್ಕೆ ಬಂದು ಮಾತನಾಡಿ ಹೋಗುತ್ತಿತ್ತು. ಸ್ವಲ್ಪಕಾಲಕ್ಕೆ ಸೂಕ್ಷ್ಮವಾಗಿದ್ದ ದೊಡ್ಡವ್ಯಕ್ತಿ ಆ ಹುಡುಗನ ಶರೀರದಲ್ಲಿ ಶಾಶ್ವತವಾಗಿ ನಿಂತು ಹೋಗಿದ್ದಾನೆ. ಮೇಲಿನ ಶರೀರವನ್ನು ಅನುಸರಿಸಿ ಒಳಗಿರುವ ವ್ಯಕ್ತಿಯನ್ನು ಯಾರೂ ಗಮನಿಸಲಿಲ್ಲ. ಹುಡುಗನೆಯೆಂದು ಹೀಯಾಳಿಸಿ ಮಾತನಾಡುತ್ತಿದ್ದರು. ಕೊನೆಗೆ ಒಳಗಿರುವ ವ್ಯಕ್ತಿಯೆ ನಾನು ಇಂತವನೆಂದು ಹೇಳಿದರೂ ಕೆಲವರು ನಂಬಲಿಲ್ಲ, ನಂತರ ತಾನು ಬದುಕಿರುವಾಗ ಮಾತನಾಡಿರುವವು, ಮಾಡಿರುವವು, ಕೊಟ್ಟಿರುವವು ನೆನಪು ಮಾಡಿದಾಗ ಕೆಲವರು ವಿಶ್ವಾಸಿಸಿದರು. ಹಾಗೆ ಒಬ್ಬ ಬಾಲಕನ ಶರೀರದಲ್ಲಿ ತನಗೆ ತಾನು ಹೇಳಿಕೊಂಡ ವ್ಯಕ್ತಿ ಈ ದಿನ ಪ್ರತ್ಯಕ್ಷವಾಗಿ ಪುಟ್ಟಪರ್ತಿಯಲ್ಲಿ ಸತ್ಯಸಾಯಿಯಾಗಿ ಇದ್ದಾನೆ. ಆತನೇ ಷಿರಿಡಿ ಸಾಯಿಬಾಬಾ ರವರು. ಷಿರಿಡಿ ಸಾಯಿಬಾಬಾ ಪ್ರತ್ಯಕ್ಷವಾಗಿ ಸಜೀವವಾಗಿ ಸತ್ಯಸಾಯಿರೂಪ ದೊಂದಿಗೆ ಪುಟ್ಟಪರ್ತಿಯಲ್ಲಿ ಇದ್ದರೂ, ಅಲ್ಲಿಗೆ ಹೋಗಿ ಪ್ರತ್ಯಕ್ಷವಾಗಿ ಆತನಿಗೆ ನಮಸ್ಕರಿಸದೆ, ಪಕ್ಕದಲ್ಲಿ ಷಿರಿಡಿ ಬಾಬಾಗುಡಿ ಕಟ್ಟಿಕೊಂಡು ಮುಗಿಯುವವರಿದ್ದಾರೆ. ಇದನ್ನು ಅನುಸರಿಸಿ ನೋಡಿದರೆ ಸತ್ತುಹೋದ ಬಾಬಾ ಪ್ರತ್ಯಕ್ಷವಾಗಿ ಶರೀರದೊಂದಿಗೆ ಇದ್ದಾನೆಂದು ಬಹಳ ಜನರಿಗೆ ಗೊತ್ತಿಲ್ಲವೆಂದು ಅರ್ಥವಾಗುತ್ತಿದೆ.

ಅನಂತಪುರ ಜಿಲ್ಲೆಯ ಧರ್ಮವರಂನಲ್ಲಿಯೇ ಭಾರತಿ ಎನ್ನುವ ದೆವ್ವ ಸಾಮಾನ್ಯ ಹೆಣ್ಣುಮಗಳಲ್ಲಿ ಪ್ರವೇಶಿಸಿ ಶಾಶ್ವತವಾಗಿ ಇದ್ದು ಸಂಸಾರ ಮಾಡಿ ಮಕ್ಕಳನ್ನು ಹೆತ್ತಿದ್ದಾಳೆ. ಹಾಗೆ ಅದೇ ಧರ್ಮವರಂನಲ್ಲಿಯೇ ಒಬ್ಬ ಗಂಡು ಸೂಕ್ಷ್ಮ ಮತ್ತೊಬ್ಬ ಗಂಡಸಿನೊಳಗೆ ಸೇರಿ, ಮದುವೆ ಮಾಡಿಕೊಂಡು ಒಬ್ಬ

ಮಗನನ್ನು ಸಹ ಹೊಂದಿದ್ದು ಯಾರಿಗೂ ಗೊತ್ತಿಲ್ಲದೆ ಬಾಬು ಎಂದು ಮೊದಲನೆಯವನ ಹೆಸರಿನ ಮೇಲೆಯೆ ಜೀವಿಸುತ್ತಿದ್ದಾನೆಂದರೆ ಎಷ್ಟು ವಿಚಿತ್ರವೊ ನೋಡಿರಿ! ವಾಸ್ತವವಾಗಿ ಯಾರಾದರೂ ಹೇಳಿದರೂ ಇವು ನಂಬಲಾರದ ವಿಷಯಗಳೆ! ಆದರೂ ಪ್ರತ್ಯಕ್ಷ ಸತ್ಯಗಳೆಂದು ಹೇಳದೆ ತಪ್ಪುವುದಿಲ್ಲ. ಒಂದು ಅನಂತಪುರ ಜಿಲ್ಲೆಯಲ್ಲಿಯೆ, ಅದೂ ಒಂದು ಧರ್ಮವರಂ ಪ್ರಾಂತದಲ್ಲಿಯೆ ಭಾರತಿ, ಬಾಬು, ಬಾಬಾ ಮೂವರ ವಿಷಯ ಕಾಣಿಸುತ್ತಿದ್ದರೆ ನಮಗೆ ತಿಳಿಯದ ವಿಷಯಗಳು ದೇಶದಲ್ಲಿ ಎಷ್ಟಿವೆಯೊ? ಇದೆಲ್ಲಾ ಕೇಳಿದ ನಂತರ ನನ್ನನ್ನು ಕೆಲವರು ಹೀಗೆ ಪ್ರಶ್ನಿಸಬಹುದು. ನಿಮ್ಮ ಕಣ್ಣಿಗೆ ಸೂಕ್ಷ್ಮ ಶರೀರಗಳು ಕಾಣಿಸುತ್ತವೆಯೆ? ಕಾಣಿಸುತ್ತಿರುವುದರಿಂದಲೆ ಇವರು ಸತ್ತವರು, ಇವರು ಬದುಕಿದವರೆಂದು ಹೇಳುತ್ತಿದ್ದೀರಾ ಎಂದು ಕೇಳಬಹುದು. ನನ್ನ ಉತ್ತರ ಏನೆಂದರೆ! ನಿಮ್ಮ ಕಣ್ಣಿಗೆ ಸೂಕ್ಷ್ಮ ಶರೀರಗಳು ಹೇಗೆ ಕಾಣಿಸುವುದಿಲ್ಲವೊ, ಹಾಗೆ ನನಗೂ ಸಹ ಕಾಣಿಸುವುದಿಲ್ಲ. ಹಾಗೆ ಕಾಣಿಸಿದ್ದರೆ ಭಾರತಿ ವಿಷಯದಲ್ಲಿ ಮೋಸಹೋಗುತ್ತಿರಲಿಲ್ಲ! ಅನುಭವದೊಂದಿಗೆ ಪರಿಸ್ಥಿತಿಗಳನ್ನು ಅನುಸರಿಸಿ, ದೈವಜ್ಞಾನ ನಮ್ಮ ಹತ್ತಿರ ಇರುವಾಗ ಅವರ ಪ್ರವರ್ತನೆಗಳನ್ನು ಅನುಸರಿಸಿ ನೋಡಿದಾಗ ತಿಳಿದುಕೊಳ್ಳುವುದಕ್ಕೆ ಅವಕಾಶವಿದೆಯೆಂದು ಹೇಳುತ್ತಿದ್ದೇನೆ.

ಇಲ್ಲಿಯವರೆಗು ಮನುಷ್ಯರ ಶರೀರಗಳಿಂದ ಬಂದಿರುವ ಸೂಕ್ಷ್ಮ ಶರೀರಗಳಿಗೆ ಸಂಬಂಧಿಸಿದ ಕೆಲವು ವಿವರಗಳನ್ನು ಮಾತ್ರವೆ ತಿಳಿದುಕೊಂಡಿದ್ದೇವೆ. ಈಗ ದೇವತಾ ಪ್ರತಿಮೆಗಳಿಂದ ಬಂದಿರುವ ಸೂಕ್ಷ್ಮ ಶರೀರಗಳ ಕೆಲವು ವಿಷಯಗಳನ್ನು ತಿಳಿದುಕೊಳ್ಳೋಣ. ಮನುಷ್ಯರಿಗೆ ಸೂಕ್ಷ್ಮ ಶರೀರಗಳಿರುತ್ತವೆಂದು, ಅವುಗಳನ್ನೇ ದೆವ್ವಗಳೆಂದು, ಗ್ರಹಗಳೆನ್ನುತ್ತೇವೆಂದು ತಿಳಿದುಕೊಂಡಿದ್ದೇವೆ. ಹಾಗೆ ಪ್ರತಿಮೆಗಳಿಗೂ ಸಹ ಸೂಕ್ಷ್ಮ ಶರೀರಗಳಿವೆಯೆಂದು ಅವುಗಳನ್ನು ದೇವತೆಗಳು, ವಿಗ್ರಹಗಳು ಎಂದು ಕರೆಯಬಹುದೆಂದು ಹೇಳುತ್ತಿದ್ದೇವೆ. ಭೂಮಿ ಮೇಲೆ ಬಹಳ ವಿಧಗಳ ಮನೋಭಾವನೆಗಳು ಇರುವ ಮನುಷ್ಯರು ಇದ್ದಹಾಗೆ, ಪ್ರತಿಮೆಗಳಲ್ಲಿಯು ಸಹ ಅನೇಕ ವಿಧಗಳ ಮನೋಭಾವನೆಗಳಿರುವ

ವಿಗ್ರಹಗಳೆನ್ನುವ ಸೂಕ್ಷ್ಮಗಳು ಇವೆ. ಮನುಷ್ಯರಲ್ಲಿ ಎಲ್ಲರೂ ಒಳ್ಳೆಯವರೆ ಇಲ್ಲದಹಾಗೆ, ದೇವತೆಗಳಲ್ಲಿಯು ಸಹ ಎಲ್ಲರೂ ಒಳ್ಳೆಯವರೇ ಇಲ್ಲ. ಇದನ್ನು ಅನುಸರಿಸಿ ನೋಡಿದಾಗ ದೇವತೆಗಳಲ್ಲಿಯು ಸಹ ಮನುಷ್ಯರಲ್ಲಿ ಇದ್ದಹಾಗೆ, ದುಷ್ಕರ್ಮಿಗಳು ಸಹ ಇದ್ದಾರೆಂದು ತಿಳಿಯುತ್ತದೆ. ದೇವತೆಗಳನ್ನು ದುಷ್ಕರ್ಮಿಗಳೆಂದು ಅನ್ನುತ್ತೀರೇನು? ದುಷ್ಕರ್ಮಿಗಳು ದೇವತೆಗಳು ಹೇಗೆ ಆಗುತ್ತಾರೆಂದು ನೀವು ಪ್ರಶ್ನಿಸಬಹುದು. ಅದಕ್ಕೆ ಉತ್ತರ ಬೇಕೆಂದರೆ ಮೊದಲು ಒಂದು ವಿಷಯ ತಿಳಿದುಕೊಳ್ಳಬೇಕು. ಅದೇನೆಂದರೆ ವಿಶ್ವವನ್ನು ಸೃಷ್ಟಿಸಿದ ಸೃಷ್ಟಿಕರ್ತ ಒಬ್ಬನಿದ್ದಾನೆ. ಆತನೇ ದೇವರು. ದೇವರು ರೂಪ, ನಾಮ, ಕ್ರಿಯೆ ಇಲ್ಲದವನು. ಅಷ್ಟೇ ಅಲ್ಲದೆ ಸೃಷ್ಟಿ, ಸ್ಥಿತಿ, ಲಯ ಕಾರಕನು ಸಹ ದೇವರೇ. ಇದನ್ನು ಅನುಸರಿಸಿ ನೋಡಿದರೆ ಜಗತ್ತಿನಲ್ಲಿ ಸೃಷ್ಟಿಸಲ್ಪಟ್ಟ ಇತ್ತ ಮನುಷ್ಯರಾಗಲಿ, ಅತ್ತ ದೇವತೆಗಳಾಗಲಿ ಜೀವರಾಶಿಗಳ ಪಟ್ಟಿಯಲ್ಲಿ ಸೇರುತ್ತಾರೆ. ದೇವತೆಗಳಿಗು ಸಹ ಗುಣಗಳು ಅವುಗಳ ನಡವಳಿಕೆಗಳು ಇವೆ. ವಾಸ್ತವವನ್ನು ಬಿಚ್ಚಿ ಹೇಳಿದರೆ ಮನುಷ್ಯರಿಗಿಂತ ತಿಳಿವಳಿಕೆ ಕಡಿಮೆ ಇರುವವರು, ಮನುಷ್ಯರಿಗಿಂತ ದುಷ್ಕರ್ಮಿಗಳು, ಮನುಷ್ಯರಿಗಿಂತ ಕಠಿಣವಾದವರು ದೇವತೆಗಳಲ್ಲಿಯೂ ಕೂಡಾ ಕೆಲವರಿದ್ದಾರೆ. ಇಲ್ಲಿ ಗಮನಿಸಬೇಕಾಗಿರುವುದು ಏನೆಂದರೆ! ನಾನು ದೇವತೆಗಳೆಲ್ಲರನ್ನು ದುಷ್ಕರ್ಮಿಗಳನ್ನಲಿಲ್ಲ, ಕೆಲವರನ್ನು ಮಾತ್ರ ಹೇಳುತ್ತಿದ್ದೇನೆ. ದೇವತೆಗಳಲ್ಲಿಯು ಸಹ ಎಷ್ಟೋ ಮಹತ್ವ ಇರುವವರು ಇದ್ದಾರೆ. ಒಬ್ಬ ಮನುಷ್ಯ ಬಹಳ ವಿಷಯಗಳಲ್ಲಿ ಒಳ್ಳೆಯವನೆಂದು ಅನಿಸಿಕೊಂಡರೆ, ಕೆಲವು ವಿಷಯಗಳಲ್ಲಿ ಮಾತ್ರ ಕೆಟ್ಟವನೆಂದು ಅನಿಸಿಕೊಳ್ಳುವುದು ನೋಡುತ್ತಿದ್ದೇವೆ. ಹಾಗೆ ಕೆಲವು ದೇವತೆಗಳು, ಕೆಲವು ವಿಷಯಗಳಲ್ಲಿ ಸಕ್ರಮವಾಗಿ ಇದ್ದರೂ, ಕೆಲವು ವಿಷಯಗಳಲ್ಲಿ ಕೆಟ್ಟದಾಗಿ ಪ್ರವರ್ತಿಸುವರು. ಈಗ ಒಬ್ಬ ಗಂಡು ದೇವತೆ ಪ್ರವರ್ತನೆಯನ್ನು ಕುರಿತು ವಿವರಿಸುತ್ತೇನೆ. ಅದನ್ನು ನೋಡಿ ಆ ದೇವತಾ ಮೂರ್ತಿ ದುರ್ಮಾರ್ಗನೊ, ಸನ್ಮಾರ್ಗನೊ ನೀವೇ ಯೋಚಿಸಿ ಹೇಳಬಹುದು.

ಒಂದು ದಿನ ಮುಂಜಾನೆ 9 ಗಂಟೆಯ ಸಮಯದಲ್ಲಿ ನಮ್ಮ ಪಕ್ಕದ ಮನೆಯಲ್ಲಿ ಬಾಡಿಗೆ ಇದ್ದ ಭೀಮಕ್ಕ ಎನ್ನುವಾಕೆ ಅಳುತ್ತಾ ಬಂದು, ಆಕೆ ಗಂಡ

ಬೋಯಲಿಂಗಣ್ಣನಿಗೆ ಮಂಚದಲ್ಲಿಯೆ ಕಾಲು, ಕೈ ಬಿದ್ದು ಹೋಗಿವೆಯೆಂದು, ಮೂತಿ ಸೊಟ್ಟಹೋಗಿ ಮಾತನಾಡುತ್ತಿಲ್ಲವೆಂದು, ಮೇಲಕ್ಕೆ ಏಳುತ್ತಿಲ್ಲವೆಂದು ಹೇಳಿದಳು. ಮನೆ ಪಕ್ಕದಲ್ಲೆ ಇರುವುದರಿಂದ ನಿತ್ಯವೂ ಅವರು ನನಗೆ ಕಾಣಿಸುತ್ತಿದ್ದರು. ನನ್ನ ಮನೆ ಪಕ್ಕದಲ್ಲಿ ಚಿಕ್ಕ ಗುಡಿಸಲಿನಲ್ಲಿ ಬಾಡಿಗೆಗೆ ವಾಸವಾಗಿದ್ದರು. ಆಕೆ ಗಂಡನ ಹೆಸರು ಬೋಯಲಿಂಗಣ್ಣ. ಮೂವರು ಚಿಕ್ಕ ಮಕ್ಕಳಿದ್ದಾರೆ. ಲಿಂಗಣ್ಣ ರೋಡು ರೋಲರ್ ಡ್ರೈವರ್ ಆಗಿ ಕೆಲಸ ಮಾಡುತ್ತಿದ್ದನು. ಆತನು ಬಹಳ ಕುಡುಕನಾಗಿದ್ದನು, ಹೆಚ್ಚಿನ ಹಣವನ್ನು ಸಾರಾಯಿಗೆ ಖರ್ಚು ಮಾಡುತ್ತಿದ್ದನು. ಮನೆಯಲ್ಲಿ ಹೆಂಡತಿ ಮಕ್ಕಳು ಸಾಕು ಸಾಕಾಗದ ತಿಂಡಿಯಲ್ಲಿ ಕಾಲ ಕಳೆಯುತ್ತಿದ್ದರು. ಒಂದು ದಿನ ತಿಂಡಿ ಇಲ್ಲದೆ ಉಪವಾಸವಿದ್ದಾಗ ನಾನೆ, ತಿಂಡಿ ಕಾಳು ಕೊಟ್ಟ ಸಂದರ್ಭವೂ ಸಹ ಇವೆ. ಅವರದು ಸ್ವಂತ ಊರು ಗುಂತಕಲ್ಲು ಹತ್ತಿರ ಚಿಪ್ಪಗಿರಿ ಅಂದುಕೊಳ್ಳುತ್ತೇನೆ. ಅವರ ಬಡತನವನ್ನು ಪ್ರತ್ಯಕ್ಷವಾಗಿ ನೋಡಿದವನಾದ್ದರಿಂದ ಭೀಮಕ್ಕ ಅಳುತ್ತಾ ಹೇಳಿದಾಗ ನನಗೂ ಸಹ ಸ್ವಲ್ಪ ನೋವೆನಿಸಿತು. ಡಾಕ್ಟರುಗಳ ಹತ್ತಿರಕ್ಕೆ ಹೋಗಿ ತೋರಿಸಿಕೊಳ್ಳುವ ಶಕ್ತಿ ಅವರಿಗಿಲ್ಲ. ಆದ್ದರಿಂದ ಲಿಂಗಣ್ಣನನ್ನು ನನ್ನ ಹತ್ತಿರಕ್ಕೆ ಕರೆದುಕೊಂಡು ಬನ್ನಿ ಎಂದು ಹೇಳಿದೆನು. ಆಗ ಆಕೆ ಇತರರ ಸಹಾಯದಿಂದ ಲಿಂಗಣ್ಣನನ್ನು ನನ್ನ ಹತ್ತಿರಕ್ಕೆ ತಂದರು.

ಲಿಂಗಣ್ಣನನ್ನು ಇತರರ ಸಹಾಯದಿಂದ ಮೇಲಕ್ಕೆತ್ತಿ ನನ್ನ ಮುಂದೆ ಕೂರಿಸಿ ಹಿಡಿದುಕೊಂಡರು. ಆಗ ನಾಡಿಯನ್ನು ನೋಡಬೇಕೆಂದು ಲಿಂಗಣ್ಣನ ಬಲಗೈಯನ್ನು ಹಿಡಿದುಕೊಂಡೆನು. ಹಾಗೆ ಹಿಡಿದುಕೊಂಡು ನಾಡಿಯನ್ನು ಗಮನಿಸುತ್ತಿರುವಾಗ ಒಂದು ಸಾರಿ ವೇಗವಾಗಿ ಕೈಯನ್ನು ಎಳೆದುಕೊಂಡನು. ಏಕೆ ಹಾಗೆ ಮಾಡಿದ್ದಾನೆಂದು ಲಿಂಗಣ್ಣನ ಕಡೆ ನೋಡಿದೆನು. ಆಗ ಲಿಂಗಣ್ಣ ಕಣ್ಣು ಗುಡ್ಡೆಗಳನ್ನು ದೊಡ್ಡದಾಗಿಸಿ ಕೋಪದಿಂದ ನನ್ನ ಕಡೆ ನೋಡುತ್ತಿದ್ದಾನೆ. ಆ ದೃಶ್ಯವನ್ನು ನೋಡಿದಾಗ ಲಿಂಗಣ್ಣ ಶರೀರದ ಮೇಲೆ ಯಾರೊ ಬಂದಹಾಗೆ ತಿಳಿಯಿತು. ಆಗ ಆತನಿಗೆ ನನಗೆ ಹೀಗೆ ಸಂಭಾಷಣೆ ನಡೆಯಿತು.

**ನಾನು :–** ಏಯ್! ಯಾರು ನೀನು. ಏಕೆ ಹಾಗೆ ನೋಡುತ್ತಿದ್ದೀಯ. ನಿನ್ನ ನೋಟಕ್ಕೆ ಭಯಪಡುವುದಿಲ್ಲ.

**ಆತನು :–** ಏನೋ! ನೀನು ಯಾರೆಂದು ನನ್ನನ್ನೇ ಪ್ರಶ್ನಿಸುತ್ತೀಯಾ? ಸ್ವಲ್ಪವಾದರು ಭಯವಿಲ್ಲದೆ ಮಾತನಾಡುತ್ತೀಯಾ? ನಾನ್ಯಾರೆಂದುಕೊಂಡಿದ್ದೀಯ.

**ನಾನು :–** ನೀನ್ಯಾರಾದರೆ ನನಗೇನು. ಇಲ್ಲಿಗೆ ಬಂದವರು ನನ್ನ ಮುಂದೆ ಭಯ ಭಕ್ತಿಗಳಿಂದ ಮಾತನಾಡುತ್ತಾರೆ. ನೀನು ನನ್ನನ್ನೇ ಭಯ ಇಲ್ಲವೆನ್ನುತ್ತೀಯ. ಮೇಲಾಗಿ ನಾನ್ಯಾರೆಂದುಕೊಂಡಿದ್ದೀಯ ಎನ್ನುತ್ತೀಯ? ನೀನು ಹೇಳದೆ ನನಗೆ ಹೇಗೆ ತಿಳಿಯುತ್ತದೆ? ಈಗಲು ಸಹ ನಿನಗೆ ಮರ್ಯಾದೆ ಕೊಟ್ಟು ಕೇಳುತ್ತಿದ್ದೇನೆ, ನೀನು ಯಾರೊ ಹೇಳು. ಲಿಂಗಣ್ಣನನ್ನು ಹೀಗೆ ಏಕೆ ಮಾಡಿದ್ದೀಯೊ ಹೇಳು?

(ಆಗ ಆತನು ಮಾತನಾಡಿದ ಮಾತುಗಳನ್ನು ಅನುಸರಿಸಿ ನೋಡಿದಾಗ ಆತನು ಭೈರವನು ಎಂದು ತಿಳಿಯಿತು. ಆತನನ್ನು ಕತ್ತಲು ಭೈರವನೆಂದು ಸಹ ಕರೆಯುತ್ತಾರೆ. ಆತನಿಗೆ ನಡುರಾತ್ರಿಯಲ್ಲಿ ಪ್ರಜೆಗಳು ಪೂಜೆಗಳನ್ನು ಮಾಡುತ್ತಾರೆ. ಕಪ್ಪು ಕೋಳಿಗಳು, ಕಪ್ಪು ಮೇಕೆಗಳನ್ನು ಭೈರವನಿಗೆ ಬಲಿ ಕೊಡುತ್ತಾರೆ. ಆತನೆಂದರೆ ಪ್ರಜೆಗಳಿಗೆ ಬಹಳ ಭಯ. ಹರಕೆ ಹೊತ್ತವರು ತಪ್ಪದೆ ಆತನ ಕಾಣಿಕೆಗಳನ್ನು ಸಲ್ಲಿಸುತ್ತಾರೆ.) ಇನ್ನು ಲಿಂಗಣ್ಣನ ವಿಷಯಕ್ಕೆ ಬಂದರೆ, ಮೊದಲನೇ ದಿನ ತಾಡಿಪತ್ರಿಗೆ ಸಮೀಪದಲ್ಲಿರುವ ಪುಟ್ಲೂರಿನಲ್ಲಿ ಡ್ಯೂಟಿ ಮಾಡಿ ಸಾಯಂಕಾಲ 7 ಗಂಟೆಗೆ ಸ್ವಲ್ಪ ಕುಡಿದು, ತಾಡಿಪತ್ರಿಗೆ ಬರುವುದಕ್ಕೆ ಪುಟ್ಲೂರಿನಲ್ಲಿ ಬಸ್‌ಸ್ಟಾಂಡಿಗೆ ಬಂದನು. ಬಸ್ಸು ತಡವಾಯಿತು. 8 ಗಂಟೆಗಳವರೆಗು ನೋಡಿ ಮತ್ತೆ ಊರಿನೊಳಗೆ ಹೋಗಿ ತುಂಬಾ ಕುಡಿದು ಬಂದನು. ಆತನು ಬರುವಷ್ಟೊತ್ತಿಗೆ 10 ಗಂಟೆಯಾಗಿದೆ. ಬಸ್ಸು ಸಿಗಲಿಲ್ಲ. ಕುಡಿದ ಅಮಲಿನಲ್ಲಿ ಆತನು ತಾಡಿಪತ್ರಿ ರೋಡಿನಲ್ಲಿ ನಡೆದುಕೊಂಡು ಬಂದನು. ಸ್ವಲ್ಪ ದೂರ ಬಂದ ನಂತರ, ಪುಟ್ಲೂರಿಗೆ ಹತ್ತಿರದಲ್ಲಿಯೆ ರಸ್ತೆ ಪಕ್ಕದಲ್ಲಿ ಬೇವಿನ ಗಿಡ ಇದೆ. ಅದರ ಸುತ್ತ ಕಟ್ಟೆ ಕಟ್ಟಿದ್ದಾರೆ. ಅಲ್ಲಿಯವರೆಗು ಬಂದು ಲಿಂಗಣ್ಣ ರಸ್ತೆ ಪಕ್ಕದಲ್ಲೇ ಇದ್ದ ಕಟ್ಟೆ ಮೇಲೆ ಮಲಗಿಕೊಂಡನು. ಹಾಗೆ ಅಲ್ಲಿ ನಿದ್ರೆಹೋದ ಲಿಂಗಣ್ಣನನ್ನು ನಡುರಾತ್ರಿ ಕಳೆದ ನಂತರ ಒಬ್ಬ ಹೆಂಗಸು ಬಂದು ಎಬ್ಬಿಸಿದಳು. ನಿದ್ರೆ ಅಮಲಿನಿಂದ ಮತ್ತು ಸಾರಾಯಿ ಅಮಲಿನಲ್ಲಿ ಎದ್ದ ಆತನನ್ನು ಅಲ್ಲಿಗೆ ಬಂದ ಹೆಂಗಸು ತನಗೆ

ಇಷ್ಟಬಂದ ಹಾಗೆ ಕೆಳಗೆ ಬೀಳಿಸಿ ಒದ್ದಳು. ಆ ಏಟುಗಳಿಗೆ ಲಿಂಗಣ್ಣನಿಗೆ ಮತ್ತೆಲ್ಲಾ ಬಿಟ್ಟು ಹೋಗಿದೆ. ಆಕೆ ಯಾರೊ, ಏಕೆ ಒದೆಯುತ್ತಿದ್ದಾಳೊ ಗೊತ್ತಾಗಲಿಲ್ಲ. ಕೊನೆಗೆ ಆತನ ಜುಟ್ಟು ಹಿಡಿದುಕೊಂಡು, ಕಟ್ಟೆಯ ಸುತ್ತ ತಿರುಗಿಸಿ ಆತನ ಮೊಣಕಾಲುಗಳನ್ನು ಆ ಕಟ್ಟೆಗೆ ಬಡಿ ಎಂದು ಹೇಳಿ ಬಡಿಸಿದಳು. ಹಾಗೆ ಬಡಿಸಿರುವುದರಿಂದ ಆತನ ಮೊಣಕಾಲುಗಳಿಗೆ ಸ್ವಲ್ಪ ಗಾಯಗಳಾಗಿವೆ. ಹಾಗೆ ಒದ್ದು ಬಿಟ್ಟುಹಾಕಿದಳು. ಆಕೆ ಬಿಟ್ಟ ತಕ್ಷಣವೆ ಲಿಂಗಣ್ಣ ಪುಟ್ಲೂರು ಕಡೆ ಬಂದನು. ಅಲ್ಲಿ ಕೆನಾಲ್ ಆಫೀಸಿನ ಹತ್ತಿರ ತನ್ನ ಜೊತೆಯ ಡ್ರೈವರ್ ಮನೆಗೆ ಹೋದನು. ಲಿಂಗಣ್ಣನ ಹಿಂದೆ ಒಡೆದ ಮನುಷ್ಯಳು ಸಹ ಬಂದಿದ್ದಾಳೆ. ಲಿಂಗಣ್ಣನ ಹಿಂದೆ ಡ್ರೈವರ್ ಮನೆವರೆಗು ಹೋದಳು. ಆಕೆಯನ್ನು ನೋಡುತ್ತಲೆ ಡ್ರೈವರ್ ಮನೆಗೆ ಹೋದ ಲಿಂಗಣ್ಣ ಭಯಪಡುತ್ತಾ ಬಾಗಿಲು ತಟ್ಟಿದನು. ಆ ಮನೆಯ ಡ್ರೈವರ್ ಬಾಗಿಲು ತೆಗೆದು ಏನು ಲಿಂಗಣ್ಣ ಈ ಸಮಯದಲ್ಲಿ ಬಂದಿದ್ದೀಯ ಎಂದು ಕೇಳಿದನು. ಆಗ ಲಿಂಗಣ್ಣ ಅಲ್ಲೇ ನಿಂತುಕೊಂಡಿದ್ದ ಆಕೆ ಕಡೆಗೆ ಕೈ ತೋರಿಸಿ, ಈಯಮ್ಮ ಯಾರು? ನನ್ನನ್ನು ಒಡೆದಳು ಎಂದನು. ಆ ಡ್ರೈವರ್‌ಗೆ ಅಲ್ಲಿ ಯಾರೂ ಕಾಣಿಸಲಿಲ್ಲ. ಇಲ್ಲಿ ಯಾರೂ ಇಲ್ಲ, ನಿನ್ನನ್ನು ಯಾರು ಒಡೆದರೆಂದು ಕೇಳಿ ಈತನ ವರ್ತನೆ ನೋಡಿ, ಆತನಿಗೆ ಭಯವಾಗಿ ಮಲಗುವುದಕ್ಕೆ ಚಾಪೆ, ರಗ್ಗು ಕೊಟ್ಟು ಹೊರಗೆ ಮಲಗೆಂದು ಹೇಳಿ ಬಾಗಿಲುಗಳನ್ನು ಹಾಕಿಕೊಂಡನು. ಲಿಂಗಣ್ಣ ಬಾಗಿಲು ತೆಗೆಯೆಂದರೂ ಆತನು ತೆಗೆಯಲಿಲ್ಲ. ಇನ್ನೊಂದು ಬಾರಿ ಅಲ್ಲಿಗೆ ಬಂದರೆ ಸಾಯಿಸುತ್ತೇನೆಂದು ಹೇಳಿ ಆಕೆ ಹೊರಟುಹೋದಳು.

ಲಿಂಗಣ್ಣನಿಗೆ ಬೆಳೆಗಾಗುವವರೆಗೂ ನಿದ್ರೆ ಬರಲಿಲ್ಲ. ಬೆಳಗ್ಗೆ ಮೊದಲನೆ ಬಸ್ಸಿಗೆ ತಾಡಿಪತ್ರಿಗೆ ಬಂದು ಮನೆ ಸೇರಿಕೊಂಡನು. ರಾತ್ರಿ ಕೆಳಗೆ ಬಿದ್ದಾಗ ಮಣ್ಣಾದ ಬಟ್ಟೆಗಳನ್ನು ತೆಗೆಸಿ, ಆತನ ಹೆಂಡತಿ ಸ್ನಾನ ಮಾಡಿಸಿ, ಊಟಕ್ಕೆ ಇಟ್ಟಾಗ ತಿಂದು ಮಂಚದ ಮೇಲೆ ಮಲಗಿಕೊಂಡನು. ರಾತ್ರಿ ನಡೆದ ವಿಷಯವನ್ನು ಹೆಂಡತಿಗೆ ಸಹ ಲಿಂಗಣ್ಣ ಹೇಳಲಿಲ್ಲ. ಮಣ್ಣಾದ ಬಟ್ಟೆಗಳನ್ನು ನೋಡಿ,

ಮೊಣಕಾಲುಗಳ ಏಟುಗಳನ್ನು ನೋಡಿ. ಕುಡಿದ ಅಮಲಿನಲ್ಲಿ ಎಲ್ಲಾದರು ಕೆಳಗೆ ಬಿದ್ದಿರುತ್ತಾನೆಂದು ಆತನ ಹೆಂಡತಿ ಅಂದುಕೊಂಡಳು. ಮಂಚದ ಮೇಲೆ ಮಲಗಿದ್ದ ಲಿಂಗಣ್ಣ ನಿದ್ರೆ ಹೋಗಿದ್ದಾನೆ. ಸುಮಾರು ಬೆಳಗ್ಗೆ 9 ಗಂಟೆ ಸಮಯದಲ್ಲಿ ಆತನು ನಿಟ್ಟುಬಿದ್ದು ಎಚ್ಚರಗೊಂಡನು. ಎಚ್ಚರವಾದ ನಂತರ ಮಂಚದಿಂದ ಮೇಲೇಳಬೇಕೆಂದು ಪ್ರಯತ್ನ ಮಾಡಿದನು. ಆದರೆ ಮೇಲೆ ಏಳಲು ಆಗಲಿಲ್ಲ. ಅಷ್ಟೊತ್ತಿಗೆ ಆತನ ಕಾಲು, ಕೈ ಕೆಲಸ ಮಾಡುತ್ತಿಲ್ಲ. ಹೆಂಡತಿಯನ್ನು ಕರೆಯಬೇಕೆಂದರೂ ಬಾಯಿ ಕೆಲಸ ಮಾಡಲಿಲ್ಲ. ಅದನ್ನು ಗಮನಿಸಿದ ಆತನ ಹೆಂಡತಿ ಭೀಮಕ್ಕ ನನ್ನ ಹತ್ತಿರಕ್ಕೆ ಬಂದು ಹೇಳುವುದು, ಆತನನ್ನು ನನ್ನ ಹತ್ತಿರಕ್ಕೆ ತರುವುದು, ಭೈರವನು ಮಾತನಾಡುವುದು ನಡೆಯಿತು. ರಾತ್ರಿ ಲಿಂಗಣ್ಣ ನನ್ನ ಹತ್ತಿರಕ್ಕೆ ಬಂದಿರುವ ಭೈರವನ ಕಟ್ಟೆ ಹತ್ತಿರಕ್ಕೆ ಹೋಗಿದ್ದಾನೆ. ಲಿಂಗಣ್ಣನಿಗೆ ಅದು ಭೈರವನ ಕಟ್ಟೆಯೆಂದಾಗಲಿ, ಕುಡಿದವರು ಅಲ್ಲಿಗೆ ಹೋಗಬಾರದೆಂದಾಗಲಿ ಗೊತ್ತಿಲ್ಲ. ಬಹಳ ಕಾಲದಿಂದ ಕುಡಿದವರು ಯಾರೂ ಅಲ್ಲಿಗೆ ಹೋಗುತ್ತಿರಲಿಲ್ಲ. ಅಷ್ಟೇ ಅಲ್ಲದೆ ರಾತ್ರಿ ಹೊತ್ತು ಪೂಜೆ ಮಾಡುವವರು ಮಾತ್ರ ಗುಂಪಾಗಿ ಅಲ್ಲಿಗೆ ಹೋಗುತ್ತಾರೆ. ಉಳಿದ ದಿನಗಳಲ್ಲಿ ರಾತ್ರಿ ಹೊತ್ತು ಒಂಟಿಯಾಗಿ ಯಾರು ಹೋಗುವುದಿಲ್ಲವೆಂದು ಇತರರು ಹೇಳಿದರೆ ಕೇಳಿದ್ದೇನೆ. ಅಂತಹ ಜಾಗಕ್ಕೆ ರಾತ್ರಿಹೊತ್ತು ಒಂಟಿಯಾಗಿ, ಅದೂ ಕುಡಿದು ಹೋಗಿರುವುದು ಒಂದು ರೀತಿ ತಪ್ಪೆ ಆಗುತ್ತದೆ.

ಆ ರಾತ್ರಿ ಲಿಂಗಣ್ಣ ಕಟ್ಟೆ ಹತ್ತಿರಕ್ಕೆ ಹೋದ ಸಮಯದಲ್ಲಿ, ಭೈರವನು ಪುಟ್ಲೂರಿಗೆ ಬಂದಿದ್ದನು. ಲಿಂಗಣ್ಣ ಹೋಗಿ ಮಲಗಿಕೊಂಡ ಸ್ವಲ್ಪ ಹೊತ್ತಿಗೆ, ಭೈರವನ ಹೆಂಡತಿ ಅಲ್ಲಿಗೆ ಬಂದು ನೋಡಿ, ಲಿಂಗಣ್ಣನನ್ನು ಒಡೆದಿದ್ದಾಳೆ. ನಂತರ ಆಕೆ ಡ್ರೈವರ್ ಮನೆವರೆಗು ಬಂದು ಹೋಗಿದ್ದಾಳೆ. ಬೆಳಗಾದ ನಂತರ ಭೈರವನು ತನ್ನ ಜಾಗ ಆದ ಕಟ್ಟೆಯ ಹತ್ತಿರಕ್ಕೆ ಬರುತ್ತಿದ್ದ ಹಾಗೆ, ಆತನ ಹೆಂಡತಿ ರಾತ್ರಿ ನಡೆದ ವಿಷಯವೆಲ್ಲಾ ಹೇಳಿದಳು. ಅದು ಕೇಳಿದ ಭೈರವನು ಕೋಪಗೊಂಡನು. ಭಯವಿಲ್ಲದೆ ನನ್ನ ಕಟ್ಟೆ ಹತ್ತಿರಕ್ಕೆ ಕುಡಿದು ಬಂದವನನ್ನು

ಬಿಡುವುದಿಲ್ಲ. ಅವನಿಗೆ ನಡೆದಿರುವುದು ಇತರರಿಗೆ ಗುಣಪಾಠವಾಗಬೇಕು ಎಂದು ಹೆಂಡತಿಗೆ ಹೇಳಿ ಹೊರಟು ಬಂದನು. ಹಾಗೆ ಕೋಪದಿಂದ ಬಂದ ಭೈರವನು ಲಿಂಗಣ್ಣನೊಳಗೆ ತೂರಿ, ಕತ್ತಿನಲ್ಲಿ ನರವನ್ನು ಅಮುಕಿ ಲಿಂಗಣ್ಣನಿಗೆ ಕಾಲು, ಕೈಗಳು, ಬಾಯಿ ಬಿದ್ದು ಹೋಗುವ ಹಾಗೆ ಮಾಡಿದನು. ಅಷ್ಟೇ ಅಲ್ಲದೆ ಭೈರವನು ನನ್ನನ್ನು ಸಹ ಲೆಕ್ಕ ಮಾಡದೆ, ನಾನೆಂದರೆ ಭಯವಿಲ್ಲವೆ ಎಂದು ಕೇಳಿದನು. ನಂತರ ಆತನು ಭೈರವನೆಂದು, ಆತನಿಗೆ ಬಹಳ ಕೋಪವೆಂದು ತಿಳಿಯಿತು. ಆದರೂ ಲಿಂಗಣ್ಣ ತಿಳಿದು ಮಾಡಿದ್ದರೆ, ಲಿಂಗಣ್ಣನದ್ದು ತಪ್ಪೆಂದು ನಾವು ಸಹ ಅನ್ನಬಹುದು. ಆದರೆ ಲಿಂಗಣ್ಣನಿಗೆ ಅದು ಭೈರವನ ಸ್ಥಳವೆಂದು, ಆ ಕಟ್ಟೆಯ ಮೇಲೆ ಮಲಗಬಾರದೆಂದು ಗೊತ್ತಿಲ್ಲ. ಹಾಗಿರುವಾಗ ಲಿಂಗಣ್ಣನದು ತಪ್ಪು ಹೇಗೆ ಆಗುತ್ತದೆ? ಆದ್ದರಿಂದ ಲಿಂಗಣ್ಣನ ಪರವಾಗಿ ಭೈರವನೊಂದಿಗೆ ನಾನು ವಾದ ಮಾಡಲಾಯಿತು. ಆ ವಾದವನ್ನು ಕೆಳಗೆ ನೋಡಿರಿ.

**ನಾನು** :– ಲಿಂಗಣ್ಣ ಗೊತ್ತಿಲ್ಲದೆ ಅಲ್ಲಿ ಮಲಗಿಕೊಂಡಿದ್ದಾನೆ. ಇದು ಲಿಂಗಣ್ಣ ತಿಳಿದು ಮಾಡಿದ ತಪ್ಪಲ್ಲ. ತಪ್ಪಿಲ್ಲದಿದ್ದರೂ ಅತನನ್ನು ಒಡೆದಿದ್ದೀರ. ಇದೇ ಕೆಲಸವನ್ನು ಮನುಷ್ಯರು ಮಾಡಿದ್ದರೆ ಅವರ ಮೇಲೆ ಕ್ರಿಮಿನಲ್ ಕೇಸು ಆಗುತ್ತಿತ್ತು.

**ಭೈರವನು** :– ನಾವು ಮಾಡಿರುವುದು ತಪ್ಪು ಎನ್ನುತ್ತೀಯಾ.

**ನಾನು** :– ಯಾರು ಮಾಡಿದರು ತಪ್ಪು ತಪ್ಪೇ. ನ್ಯಾಯ, ಅನ್ಯಾಯ ಎಲ್ಲರಿಗು ಒಂದೇ ಇರುತ್ತದೆ.

**ಭೈರವನು** :– ನನ್ನನ್ನು ಪೂಜಿಸುವವರನ್ನು ಚೆನ್ನಾಗಿ ನೋಡಿಕೊಳ್ಳುತ್ತೇನೆ, ನನ್ನನ್ನು ದೂಷಿಸಿದರೂ ಇಲ್ಲವೆ ನನ್ನನ್ನು ಲೆಕ್ಕಮಾಡದಿದ್ದರೂ ಬಿಡದೆ ಶಿಕ್ಷಿಸುತ್ತೇನೆ.

**ನಾನು** :– ಆ ಕೆಲಸವನ್ನು ಮನುಷ್ಯರು ಸಹ ಮಾಡುತ್ತಿದ್ದಾರೆ. ನೀನು ದೇವರೆಂದು ಹೇಳಿಕೊಳ್ಳುತ್ತಿದ್ದೀಯ, ನಿನಗು ಮನುಷ್ಯರಿಗು ಏನು ವ್ಯತ್ಯಾಸವಿದೆ?

**ಭೈರವ** :– ನನ್ನನ್ನು ಮನುಷ್ಯರೊಂದಿಗೆ ಹೋಲಿಸುತ್ತೀಯ? ನನ್ನನ್ನು ಏನೆಂದುಕೊಂಡಿದ್ದೀಯ?

**ನಾನು** :– ನಿನ್ನನ್ನು ಮನುಷ್ಯರೊಂದಿಗು ಸಹ ಹೋಲಿಸಬಾರದು. ಏಕೆಂದರೆ ಮನುಷ್ಯರು ತಿಳಿಯದೇ ತಪ್ಪು ಮಾಡಿದವನನ್ನು ಶಿಕ್ಷಿಸುವುದಿಲ್ಲ. ಹೀಗೆ ಮಾಡಿದರೆ ತಪ್ಪು ಎಂದು ಹೇಳುತ್ತಾರೆ, ನೀವು ಒಡೆದಹಾಗೆ ಒಡೆಯುವುದಾಗಲಿ, ಕಾಲು, ಕೈಗಳು ಇಲ್ಲದಂತೆ ಮಾಡುವುದಾಗಲಿ ಮಾಡುವುದಿಲ್ಲ.

**ಭೈರವ** :– ನಾನು ಮನುಷ್ಯರು ಪೂಜಿಸುವ ದೇವರೆಂದು, ನನಗೆ ಶಕ್ತಿಗಳಿವೆಯೆಂದು, ಭಯವಿಲ್ಲದೆ ಮಾತನಾಡುತ್ತಿದ್ದೀಯ.

**ನಾನು** :– ನಾನು ಪದ್ಧತಿಯಿಂದ ಮಾತನಾಡುವವನಾದ್ದರಿಂದ ಇಷ್ಟೊತ್ತು ನಿನಗೆ ಮರ್ಯಾದೆ ಕೊಟ್ಟು ಮಾತನಾಡಿದೆನು. ಆದರೂ ನೀನು ನಿನ್ನ ಮರ್ಯಾದೆಯನ್ನು ಉಳಿಸಿಕೊಳ್ಳದೆ ನಾನು ದೇವರು, ನನ್ನನ್ನು ಎಲ್ಲರು ಪೂಜಿಸುತ್ತಾರೆ, ನನಗೆ ಶಕ್ತಿಗಳಿವೆ ಎನ್ನುತ್ತೀಯ. ಯಾವನೊ ನಿನ್ನನ್ನು ದೇವರಂದಿದ್ದು? ಯಾವ ಜ್ಞಾನ ತಿಳಿಯದ ಪ್ರಜೆಗಳು ಅಮಾಯಕರಾಗಿ ಪೂಜಿಸಿದರೆ, ನೀನು ನಾನೊಬ್ಬ ದೇವರು ಅಂದುಕೊಂಡಿದ್ದೀಯ. ನನಗೆ ಶಕ್ತಿಗಳಿವೆ ಎನ್ನುತ್ತೀಯ. ಆ ಮಾತುಗಳು ಯಾರ ಹತ್ತಿರ ಹೇಳಬೇಕೊ ತಿಳಿಯದ ಮೂರ್ಖನು ನೀನು. ನಾನು ಯಾರೊ ನಿನಗೆ ತಿಳಿಯದೆ ಮಾತನಾಡುತ್ತಿದ್ದೀಯ. ನಿನಗೆ ಶಕ್ತಿಗಳಿದ್ದರೆ ಪ್ರಜೆಗಳಿಗೆ ಒಳ್ಳೆಯದನ್ನು ಮಾಡು. ಕೆಡಕು ಮಾಡುವುದಾ ನಿನ್ನ ಕೆಲಸ? ಹೊತ್ತಿಗೆ ಸರಿಯಾಗಿ ಕೂಳು ಇಲ್ಲದ ವ್ಯಕ್ತಿ ಮೇಲೆ ನಿನ್ನ ಪ್ರತಾಪ ತೋರಿಸುತ್ತೀಯ? ನಿನ್ನನ್ನು ದೇವರೆಂದು ಅಂದವನನ್ನು ಮೊದಲು ಒಡೆಯಬೇಕು. ನಂತರ ನಿನ್ನನ್ನು ಒಡೆಯಬೇಕು, ಹಾಗಾದರಾಗಲಿ ನಿಮ್ಮಂತವರಿಗೆ ನಾಚಿಕೆ ಆಗುವುದಿಲ್ಲ. ಕೋಳಿಗಳು, ಮೇಕೆಗಳಿಗಾಗಿ ಪ್ರಜೆಗಳಿಗೆ ಕೆಲಸ ಮಾಡಿಕೊಡುವ ನೀನು ದೇವರಾ? ಎದುರಿಗಿರುವ ಮನುಷ್ಯ ಎಷ್ಟು ಮಹತ್ವ ಇರುವವನೆಂದು ತಿಳಿಯದೆ ಗರ್ವ, ಅಹಂಕಾರ ಎರಡು ಮೇಳೈಸಿ ಮಾತನಾಡುವ ನೀನಾ ದೇವರು? ತಿಳಿಯದೆ ಮಾಡಿರುವ ಕೆಲಸವನ್ನು ತಪ್ಪಾಗಿ ಹಿಡಿದುಕೊಂಡು, ಇಷ್ಟು ದೂರ ಬಂದು ಒಬ್ಬ ಮನುಷ್ಯನ ಕಾಲು, ಕೈಗಳನ್ನು ಕಳೆದ ನೀನು ದೇವರಾ? ರಾತ್ರಿ ಹೊತ್ತು ರಾಕ್ಷಸತ್ವದಿಂದ ಕಪ್ಪು ಕೋಳಿಗಳು, ಕಪ್ಪು ಮೇಕೆಗಳ

ಮಾಂಸವನ್ನು ತಿನ್ನುವ ನೀನು ದೇವರಾ? ಸ್ವಲ್ಪವಾದರೂ ದೈವಜ್ಞಾನ ಇಲ್ಲದೆ ಅಜ್ಞಾನದಿಂದ ಮಾತನಾಡುವ ನೀನು ದೇವರಾ? ಪ್ರಜೆಗಳಿಗೆ ಭಯವಿಟ್ಟು ಅವರಿಂದ ಪೂಜೆಗಳನ್ನು ಮಾಡಿಸಿಕೊಳ್ಳುವ ನೀನು ದೇವರಾ?

ದೇವರ್‍ಯಾರೊ ಗೊತ್ತಾ? ನಿನ್ನನ್ನು ಹುಟ್ಟಿಸಿದವನು ದೇವರು. ಅಸಲಾದ ದೇವರನ್ನು ಮರೆತು, ನಾನು ಒಬ್ಬ ದೇವರೆಂದು ಅನ್ನುತ್ತೀಯೆಂದರೆ ನೀನು ಅಜ್ಞಾನಿಗಳಲ್ಲಿ ದೊಡ್ಡ ಅಜ್ಞಾನಿಯೆಂದು ತಿಳಿಯುತ್ತಿದೆ. ಇಲ್ಲಿಗೇ ನೀನು ಬಹಳ ಪಾಪ ಮಾಡಿಕೊಂಡಿದ್ದೀಯ. ಆದ್ದರಿಂದ ಈಗಲಾದರೂ ಬುದ್ಧಿ ತಂದುಕೊಂಡು, ಮಾಡಿದ ತಪ್ಪಿಗೆ ಪಶ್ಚಾತ್ತಾಪ ಪಟ್ಟು, ಈತನನ್ನು (ಲಿಂಗಣ್ಣನನ್ನು) ಬಿಟ್ಟು ಹೋಗು. ಇದಕ್ಕಿಂತ ಹೆಚ್ಚಿಗೆ ಹೇಳುವುದಿಲ್ಲ.

**ಭೈರವ** :- ನನ್ನನ್ನು ಇಲ್ಲಿಯವರೆಗು ಹೀಗೆ ಯಾರೂ ಮಾತನಾಡಲಿಲ್ಲ. 80 ವರ್ಷಗಳ ವಯಸ್ಸಿನ ಮುದುಕರು ಸಹ ನನಗೆ ನಮಸ್ಕರಿಸುತ್ತಾರೆ. ನೀನು ನೋಡಿದರೆ 25 ವರ್ಷಗಳ ಹುಡುಗನು ನಿನ್ನ ಇಷ್ಟ ಬಂದಹಾಗೆ ಮಾತನಾಡುತ್ತೀಯಾ? ನಾನು ಅಂದುಕೊಂಡರೆ ......

**ನಾನು** :- ಏಯ್! ಬಾಯಿ ಮುಚ್ಚಿಕೊ! ಇಷ್ಟು ಹೊತ್ತು ಹೇಳಿರುವುದೆಲ್ಲಾ ಕಿವುಡನ ಮುಂದೆ ಶಂಕು ಊದಿದಂತಿದೆ. ಮುದುಕರು ನಿನ್ನನ್ನು ಮುಗಿದರೆ ನಾನು ಸಹ ನಿನಗೆ ಮುಗಿಯಬೇಕಾ? ನಿನ್ನ ಯೋಗ್ಯತೆ ಏನೊ ನಿನಗೆ ಗೊತ್ತಾ? ಸರಿ ನೀನು ಅಂದುಕೊಂಡರೆ ಏನು ಮಾಡಬಹುದು ಹೇಳು?

**ಭೈರವ** :- ಈಗ ಹೇಳುವುದಿಲ್ಲ, ರಾತ್ರಿಗೆ ನೋಡಿಕೊ ನಿನಗೇನಾಗುತ್ತದೊ? ಬೆಳಗಾಗುವಷ್ಟರಲ್ಲಿ ನೀನೇನಾಗುತ್ತೀಯಾ ನೋಡಿಕೊ! (ಆ ಮಾತಿಗೆ ನನಗೆ ನಗು ಬಂದು ನಕ್ಕಿದೆನು) ನಕ್ಕ ನಂತರ ಭೈರವನಿಗೆ ಹೀಗೆ ಹೇಳಿದೆನು. "ರಾತ್ರಿಗೆ ನನಗೆ ಏನಾಗುತ್ತದೊ, ನೀನು ಏನು ಮಾಡುತ್ತೀಯೊ ಅದು ನಂತರ ನಡೆಯುವ ವಿಷಯ. ಆದರೆ ಈಗ ಇಷ್ಟು ಜನರ ಮುಂದೆ ಹೇಳುತ್ತಿದ್ದೇನೆ. ನೀನು ದೊಡ್ಡ ದೇವರೆ ಆದರೆ, ನೀನು ಭೈರವನೇ ಆದರೆ, ನಿನಗೆ ಗಂಡಸುತನವಿದ್ದರೆ, ನಿನಗೆ

ಕೈಲಾದರೆ, ನಿನಗೆ ಶಕ್ತಿಯಿದ್ದರೆ ನನ್ನ ಕಣ್ಣಿನೊಳಗೆ ನೋಡು" ಎಂದೆನು. ಅಲ್ಲಿರುವ ಅಷ್ಟು ಜನರ ಮುಂದೆ ಆ ಮಾತು ಅಂದಿದ್ದಕ್ಕೆ ಬರಿಸಲಾರದ ಕೋಪದಿಂದ ತೂಗುತ್ತ ನನ್ನ ಕಡೆ ತೀಕ್ಷಣವಾಗಿ ನೋಡಿದನು. ತಕ್ಷಣವೆ ತಲೆ ಬಗ್ಗಿಸಿಕೊಂಡನು. ಕೈಲಾಗದವನ ಹಾಗೆ ಏನು ಮಾತನಾಡಲಿಲ್ಲ. ಆಗ ನಾನು ಈ ವಿಧವಾಗಿ ಹೇಳಿದೆನು. "ಈಗ ನಾನು ಹೇಳುತ್ತಿದ್ದೇನೆ ಕೇಳು. ನೀನು ರಾತ್ರಿಗೆ ನನ್ನನ್ನು ಏನೊ ಮಾಡುತ್ತೇನೆಂದಿದ್ದೀಯ. ಆದರೆ ನಿನಗೆ ಹತ್ತು ನಿಮಿಷಗಳು ಮಾತ್ರವೆ ಅವಧಿಕೊಡುತ್ತೇನೆ. ಹತ್ತು ನಿಮಿಷಗಳೊಳಗೆ ನೀನು ಈತನನ್ನು ಬಿಟ್ಟು ಹೋಗದೆ ಹೋದರೆ, ನಿನಗೆ ಕಾಲುಗಳು, ಕೈಗಳು ಕೆಲಸ ಮಾಡುವುದಿಲ್ಲ. ಈಗ ಲಿಂಗಣ್ಣನಿಗೆ ಆದಹಾಗೆ ನಿನಗು ಆಗುತ್ತದೆ. ಹತ್ತು ನಿಮಿಷಗಳ ಒಳಗೆ ಇಲ್ಲಿಂದ ಕ್ಷೇಮವಾಗಿ ಹೋಗುತ್ತೀಯಾ, ಇಲ್ಲದೆ ಕುಂಟನಾಗಿ ಇಲ್ಲೆ ಬಿದ್ದು ಹೋಗುತ್ತೀಯೊ ನೀನೆ ನಿರ್ಣಯಿಸಿಕೊ" ಎಂದು ಭೈರವನಿಗೆ ಹೇಳಿ, ಅಲ್ಲಿರುವವರೊಂದಿಗೆ "ಲಿಂಗಣ್ಣನನ್ನು ಮನೆಗೆ ತೆಗೆದುಕೊಂಡು ಹೋಗಿ. ಹತ್ತು ನಿಮಿಷಗಳ ನಂತರ ಚೆನ್ನಾಗಿ ಆಗಲಿಲ್ಲವೆಂದರೆ ಬಂದು ನನಗೆ ಹೇಳಿರಿ" ಎಂದು ಹೇಳಿ ಕಳುಹಿಸಿದೆವು. ಹತ್ತು ನಿಮಿಷಗಳ ನಂತರ ಲಿಂಗಣ್ಣನ ಹೆಂಡತಿ ಬಂದು ಇಲ್ಲಿಂದ ಹೋದ ನಂತರ ಎರಡು ನಿಮಿಷಗಳಿಗೆ ಲಿಂಗಣ್ಣನ ಕಾಲು, ಕೈಗಳು ಚೆನ್ನಾಗಿ ಆಗಿರುವುದಾಗಿ ಹೇಳಿದಳು.

ಇದೆಲ್ಲಾ ಓದಿದ ನಂತರ ಇದು ನಂಬುವ ವಿಷಯವೇನಾ ಎಂದು ಕೆಲವರಿಗೆ ಅನುಮಾನ ಬರಬಹುದು. ನೀವು ನಂಬಿದರೂ, ನಂಬದೆ ಹೋದರೂ ಯಥಾರ್ಥವಾಗಿ ನಡೆದ ವಿಷಯವನ್ನೇ ಹೇಳಿದ್ದೇವೆ. ಬಹಳಕಡೆ ಪ್ರಜೆಗಳನ್ನು ಇಕ್ಕಟ್ಟಿನಲ್ಲಿಡುವ ಇಂತಹ ದೇವತೆಯರಿದ್ದಾರೆಂದು ಕೆಲವರು ಹೇಳುತ್ತಿದ್ದರೆ ಕೇಳಿದ್ದೇವೆ. ನೊಸ್ಸನ ಕೋಟೆ ಸುಂಕಲಮ್ಮ ಎನ್ನುವ ದೇವತೆ ಗುಡಿಹತ್ತಿರ ರಾತ್ರಿಹೊತ್ತು ಯಾರೂ ಇರಬಾರದಂತೆ. ಅನಂತಪುರ ಜಿಲ್ಲೆಯಲ್ಲಿ ರಾಮಗಿರಿಗೆ ಹತ್ತಿರದಲ್ಲಿರುವ ನೊಸ್ಸನ ಕೋಟೆ ಎಂಬ ಊರಿನ ಹೊರಗೆ ಸುಂಕಲಮ್ಮ ದೇವಾಲಯವಿದೆ. ಅಲ್ಲಿ ತಿಳಿಯದೆ ಮಲಗಿಕೊಂಡವರು ಸತ್ತು ಹೋಗಿದ್ದಾರೆ. ಏನು ನಡೆಯುತ್ತದೊ ನೋಡೋಣ ಎಂದು ತಿಳಿದು ಹೋದವರು

ಬೆಳಗಾಗುವುದರೊಳಗೆ ಸತ್ತುಹೋಗಿದ್ದಾರೆ. ರಾತ್ರಿ ಹೊತ್ತು ಆ ದೇವತೆ ಹತ್ತಿರಕ್ಕೆ ಯಾರು ಹೋಗುತ್ತಿರಲಿಲ್ಲವಂತೆ. ಇಂತವುಗಳೆ ಮತ್ತೆ ಕೆಲವು ಇವೆ. ನಾವು ಈ ವಿಷಯಗಳನ್ನು ನಂಬುವುದಿಲ್ಲ ಎನ್ನುವವರಿದ್ದರು, ಲಿಂಗಣ್ಣನನ್ನು ಬಾಧಿಸಿದ ಭೈರವ ನಂತವರು ಎಷ್ಟೋ ಇದ್ದಾರೆ. ನಾವು ನಂಬುವುದಿಲ್ಲ ಎನ್ನುವವರು ದೆವ್ವಗಳು ಇಲ್ಲ, ಮನುಷ್ಯನ ಕಲ್ಪನೆಗಳೆ ದೆವ್ವಗಳು ಎಂದು ಮಾತನಾಡುವವರು, ಪ್ರತ್ಯಕ್ಷವಾಗಿ ನಡೆದ ಸಂಘಟನೆಗಳನ್ನು ಪರಿಶೀಲಿಸಿ ಸತ್ಯವನ್ನು ಹೇಳಬಹುದಲ್ಲ! ಲಿಂಗಣ್ಣ ಆ ರಾತ್ರಿ ಏಟುಗಳು ತಿಂದಿರುವುದು ಸುಳ್ಳಾ? ಬೆಳಗ್ಗೆ ಕಾಲು, ಕೈಗಳು ಬಿದ್ದುಹೋಗಿರುವುದು ಸುಳ್ಳಾ? ಹೇಳಿದ ನಂತರ ಹತ್ತು ನಿಮಿಷಗಳಿಗೆ ರೋಗವೆಲ್ಲ ಗುಣವಾಗಿರುವುದು ಸುಳ್ಳಾ? ನಮ್ಮ ಅನುಭವದಲ್ಲಿ ಎಲ್ಲ ನಿಜವೆ. ನಾನು ಭೂತವೈದ್ಯವನ್ನು ಮಾಡುವವನಾದರೆ, ನನ್ನ ಪ್ರಚಾರಕ್ಕಾಗಿ ಇಲ್ಲದಿರುವವು ಗಳೆಲ್ಲವನ್ನು ಹೇಳಬಹುದು. ಆದರೆ ನಾನು ಅಂತಹ ವೈದ್ಯನು ಅಲ್ಲ. ಇಲ್ಲಿಗೆ 35 ವರ್ಷಗಳ ಕೆಳಗೆ, ನಾನು ದೆವ್ವಗಳ ಮೇಲೆ, ದೇವತೆಗಳ ಮೇಲೆ ಮಾಡಿದ ಪರಿಶೋಧನೆಯಲ್ಲಿ, ನನಗೆ ಎದುರಾದವುಗಳನ್ನು ಕುರಿತು ಈ ದಿನ ಹೇಳುತ್ತಿದ್ದೇನೆ. ನನಗೆ ಈಗ 60 ವರ್ಷ ವಯಸ್ಸು ದಾಟಿ 61 ರಲ್ಲಿ ನಡೆಯುತ್ತಿದೆ. ನನ್ನ ವೃತ್ತಿ, ಉದ್ದೇಶ ಎಲ್ಲ ದೈವಜ್ಞಾನವನ್ನು ಕುರಿತೆ ಇರುತ್ತದೆ. ಆದರೂ ನನಗೆ ತಿಳಿದ ಸತ್ಯವನ್ನು ಹೇಳದೆ ಹೋದರೆ, ನನ್ನ ಪರಿಶೋಧನೆಯಲ್ಲಿ ನಾನು ಕಂಡುಕೊಂಡ ರಹಸ್ಯಗಳೆಲ್ಲ ನನ್ನೊಂದಿಗೆ ಅಂತ್ಯವಾಗಿ ಹೋಗುತ್ತವೆ. ಹಾಗಾಗದೆ ಗ್ರಂಥರೂಪದಲ್ಲಿ ನನ್ನ ಅನುಭವಗಳನ್ನು ಉಳಿಸಿದರೆ, ಎಂದಿಗಾದರೂ ಸತ್ಯ ಬದುಕಿರುತ್ತದೆನ್ನುವ ಉದ್ದೇಶದಿಂದ ಈ ವಿಷಯಗಳನ್ನು ಹೇಳುತ್ತಿದ್ದೇವೆ. ಅಷ್ಟೇ ಹೊರತು ನನ್ನ ಉದ್ದೇಶಗಳನ್ನು ಬಲವಂತವಾಗಿ ಇತರರ ಮೇಲೆ ಹಾಕಿ ನಂಬಬೇಕೆಂದು ಹೇಳುವುದಾಗಲಿ ಇಲ್ಲ. ಇಲ್ಲಿ ಕೆಲವರು ಪ್ರಶ್ನೆ ಕೇಳುವುದಕ್ಕೆ ಅವಕಾಶವಿದೆ. ಅದೇನೆಂದರೆ! ಭೈರವನನ್ನು ನೀವು ನೋಡು ಎಂದಾಗ ಆತನು ನಿಮ್ಮ ಕಡೆ ನೋಡುತ್ತಲೆ ತಕ್ಷಣವೆ ತಲೆ ಬಗ್ಗಿಸಿಕೊಂಡನು, ಏನು ಮಾತನಾಡಲಿಲ್ಲ ಎಂದಿದ್ದೀರಲ್ಲ! ಆಗ ಭೈರವನಿಗೆ ಏನಾಗಿದೆ? ನಿಮ್ಮ ದೊಡ್ಡತನ ತೋರಿಸಿ ಕೊಳ್ಳುವುದಕ್ಕೆ ಹಾಗೆ ಬರೆದಿದ್ದೀರ? ಎಂದು ಕೇಳಬಹುದು. ಅದಕ್ಕೆ ನನ್ನ

ಉತ್ತರ ಏನೆಂದರೆ! ಅಲ್ಲಿ ಸಂದರ್ಭಾನುಸಾರ ನಡೆದ ವಿಷಯ ಹೇಳದೆ ತಪ್ಪುವುದಿಲ್ಲ. ಭೈರವನು ತಲೆ ಬಗ್ಗಿಸಿಕೊಂಡನು, ಎಂದು ಅಲ್ಲಿ ಎಲ್ಲರಿಗು ಕಾಣಿಸಿರುವುದು ಹೇಳಿದ್ದೇನೆ ಹೊರತು, ಭೈರವನಿಗೆ ಏನು ಕಾಣಿಸಿದೆಯೊ, ಅದನ್ನು ಕುರಿತು ಹೇಳಲಿಲ್ಲವಲ್ಲ! ಹಾಗಿರುವಾಗ ನನ್ನ ಮಹತ್ವವನ್ನು ಕುರಿತು ನಾನು ಹೇಳದಹಾಗೆ ಅಲ್ಲವೆ! ಭೈರವನಿಗೆ ಏನು ಕಾಣಿಸಿದೆಯೊ, ಈಗಲೂ ಸಹ ಹೇಳಲಿಲ್ಲ. ಆದ್ದರಿಂದ ನನ್ನನ್ನು ಕುರಿತು ನೀವು ಆಲೋಚಿಸದೆ, ನಡೆದ ಸಂಘಟನೆಯಲ್ಲಿನ ಸತ್ಯವನ್ನು ತಿಳಿದುಕೊಳ್ಳಿರೆಂದು ಹೇಳುತ್ತಿದ್ದೇನೆ.

ಇಲ್ಲಿಯವರೆಗು ಒಬ್ಬ ಗಂಡು ದೇವತೆಯನ್ನು ಕುರಿತಾದ ವಿಷಯ ತಿಳಿದುಕೊಂಡಿದ್ದೇವೆ. ಈಗ ವಿವರಿಸುವ ವಿಷಯ ಒಬ್ಬ ಹೆಣ್ಣು ದೇವತೆಯದು. ಮಾಂತ್ರಿಕರು ಆರಾಧಿಸುವ ಹೆಣ್ಣು ದೇವತೆಗಳಲ್ಲಿ ದೊಡ್ಡ ಶಕ್ತಿ ಇರುವ ದೇವತೆಗಳು ಕಾಳಿ, ಭಗಳಾಮುಖಿ, ಕಾಟೇರಿ ಮೊದಲಾದವರು ಇದ್ದಾರೆ. ಅಂತವರಲ್ಲಿ ಭಗಳಾಮುಖಿಯನ್ನು ಒಬ್ಬ ವ್ಯಕ್ತಿ ದೊಡ್ಡದಾಗಿ ಪೂಜಿಸಿ, ಆಕೆಯನ್ನು ವಶೀಕರಣ ಮಾಡಿಕೊಂಡು, ಆಕೆ ಮುಖಾಂತರ ದೊಡ್ಡ ಮಾಂತ್ರಿಕನಾಗಿ ಚಲಾವಣೆ ಆಗುತ್ತಿದ್ದನು. ಪುಟ್ಟಪರ್ತಿಗೆ ಸೇರಿದ ಗೌತಮರಾಜು ಎನ್ನುವ ವ್ಯಕ್ತಿ, ಮಂತ್ರ ವಿದ್ಯೆಯಲ್ಲಿ ಸ್ವಲ್ಪ ತಿಳಿದವನಾಗಿ, ಕೊನೆಗೆ ಭಗಳಾಮುಖಿ ಎನ್ನುವ ಕ್ಷುದ್ರ ದೇವತೆಯನ್ನು ಉಪಾಸಿಸಿ ತನ್ನ ವಶಮಾಡಿಕೊಂಡಿದ್ದನು. ಮಂಡು ದೆವ್ವಗಳನ್ನು ಸಹಿತ ಬಿಡಿಸುತ್ತೇನೆಂದು, ಆದರೆ ತನ್ನ ಫೀಜು ಮಾತ್ರ ಹೆಚ್ಚಾಗಿರುತ್ತದೆಂದು ಪ್ರಚಾರ ಮಾಡಿಕೊಂಡಿದ್ದನು. ಯಾರಾದರು ದೆವ್ವವನ್ನು ಬಿಡಿಸೆಂದು ತನ್ನ ಹತ್ತಿರಕ್ಕೆ ಬಂದರೆ, 35 ವರ್ಷಗಳ ಕೆಳಗೆ 1,108 ರೂಪಾಯಿಗಳನ್ನು ತನ್ನ ಪಾರಿತೋಷಕವಾಗಿ ತೆಗೆದುಕೊಳ್ಳುತ್ತಿದ್ದನು. ಈಗಿನ ಕಾಲದಲ್ಲಿ ಅದರ ಬೆಲೆ 10,000 ರೂಪಾಯಿಗಳವರೆಗು ಇರುತ್ತದೆ. ಎಷ್ಟು ಹಣ ಹೆಚ್ಚಾಗಿ ತೆಗೆದುಕೊಂಡರೆ, ಅಷ್ಟು ದೊಡ್ಡ ವೈದ್ಯನೆಂದು ಮನುಷ್ಯರು ಅಂದುಕೊಳ್ಳುತ್ತಾರೆ. ಆದ್ದರಿಂದ ಪ್ರತಿದಿನ ಆತನ ಹತ್ತಿರಕ್ಕೆ ಒಂದು, ಎರಡು ದೆವ್ವಗಳ ಕೇಸುಗಳು ಬರುತ್ತಿದ್ದವು. ಹಣ ಚೆನ್ನಾಗಿ ಸಂಪಾಧಿಸಿಕೊಂಡಿದ್ದನು. ಆತನ ವಯಸ್ಸು 80 ವರ್ಷಗಳು ದಾಟಿವೆ.

ತನ್ನ ವಿದ್ಯೆ ತನ್ನೊಂದಿಗೆ ಹೋಗಬಾರದೆಂದು ತನ್ನ ಮೊಮ್ಮಗಳಾದ ಮುತ್ಯಾಲಮ್ಮನಿಗೆ, ಭಗಳಾಮುಖಿಯನ್ನು ವಶ ಮಾಡಿಕೊಳ್ಳುವ ವಿಧಾನವನ್ನು ಸಹ ಕಲಿಸಿ, ತನ್ನ ಹಾಗೆ ದೊಡ್ಡ ಮಾಂತ್ರಿಕಳನ್ನಾಗಿ ಮುತ್ಯಾಲಮ್ಮನನ್ನು ತಯಾರು ಮಾಡಿದನು.

ಗೌತಮರಾಜು ಹತ್ತಿರಕ್ಕೆ, ಯಾರಾದರೂ ಎಲ್ಲಿಯು ಹೋಗದ ಮಂಡು ದೆವ್ವವನ್ನು ಕರೆದುಕೊಂಡು ಬಂದರೂ ಅದನ್ನು ಬಿಡಿಸಿ ಕಳುಹಿಸುತ್ತಿದ್ದನು. ದೆವ್ವವನ್ನು ಬಿಡಿಸುವ ಸಮಯದಲ್ಲಿ ಮೊದಲು ಭಗಳಾಮುಖಿ ಪೂಜೆ ಇಟ್ಟು, ಆ ದೇವತೆಯನ್ನು ಅಲ್ಲಿಗೆ ಕರೆಸಿ ದೆವ್ವವನ್ನು ಬಿಡಿಸಬೇಕೆಂದು ಆದೇಶಿಸುತ್ತಿದ್ದನು. ಆಗ ಗೌತಮರಾಜುವಿನ ಆದೇಶದ ಪ್ರಕಾರ ಭಗಳಾಮುಖಿ ಆ ದೆವ್ವವನ್ನು ಓಡಿಸುತ್ತಿದ್ದಳು. ಎಂತಹ ದೆವ್ವವಾದರೂ ಭಗಳಾಮುಖಿಯನ್ನು ನೋಡುತ್ತಿದ್ದ ಹಾಗೆ ಭಯಪಟ್ಟು ನಡುಗುತ್ತಾ ಇಡಿದ ಮನುಷ್ಯನನ್ನು ಬಿಟ್ಟು ಹೋಗುತ್ತಿತ್ತು. ಭಗಳಾಮುಖಿ ದೊಡ್ಡ ಶಕ್ತಿಯಿರುವ ದೇವತೆಯಾಗಿರುವುದರಿಂದ ಯಾವ ದೆವ್ವವಾದರೂ ಆಕೆಯನ್ನು ನೋಡುತ್ತಿದ್ದ ಹಾಗೆ ಹೇಳಿದಹಾಗೆ ಕೇಳಿ ಓಡಿಹೋಗುತ್ತಿದ್ದವು. ಮತ್ತೆ ಬರುತ್ತಿರಲಿಲ್ಲ, ಆ ಕೆಲಸ ಮಾಡಿರುವುದಕ್ಕೆ ಗೌತಮ ರಾಜು 1108 ರೂಪಾಯಿಗಳ ಹಣವನ್ನು ತೆಗೆದುಕೊಳ್ಳುವುದೆ ಅಲ್ಲದೆ ಆ ದಿನ ಭಗಳಾಮುಖಿ ಪೂಜೆಗೋಸ್ಕರ 11 ತೆಂಗಿನಕಾಯಿಗಳು, 11 ಕರ್ಜೂರಗಳು, 11 ಒಣಕೊಬ್ಬರಿ ಚಿಪ್ಪುಗಳು, 11 ನಿಂಬೆಕಾಯಿಗಳು, 11 ತಾಂಬೂಲಗಳು ಎಲ್ಲ ಬಂದವರಿಂದಲೆ ತರಿಸುತ್ತಾನೆ. ಅದರ ಖರ್ಚು ಸಹ ಬಂದವರ ಮೇಲೆ ಬೀಳುತ್ತಿತ್ತು. ಇದೆಲ್ಲಾ ಒಳ್ಳೆ ಆದಾಯವಿರುವ ಕೆಲಸ. ಹಣ ಹೋದರೂ, ಗ್ಯಾರಂಟಿಯಾಗಿ ಕೆಲಸ ಆಗುತ್ತದೆಂದು, ದೆವ್ವಗಳ ಕಾಟವಿರುವ ಪ್ರಜೆಗಳು ಬಹಳ ಜನ ಗೌತಮರಾಜುವಿನ ಹತ್ತಿರಕ್ಕೆ ಬರುತ್ತಿದ್ದರು.

ಗೌತಮರಾಜನ ಮೊಮ್ಮಗಳು ಮುತ್ಯಾಲಮ್ಮನ ಗಂಡ, ರೈಲ್ವೆ ಶಾಖೆಯಲ್ಲಿ ಚಿಕ್ಕ ಉದ್ಯೋಗಿ. ಸಾಕು ಸಾಕಾಗದ ಸಂಬಳದೊಂದಿಗೆ ಕಷ್ಟ ಪಡುತ್ತಿದ್ದರು. ಗೌತಮರಾಜು ಪುಟ್ಟಪರ್ತಿಯಿಂದ ಬಂದು, ತಾಡಿಪತ್ರಿಯಲ್ಲಿ ಮೊಮ್ಮಗಳ

ಮನೆಯಲ್ಲಿ ಮೂರು ತಿಂಗಳಿದ್ದು ಹಣ ಸಂಪಾದಿಸುವುದನ್ನು ನೋಡಿ, ಆ ವಿದ್ಯೆಯನ್ನು ಮುತ್ಯಾಲಮ್ಮ ಸಹ ಕಲಿತುಕೊಂಡು ದೆವ್ವಗಳನ್ನು ಬಿಡಿಸುವುದರಲ್ಲಿ ತರಬೇತಿ ಹೊಂದಿದಳು. ನಂತರ ಗೌತಮರಾಜು ಆರೋಗ್ಯ ಸರಿಯಿಲ್ಲದೆ ಪುಟ್ಟಪರ್ತಿಗೆ ಹೋಗಿ ಸತ್ತುಹೋದನು. ಕ್ಷುದ್ರ ದೇವತೆಗಳನ್ನು ವಶ ಮಾಡಿಕೊಂಡರೆ, ಅವು ತಮ್ಮ ಆಜ್ಞೆ ಪ್ರಕಾರ ಕೆಲಸ ಮಾಡಬೇಕೆಂದರೆ, ಅವುಗಳನ್ನು ಆಗಾಗ ಆರಾಧಿಸುತ್ತಿರಬೇಕು, ಅಷ್ಟೇ ಅಲ್ಲದೆ ಕೆಲವು ನಿಯಮಗಳು ಪಾಲಿಸಬೇಕು, ಉದಾಹರಣೆಗೆ ನೀರು ಹರಿಯುತ್ತಿರುವ ಕಾಲುವೆಯನ್ನು ಒಂದು ಹೆಜ್ಜೆಯಿಂದ ದಾಟಬಾರದು. ಕಾಲುವೆಯಲ್ಲಿ ಹೆಜ್ಜೆ ಇಟ್ಟು ಹೋದರೂ ಪರವಾಗಿಲ್ಲ ಆದರೆ ದಾಟಬಾರದು. ಹಾಗೆ ಅಮಾವಾಸ್ಯೆ, ಹುಣ್ಣಿಮೆ ದಿನಗಳಲ್ಲಿ ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳಬಾರದು. ಯಾವಾಗಲಾದರೂ ಅನ್ನ ತಿನ್ನುವ ಸಮಯದಲ್ಲಿ ಉಪ್ಪು ಎಂದು ಅನ್ನಬಾರದು. ಪಕ್ಕದಲ್ಲಿ ಯಾರಾದರೂ ಉಪ್ಪು ಎಂದು ಅಂದರೂ ಆಗ ಅನ್ನವನ್ನು ತಿನ್ನದೆ ಬಿಟ್ಟು ಆ ದಿನವೆಲ್ಲಾ ತಿನ್ನಬಾರದು. ಮೂಗನ ಕೈಯಿಂದ ಕೊಟ್ಟಿರುವ ನೀರನ್ನು ಕುಡಿಯಬಾರದು. ಸೂರ್ಯ, ಚಂದ್ರ ಗ್ರಹಣ ಸಮಯದಲ್ಲಿ ಮಂತ್ರ ಜಪ ಮಾಡುತ್ತಲೆ ಇರಬೇಕು. ಹೀಗೆ ಕೆಲವು ನಿಯಮಗಳಿರುತ್ತವೆ. ಈ ವಿಧವಾಗಿ, ಒಂದೊಂದು ದೇವತೆಗು ಒಂದೊಂದು ನಿಯಮವಿರುತ್ತದೆ. ಆ ನಿಯಮಗಳನ್ನು ಪಾಲಿಸದೆ ಹೋದರೆ ಆ ದೇವತೆ ಮಾಂತ್ರಿಕನ ವಶದಿಂದ ತಪ್ಪಿಸಿಕೊಂಡು ಹೋಗುತ್ತದೆ. ಹಾಗೆ ತಪ್ಪಿಸಿಕೊಂಡು ಹೋಗುವ ದೇವತೆಗಳು ಮತ್ತೆ ತಮ್ಮನ್ನು ಆ ಮಾಂತ್ರಿಕನು ವಶಮಾಡಿಕೊಳ್ಳದ ಹಾಗೆ, ಆತನನ್ನು ಸಾಯಿಸುವುದೊ ಇಲ್ಲವೆ ಅಂಗ ಲೋಪವನ್ನು ಮಾಡಿ ಹೋಗುವರು. ಮಂತ್ರಬಲದಿಂದ ತಮ್ಮನ್ನು ವಶಪಡಿಸಿಕೊಂಡು ತಮ್ಮಿಂದ ಕೆಲಸ ಮಾಡಿಸಿದ್ದಾನೆಂದು ಆ ದೇವತೆಗಳಿಗೆ ಕೋಪವಿರುತ್ತದೆ. ಆದ್ದರಿಂದ ಅವು ಮಂತ್ರಗಾರರ ವಶದಿಂದ ತಪ್ಪಿಸಿಕೊಂಡ ನಂತರ ಕೆಲವರನ್ನು ಸಾಯಿಸಿವೆ, ಕೆಲವರಿಗೆ ಕಾಲು, ಕೈಗಳು ಕೆಲಸ ಮಾಡದಹಾಗೆ ಮಾಡಿವೆ. ಕೆಲವರಿಗೆ ಬಾಯಲ್ಲಿ ಶಬ್ದ ಬಾರದಂತೆ ಮಾಡಿ, ಏನು ಮಾತಾಡದ ಹಾಗೆ ಮಾಡಿವೆ. ಏನು ಮಾತಾಡದ ಸ್ಥಿತಿಯನ್ನು ಕಲ್ಪಿಸಿವೆ. ಆದ್ದರಿಂದ

ಮಂತ್ರಗಾರರು ಅವರು ತೆಗೆದ ಗುಂಡಿಯಲ್ಲಿ ಅವರೆ ಬೀಳುತ್ತಾರೆಂದು ನಾನು ಬಹಳ ಸಾರಿ ಹೇಳಿದ್ದೇನೆ.

ಅಂತಹ ಪರಿಸ್ಥಿತಿ ಮುತ್ಯಾಲಮ್ಮನಿಗೆ ಎದುರಾಗಿದೆ. ಭಗಳಾಮುಖಿ ಎದುರು ತಿರುಗಿದೆ. ಸಮಯ ಸಿಕ್ಕರೆ ಸಾಯಿಸಬೇಕೆಂದು ನೋಡಿದಳು. ಒಂದು ದಿನ ಮಧ್ಯಾಹ್ನ ಒಂದು ಗಂಟೆ ಸಮಯದಲ್ಲಿ, ಭಗಳಾಮುಖಿ ಮುತ್ಯಾಲಮ್ಮನ ಕುತ್ತಿಗೆ ಹಿಡಿದುಕೊಂಡಿದ್ದಳು. ಆಗ ಮುತ್ಯಾಲಮ್ಮ ಜೋರಾಗಿ ಕಿರಚಿ ಬಿಡಿಸಿಕೊಳ್ಳಬೇಕೆಂದು ನೋಡಿದಳು. ಆಕೆಯ ಪರಿಸ್ಥಿತಿಯನ್ನು ನೋಡಿದ ಗಂಡ ಮತ್ತು ಸುತ್ತ ಮುತ್ತ ಮನೆಯವರು ಗುಂಪಾಗಿ ಸೇರಿದರು. ಸರಿಯಾಗಿ ಆ ಸಮಯದಲ್ಲಿಯೆ  ಅವರ ಮನೆ ಮುಂದೆ ದಾರಿಯಲ್ಲಿ ನಾನು ಬಂದೆನು. ಅಲ್ಲಿ ಗುಂಪು ಸೇರುತ್ತಿರುವುದನ್ನು ನೋಡಿ, ನಾನು ನಿಂತು ಆ ಮನೆಯೊಳಗೆ ನೋಡಿದೆನು. ಆಕೆ ಕೆಳಗೆ ಬಿದ್ದಿರುವಾಗ ಗಂಡ ಬೆನ್ನಿನ ಭಾಗವನ್ನು ಎತ್ತಿ ಹಿಡಿದುಕೊಂಡಿದ್ದನು. ಪಕ್ಕದವರು ಬೀಸಣಿಕೆಯಿಂದ ಬೀಸುತ್ತಿದ್ದರು. ಆಕೆಗೆ ಶ್ವಾಸ ಸರಿಯಾಗಿ ಆಡದೆ ಅವಸ್ಥೆ ಪಡುತ್ತಿದ್ದಾಳೆ. ಆಗ ಒಂದು ನಿಮಿಷ ಕಳೆದರೂ ಆಕೆಗೆ ಶ್ವಾಸ ನಿಂತುಹೋಗುತ್ತದೆಂದು ಹೊರಗೆ ಅರ್ಥವಾಗುತ್ತಿದೆ. ಮುತ್ಯಾಲಮ್ಮನಿಗೆ ನೀರು ಕುಡಿಸಬೇಕೆಂದು, ಪಕ್ಕದಲ್ಲಿ ಯಾರೊ ಲೋಟದಲ್ಲಿ ನೀರು ಇಡಿದುಕೊಂಡಿರುವುದನ್ನು ನೋಡಿ, ತಕ್ಷಣವೆ ಆ ಲೋಟವನ್ನು ನಾನು ತೆಗೆದುಕೊಂಡು ಅದರಲ್ಲಿನ ನೀರನ್ನು ಕೈಯಲ್ಲಿ ಹಾಕಿಕೊಂಡು, ಮುತ್ಯಾಲಮ್ಮನ ಮುಖದ ಮೇಲೆ ಹಾಕಿದೆನು. ತಕ್ಷಣವೆ ಆಕೆ ಶ್ವಾಸವನ್ನು ಸುಲಭವಾಗಿ ತೆಗೆದುಕೊಂಡಳು. ಅಪಸ್ಮಾರಕ ಸ್ಥಿತಿಯಿಂದ ಎಚ್ಚರಗೊಂಡಳು. ನೀರನ್ನು ಮುಖದ ಮೇಲೆ ಹಾಕುತ್ತಿದ್ದಹಾಗೆ, ಹುಲಿ ಪಂಜರದಲ್ಲಿ ಸಿಲುಕಿದ ಜಿಂಕೆ ಒಂದು ಬಾರಿ ಬಿಡಿಸಿಕೊಂಡಹಾಗೆ ಭಗಳಾಮುಖಿ ಹಿಡಿತದಿಂದ ಮುತ್ಯಾಲಮ್ಮ ಹೊರಬಿದ್ದಳು.

ಅಲ್ಲಿಯವರೆಗು ಆಕೆ ಮಾಂತ್ರಿಕಳೆಂದು ನನಗೆ ತಿಳಿಯದು. ನಾನು ನಿವಾಸವಿರುವ ಮನೆಗೆ  ಹತ್ತಿರದಲ್ಲಿಯೆ ಮುತ್ಯಾಲಮ್ಮನ ಮನೆಇದೆ. ಅವರ ಮನೆಗೆ ನನ್ನ ಮನೆಗೆ ಕೇವಲ 40 ಮೀಟರುಗಳ ದೂರವೆ ಇದೆ. ನನ್ನ

ಮನೆಯಿಂದ 30 ಮೀಟರುಗಳ ದೂರದಲ್ಲಿ ಬಲಗಡೆಗೆ ತಿರುವು ತಿರುಗಿದರೆ ಪಕ್ಕದಲ್ಲೆ ಹತ್ತು ಮೀಟರುಗಳ ದೂರದಲ್ಲಿ ಅವರ ಮನೆ ಇದೆ. ಮುತ್ಯಾಲಮ್ಮನ ತಾತನವರು ಮಂತ್ರಗಾರನೆಂದು, ಆತನು ದೆವ್ವಗಳನ್ನು ಬಿಡಿಸುವ ಕೆಲಸ ಮಾಡುವವನೆಂದು ತಿಳಿದಿದೆಯಾಗಲಿ, ಮುತ್ಯಾಲಮ್ಮ ಸಹ ಮಂತ್ರಗಾರಳೆಂಬ ವಿಷಯ ನನಗೆ ತಿಳಿದಿರಲಿಲ್ಲ. ಮುತ್ಯಾಲಮ್ಮ ಅಪಾಯಸ್ಥಿತಿಯಲ್ಲಿ ಇರುವಾಗ, ಅಂದುಕೊಳ್ಳದೆ ಕಾಕತಾಳೀಯವಾಗಿ ಅಲ್ಲಿಗೆ ಹೋಗಿ ನೀರನ್ನು ಚೆಲ್ಲಿದಾಗ ಆಕೆ ಚೇತರಿಸಿಕೊಂಡ ರೀತಿಯುನ್ನು ನೋಡಿದರೆ, ಅದು ಯಾವ ರೋಗವಲ್ಲವೆಂದು ಅರ್ಥವಾಯಿತು. ತಕ್ಷಣವೆ ಆ ವಿಷಯವನ್ನು ಆಕೆ ಗಂಡನಿಗೆ ಹೇಳಿದಾಗ! ಎಲ್ಲಾ ವಿಷಯವನ್ನೆಲ್ಲಾ ಸವಿವರವಾಗಿ ಹೇಳಿದನು. ಸ್ವಲ್ಪ ದಿನಗಳಿಂದ ಮುತ್ಯಾಲಮ್ಮನಿಗೆ ಏನೊ ವಿಕೃತಾಕಾರ ಕಾಣಿಸುತ್ತದೆಂದು, ಆಕೆ ಹೇಳಿದಹಾಗೆ ಹೇಳಿದನು. ಆಗ ಅದೆಲ್ಲಾ ಅವರು ಪೂಜಿಸುತ್ತಿರುವ ಭಗಳಾಮುಖಿ ಕೆಲಸವೆಯೆಂದು ನನಗೆ ಅರ್ಥವಾಯಿತು. ಅಷ್ಟೇ ಅಲ್ಲದೆ ಭಗಳಾಮುಖಿಯಿಂದ ಆಕೆಗೆ ಅಪಾಯ ತಪ್ಪಲ್ಲವೆಂದು ಸಹ ಅರ್ಥವಾಯಿತು. ತಕ್ಷಣವೆ ಮುತ್ಯಾಲಮ್ಮನಿಗೆ ಅಪಾಯ ತಪ್ಪುವುದಿಲ್ಲವೆಂದು ಆಕೆ ಗಂಡನಿಗೆ ಹೇಳಿದೆನು. ಅದನ್ನು ನಿವಾರಿಸಿಕೊಳ್ಳುವುದಕ್ಕೆ ನೀನು ತಕ್ಷಣವೆ ಯಾರಾದರೂ ಮಂತ್ರಗಾರರ ಹತ್ತಿರಕ್ಕೆ ಹೋಗಿ ಏನಾದರು ಶಾಂತಿ ಮಾಡಿಸಿಕೊಳ್ಳಿರೆಂದು ಹೇಳಿದೆನು.

ಮಂತ್ರಗಾರರನ್ನು ಹುಡುಕಿಕೊಳ್ಳುವುದಕ್ಕೆ, ಅಲ್ಲಿಗೆ ಹೋಗುವುದಕ್ಕೆ ಕನಿಷ್ಟ ಎರಡು ದಿನಗಳಾದರು ಹಿಡಿಯುತ್ತದೆ. ಅಷ್ಟರಲ್ಲಿಯೆ ಏನಾದರು ಅಪಾಯ ನಡೆದರೆ ಹೇಗೆ ಎಂದು, ಆತನು ನನ್ನನ್ನೇ ಏನೊ ಒಂದು ನಿವಾರಣೆ ಮಾಡಬೇಕೆಂದು ಕೇಳಿದನು. ಅದಕ್ಕೆ ನಾನು ಒಪ್ಪಿಕೊಳ್ಳಲಿಲ್ಲ. "ಮಂತ್ರಗಳು ಕಲಿತ ಮಾಂತ್ರಿಕರಿಗೆ ಕ್ಷುದ್ರ ದೇವತೆಗಳ ಶಾಂತಿ ವಿಧಾನ ಸಹ ತಿಳಿದಿರುತ್ತದೆ. ನೀವು ಆ ದೇವತೆಯನ್ನು ಶಾಂತಿ ಪಡಿಸಿಕೊಂಡರೇನೆ ಅದು ನಿಮ್ಮನ್ನು ಬಿಡುತ್ತದೆ." ಎಂದು ಹೇಳಿದೆನು. ಅದಕ್ಕೆ ಮುತ್ಯಾಲಮ್ಮನ ಗಂಡ ಬಾಧೆಪಡುತ್ತಾ, "ನಾವು ಮಾಂತ್ರಿಕರ ಹತ್ತಿರಕ್ಕೆ ಹೋಗುವವರೆಗು ಏನು ನಡೆಯದ ಹಾಗೆ ಏನೊ ಒಂದು ಉಪಾಯ ಹೇಳಿರಿ" ಎಂದು ಕೇಳಿದನು. ಆಗ ಆತನ ನೋವನ್ನು

ನೋಡಿ, ಆಕೆಗೆ ಅಪಾಯವಿದೆಯೆಂದು ನಾನೆ ಹೇಳಿದ್ದೇನೆ ಆದ್ದರಿಂದ, ಸರಿ! ನೀವು ಹೋಗುವವರೆಗು ಏನು ನಡೆಯದ ಹಾಗೆ ಒಂದು ರಕ್ಷಣೆಯನ್ನು ನಿಮಗೆ ಕೊಡುತ್ತೇನೆ. ಅದನ್ನು ಹತ್ತಿರವಿಟ್ಟುಕೊಳ್ಳುವವರೆಗು ಭಗಳಾಮುಖಿ ಮುತ್ಯಾಲಮ್ಮನ ಹತ್ತಿರಕ್ಕೆ ಬರುವುದಿಲ್ಲವೆಂದು ಹೇಳಿ, ಒಂದು ನಿಂಬೆಕಾಯನ್ನು ತೆಗೆದುಕೊಂಡು ಅದರ ಮೇಲೆ ಸೂಜಿಯಿಂದ 'ಓಂ' ಎಂದು ಬರೆದು ಕೊಟ್ಟೆನು. "ಇದು ನನ್ನ ಕೈಯಿಂದ ಕೊಟ್ಟಿದ್ದೇನೆ. ಇದನ್ನು ಆಕೆಯ ಸೊಂಟದ ಹತ್ತಿರ ಸೀರೆಯಲ್ಲಿ ಇಟ್ಟುಕೊಳ್ಳುವುದಕ್ಕೆ ಹೇಳು. ಆಕೆ ಸ್ನಾನ ಮಾಡಬೇಕೆಂದುಕೊಂಡಾಗ ಇದನ್ನು ಕೆಳಗೆ ಇಡಬಾರದು. ನೀನು ಕೈಯಲ್ಲಿಯೆ ಇಡಿದುಕೊಂಡು ಆಕೆ ಪಕ್ಕದಲ್ಲೆ ನಿಂತುಕೊಂಡಿರು ಎಂದು ಹೇಳಿಕಳುಹಿಸಿದೆವು.

ಎರಡನೆ ದಿನ 'ದಕ್ಷಯಜ್ಞಂ' ಸಿನಿಮಾ ಮೊದಲನೇ ಆಟಕ್ಕೆ ಹೋಗಿ ಮನೆಗೆ ಬಂದೆನು. ಅಷ್ಟೊತ್ತಿಗೆ ರಾತ್ರಿ ಹತ್ತುಗಂಟೆಗಳ ಸಮಯವಾಗಿತ್ತು. ಆಗ ನಾನು ಒಬ್ಬನೇ ಮನೆಯಲ್ಲಿ ಇರುತ್ತಿದ್ದೆನು. ನಾನು ಸಿನಿಮಾದಿಂದ ಬಂದಿರುವುದು ನೋಡಿ, ಪ್ರತಿ ದಿನ ನನ್ನ ಹತ್ತಿರಕ್ಕೆ ಜ್ಞಾನ ಕೇಳುವುದಕ್ಕೆ ಬರುತ್ತಿದ್ದ ಯುವಕನು ನನ್ನ ಮನೆಯೊಳಗೆ ಬಂದು ಯಾವಾದರು ತೊಳೆಯುವ ಪಾತ್ರೆಗಳಿವೆಯೆ ಎಂದು ಕೇಳಿದನು. ನಾನು ಊಟ ಮಾಡಿದ ನಂತರ ತೊಳೆದಿಡುವಂತೆ ಎಂದು ಹೇಳಿ, ಊಟ ಮಾಡುವುದಕ್ಕೆ ಪ್ಲೇಟ್ ತೆಗೆದುಕೊಳ್ಳುವ ಸಮಯದಲ್ಲಿ ಮುತ್ಯಾಲಮ್ಮನ ಗಂಡ ಓಡುತ್ತಾ ಬಂದು ಮುತ್ಯಾಲಮ್ಮನಿಗೆ ಚೆನ್ನಾಗಿಲ್ಲವೆಂದು ಹೇಳಿದನು. ನಾನು ಊಟ ಮಾಡುವುದನ್ನು ಬಿಟ್ಟು ಆಕೆಯನ್ನು ತಕ್ಷಣವೆ ಕರೆದುಕೊಂಡು ಬನ್ನಿ ಎಂದು ಹೇಳಿದೆನು. ನನ್ನ ಮನೆಯಲ್ಲಿನ ಯುವಕನು ಆಕೆ ಗಂಡ ಹೋಗಿ ಆಕೆಯನ್ನು ಕರೆದುಕೊಂಡು ಬಂದರು, ಆಗ ಆಕೆ ಹೊಟ್ಟೆನೋವಿನಿಂದ ಬಾಧೆ ಪಡುತ್ತಿದ್ದಾಳೆ. ನಾನು ಕೊಟ್ಟ ನಿಂಬೆಕಾಯಿ ಏನಾಯಿತೆಂದು ಆಕೆಯನ್ನು ಕೇಳಿದೆನು. ಐದು ನಿಮಿಷಗಳ ಮುಂದೆ ನಿಂಬೆ ಕಾಯಿ ದೊಡ್ಡ ಶಬ್ದದಿಂದ ಸಿಡಿದುಹೋದಂತಾಯಿತು. ನಂತರ ನೋಡಿಕೊಂಡರೆ ನಿಂಬೆಕಾಯಿ ಇಲ್ಲ. ತಕ್ಷಣವೆ ನನ್ನ ಗಂಡನಿಗೆ ಹೇಳಿದೆನು. ಆ ಶಬ್ದವನ್ನು ನನ್ನ ಗಂಡ ಸಹ ಕೇಳಿದನು. ನಂತರ ನಿಮಿಷದಲ್ಲಿಯೆ ಹೊಟ್ಟೆನೋವು ಬಂದಿತೆಂದು

ಹೇಳಿದಳು. ಮುತ್ಯಾಲಮ್ಮ ಹೇಳಿರುವುದು ನೋಡಿದರೆ ಏಕೆ ಶಬ್ದ ಬಂದಿತೊ, ನಿಂಬೆಕಾಯಿ ಇಲ್ಲದೆ ಎಲ್ಲಿಗೆ ಹೋಗಿದೆಯೊ ನನಗೆ ಏನು ಅರ್ಥವಾಗಲಿಲ್ಲ.

ಆಗ ಮುತ್ಯಾಲಮ್ಮನಿಗೆ ಬಂದ ಹೊಟ್ಟೆನೋವು ಭಗಳಾಮುಖಿ ಕೆಲಸವೆ ಎಂದು ಅರ್ಥವಾಯಿತು. ತಕ್ಷಣವೆ ಲೋಟದಲ್ಲಿ ನೀರು ತೆಗೆದುಕೊಂಡು, ಆ ನೀರಿನೊಳಗೆ ನನ್ನ ಬಲಗೈ ತೋರು ಬೆರಳನ್ನು ಅದ್ದಿ ಆಕೆಗೆ ಕುಡಿಸಿದೆವು. ನೀರನ್ನು ಕುಡಿಸಿದ ತಕ್ಷಣವೆ ಅಗೋ ಅಲ್ಲಿ" ಹೋಗುತ್ತಿದ್ದಾಳೆಂದು ಆಕೆ ಜೋರಾಗಿ ಅರಚಿದಳು. ಆಕೆಯನ್ನು ಸ್ವಲ್ಪ ಸಮಾಧಾನಪಡಿಸಿ ಏನು ಹೋಯಿತು? ಏನು ನೋಡಿದೆ? ಎಂದು ಕೇಳಿದರೆ, ಆಕೆಗೆ ಕಾಣಿಸಿದ ವಿಕೃತಾಕಾರವನ್ನು ಕುರಿತು ಹೇಳಿದಳು. ಆ ಸಮಯದಲ್ಲಿ ನಾವು ಕುಳಿತಿರುವ ರೂಮಿನ ಬಾಗಿಲು ತೆರೆದಿಟ್ಟಿದ್ದೆವು. ಆ ಬಾಗಿಲಿಗೆ ಎದುರಾಗಿ ನೋಡಿದರೆ ದಾರಿ ತಿರುಗುವವರೆಗೂ ಕಾಣಿಸುತ್ತಿದೆ. ದಾರಿ ತಿರುವು ನಮ್ಮ ಮನೆಯಿಂದ ಸುಮಾರು 30 ಮೀಟರುಗಳ ದೂರವಿರುತ್ತದೆ. ಮುತ್ಯಾಲಮ್ಮನಿಗೆ ಕಾಣಿಸಿದ ಆಕಾರ 30 ಮೀಟರುಗಳ ದೂರವನ್ನು ಎರಡು ಸೆಕೆಂಡುಗಳಲ್ಲಿ ಹೋದಹಾಗೆ ಹೇಳಿದಳು. ತಿರುವು ತಿರುಗಿ ಹೋದ ನಂತರ ಕಾಣಿಸಲಿಲ್ಲವೆಂದು ಹೇಳಿರುವುದರಿಂದ ಅವರನ್ನು ಮನೆಗೆ ಹೋಗಿ ಹತ್ತು ನಿಮಿಷಗಳ ನಂತರ ಬನ್ನಿ! ಅಷ್ಟರಲ್ಲಿ ಊಟ ಮಾಡುತ್ತೇನೆ. ನೀವು ಬಂದ ನಂತರ ರಕ್ಷಣೆಗೆ ಏನಾದರು ಕೊಡುತ್ತೇನೆ ಎಂದು ಹೇಳಿದೆನು. ಅಲ್ಲಿರುವವರೆಲ್ಲ ಹೊರಟು ಹೋದರು. ನಾನು ಮತ್ತೆ ಪ್ಲೇಟ್ ತೆಗೆದುಕೊಂಡು ಅನ್ನದ ಪಾತ್ರೆ ಹತ್ತಿರಕ್ಕೆ ಹೋಗುವುದರೊಳಗೆ ಹೋದವರೆಲ್ಲಾ ಮತ್ತೆ ಬಂದರು. ಏನು ಇಷ್ಟು ಬೇಗ ಬಂದಿದ್ದೀರೆಂದು ಕೇಳಿದಾಗ ಮುತ್ಯಾಲಮ್ಮ ಮನೆ ಹತ್ತಿರಕ್ಕೆ ಹೋಗಿ ಬಾಗಿಲು ತೆರೆಯುತ್ತಿದ್ದಹಾಗೆ ದೇವರ ಮೂಲೆ (ಅವರು ಪೂಜೆಮಾಡುವ ಕೋಣೆಯಲ್ಲಿ) ಬಂಡೆಗಳ ಸಂದಿನಲ್ಲಿ ಸ್ವಲ್ಪ ಆ ವಿಕೃತಾಕಾರ ಕಾಣಿಸಿತೆಂದು, ತಕ್ಷಣವೆ ಬಾಗಿಲುಗಳನ್ನು ಮುಚ್ಚಿ ಬಂದಿದ್ದೇವೆಂದು ಹೇಳಿದಳು. ನನಗೇನೊ ಒಂದು ಕಡೆ ಹಸಿವಾಗಿದೆ, ಒಂದು ಕಡೆಯೇನೊ ಮುತ್ಯಾಲಮ್ಮನ ಸಮಸ್ಯೆ. ಮುತ್ಯಾಲಮ್ಮ ಮಾತುಗಳು ಕೇಳುತ್ತಲೆ ಭಗಳಾಮುಖಿ ಮೇಲೆ ನನಗೆ ಸ್ವಲ್ಪ ಕೋಪ ಬಂದಿತು.

ಮುತ್ಯಾಲಮ್ಮನಿಗೆ, ಆಕೆ ಗಂಡನಿಗೆ, ನನ್ನ ಮನೆಗೆ ಬರುತ್ತಿದ್ದ ಯುವಕನಿಗೆ ಈ ರೀತಿ ಹೇಳಿದೆನು. "ಮುತ್ಯಾಲಮ್ಮ ಬಲ ಎಡ ಪಕ್ಕದಲ್ಲಿ ನೀವಿಬ್ಬರು ನಿಂತುಕೊಂಡು ಮನೆ ಹತ್ತಿರಕ್ಕೆ ಹೋಗಿ ಬಾಗಿಲು ತೆರೆಯಿರಿ. ಒಂದೇ ಬಾರಿ ಮೂವರು ಮನೆಯೊಳಗೆ ಹೋಗಿರಿ. ನಿಮ್ಮ ಹಿಂದೆ ಒಂದು ಮಾರು ದೂರದಲ್ಲಿ ನಾನು ಬರುತ್ತಿರುತ್ತೇನೆ. ನೀವು ಒಳಗೆ ಮಾರು ದೂರ ಹೋಗುವುದರೊಳಗೆ ನಾನು ಬಾಗಿಲಲ್ಲಿ ನಿಂತಿರುತ್ತೇನೆ. ಆಗ ಭಗಳಾ ಮುಖಿ ಎಲ್ಲಿಗೂ ಹೋಗುವುದಿಲ್ಲ ಮನೆಯಲ್ಲಿಯೆ ಸಿಲುಕಿಕೊಳ್ಳುತ್ತಾಳೆ. ಅದು ನನಗೆ ಕಾಣಿಸುವುದಿಲ್ಲ ನಿನಗೆ ಕಾಣಿಸುತ್ತದಲ್ಲ? ಅದು ಎಲ್ಲಿದೆಯೆಂದು ಹೇಳುತ್ತಾ ಇರು" ಎಂದು ಮುತ್ಯಾಲಮ್ಮನಿಗೆ ಉಳಿದವರಿಗೆ ಹೇಳಿ ಕಳುಹಿಸಿ, ನಾನು ಸಹ ಅವರ ಹಿಂದೆ ಆರು ಅಡಿಗಳ ದೂರದಲ್ಲಿ ನಡೆದು ಹೋದೆನು. ಅವರು ಮನೆಬಾಗಿಲ ಹತ್ತಿರಕ್ಕೆ ಹೋಗಿ, ಶಬ್ದವಿಲ್ಲದೆ ಬಾಗಿಲು ತೆರೆದು, ಮೂವರು ಒಂದೇಬಾರಿ ಒಳಗೆ ಹೋದರು. ಅವರು ಒಳಗೆ ಹೋದ ತಕ್ಷಣವೆ ಬಾಗಿಲಲ್ಲಿ ಅಡ್ಡವಾಗಿ ನಿಂತುಕೊಳ್ಳಬೇಕೆಂದು ನಾನು ಮುಂದಕ್ಕೆ ಒಂದು ಹೆಜ್ಜೆ ಹಾಕಿದೆನು. ಒಳಗೆ ಹೋದ ಮೂವರು ಕಾಣಿಸುತ್ತಿದ್ದಾರೆ. ಅಷ್ಟರಲ್ಲಿ ಮುತ್ಯಾಲಮ್ಮ ಜೋರಾಗಿ ಬಂತು ಎಂದು ಅರಚುತ್ತಾ ಬಲಗಡೆ ಇದ್ದ ಯುವಕನನ್ನು ಪಕ್ಕಕ್ಕೆ ತಳ್ಳಿದಳು. ಆಕೆ ತನ್ನ ಗಂಡನನ್ನು ಎಡಗಡೆಗೆ ತಳ್ಳಿ ಆಕೆಯು ಸಹ ಗಂಡನ ಕಡೆಗೆ ಒರಗಿಕೊಂಡಳು. ಇದೆಲ್ಲಾ ಒಂದು ಕ್ಷಣದಲ್ಲಿಯೇ ನಡೆಯಿತು. ಆಗ ನಾನು ಬಾಗಿಲಿಗೆ ನಾಲ್ಕು ಅಡಿಗಳ ದೂರದಲ್ಲಿ ಇದ್ದೇನೆ. ಹಾಗೆ ಬಿದ್ದವರು ತಕ್ಷಣವೆ ಮೇಲೆ ಎದ್ದರು. ಅಷ್ಟರಲ್ಲಿ ನಾನು ಬಾಗಿಲಲ್ಲಿ ಇದ್ದೆನು.

ಆಕೆ ಎದ್ದ ನಂತರ ನನ್ನನ್ನು ನೋಡಿ, ಆಕೆಗೆ ಕಾಣಿಸಿದ ಆಕಾರ ವೇಗವಾಗಿ ತಮ್ಮಕಡೆ ಬರುವುದರಿಂದ ಭಯಪಟ್ಟು, ಆತನನ್ನು ತಳ್ಳಿ ನಾವು ಬಿದ್ದೆವು. ಭಗಳಾಮುಖಿ ಹೊರಗೆ ಹೋಗುವುದು ಕಾಣಿಸಿತೆಂದು ಮುತ್ಯಾಲಮ್ಮ ಹೇಳಿದಳು. ನಾನೆಷ್ಟು ಪ್ರಯತ್ನ ಮಾಡಿದರೂ, ಭಗಳಾಮುಖಿ ದೊರಕದೆ ತಪ್ಪಿಸಿಕೊಂಡು ಹೋಗಿರುವುದರಿಂದ ಭಗಳಾಮುಖಿ ಮೇಲೆ ನನಗೆ ಮತ್ತಷ್ಟು

ಕೋಪ ಬಂದಿತು, ಅವರ ಸಮಸ್ಯೆ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲವೆಂದು ಮೊದಲೆ ಹೇಳಿದ ನಾನೆ, ಈ ರೀತಿ ಜೋಕ್ಯ ಮಾಡಿಕೊಳ್ಳಬೇಕಾಗಿ ಬಂದಿತು. ಆ ಸಂದರ್ಭಾನುಸಾರ ಭಗಳಾಮುಖಿಯನ್ನು ಓಡಿಸಬೇಕೆಂದು ನಿರ್ಣಯಿಸಿ ಕೊಂಡೆನು. ನಾನು ಒಳಗೆ ಹೋಗಿ ಅವರ ದೇವರ ಮೂಲೆ ಜಾಗವನ್ನು ನೋಡಿದೆನು. ಅಲ್ಲಿ ಮಂತ್ರಗಳನ್ನು ಬರೆದ ಅಡಿ ವಿಸ್ತೀರ್ಣವಿದ್ದ ರಾಗಿ ತಗಡುಗಳು ಕಾಣಿಸಿದವು. ಅವು ಭಗಳಾಮುಖಿಯ ಮಂತ್ರಗಳೆಂದು ಅವರಿಂದ ತಿಳಿದುಕೊಂಡೆನು. ನಂತರ ಅವುಗಳನ್ನು ತೆಗೆದುಕೊಂಡು ಹೋಗಿ ನೀರಿರುವ ಬಾವಿಯಲ್ಲಿ ಹಾಕಲು ಹೇಳಿದೆನು. ಅಷ್ಟರಲ್ಲಿ ಮುತ್ಯಾಲಮ್ಮ ಹೊರಗೆ ನೋಡಿದಳು. ಆಗ ಮನೆಯ ಹೊರಗೆ ವಿಕೃತಾಕಾರ ನಿಂತಿದೆ, ಅದು ಮುತ್ಯಾಲಮ್ಮನನ್ನು ನೋಡಿ ಮೇಲೆ ಕೆಳಗೆ ತಲೆ ಅಲ್ಲಾಡಿಸುವುದು ಆಕೆಗೆ ಕಾಣಿಸಿತು, ಆ ವಿಕೃತಾಕಾರ ಮುತ್ಯಾಲಮ್ಮನಿಗೆ ಸ್ಪಷ್ಟವಾಗಿ ಕಾಣಿಸುತ್ತಿದೆ. ಆದರೆ ಅಲ್ಲಿ ಯಾರಿಗೂ ಕಾಣಿಸುತ್ತಿಲ್ಲ. ಆಕೆ ನೋಡುತ್ತಿರುವ ವಿಕೃತಾಕಾರ ಹೇಗಿದೆ ಎಂದು ಕೇಳಿದಾಗ! ಮುತ್ಯಾಲಮ್ಮ ವಿವರವಾಗಿ ಅದರ ಆಕಾರವನ್ನು ಕುರಿತು ಹೇಳಿದಳು. ವಿಶೇಷವೇನೆಂದರೆ ಆ ಆಕಾರವೆ ಭಗಳಾಮುಖಿಯೆಂದು, ಆ ಆಕಾರವನ್ನೆ ತಾವು ಇಷ್ಟು ದಿನ ಪೂಜಿಸಿದ್ದೇವೆಂದು ಆಕೆಗೆ ತಿಳಿದಿಲ್ಲ. ಭಗಳಾಮುಖಿ, ಮನೆಯಲ್ಲಿ ನನ್ನ ಪಕ್ಕದಲ್ಲಿ ನಿಂತಿರುವ ಮುತ್ಯಾಲಮ್ಮನನ್ನು ನೋಡುತ್ತಾ, ತಲೆಯನ್ನು ಮೇಲೆ ಕೆಳಗೆ ನಾಲ್ಕೈದು ಬಾರಿ ಅಲ್ಲಾಡಿಸಿದ ಹಾಗೆ ಮುತ್ಯಾಲಮ್ಮ ಹೇಳಿದಳು. ಕಾಣಿಸುವ ಆಕಾರ ಬಾಯಿ ತೆರೆದುಕೊಂಡು ನಾಲಿಗೆಯನ್ನು ಹೊರಗೆ ಇಟ್ಟಿದ್ದಾಳೆಂದು, ಹಾಗೆ ಹೊರಗಿರುವ ನಾಲಿಗೆ ಸುಮಾರು ಗೇಣು ಉದ್ದ ಇದೆಯೆಂದು, ತಲೆ ಮೇಲೆ ಕೆಳಗೆ ಅಲ್ಲಾಡಿಸಿದಾಗ ನಾಲಿಗೆ ಎದೆಯ ಮೇಲೆ ತಗುಲಿದ ಹಾಗೆ ಕಾಣಿಸುತ್ತಿದೆಯೆಂದು ಹೇಳಿದಳು. ಅಷ್ಟೇ ಅಲ್ಲದೆ ಕಣ್ಣುಗಳು ಲೈಟುಗಳ ಹೊಳಪಿನ ಹಾಗೆ ಕಾಣಿಸುತ್ತಿವೆಯೆಂದು ಹೇಳಿದಳು.

ಆಗ ಆ ಆಕಾರವನ್ನು ನಿನ್ನ ಇಷ್ಟ ಬಂದಹಾಗೆ ಬೈಯ್ಯುವುದಕ್ಕೆ ಮುತ್ಯಾಲಮ್ಮನಿಗೆ ಹೇಳಿದೆನು. ನಾನು ನಿನ್ನ ಪಕ್ಕದಲ್ಲಿಯೆ ಇದ್ದೇನೆ ನಿನಗೇನು

ಭಯವಿಲ್ಲ ಕೈಲಾದರೆ ಈಗಲೆ ಬರಲುಹೇಳು, ಅದನ್ನು ಸಿಟ್ಟಿಗೇಳುವಹಾಗೆ ಬೈಯ್ಯಿ, ಅವಳು ಬಂದರೆ ನನ್ನ ಕೈಯಲ್ಲಿ ಸಿಲುಕಿಕೊಳ್ಳುತ್ತಾಳೆಂದು ಹೇಳಿದೆನು. ನನ್ನ ಮಾತುಗಳನ್ನು ಕೇಳಿದ ಮುತ್ಯಾಲಮ್ಮ ಇಷ್ಟ ಬಂದಹಾಗೆ ಬೈಯ್ಯುವುದನ್ನು ಪ್ರಾರಂಭಿಸಿದಳು. ಸುಮಾರು ಐದು ನಿಮಿಷಗಳಕಾಲ ಬೈದರೂ, ಅವಳು ಒಂದು ಹೆಜ್ಜೆಯು ಸಹ ಮುಂದಕ್ಕೆ ಬರಲಿಲ್ಲವೆಂದು ಹೇಳಿದಳು. ಇನ್ನು ಬೈಯ್ಯುವುದರಿಂದ ಲಾಭವಿಲ್ಲ ಎಂದುಕೊಂಡ ನಾನು ಮುತ್ಯಾಲಮ್ಮನಿಗೆ ಮತ್ತೊಂದು ಉಪಾಯ ಹೇಳಿದೆನು. ಈ ಬಾರಿ ನಾನು ನಿನ್ನ ಕೈ ಹಿಡಿದುಕೊಂಡು ನಿನ್ನ ಜೊತೆಗೆ ಬರುತ್ತೇನೆ. ನಾನು ರೆಡಿ ಎನ್ನುತ್ತಲೆ, ನೀನು ಜೋರಾಗಿ ಓಡಿ ಅವಳ ಹತ್ತಿರಕ್ಕೆ ಹೋಗಿ ಅವಳನ್ನು ಮುಟ್ಟಿಕೊ! ಅವಳು ನನ್ನ ಕೈಗೆ ಸಿಗುತ್ತಾಳೆಂದು ಹೇಳಿದೆನು. ಹಾಗೆ ಮಾತಾಡಿಕೊಂಡ ನಾವು ಒಂದು ಬಾರಿ ಹೊರಗೆ ಓಡಿಹೋದೆವು. ನಾವು ಬಾಗಿಲು ದಾಟಿ ಹೊರಗೆ ಬರುತ್ತಲೆ, ಅವಳು ಸುಮಾರು ಅರ್ಧ ಕಿಲೋಮೀಟರು ದೂರ ಹೋದ ಹಾಗೆ ಆಕೆಗೆ ಕಾಣಿಸಿತು. ನಾವು ಒಂದು ನಿಮಿಷ ಆಕಡೆ ನೋಡುತ್ತಾ ನಿಂತುಕೊಂಡೆವು. ನನಗೆ ಅವಳು ಕಾಣಿಸುವುದಿಲ್ಲವಾದ್ದರಿಂದ ಆಕೆ ಹೇಳುವುದರಿಂದಲೆ ಅರ್ಥವಾಗುತ್ತಿತ್ತು. ಆಕೆ ನನ್ನ ಪಕ್ಕದಲ್ಲಿಯೆ ಕೈ ಹಿಡಿದುಕೊಂಡು ನಿಂತಿದ್ದಾಳೆ. ನಮ್ಮನ್ನು ನೋಡಿದ ಆ ಆಕಾರ ನೋಡುತ್ತಿದ್ದ ಹಾಗೆ ದೂರ ಹೋಗುತ್ತಾ, ಹೋಗುತ್ತಾ ಕೊನೆಗೆ ಮುತ್ಯಾಲಮ್ಮನಿಗೆ ಕಾಣಿಸದೆ ಹೋಗಿದೆ. ಆ ವಿಷಯವನ್ನು ತಿಳಿದುಕೊಂಡ ನಾನು ಮುತ್ಯಾಲಮ್ಮನಿಗೆ ಆಕೆ ಗಂಡನಿಗೆ ಅದು ಈ ಜನ್ಮದಲ್ಲಿ ನಿಮ್ಮ ಸುದ್ದಿಗೆ ಬರುವುದಿಲ್ಲ ನಿಶ್ಚಿಂತೆಯಾಗಿರಿ ಎಂದು ಹೇಳಿ ಮನೆಗೆ ಹೋದೆನು. ಈ ತತಂಗವನ್ನು ನೋಡುವುದಕ್ಕೆ ಸುಮಾರು ಅಲ್ಲಿ 30 ಜನರಿಗಿಂತ ಮೇಲೆ ಸೇರಿದ್ದರು. ನಂತರ ಕೆಲವು ದಿನಗಳವರೆಗು ಅವರೆಲ್ಲಾ ಅದನ್ನು ಒಂದು ಆಶ್ಚರ್ಯವಾಗಿ ಹೇಳಿಕೊಳ್ಳುತ್ತಿದ್ದರು. ಆಗಿನಿಂದ ಮುತ್ಯಾಲಮ್ಮನಿಗೆ, ಭಗಳಾಮುಖಿ ಪೀಡೆ ಇಲ್ಲದೆ ಹೋಯಿತು. ಇವುಗಳನ್ನು ನೋಡುವುದಿಲ್ಲವೆಂದು ಮೊದಲ ದಿನವೆ ಹೇಳಿದ ನಾನೆ, ಎರಡನೆ ದಿನ ನೋಡಬೇಕಾಗಿ ಬಂದಿತು. ಇದನ್ನು ಅನುಸರಿಸಿ ನೋಡಿದರೆ ಎಲ್ಲ ಕರ್ಮ ನಿರ್ಣಯದ ಪ್ರಕಾರವೆ ನಡೆಯುತ್ತದೆಂದು ನಿರೂಪಣೆ ಆಯಿತು.

ದೇವತೆಗಳನ್ನು ಉನ್ನತ ಸ್ಥಾನದಲ್ಲಿ ಕೂರಿಸಿಟ್ಟು ಮನುಷ್ಯ ಪೂಜೆಗಳು ಮಾಡುತ್ತಿದ್ದರೆ, ಆ ಮನುಷ್ಯನನ್ನೆ ದೇವತೆಗಳು ಹೇಗೆ ಹಿಂಸಿಸುವರೊ ಭೈರವ ಚರಿತ್ರೆಯಲ್ಲಿಯು, ಭಗಳಾಮುಖಿ ಚರಿತ್ರೆಯಲ್ಲಿಯು ಸ್ವಲ್ಪ ಅರ್ಥವಾಗಿಯೆ ಇರುತ್ತದೆ. ದೈವಜ್ಞಾನ ತಿಳಿಯದ ಜನರಿಗೆ ದೇವರಿಗು, ದೆವ್ವಗಳಿಗು ವ್ಯತ್ಯಾಸ ಗೊತ್ತಿಲ್ಲ. ಆದ್ದರಿಂದ ದೆವ್ವಗಳನ್ನು ದೇವರೆಂದುಕೊಳ್ಳುತ್ತಿದ್ದಾರೆ. ನಮ್ಮ ಲೆಕ್ಕದಲ್ಲಿ ಮನುಷ್ಯನ ಸೂಕ್ಷ್ಮ ಶರೀರವಾಗಲಿ, ಪ್ರತಿಮೆ ಸೂಕ್ಷ್ಮ ಶರೀರವಾಗಲಿ ಎರಡು ದೆವ್ವಗಳ ಕೆಳಗೆ ಜಮಕಟ್ಟಲಾಗುತ್ತದೆ. ಈ ದಿನ ದೇವರೆಂದು ಹೆಸರು ಇಟ್ಟುಕೊಂಡವುಗಳೆಲ್ಲ ದೇವರಲ್ಲ. ನಾವು ಪೂಜಿಸುವ ಈ ದೇವತೆಗಳಿಗು ಗುಣಗಳಿವೆ, ಆಕಾರಗಳಿವೆ, ಹೆಸರುಗಳಿವೆ. ಮನುಷ್ಯರ ಹಾಗೆ ಹೆಸರುಗಳು, ಆಕಾರಗಳಿರುವ ದೇವತೆಗಳು, ಮನುಷ್ಯರ ಗುಣಗಳಿಗಿಂತ ಹೀನ ಗುಣಗಳಿವೆಯೆಂದು ಹೇಳುವುದಕ್ಕೆ ಎಷ್ಟೋ ಆಧಾರಗಳಿವೆ. ಅದರಲ್ಲಿ ಒಂದನ್ನು ಈಗ ನಿಮ್ಮ ಮುಂದೆ ಇಡುತ್ತಿದ್ದೇನೆ ನೋಡಿರಿ.

ಕಳ್ಯಾಣದುರ್ಗದಲ್ಲಿ ಹೋಟಲ್ ನಡೆಸುತ್ತಿದ್ದ ಒಬ್ಬ ವ್ಯಕ್ತಿ, ಪಕ್ಕದಲ್ಲೆ 15 ಕಿಲೋಮೀಟರುಗಳ ದೂರದಲ್ಲಿರುವ ಸ್ವಂತ ಊರಿನಲ್ಲಿ, ಕೆಲವು ವರ್ಷಗಳ ಕೆಳಗೆ "ನಾನು ಕಳ್ಯಾಣದುರ್ಗದಲ್ಲಿ ಹೋಟಲ್ ಇಡುತ್ತಿದ್ದೇನೆ, ನನ್ನ ವ್ಯಾಪಾರ ಚೆನ್ನಾಗಿ ನಡೆದರೆ ನಿನಗೆ ಟಗರನ್ನು ಬಲಿ ಕೊಡುತ್ತೇನೆಂದು" ದೊಡ್ಡಮ್ಮ ಎನ್ನುವ ದೇವತೆಗೆ ಮುಗಿದುಕೊಂಡಿದ್ದನು. ಆತನು ಕಳ್ಯಾಣದುರ್ಗದಲ್ಲಿ ಹೋಟಲ್ ಇಟ್ಟ ನಂತರ ಎರಡು ವರ್ಷಗಳು ವ್ಯಾಪಾರ ಸರಿಯಾಗಿ ನಡೆಯಲಿಲ್ಲ. ಆದರೆ ಆ ವ್ಯಕ್ತಿ ಆ ಹರಕೆ ಮಾಡಿಕೊಂಡಿದ್ದನ್ನು ಮರೆತು ಹೋಗಿದ್ದನು. ಹೋಟಲ್ ಕೆಲಸದಲ್ಲಿ ನಿಮಗ್ನನಾಗಿರುವುದರಿಂದ ಸ್ವಂತ ಊರಿಗು ಸಹ ಹೋಗಿಲ್ಲ. ಎರಡು ವರ್ಷಗಳ ನಂತರ ಹೋಟಲ್ ಚೆನ್ನಾಗಿ ನಡೆಯತೊಡಗಿತು. ಹಾಗೆ ನಾಲ್ಕು ವರ್ಷಗಳು ಕಳೆದಿವೆ. ಆ ವ್ಯಕ್ತಿ ದೊಡ್ಡಮ್ಮ ದೇವತೆಯನ್ನು ಮರೆತುಹೋದರೂ, ದೊಡ್ಡಮ್ಮ ಮಾತ್ರ ಆತನನ್ನು ಮರೆತಿಲ್ಲ.

ಒಂದು ದಿನ ಆತನಿಗೆ ಗುಂಡಿಗೆಯಲ್ಲಿ ನೋವು ಬಂದಿತು. ಡಾಕ್ಟರುಗಳ ಬಳಿ ಹೋದರೆ, ಗುಂಡಿಗೆ ರೋಗ ಎಂದು ಹೇಳಿ ದೊಡ್ಡ ಆಸ್ಪತ್ರೆಗೆ ಹೋಗಿ

ತೋರಿಸಿಕೊಳ್ಳಲು ಹೇಳಿದರು. ತಕ್ಷಣವೆ ಬಂಧುಗಳ ಸಮೇತವಾಗಿ ಅನಂತಪುರಕ್ಕೆ ಬಂದು ದೊಡ್ಡ ಆಸ್ಪತ್ರೆಯಲ್ಲಿ ಸೇರಿದರು. ಅಲ್ಲಿ ಗುಂಡಿಗೆಗೆ ಸಂಬಂಧಿಸಿದ ಎಲ್ಲ ಪರೀಕ್ಷೆಗಳನ್ನು ಮಾಡಿಸಿದರು. ಆದರೆ ಆ ಪರೀಕ್ಷೆಗಳಲ್ಲಿ ಯಾವ ಲೋಪವೂ ಕಾಣಿಸಲಿಲ್ಲ. ಆ ವ್ಯಕ್ತಿಗೇನೊ ಗುಂಡಿಗೆಯಲ್ಲಿ ನೋವಿದೆ. ಆತನ ನೋವನ್ನು ನೋಡಿದ ಡಾಕ್ಟರುಗಳು ಕಾಣಿಸದ ಲೋಪವೇನಾದರೂ ಇರಬಹುದು. ಹದಿನೈದು ದಿನಗಳು ನಮ್ಮ ಆಸ್ಪತ್ರೆಯಲ್ಲಿಯೇ ಇರಬೇಕು ಎಂದು ಹೇಳಿದರು. ಗುಂಡಿಗೆ ನೋವು ಬಂದ ವ್ಯಕ್ತಿಗೆ ಐವತ್ತು ವರ್ಷಗಳ ಮೇಲೆಯೆ ವಯಸ್ಸಿರುತ್ತದೆ. ಆತನ ಬಂದುಗಳೆಲ್ಲರು ಆಸ್ಪತ್ರೆಗೆ ಬಂದು ನೋಡಿ ಹೋಗುತ್ತಿದ್ದಾರೆ. ನನಗೆ ದೂರದ ಬಂಧು ಒಬ್ಬರು ಅಲ್ಲಿಗೆ ಹೋಗಿ ನಮಗೆ ಬಂಧುವಾಗಿರುವ ಒಬ್ಬರು ತಾಡಿಪತ್ರಿಯಲ್ಲಿ ಇದ್ದಾನೆ, ಆತನಿಗು ಸಹ ವೈದ್ಯದ ಬಗ್ಗೆ ಗೊತ್ತಿದೆ, ಆತನೊಂದಿಗೆ ಒಂದು ಬಾರಿ ತೋರಿಸಿದರೆ ಚೆನ್ನಾಗಿರುತ್ತದೆಂದು ಹೇಳಿದನು. ಆತನು ಆ ಮಾತು ಹೇಳಿದ ತಕ್ಷಣವೆ ಆತನೊಂದಿಗೆ ಸಹ ಆರು ಜನ ಬಂದು ನನ್ನನ್ನು ಕರೆದರು. ಸರಿ ಎಂದು ನಾನು ಅಲ್ಲಿಗೆ ಹೋಗಿ ಆತನನ್ನು ನೋಡಿದೆನು. ಗುಂಡಿಗೆಗೆ ಸಂಬಂಧಿಸಿದ ಎಲ್ಲ ರಿಪೋರ್ಟ್ಸ್ ಸರಿಯಾಗಿರುವಾಗ, ಆ ವ್ಯಕ್ತಿಗೆ ಗುಂಡಿಗೆ ನೋವು ಏಕಿರುತ್ತದೆಂದು ಯೋಚಿಸಿದ ನಾನು, ನನಗಿರುವ ಅನುಭವದಿಂದ ಆ ವ್ಯಕ್ತಿಯನ್ನು ಕೆಲವು ಪ್ರಶ್ನೆಗಳು ಕೇಳಿದೆನು.

**ನಾನು :–** ನಿನಗೆ ನೋವು ಇದೆ ಎನ್ನುತ್ತಿದ್ದೀಯ. ಆ ನೋವು ಎಲ್ಲಿ ಬಂದಿದೆಯೊ, ಮೊದಲಿನಿಂದ ಅಲ್ಲೆ ಇದೆಯಾ? ಇಲ್ಲವೆ ಸ್ವಲ್ಪ ಏನಾದರು ಪಕ್ಕಕ್ಕೆ ಸರಿದಂತಿದೆಯಾ?

**ಆ ವ್ಯಕ್ತಿ :–** ಮೊದಲು ಬಂದಹಾಗೆ ಒಂದುಕಡೆ ಇಲ್ಲ. ಸ್ವಲ್ಪ ಆಕಡೆ ಈಕಡೆ ಬದಲಾಗುತ್ತಿದೆ.

**ನಾನು :–** ನಿನಗೆ ಕಾಣಿಸಿಕೊಂಡ ನೋವು ಒಂದೇ ರೀತಿ ಇರುತ್ತದಾ ಇಲ್ಲವೆ ಹೆಚ್ಚು, ಕಡಿಮೆ ಆಗುತ್ತಾ ಹಿಂಡಿದಹಾಗೆ, ಅಮುಕಿದ ಹಾಗೆ ಏನಾದರು ಕಾಣಿಸುತ್ತಿರುತ್ತದಾ?

**ಆ ವ್ಯಕ್ತಿ** :– ಹೆಚ್ಚು ಕಡಿಮೆ ಇರುತ್ತದೆ. ಅಮುಕಿದ ಹಾಗೆ ಸಹ ಇರುತ್ತದೆ.

**ನಾನು** :– ನೀನು ದೇವತೆಗಳಿಗೆ ಮುಗಿಯುತ್ತಿರುತ್ತೀಯಾ? ಯಾರಿಗಾದರೂ ಏನಾದರು ಕೊಡುತ್ತೇನೆಂದು ಹರಕೆ ಹೊತ್ತುಕೊಂಡಿದ್ದೀಯ?

**ಆ ವ್ಯಕ್ತಿ** :– ನಾವು ದೊಡ್ಡಮ್ಮ ದೇವತೆಯನ್ನು ಹೆಚ್ಚಾಗಿ ಮುಗಿಯುತ್ತಿರುತ್ತೇವೆ. ನಮ್ಮ ಊರು ಹತ್ತಿರವಿರುವ ದೊಡ್ಡಮ್ಮನಿಗೆ, ಹೋಟಲ್ ವ್ಯಾಪಾರ ಕುರಿತು ಟಗರನ್ನು ಕೊಡುತ್ತೇನೆಂದು ಹರಕೆ ಹೊತ್ತುಕೊಂಡಿದ್ದೆ. ಎರಡು ವರ್ಷ ವ್ಯಾಪಾರ ಏನು ನಡೆಯಲಿಲ್ಲ. ನಂತರ ಚೆನ್ನಾಗಿಯೆ ಇದೆ. ಮೂರನೇ ವರ್ಷ ದೊಡ್ಡಮ್ಮನಿಗೆ ಕೋಳಿಯನ್ನು ಬಲಿಕೊಟ್ಟು ಬಂದಿದ್ದೆನು.

**ನಾನು** :– ನೀನು ಕೊಡುತ್ತೇನೆಂದಿರುವುದು ಟಗರನ್ನು! ಕೊಟ್ಟಿದ್ದು ಕೋಳಿ!! ದೊಡ್ಡಮ್ಮ ಒಪ್ಪಿಕೊಳ್ಳುತ್ತಾಳಾ?

**ಆ ವ್ಯಕ್ತಿ** :– ಎರಡು ವರ್ಷ ಹೋಟಲ್ ನಡೆಯಲಿಲ್ಲವಲ್ಲ! ಅದಕ್ಕೆಂದು ಟಗರನ್ನು ಕೊಡಲಿಲ್ಲ. ಆಯಮ್ಮ ನಮ್ಮ ಕೋರಿಕೆ ನೆರವೇರಿಸದಿದ್ದರೂ, ನಾನು ಕೋಳಿಯನ್ನು ಕೊಯ್ದು ಬಂದಿದ್ದೇನಲ್ಲ!

**ನಾನು** :– ಹೇಳಿರುವುದು ಒಂದು, ಮಾಡಿರುವುದು ಒಂದು, ಆದ್ದರಿಂದ ದೊಡ್ಡಮ್ಮನಿಗೆ ಕೋಪ ಬಂದಿರುತ್ತದೆ. ಆಯಮ್ಮನ ಕೋಪದಿಂದ ನಿನಗೆ ಗುಂಡಿಗೆ ರೋಗ ಬಂದಿದೆಯೇನೊ. ಹೀಗೆ ಆಸ್ಪತ್ರೆಗೆ ಹಣ ಖರ್ಚು ಮಾಡುವುದಕ್ಕಿಂತ ಒಂದು ಟಗರನ್ನು ದೊಡ್ಡಮ್ಮನಿಗೆ ಕೊಡುವುದು ಒಳ್ಳೆಯದೆಂದು ಅಂದುಕೊಳ್ಳುತ್ತಿದ್ದೇನೆ.

**ಆ ವ್ಯಕ್ತಿ** :– ನನಗೆ ಚೆನ್ನಾಗಾಗುತ್ತದೆ ಎಂದರೆ, ಒಂದೇನು ಎರಡು ಟಗರನ್ನು ಕೊಡುತ್ತೇನೆ.

**ನಾನು** :– ನಿನಗೆ ಚೆನ್ನಾಗಾಗುತ್ತದೆ ಅದು ನನ್ನ ಜವಾಬ್ದಾರಿ! ಮೊದಲು ನೀನು ಊರಿಗೆ ಹೋಗಿ ದೊಡ್ಡಮ್ಮನಿಗೆ ಕೊಡುವುದು ಕೊಟ್ಟು ಬಾ ಹೋಗು!

**ಆ ವ್ಯಕ್ತಿ** :– ಆದರೆ ಆ ಕೆಲಸ ನಾಳೆ ಅಲ್ಲದೆ ನಾಡಿದ್ದು ಮಾಡುತ್ತೇನೆ. ನೀನು ಸಹ ಬಂದರೆ ಒಳ್ಳೆಯದೆಂದು ಕರೆಯುತ್ತಿದ್ದೇನೆ.

**ನಾನು** :– ನಿನಗು ಒಳ್ಳೆಯದೆ, ನನಗು ಒಳ್ಳೆಯದೆ. ಆದರೆ ನಾನು ಬಂದರೆ ದೊಡ್ಡಮ್ಮನಿಗೆ ಒಳ್ಳೆಯದಲ್ಲ. ಆದ್ದರಿಂದ ನಾನು ಬರದಿದ್ದರೆ ದೊಡ್ಡಮ್ಮನಿಗೆ ಒಳ್ಳೆಯದಾಗುತ್ತದೆ. ನಾಡಿದ್ದು ಆ ಕಾರ್ಯ ಮುಗಿದು ಹೋದ ನಂತರ ನಿನಗೆ ಗುಂಡಿಗೆಯಲ್ಲಿ ನೋವಿದ್ದರೆ ನನ್ನನ್ನು ಕೇಳು.

**ಆ ವ್ಯಕ್ತಿ** :– ಆದರೆ ದೊಡ್ಡಮ್ಮನೇ ಹೀಗೆ ಮಾಡಿದ್ದಾಳಂತೀಯಾ?

**ನಾನು** :– ನಾನು ಹಾಗೆ ಹೇಳಿದರೆ ನಿನಗೆ ಚೆನ್ನಾಗಿರುವುದಿಲ್ಲ, ದೊಡ್ಡಮ್ಮನಿಗು ಚೆನ್ನಾಗಿರುವುದಿಲ್ಲ. ಮೊದಲು ನಾನು ಹೇಳಿದ ಹಾಗೆ ಮಾಡು. ನಿನ್ನ ರೋಗ ಗಂಟೆಯೊಳಗೆ ಹೋಗುತ್ತದೆ.

**ಆ ವ್ಯಕ್ತಿ** :– ಬಂಧುಗಳನ್ನು ಎಲ್ಲರನ್ನು ಕರೆದುಕೊಂಡು ಹೋಗಿ ನಾಡಿದ್ದು ತಪ್ಪದೇ ಆ ಕಾರ್ಯವನ್ನು ಮಾಡುತ್ತೇನೆ.

(ಆತನು ತಕ್ಷಣವೆ ಮನೆಗೆ ಹೋಗಿ ಆ ಕಾರ್ಯಕ್ಕೆ ಬೇಕಾದ ಏರ್ಪಾಟುಗಳನ್ನು ಮಾಡಿಕೊಂಡು, ಆತನ ಕಾಣಿಕೆಯನ್ನು ಸಲ್ಲಿಸಿಕೊಂಡು, ಏನಾದರು ತಪ್ಪುಗಳಿದ್ದರೆ ಕ್ಷಮಿಸೆಂದು ದೊಡ್ಡಮ್ಮನಿಗೆ ಕೈ ಮುಗಿದುಕೊಂಡನು. ಆತನಿಗೆ ನಾನು ಹೇಳಿದಹಾಗೆ ಗಂಟೆಗೆ ನೋವಿಲ್ಲದೆ ಹೋಗಿದೆ.)

ಮನುಷ್ಯರಿಗೆ ಏನಾದರು ಕೊಡುತ್ತೇವೆಂದು ಹೇಳಿ ಕೊಡದಿದ್ದರು ಪರವಾಗಿಲ್ಲ. ಒಂದು ವೇಳೆ ಒಬ್ಬ ಮನುಷ್ಯನ ಹತ್ತಿರ ಬಾಕಿ ಮಾಡಿ ಕೊಡದಿದ್ದರೂ ಪರವಾಗಿಲ್ಲ. ಆದರೆ ಒಬ್ಬ ದೇವತೆಗೆ ಏನಾದರು ಕೊಡುತ್ತೇನೆಂದುಕೊಂಡು ಕೊಡದೆ ಹೋದರೆ, ಅವರು ಮೂಗು ಹಿಂಡುವುದೇ ಅಲ್ಲ ಹೊಟ್ಟೆ ಹಿಂಡಿಯಾದರು, ಗುಂಡಿಗೆಗಳು ಹಿಂಡಿಯಾದರು ವಸೂಲಿ ಮಾಡುತ್ತಾರೆ. ಮೇಲೆ ಹೇಳಿದ ಸಂಘಟನೆಯಲ್ಲಿ ದೊಡ್ಡಮ್ಮ, ಒಬ್ಬ ವ್ಯಕ್ತಿಗೆ ಗುಂಡಿಗೆಗಳು

ಹಿಂಡಿ ತನ್ನ ಟಗರಿನ ಬಾಕಿಯನ್ನು ವಸೂಲಿ ಮಾಡಿದ್ದಾಳೆ. ಇಂತಹುದೆ ಮತ್ತೊಂದು ಸಂಘಟನೆಯನ್ನು ವಿವರಿಸುತ್ತೇನೆ ನೋಡಿರಿ. ಈ ಸಂಘಟನೆಯಲ್ಲಿ ತನ್ನ ಬಾಕಿ ಗೋಸ್ಕರ ಒಬ್ಬ ಮನುಷ್ಯನ ಹೊಟ್ಟೆಯನ್ನು ಹಿಂಡಿದ ಸಮಾಚಾರ ಇದೆ ನೋಡಿರಿ.

ರೈಲ್ವೇ ಡಿಪಾರ್ಟ್‌ಮೆಂಟಲ್ಲಿ ಗಾರ್ಡ್ ಆಗಿ ಕೆಲಸ ಮಾಡುತ್ತಿದ್ದ ಗಂಗಯ್ಯ ಯಾದವ್ ಎನ್ನುವ ವ್ಯಕ್ತಿ, ಒಬ್ಬ ದೇವತೆಗೆ ಏನೊ ಕಾಣಿಕೆ ಕೊಡುತ್ತೇನೆಂದು ಹರಕೆಹೊತ್ತುಕೊಂಡು, ಆ ದೇವತೆಯನ್ನು ಮರೆತುಹೋಗಿದ್ದಾನೆ. ಸ್ವಲ್ಪಕಾಲ ಕಾದುನೋಡಿದ ಆ ದೇವತೆ ಇನ್ನು ಲಾಭವಿಲ್ಲವೆಂದು ಏನೊ ಒಂದು ಹಿಂಡಿ ವಸೂಲಿ ಮಾಡಿಕೊಳ್ಳಬೇಕೆಂದುಕೊಂಡಳು. ಕೊನೆಗೆ ಹೊಟ್ಟೆಹಿಂಡಿ ವಸೂಲಿ ಮಾಡಬೇಕೆಂದುಕೊಂಡಳು. ಆ ವಿಧವಾಗಿ ಅಂದುಕೊಂಡ ಆ ದೇವತೆ, ತನ್ನ ಕೆಲಸವನ್ನು ತಾನು ಮಾಡಿದಳು. ಆದರೆ ಕರ್ಮ ಎದುರಾಗಿ ತಾನೇ ಸತ್ತುಹೋದಳು. ಆ ದೇವತೆ ಹೇಗೆ ಸತ್ತುಹೋದಳೊ ಜಾಗ್ರತೆಯಿಂದ ನೋಡೋಣ. ರೈಲ್ವೇ ಗಾರ್ಡ್ ಗಂಗಯ್ಯ ಯಾದವ್‌ಗೆ ಸ್ವಲ್ಪ ಕಾಲದಿಂದ ಆಗಾಗ ಹೊಟ್ಟೆನೋವು ಬರುತ್ತಿತ್ತು. ಆ ಹೊಟ್ಟೆನೋವಿಗೆ ಒಂದು ನಿಯಮ ವಿರುತ್ತಿತ್ತು. ಅದೇನೆಂದರೆ ಗಂಗಯ್ಯ ಡ್ಯೂಟಿಯಲ್ಲಿ ಇರುವಾಗ ಸ್ವಲ್ಪವಾದರೂ ನೋವುಬರಲ್ಲ. ಡ್ಯೂಟಿ ಮುಗಿದ ನಂತರ ಮನೆಹತ್ತಿರ ಇರುವಾಗಲೆ ನೋವು ಬರುತ್ತಿತ್ತು. ಅದೂ 20 ದಿನಗಳಿಗೊ, 30 ದಿನಗಳಿಗೊ ಒಂದು ಬಾರಿ ಬರುತ್ತಿತ್ತು. ಒಂದು ಬಾರಿ ನೋವು ಬಂದಿತೆಂದರೆ ಅರ್ಧಗಂಟೆಯಿಂದ ಒಂದು ಗಂಟೆವರೆಗು ಇರುತ್ತಿತ್ತು. ಹೊಟ್ಟೆನೋವು ಇರುವವರೆಗು ಭಯಂಕರವಾದ ನೋವು ಇರುತ್ತಿತ್ತು. ಗಂಗಯ್ಯ ಆ ನೋವನ್ನು ತಾಳಲಾರದೆ ಕೆಳಗೆ ಬಿದ್ದು ಉರುಳುತ್ತಿದ್ದನು. ಆತನಿಗೆ ಅಷ್ಟು ನೋವು ಬಂದರೂ, ಯಾವ ಕಾರಣದಿಂದ ಆ ನೋವು ಬರುತ್ತದೆಂದು ತನಗೆ ಸ್ವಲ್ಪವಾದರು ಗೊತ್ತಾಗಲಿಲ್ಲ. ಆ ಹೊಟ್ಟೆನೋವನ್ನು ಗುಣಪಡಿಸಿಕೊಳ್ಳುವುದಕ್ಕೆ ರೈಲ್ವೇ ಆಸ್ಪತ್ರೆಯಲ್ಲಿ ಕೆಲವು ತಿಂಗಳುಗಳಿದ್ದರೂ ಡಾಕ್ಟರುಗಳಿಗೆ ಆ ನೋವು ಅರ್ಥವಾಗಲಿಲ್ಲ. ಆಸ್ಪತ್ರೆಯಲ್ಲಿಯೆ ಹೊಟ್ಟೆನೋವು ಬಂದರೂ ಡಾಕ್ಟರುಗಳು ಏನು ಮಾಡಲಾಗದೆ ಹೋದರು. ಕೊನೆಗೆ ಆ

ನೋವಿನಿಂದ ಬಂಧುಗಳ ಸಹಾಯದಿಂದ ನನ್ನ ಹತ್ತಿರಕ್ಕೆ ಬಂದನು. ಅವರು ಹೊಟ್ಟೆನೋವನ್ನು ಕುರಿತು ಹೇಳಿದ್ದೆಲ್ಲಾ ಕೇಳಿದ ನಂತರ, ನನಗೆ ಬಿಡುವು ಇರುವ ದಿನವನ್ನು ನೋಡಿಕೊಂಡು ಆ ದಿನ ಬರಲು ಹೇಳಿ ಕಳುಹಿಸಿದೆವು.

ನಾನು ಹೇಳಿದ ದಿನದಂದು ಗಂಗಯ್ಯ, ಆತನ ಬಂಧುಗಳು ಹತ್ತು ಜನ ಬಂದರು. ಗಂಗಯ್ಯನನ್ನು ನನ್ನ ಮುಂದೆ ಕುಳಿತುಕೊಳ್ಳಲು ಹೇಳಿದೆವು. ಆತನು ನನ್ನ ಮುಂದೆ ಕುಳಿತುಕೊಂಡ ನಂತರ, ಈಗ ನಿನಗೆ ಹೊಟ್ಟೆನೋವು ಇದೆಯಾ ಎಂದು ಕೇಳಿದೆನು. ಈಗ ಇಲ್ಲ, ಯಾವಾಗ ಬರುತ್ತದೊ ಹೇಳಲಾಗುವುದಿಲ್ಲ ಎಂದು ಗಂಗಯ್ಯ ಹೇಳಿದನು. ಸರಿ! ಯಾವಾಗಲೊ ಬರುವ ನೋವನ್ನು ಈಗ ಬಾ ಎಂದು ಕರೆಯುತ್ತೇನೆ. ನೋವು ಬಂದರೆ ಹೇಳು ಎಂದು ಗಂಗಯ್ಯನಿಗೆ ಹೇಳಿ ನಂತರ ಗಂಗಯ್ಯ ಶರೀರದಲ್ಲಿ ಬರುವ ಹೊಟ್ಟೆನೋವು ಯಾವುದಾದರೂ ಈಗ ನನ್ನ ಮುಂದೆ ಬಾ ಎಂದು ಹೇಳುತ್ತಿದ್ದೇನೆಂದು ನಾನು ತೀಕ್ಷಣವಾಗಿ ಹೇಳಿದೆನು. ಹಾಗೆ ಹೇಳಿದ ತಕ್ಷಣವೆ ಎದುರಿಗೆ ಇರುವ ಗಂಗಯ್ಯನ ಹೊಟ್ಟೆಯಲ್ಲಿ ಕದಲಿಕೆಗಳು ಪ್ರಾರಂಭವಾದವು. ಒಂದು ನಿಮಿಷದ ನಂತರ ಗಂಗಯ್ಯ ಹೊಟ್ಟೆನೋವಿನಿಂದ ನರಳುವುದಕ್ಕೆ ಪ್ರಾರಂಭಿಸಿದನು. ನಿನ್ನ ಹೊಟ್ಟೆಯಲ್ಲಿ ನೋವು ಎಲ್ಲಿದೆಯೊ ಅಲ್ಲಿಯೆ ಸರಿಯಾಗಿ ತೋರಿಸು ಎಂದೆನು. ನಾನು ಹೇಳಿದ ಮಾತಿನ ಪ್ರಕಾರ ಗಂಗಯ್ಯ ಹೊಟ್ಟೆ ಮಧ್ಯೆ ಭಾಗದಲ್ಲಿ ಹೊಕ್ಕಳಿನ ಮೇಲೆ ತೋರಿಸಿದನು. ಆಗ ನಾನು ಆತನು ತೋರಿಸಿದ ಹೊಟ್ಟೆ ಭಾಗವನ್ನು ನೋಡಿದೆನು. ನಾನು ಹತ್ತು ಸೆಕೆಂಡುಗಳು ನೋಡುತ್ತಲೆ ಹೊಟ್ಟೆ ಯೊಳಗಿನ ನೋವು ಆತನ ಬಲ ಭುಜದೊಳಗೆ ಹೋಯಿತು. ಹಾಗೆ ನೋವು ಭುಜದೊಳಗೆ ಬಂದ ಹಾಗೆ ಗಂಗಯ್ಯ ಹೇಳಿದನು. ಮತ್ತೆ ನಾನು ಭುಜದ ಮೇಲೆ ನೋಡಿದೆನು. ಅಲ್ಲಿಯು ಸಹ ಕೆಲವು ಸೆಕೆಂಡುಗಳಲ್ಲಿಯೆ ನೋವು ಕಾಣಿಸದೆ ಹೋಗಿ, ಹಿಂದೆ ಬೆನ್ನಿನ ಭಾಗದೊಳಗೆ ಸೇರಿದೆ. ಭುಜದಲ್ಲಿ ನೋವು ಇಲ್ಲ ಹಿಂದೆ ಬೆನ್ನಿನೊಳಗೆ ನೋವು ಸೇರಿದೆಯೆಂದು ಗಂಗಯ್ಯ ಹೇಳಿದನು. ತಕ್ಷಣವೆ ಆತನನ್ನು ತಿರುಗಿಸಿ ಬೆನ್ನಿನ ಭಾಗದಲ್ಲಿ ನೋಡಿದಾಗ, ಅಲ್ಲಿಯು ಸಹ ಮಾಯವಾದ ನೋವು ಆತನ ಎಡ

ಮೊಣಕಾಲಿನೊಳಗೆ ಸೇರಿದೆ. ಈ ಬಾರಿ ಆತನು ತನ್ನ ಮೊಣಕಾಲನ್ನು ಕೈಯಿಂದ ತೋರಿಸಿದನು.

ಗಂಗಯ್ಯ ನಿಜ ಹೇಳುತ್ತಿದ್ದಾನಾ, ಸುಳ್ಳು ಹೇಳುತ್ತಿದ್ದಾನಾ ಎಂದು ನನಗೆ ಅನುಮಾನ ಬಂದಿತು. ನಿನಗೆ ನೋವು ಎಲ್ಲಿದೆ ತಿಳಿದು ಹೇಳುತ್ತಿದ್ದೀಯಾ, ಇಲ್ಲವೆ ಅಂದಾಜಿಗೆ ಏನಾದರು ಹೇಳುತ್ತಿದ್ದೀಯಾ, ನೀನು ಹೇಳುವುದೆಲ್ಲ ನಿಜವೇನಾ ಎಂದು ಕೇಳಿದೆನು. ಅದಕ್ಕೆ ಗಂಗಯ್ಯ "ಇರುವುದು ಇದ್ದಹಾಗೆ ಹೇಳುತ್ತಿದ್ದೇನೆ. ಇಲ್ಲದಿರುವುದು ಹೇಳಬೇಕಾದ ಅವಶ್ಯಕತೆ ನನಗೇನು ಬಂದಿದೆ. ನನಗೆ ಯಾವಾಗ ಬಂದರೂ ಹೊಟ್ಟೆಯಲ್ಲಿಯೇ ನೋವು ಬರುತ್ತಿತ್ತು. ಇಲ್ಲಿಯವರೆಗು ಯಾವಾಗಲು ಹೀಗೆ ಜಾಗ ಬದಲಾಯಿಸಲಿಲ್ಲ. ಮೇಲಾಗಿ ಇಷ್ಟು ಜೋರಾಗಿ ನೋವು ಬದಲಾಗುವುದು ಯಾರಿಗು ನಡೆದಿರುವುದಿಲ್ಲ." ಎಂದನು. ಪಕ್ಕದಲ್ಲಿದ್ದ ಆತನ ಬಂಧುಗಳು ಸಹ ನಡೆಯುತ್ತಿರುವ ಸಂಘಟನೆಯನ್ನು ನೋಡಿ ಆಶ್ಚರ್ಯದಿಂದ "ಹೊಟ್ಟೆ ನೋವು ಬಂದರೆ ಯಾವಾಗಲಾಗಲಿ ಈತನು ಕುಳಿತು ಮಾತನಾಡಿರುವುದು ನೋಡಲಿಲ್ಲ. ನೋವು ಇರುವವರೆಗು ಕೆಳಗೆ ಬಿದ್ದು ಉರುಳುವುದು, ಹೊಟ್ಟೆ ಹಿಡ್ಕೊಂಡು ಮುದುರಿಕೊಳ್ಳುವುದನ್ನು ನೋಡಿದ್ದೇವೆ. ಇಷ್ಟು ನಿಧಾನವಾಗಿ ಮಾತನಾಡುತ್ತಿರುವುದನ್ನು ಈಗಲೆ ನೋಡುತ್ತಿರುವುದು" ಎಂದರು.

ಶರೀರದೊಳಗಿನ ನೋವು ಒಂದು ಕಡೆ ಸಹ ನಿಂತುಕೊಳ್ಳದೆ, ನನ್ನೊಂದಿಗೆ ಕಣ್ಣ ಮುಚ್ಚಾಲೆ ಆಡುವುದು ಅದೂ ನೀನು ನನ್ನನ್ನು ಏನು ಮಾಡುತ್ತೀಯ ಎಂದು ಅಣಕಿಸುವಂತೆ ಇದೆ. ನನ್ನ ದೃಷ್ಟಿಗೆ ಸಿಗದೆ ಮನುಷ್ಯನ ಸೂಕ್ಷ್ಮಗಳು (ದೆವ್ವಗಳು) ಯಾವುವು ಹಾಗೆ ಶರೀರದಲ್ಲಿ ಜಾಗಗಳನ್ನು ಬದಲಾಯಿಸುವುದಿಲ್ಲ. ಕೆಲವು ದೇವತೆಗಳಿಗೆ ಅದು ಸಾಧ್ಯವಾಗುತ್ತದೆ. ಇದೇನಾದರೂ ಹರಕೆಯ ದೇವತೆ ಆಗಿರುತ್ತದೆಂದು ನನಗೆ ಮೊದಲಿನಿಂದಲೂ ಅನುಮಾನವೆ. ಅದು ಒಂದು ಕಡೆ ನಿಂತುಕೊಂಡರೆ, ಅದನ್ನು ಹೊರಗೆ ಎಳೆದು ಎಲ್ಲಾ ಸಮಾಚಾರವನ್ನು ತಿಳಿದುಕೊಳ್ಳಬಹುದು. ಆದರೂ ಅಂತಹ

ಅವಕಾಶ ಕೊಡದೆ ಜಾಗಗಳು ಬದಲಾಯಿಸುವುದು ನನಗೆ ಸ್ವಲ್ಪ ಬೇಜಾರಾಯಿತು. ಆದರೂ ಬೇಜಾರಾಗದೆ, ತಾಳ್ಮೆಯಿಂದ ಆತನ ಮೊಣಕಾಲು ಕಡೆ ನೋಡಿ "ನೀನು ಅಲ್ಲೆ ನಿಲ್ಲು! ಇರುವ ಜಾಗವನ್ನು ಬದಲಾಯಿಸಬೇಡ. ಈ ಸಾರಿ ಜಾಗಾ ಬದಲಾಯಿಸಿದರೆ, ನಿನ್ನ ಮೇಲೆ ನನಗೆ ಕೋಪ ಬರುತ್ತದೆ." ಎಂದು ಹೇಳಿದೆನು. ಆದರೂ ಆ ನೋವು ಅಲ್ಲಿಯು ಸಹ ನಿಲ್ಲಲಿಲ್ಲ. ಈ ಬಾರಿ ಒಂದೇ ಸಾರಿ ತಲೆಯಲ್ಲಿ ಸೇರಿತು. ಶರೀರದಲ್ಲಿ ನೋವು ಎಲ್ಲಿಗೆ ಹೋಗುತ್ತಿದೆಯೆಂದು ಗಂಗಯ್ಯನಿಗೆ ಚೆನ್ನಾಗಿ ಅರ್ಥವಾಗುತ್ತಿದೆ. ಆದ್ದರಿಂದ ತಕ್ಷಣವೇ ಈಗ ತಲೆಯೊಳಗೆ ಬಂದಿದೆಯೆಂದು ಹೇಳಿದನು. ನಾನು ತಕ್ಷಣವೆ ತಲೆಕಡೆಗೆ ನೋಡಿದೆನು. ಆದರೂ ಪ್ರಯೋಜನವಿಲ್ಲ. ಈ ಸಾರಿ ಸ್ವಲ್ಪ ವ್ಯತ್ಯಾಸ ಕಾಣಿಸಿತು. ಹತ್ತು ಇಲ್ಲವೇ ಹದಿನೈದು ಸೆಕೆಂಡುಗಳಿಗೆ ಇರುವ ಜಾಗದಿಂದ ತಪ್ಪಿಸಿಕೊಳ್ಳುತ್ತಿದ್ದು, ಈಗ ಸುಮಾರು ಒಂದು ನಿಮಿಷದವರೆಗು ಅಲ್ಲಿಯೇ ತಲೆಯಲ್ಲಿ ಇದ್ದು ನಂತರ ಹೊಟ್ಟೆಯೊಳಗೆ ಸೇರಿದೆ. ಗಂಗಯ್ಯ ಮತ್ತೆ ಹೊಟ್ಟೆಯೊಳಗೆ ನೋವು ಬಂದಿತೆಂದು ಹೇಳಿದನು.

ಆ ಮಾತು ಕೇಳುತ್ತಲೆ ಒಳಗೆ ಜಾಗ ಬದಲಾಯಿಸುತ್ತಿದ್ದ ವಿಗ್ರಹ (ದೇವತೆ) ಮೇಲೆ ತೀವ್ರವಾದ ಕೋಪ ಬಂದಿತು. ತಕ್ಷಣವೆ ನನಗೆ ತಿಳಿಯದೆ ನನ್ನ ಬಾಯಿಂದ ಒಂದು ಮಾತು ಬಂದಿತು. ಅಂತಹ ಮಾತು ನನ್ನ ಜೀವನದಲ್ಲಿಯೆ ಆ ದಿನಕ್ಕಿಂತ ಮೊದಲಾಗಲಿ, ಆ ದಿನದ ನಂತರ ಇಲ್ಲಿಯವರೆಗಾಗಲಿ ಯಾವಾಗಲು ಕೇಳಿಲ್ಲ. ನನ್ನ ಜೀವನದಲ್ಲಿ ಒಂದೇ ಬಾರಿ ಬಂದ ಆ ಮಾತು ಯಾವುದೆಂದರೆ! **"ನನ್ನಲ್ಲಿರುವ ಜ್ಞಾನಾಗ್ನಿ ನಿನ್ನನ್ನು ಭಸ್ಮಪುಟ ಮಾಡಲಿ."** ಆ ಮಾತು ಹೊರಗೆ ಬರುತ್ತಲೆ ಅದನ್ನು ಕೇಳಿದ ನನಗೆ ಸ್ವಲ್ಪ ಆಶ್ಚರ್ಯವಾಯಿತು. ನನ್ನ ಬಾಯಿಂದ ಆ ಮಾತು ಹೇಳುತ್ತಿದ್ದಹಾಗೆ ಎದುರಿಗೆ ಇದ್ದ ಗಂಗಯ್ಯ ಶರೀರದಲ್ಲಿ ಅಲ್ಲಿಯವರೆಗು ದೊರಕದೆ ತಿರುಗಿರುವುದು ಏನಿದೆಯೊ ಅದು ಒಂದು ಬಾರಿ ಭಗ್ಗೆಂದು ಒತ್ತಿಕೊಂಡಿತು. ಶರೀರದೊಳಗೆ ಅದು ಹಾಗೆ ಒತ್ತಿಕೊಳ್ಳುತ್ತಿದ್ದ ಹಾಗೆ, ಹೊರಗೆ ಗಂಗಯ್ಯ ಉರಿ, ಉರಿ ಎಂದು

ಅರಚುವುದಕ್ಕೆ ಪ್ರಾರಂಭಿಸಿದನು. ಬೆಂಕಿ ಒತ್ತಿಕೊಂಡ ಮನುಷ್ಯ ಅರಚಿದಹಾಗೆ ಆತನು ಅರಚುತ್ತಿದ್ದಾಗ ಒಂದು ನಿಮಿಷ ನಮಗೆ ಏನು ಮಾಡಬೇಕೊ ಅರ್ಥವಾಗಲಿಲ್ಲ. ನಂತರ ಬಕೆಟ್‌ನಲ್ಲಿ ನೀರು ತಂದು, ಬಟ್ಟೆಗಳನ್ನು ಒದ್ದೆಮಾಡಿ, ಆತನ ಶರೀರದ ಮೇಲೆ ಹಾಕಿದೆವು. ಒಳಗೆ ಒತ್ತಿಕೊಂಡಿರುವುದು ಶರೀರವೆಲ್ಲಾ ಓಡುತ್ತಿರುವುದರಿಂದ ಮೇಲೆ ಗಂಗಯ್ಯನಿಗೆ ಶರೀರವೆಲ್ಲಾ ಒತ್ತಿ ಉರಿಯುವಂತಹ ಅನುಭೂತಿ ಬಂದಿದೆ. ಒದ್ದೆಯಾದ ಬಟ್ಟೆಗಳಿಂದ ಶರೀರವನ್ನು ಎಷ್ಟು ತೋಯಿಸಿದರೂ ಆತನು ಅರಚುವುದು ನಿಲ್ಲಿಸಲಿಲ್ಲ. ಆಗ ಮೇಲೆ ಮಾಡುತ್ತಿರುವ ನಮ್ಮ ಪ್ರಯತ್ನ ವೃಥಾ ಅನ್ನಿಸಿತು. ಅಲ್ಲಿರುವ ಆತನ ಬಂಧುಗಳಿಗೆ ಏನು ನಡೆಯುತ್ತಿದೆಯೊ ಸ್ವಲ್ಪವೂ ಅರ್ಥವಾಗಲಿಲ್ಲ. ಏನಾಗಿದೆಯೆಂದು ಗಾಬರಿಯಿಂದ ನನ್ನನ್ನು ಕೇಳಲು ಪ್ರಾರಂಭಿಸಿದರು. ನಾನು ಅವರಿಗೇನು ಉತ್ತರ ಹೇಳಲಿಲ್ಲ. ಆ ವಿಧವಾಗಿ ಸುಮಾರು ಹತ್ತು ನಿಮಿಷಗಳು ಕಳೆಯಿತು. ಆಗ ಗಂಗಯ್ಯ ಶರೀರದೊಳಗಿನ ಉರಿ ಕಡಿಮೆಯಾಗಿ ಹೋಯಿತು, ನಂತರ ಆತನ ಶರೀರದಲ್ಲಿ ಯಾವ ನೋವು ಕಾಣಿಸಲಿಲ್ಲ. ಅದೆಲ್ಲಾ ಅಲ್ಲಿರುವವರಿಗೆ ಒಂದು ವಿಚಿತ್ರವಾಗಿ ಕಾಣಿಸಿದೆ.

ನಡೆದ ಸಂಘಟನೆ ನಮಗು ಸಹ ಒಂದು ಹೊಸ ಅನುಭವವನ್ನು ಕೈಗೂಡಿಸಿತು. ಗಂಗಯ್ಯ ಶರೀರದಲ್ಲಿ ಕೆಲವು ದಿನಗಳಿಂದ ಪೀಡಿಸುತ್ತಿದ್ದ ಆ ದೇವತೆ ಯಾರೊ ಆಗಲಿ, ಎದುರಿಗಿರುವ ನನ್ನನ್ನು ನನ್ನ ಜ್ಞಾನವನ್ನು ಲೆಕ್ಕ ಮಾಡದೆ ಹೋಗಿರುವುದರಿಂದ ಹಾಗೆ ಸುಟ್ಟು ಹೋಗಬೇಕಾಗಿ ಬಂದಿತು. ನಮ್ಮ ಜೀವನದಲ್ಲಿ ಒಂದೇ ಒಂದು ಬಾರಿ ನಡೆದ ಆ ಅನುಭವವು ನಾನು ಮರೆತು ಹೋಗದ ಗುರುತಾಗಿ ಉಳಿದು ಹೋಗಿದೆ. ದೈವಜ್ಞಾನವೆಂದರೆ ಏನೊ, ಅದರ ಶಕ್ತಿ ಎಂದರೆ ಏನೊ ತಿಳಿಯದವರಿಗೆ ಇದು ಯಾವುದೊ ಕಲ್ಪನೆಯಂತೆ, ಕಥೆಯಂತೆ ಅನಿಸುತ್ತದೆ. ಯಾರಿಗೇನು ಅನಿಸಿದರೂ ಇದು 35 ವರ್ಷಗಳ ಕೆಳಗೆ ನಡೆದ ಯಥಾರ್ಥ ಸಂಘಟನೆ.

ಭೂಮಿ ಮೇಲೆ ಜನ್ಮ ಹೊಂದಿ, ಒಂದು ಹೆಸರನ್ನು ಇಟ್ಟುಕೊಂಡು, ಕೆಲವು ಕೆಲಸಗಳನ್ನು ಮಾಡುತ್ತಿರುವ ಮನುಷ್ಯರಾಗಲಿ, ದೇವತೆಗಳಾಗಲಿ, ಇನ್ನೂ

ಯಾರಾದರಾಗಲಿ ಅವರಿಗೆ ಕೊನೆಯಲ್ಲಿ ಮರಣ ಸಹ ಇದೆ. ಹುಟ್ಟಿನಿಂದ ಮರಣದವರೆಗು ಯಾರಿಗಾದರೂ ಜೀವನ ಎನ್ನುವುದು ಇದೆ. ಹುಟ್ಟಿದ ನಂತರ ಕೆಲವರು ತಮ್ಮ ಜೀವನವನ್ನು ಸಾರ್ಥಕ ಮಾಡಿಕೊಳ್ಳುತ್ತಾರೆ. ಕೆಲವರು ವ್ಯರ್ಥ ಮಾಡಿಕೊಳ್ಳುತ್ತಾರೆ. ಯಾರು ಸಾರ್ಥಕ ಮಾಡಿಕೊಳ್ಳುತ್ತಾರೊ, ಯಾರು ವ್ಯರ್ಥ ಮಾಡಿಕೊಳ್ಳುತ್ತಾರೊ ಅವರವರ ಜೀವನ ಚರಿತ್ರೆಗಳನ್ನು ಅನುಸರಿಸಿ ತಿಳಿಯುತ್ತದೆ. ಜಗತ್ತಿನಲ್ಲಿ ಜೀವನವನ್ನು ವ್ಯರ್ಥ ಮಾಡಿಕೊಂಡವರು ಬಹಳ ಜನರಿದ್ದಾರೆ. ಆದರೆ ಜೀವನವನ್ನು ಸಾರ್ಥಕ ಮಾಡಿಕೊಂಡವರು ಬಹಳ ಅಪರೂಪವಾಗಿ ಇದ್ದಾರೆ. ಈಗ ಕಳೆಯುತ್ತಿರುವ ನಮ್ಮ ಜೀವನವನ್ನು ಸಾರ್ಥಕ ಮಾಡಿ ಕೊಳ್ಳಬೇಕೆಂದರೆ, ಗತದಲ್ಲಿನ ಸಾರ್ಥಕ ಜೀವನವನ್ನು ಹೊಂದಿದ ಸ್ವಲ್ಪ ಜನರ ಚರಿತ್ರೆಗಳನ್ನು ತಿಳಿದುಕೊಳ್ಳಲೇ ಬೇಕು. ಹಾಗೆ ತಿಳಿದುಕೊಳ್ಳಬೇಕೆಂದರೂ ಸ್ವಲ್ಪ ಜನ ಮಹಾನುಭಾವರು ಕಳೆದ ಬಾಹ್ಯಚರಿತ್ರೆಯೆ ಆಗುವುದು. ಇಲ್ಲಿ ಬಾಹ್ಯ ಚರಿತ್ರೆ ಅಂದರೆ ಅವರು ಕಾಣಿಸುವ ಸ್ಥೂಲ ಶರೀರದಿಂದ ಕಳೆದಿರುವುದು ಎಂದು ಅರ್ಥ. ಆದರೆ ನಮಗೆ ಕಾಣಿಸದ ಸೂಕ್ಷ್ಮ ಶರೀರಗಳಿಂದ ಕಳೆದಿರುವ ಎಷ್ಟೋ ಮಹಾತ್ಮರ ಚರಿತ್ರೆಗಳು ಸಹ ಇವೆ.

ದೆವ್ವ ಎನ್ನುವ ಹೆಸರು ಕೇಳುತ್ತಿದ್ದ ಹಾಗೆ ಏನೊ ಅಸಹ್ಯವಾಗಿರುವುದೆಂದು ಕೆಲವರು ಭಾವಿಸಿಕೊಳ್ಳುತ್ತಿರುತ್ತಾರೆ. **ದೆವ್ವ ಎನ್ನುವ ಹೆಸರು ನಮ್ಮ ಜೀವನದಲ್ಲಿನ ಸ್ವಲ್ಪ ಭಾಗವನ್ನು ತಿಳಿಸುವ ಪದ ಮಾತ್ರವೆ.** ಈ ದಿನ ದೆವ್ವವೆಂದರೆ ಏನೊ ಎಂದು ಭಯಪಡುವವರು ಎಷ್ಟೋ ಜನ, ನಾಳೆ ದೆವ್ವವಾಗಿ ಜೀವನಕಾಲವನ್ನು ಕಳೆಯಬೇಕಾಗಿ ಬರುತ್ತದೆ. ಆದ್ದರಿಂದ ದೆವ್ವ ಅಂದರೆ ಏನೊ ತಿಳಿದುಕೊಂಡು ಅದು ಮುಟ್ಟ ಬಾರದೊ ಬೇರೆ ಜಾತಿಯದೊ ಅಲ್ಲವೆಂದು, ನಾವೇ ಮುಂಬರುವ ಕಾಲದಲ್ಲಿ ದೆವ್ವವಾಗಿ ಬದಲಾಗಬಹುದೆಂದು, ಹಾಗೆ ಬದಲಾದವರಲ್ಲಿ ಎಷ್ಟೋಜನ ದೊಡ್ಡವರಿದ್ದಾರೆಂದು ತಿಳಿದುಕೊಳ್ಳೋಣ. ದೆವ್ವವಾಗಿ ಬದಲಾದ ಜೀವನಗಳು ಸಹ ಎಷ್ಟೋ ದೊಡ್ಡವಾಗಿ, ಸಾರ್ಥಕ ಜೀವನವಾಗಿ ಇವೆಯೆಂದು ತಿಳಿದುಕೊಳ್ಳೋಣ. ಅಂತವುಗಳಲ್ಲಿ ಈಗಲು ಸಹ ಜೀವಿಸುತ್ತಿರುವ ಒಂದು ಸಾರ್ಥಕ ಜೀವನ ತೆಗೆದುಕೊಂಡು ವಿವರಿಸಿಕೊಳ್ಳೋಣ.

ಅನಂತಪುರ ಜಿಲ್ಲೆಯಲ್ಲಿ ಪೆನುಕೊಂಡವನ್ನು ತಿಳಿಯದವರಿಲ್ಲ. ಏಕೆಂದರೆ ಆ ಗ್ರಾಮ ಕೃಷ್ಣದೇವರಾಯರ ಕಾಲದಿಂದ ಚರಿತ್ರೆ ಹೊಂದಿದೆ. ಆದ್ದರಿಂದ ಬಹಳ ಜನರಿಗೆ ತಿಳಿದೇ ಇರುತ್ತದೆ. ಪೆನುಕೊಂಡಗೆ ಕೇವಲ ಏಳು ಕಿಲೋಮೀಟರುಗಳ ದೂರದಲ್ಲಿ 'ಮಾವುಟೂರು' ಅನ್ನುವ ಒಂದು ಚಿಕ್ಕ ಗ್ರಾಮವಿದೆ. ಆ ಊರಿನಲ್ಲಿ ನಾನು ಒಂದು ವಾರದ ದಿನಗಳು ಇದ್ದೆನು. ನಾನು ಆ ಊರಿನಲ್ಲಿದ್ದ ಸಮಯದಲ್ಲಿ, ಅಲ್ಲಿ ಚಿಕ್ಕ ಮಕ್ಕಳಿಗೆ ಮೆದುಳು ಬಾವು ಜ್ವರಗಳು ಹೆಚ್ಚಾಗಿ ಇದ್ದವು. ಆ ಊರಿನಿಂದ ಮೆದುಳು ಬಾವು ಜ್ವರ ಬಂದ ಆರು ವರ್ಷಗಳ ವಯಸ್ಸಿರುವ ಹುಡುಗಿಯನ್ನು ಪೆನುಗೊಂಡ ಆಸ್ಪತ್ರೆಗೆ ತೆಗೆದುಕೊಂಡು ಹೋದರು. ಅಲ್ಲಿ ಮೂರು ದಿನಗಳು ಚಿಕಿತ್ಸೆ ಮಾಡಿದ್ದಾರೆ. ಅಲೋಪತಿ ಚಿಕಿತ್ಸೆಗೆ ಆ ರೋಗ ಗುಣವಾಗಲಿಲ್ಲ. ಇನ್ನೊಂದು ಅರ್ಧ ಗಂಟೆ ಸಹ ಬದುಕುವುದಿಲ್ಲ ಎಂದು ಡಾಕ್ಟರುಗಳಿಗೆ ಅರ್ಥವಾಗಿದೆ. ಅಂತಹ ಸ್ಥಿತಿಯಲ್ಲಿ ನಿಮ್ಮ ಮಗಳು ಬದುಕುವುದಿಲ್ಲ, ಮನೆಗೆ ತೆಗೆದುಕೊಂಡು ಹೋಗಿ ಎಂದು ಹೇಳಿದಾಗ ತಾಯಿ ತಂದೆಯರು ಮನೆಗೆ ತಂದುಕೊಂಡರು. ಮನೆಯಲ್ಲಿ ಬಂಧುಗಳೆಲ್ಲರು ಆ ಹುಡುಗಿ ಸುತ್ತ ಸೇರಿ ಅಳುತ್ತಿದ್ದಾರೆ. ಆ ಊರಿನಲ್ಲಿ ಎಲ್ಲರಿಗಿಂತ ಅನುಕೂಲವಾದ ಕುಟುಂಬ ಆ ಹುಡುಗಿ ಮನೆಯವರದ್ದೆ. ಆ ಹುಡುಗಿಯ ಮಾವ ಆ ಊರಿನ ಪ್ರೆಸಿಡೆಂಟಾಗಿ ಕೆಲಸ ಮಾಡುತ್ತಿದ್ದಾರೆ. ಪ್ರೆಸಿಡೆಂಟ್ ಅಪ್ಪ ಅಂದರೆ ಹುಡುಗಿ ತಾತನವರು ನನ್ನ ಹತ್ತಿರಕ್ಕೆ ಬಂದು ಹುಡುಗಿಗೆ ಸ್ವಲ್ಪ ನೋಡೆಂದನು. ನಾನು ಡಾಕ್ಟರೆಂದು ಆ ಊರಿನಲ್ಲಿ ಕೆಲವರಿಗೆ ಗೊತ್ತು. ಆದ್ದರಿಂದ ಆತನು ಬಂದು ನನ್ನನ್ನು ಕರೆದನು. ನಾನು ಬಂಧುಗಳ ಮನೆಗೆ ಹೋಗಿರುವವನು, ನನ್ನ ಹತ್ತಿರ ಚಿಕಿತ್ಸೆ ಮಾಡುವುದಕ್ಕೆ ಯಾವ ಔಷಧಗಳು ಇಲ್ಲ. ಆ ದೊಡ್ಡ ಮನುಷ್ಯ ಕರೆದಾಗ ನಾನು ಬರುವುದಿಲ್ಲ ಅಂದರೆ ಚೆನ್ನಾಗಿರುವುದಿಲ್ಲವೆಂದು ಹೋದೆನು. ಅಲ್ಲಿ ಆ ಹುಡುಗಿ ಅಪಸ್ಮಾರಕ ಸ್ಥಿತಿಯಲ್ಲಿ (ಕೋಮಾದಲ್ಲಿ) ಇದ್ದಾಳೆ. ಕಾಲು ಕೈಗಳು ತಣ್ಣಗಾಗಿ ಹೋಗಿವೆ. ಶರೀರದಲ್ಲಿ ಬಿಸಿ ಕಡಿಮೆಯಾಗಿ ಹೋಗಿದೆ. ಶ್ವಾಸ ಆಡಿ ಆಡದಂತಿದೆ. ಒಟ್ಟಿನಲ್ಲಿ ಆ ಹುಡುಗಿ ಪ್ರಾಣದಿಂದ ಇದ್ದರೂ, ಒಂದು ಐದು ಇಲ್ಲವೆ ಹತ್ತು ನಿಮಿಷಗಳಿಗಿಂತ ಹೆಚ್ಚಿನ ಕಾಲ ಬದುಕುವುದಿಲ್ಲವೆನಿಸುತ್ತಿದೆ.

ಆ ಹುಡುಗಿಯನ್ನು ನೋಡಿ ಏನೊ ಒಂದು ಮಾಡಬೇಕೆಂದನಿಸಿತು. ತಕ್ಷಣವೆ ಸಾಸುವೆ ತರಿಸಿ, ಅವುಗಳನ್ನು ಹಿಟ್ಟು ಮಾಡಿಸಿ, ಆ ಹಿಟ್ಟನ್ನು ನೀರಿನಲ್ಲಿ ಕಲೆಸಿ ದೊಡ್ಡ ತಟ್ಟೆಯಲ್ಲಿ ಹಾಕಿಸಿ, ಆ ಹುಡುಗಿಯನ್ನು ಆ ನೀರಿನಲ್ಲಿ ಮಲಗಿಸಿದೆವು. ಆ ನೀರಿನಿಂದಲೆ ತೋಯದ ಕಡೆಯೆಲ್ಲಾ ತೋಯಿಸಿದೆವು. ಹಾಗೆ ಮಾಡಿದ ಐದು ನಿಮಿಷಗಳಿಗೆ, ಆ ಹುಡುಗಿ ಕಣ್ಣು ಬಿಟ್ಟು ನೋಡಿದಳು. ಶರೀರವೆಲ್ಲಾ ಬಿಸಿಯಾಗಿದೆ. ಶ್ವಾಸವು ಸಹ ಚೆನ್ನಾಗಿ ಆಡಲು ಪ್ರಾರಂಭಿಸಿತು. ಸತ್ತು ಹೋಗುತ್ತದೆಂದುಕೊಂಡ ಹುಡುಗಿ ಬದುಕಿರುವುದು, ಆ ಊರಿನವರಿಗೆಲ್ಲ ಗೊತ್ತಾಯಿತು. ಆದ್ದರಿಂದ ಅಲ್ಲಿರುವವರೆಲ್ಲ ನನ್ನನ್ನು ದೊಡ್ಡ ವೈದ್ಯನೆಂದು ಲೆಕ್ಕಹಾಕಿಕೊಂಡರು. ಹುಡುಗಿ ವಿಷಯ ನಡೆದ ಮೂರುದಿನಗಳಿಗೆ ನಾನಿರುವ ಮನೆಗೆ ಸ್ವಲ್ಪದೂರದಲ್ಲಿಯೆ ತುಂಬುಗರ್ಭಿಣಿಗೆ ಆರೋಗ್ಯ ಚೆನ್ನಾಗಿಲ್ಲವೆಂದು, ಮಾತನಾಡದೆ ಬಿದ್ದು ಹೋಗಿದ್ದಾಳೆಂದು, ನೀವು ಬಂದು ನೋಡಿರೆಂದು ಕರೆದರು. ಸರಿ ಎಂದು ಹೋಗಿ ನೋಡಿದರೆ, ಗರ್ಭಿಣಿಯಾದ ಆಕೆ ಮಾತನಾಡದೆ ಅಪಸ್ಮಾರಕ ಸ್ಥಿತಿಯಲ್ಲಿದ್ದಾಳೆ. ಆಗ ನಾನು ನೀರನ್ನು ಆಕೆ ಮುಖದ ಮೇಲೆ ಚೆಲ್ಲಿದೆನು. ನೀರು ಮುಖದ ಮೇಲೆ ಬೀಳುತ್ತಲೆ ತಕ್ಷಣವೆ ಎಚ್ಚರಗೊಂಡಳು ನಂತರ ಎದ್ದು ಕುಳಿತಳು. ಆಕೆಗೆ ಸ್ವಲ್ಪ ಕುಡಿಸಿ ಏನು ಆಗುವುದಿಲ್ಲ ಎಂದು ಹೇಳಿ ಬಂದೆನು. ಆಕೆ ಪರಿಸ್ಥಿತಿಯನ್ನು ಗಮನಿಸಿದ ನನಗೆ, ಅದು ಅನಾರೋಗ್ಯದಿಂದ ನಡೆದಿರುವುದಲ್ಲವೆಂದು, ಸೂಕ್ಷ್ಮ ಶರೀರದ ಪ್ರಭಾವದಿಂದಲೆ ನಡೆದಿದೆಯೆಂದು ಅರ್ಥವಾಯಿತು. ಆದರೂ ಆ ವಿಷಯ ಅವರಿಗೆ ಹೇಳದೆ ಹೊರಟು ಬಂದೆನು.

ನಾನು ಮನೆಗೆ ಬಂದ ನಂತರ ಇಪ್ಪತ್ತು ನಿಮಿಷಗಳಿಗೆ ಗರ್ಭಿಣಿಯಾದ ಆಕೆ ಬಂದಳು. ಆಕೆಯನ್ನು ಕುಳಿತುಕೊಳ್ಳಲು ಹೇಳಿದಾಗ ಆಕೆ ಕುರ್ಚಿಯಲ್ಲಿ ಕುಳಿತುಕೊಳ್ಳದೆ ಕೆಳಗೆ ಕುಳಿತುಕೊಂಡಳು. ಸಮಯಕ್ಕೆ ಬಂದು ನೋಡಿದಕ್ಕೆ ನಿಮಗೆ ಕೃತಜ್ಞತೆಗಳು ಹೇಳುತ್ತಿದ್ದೇನೆಂದು ನನಗೆ ನಮಸ್ಕರಿಸಿದಳು. ಹಾಗೆ ನನಗೆ ನಮಸ್ಕರಿಸಬಾರದು. ನಾನು ನಿನ್ನಂತಹ ಮನುಷ್ಯನೆ, ನಮಸ್ಕಾರಕ್ಕೆ ಅರ್ಹನು

ದೇವರು ಒಬ್ಬನೇ ಎಂದು ಹೇಳಿದೆನು. ಆ ಮಾತು ಕೇಳಿದ ನಂತರ ಒಂದು ನಿಮಿಷಕ್ಕೆ ಮಾಮೂಲಾಗಿ ಕುಳಿತಿದ್ದ ಆಕೆ ಒಂದು ಪಕ್ಕಕ್ಕೆ ಕಾಲುಗಳು ಹಿಂದಕ್ಕೆ ಮಡಚಿ ಕುಳಿತುಕೊಂಡು, ನಂತರ ತಲೆಮೇಲೆ ಮುಸುಗು ಹಾಕಿಕೊಂಡು ತಲೆಕೆಳಕ್ಕೆ ಬಗ್ಗಿಸಿಕೊಂಡು ಕುಳಿತುಕೊಂಡಳು. ಹಾಗೆ ಕುಳಿತುಕೊಂಡ ನಂತರ "ನಿಮಗೆ ಧನ್ಯವಾದಗಳು ಹೇಳುತ್ತಿದ್ದೇನೆ ಸ್ವಾಮಿ"! ಎಂದಳು. ಅಲ್ಲಿಯವರೆಗು ನನ್ನನ್ನು ಸ್ವಾಮಿ ಎಂದು ಆ ಊರಿನಲ್ಲಿ ಯಾರೂ ಅನ್ನಲಿಲ್ಲ. ಡಾಕ್ಟರೆಂದು, ಸಾರ್ ಎಂದು ಕರೆಯುತ್ತಿದ್ದರು. ಆಕೆ ಕುಳಿತಿರುವ ಲಕ್ಷಣವನ್ನು ಅನುಸರಿಸಿ, ಮಾತನಾಡುವ ಮಾತನ್ನು ಅನುಸರಿಸಿ ನೋಡಿದಾಗ ಮೊದಲು ಬಂದ ಆಕೆ ಅಲ್ಲವೆಂದು ನನಗೆ ಅರ್ಥವಾಯಿತು. ಆಗ ನಾನು ಆಕೆಯನ್ನು ನೀನು ಯಾರು ಎಂದು ಕೇಳಿದೆನು.

**ಆಕೆ** :– ಸ್ವಾಮಿ! ನನ್ನ ಹೆಸರು ಅಂಬೋಜಮ್ಮ. ನಾನು ನಿಮ್ಮ ಹತ್ತಿರಕ್ಕೆ ಬಂದ ಗರ್ಭಿಣಿ ಮನುಷ್ಯಳಲ್ಲ.

**ನಾನು** :– ನೀನು ಹಾಗೆ ಕುಳಿತುಕೊಂಡಾಗಲೆ ಅರ್ಥವಾಯಿತು. ನೀನು ಯಾರು, ಏಕೆ ಬಂದಿದ್ದೀಯ?

**ಆಕೆ** :– ನನ್ನದು ಈ ಊರು ಅಲ್ಲ ಪೆನುಕೊಂಡ. ಈಕೆ ಪೆನುಕೊಂಡ ಬಾಬಾರವರ ಭಕ್ತಳು.

**ನಾನು** :– ಬಾಬಾರವರು ಪುಟ್ಟಪರ್ತಿಯಲ್ಲಿದ್ದಾರೆ. ನೀನು ಪೆನುಕೊಂಡ ಬಾಬಾ ಎನ್ನುತ್ತೀಯ. ನೀನು ಹೇಳುವ ಬಾಬಾ ಯಾರು? ಪುಟ್ಟಪರ್ತಿ ಬಾಬಾ ಅಲ್ಲವೆ?

**ಆಕೆ** :– ಪುಟ್ಟಪರ್ತಿ ಬಾಬಾರವರಲ್ಲ. ಪೆನುಕೊಂಡದಲ್ಲಿಯೆ ಬಾಬಾ ಫಕರುದ್ದೀನ್‌ರವರನ್ನು, ಪೆನುಕೊಂಡ ಬಾಬಯ್ಯ ಎಂದು ಪ್ರಜೆಗಳು ಕರೆಯುತ್ತಿರುತ್ತಾರೆ. ಈಕೆ ಬಾಬಾ ಫಕರುದ್ದೀನ್ ರವರ ಭಕ್ತಳು. ಈಕೆ ನಿಮ್ಮ ಹತ್ತಿರಕ್ಕೆ ಬಂದಿದ್ದಾಳಲ್ವಾ, ನಾನು ಸಹ ನಿಮ್ಮೊಂದಿಗೆ ಮಾತನಾಡಬೇಕೆಂದು ಬಂದಿದ್ದೇನೆ.

**ನಾನು** :– ಈಕೆಯದು ಮಾವುಟೂರು, ನಿನ್ನದು ಪೆನುಕೊಂಡ. ಈಕೆ ನಿನಗೇನಾದರು ಬಂದುವಾಗುತ್ತಾಳಾ?

**ಆಕೆ** :– ಈಕೆ ನನಗೆ ಬಂಧುವಲ್ಲ. ಬಂಧುವಲ್ಲದೆ ಹೋದರೂ ನಮಗೆ ಬಂಧುಗಳಿಗಿಂತ ಹೆಚ್ಚಿನ ಸಂಬಂಧವಿದೆ. ಈಕೆ ಹಿಂದುವು, ಹಿಂದೂಗಳು ಬಹಳ ಜನ ಬಾಬಯ್ಯನವರ ಹತ್ತಿರಕ್ಕೆ ಬರುತ್ತಿರುತ್ತಾರೆ. ಆದರೆ ಅವರಲ್ಲಿ ಈಕೆ ಬಾಬಯ್ಯನವರಿಗೆ ದೊಡ್ಡ ಭಕ್ತಳು. ಪ್ರತಿ ವಾರ ಪೆನುಕೊಂಡಗೆ ಬಂದು ಬಾಬಾರವರ ದರ್ಗಾವನ್ನು ದರ್ಶನಮಾಡಿಕೊಂಡು, ಪ್ರದಕ್ಷಿಣೆಗಳು ಮಾಡಿ ಬರುತ್ತಾಳೆ. ಈಕೆಗೆ ಬಾಬಯ್ಯನವರ ಮೇಲೆ ಹೆಚ್ಚಿನ ಭಕ್ತಿ ಇರುವುದರಿಂದ, ಈಕೆ ಸಹ ಮನೆಯಲ್ಲಿಯೆ ನಮಾಜ್ ಮಾಡುತ್ತಾಳೆ. ಈಕೆಗಿರುವ ಇಬ್ಬರು ಮಕ್ಕಳಿಗೆ ಮುಸ್ಲಿಮ್‌ರ ಹೆಸರುಗಳೆ ಇಟ್ಟಿದ್ದಾಳೆ. ತನ್ನ ಹೆಸರನ್ನು ಸಹ ಬದಲಾಯಿಸಿಕೊಂಡಿದ್ದಾಳೆ.

**ನಾನು** :– ಇರುವ ಹೆಸರನ್ನು ತೆಗೆದು ಇಲ್ಲದ ಹೆಸರನ್ನು ಏಕೆ ಇಟ್ಟುಕೊಂಡಿದ್ದಾಳೆ?

**ಆಕೆ** :– ಈಕೆಗೆ ಮದುವೆಯಾದಾಗಿನಿಂದ ಈಕೆಯನ್ನು ಒಂದು ದೆವ್ವ ಇಡಿದು ಪೀಡಿಸುತ್ತಿತ್ತು. ಅದರಿಂದ ಈಕೆ ಸ್ವಲ್ಪ ಅನಾರೋಗ್ಯದಿಂದ ಇರುತ್ತಿದ್ದಳು. ಯಾವ ದೇವತೆಗೆ ಕೈ ಮುಗಿದರೂ ಈಕೆಯನ್ನು ಆ ದೆವ್ವ ಬಿಡಲಿಲ್ಲ, ಆರೋಗ್ಯ ಸರಿಯಾಗಲಿಲ್ಲ. ಕೊನೆಗೆ ಬಾಬಾರವರ ಹತ್ತಿರಕ್ಕೆ ಬಂದು ಕೆಲವು ದಿನಗಳು ಸೇವೆ ಮಾಡಿದಳು. ನಂತರ ದೆವ್ವ ಹೋಗಿದೆ. ಆರೋಗ್ಯ ಸರಿಯಾಗಿದೆ. ಆಗಿನಿಂದ ದೇವತೆಗಳನ್ನು ಬಿಟ್ಟು ಹಾಕಿ ಬಾಬಾರವರನ್ನೇ ಆರಾಧಿಸುತ್ತಿದ್ದಾಳೆ. ಬಾಬಾರವರು ಹೆಸರು ಬದಲಾಯಿಸಿಕೊಂಡ ಹಾಗೆ ಈಕೆಯು ಸಹ ಬದಲಾಯಿಸಿಕೊಂಡಿದ್ದಾಳೆ.

**ನಾನು** :– ಬಾಬಾರವರು ಹೆಸರು ಬದಲಾಯಿಸಿಕೊಂಡಿದ್ದಾರಾ?

**ಆಕೆ** :– ಹೌದು, ಬಾಬಾರವರು ಸಹ ಬದಲಾಯಿಸಿಕೊಂಡಿದ್ದಾರೆ. ಬಾಬಾರವರನ್ನೇ ಆದರ್ಶವಾಗಿ ತೆಗೆದುಕೊಂಡು, ಆಕೆಯು ಸಹ ಹಾಗೆ ಬದಲಾಗಿದ್ದಾಳೆ. ಬಾಬಾರವರಿಗು ಸಹ ಈಕೆ ಮೇಲೆ ಹೆಚ್ಚಿನ ಪ್ರೇಮ. ತಂದೆ

ಪ್ರೀತಿಗಿಂತ ಹೆಚ್ಚಿನ ಪ್ರೇಮವನ್ನು ತೋರಿಸುತ್ತಾನೆ. ಆದ್ದರಿಂದಲೆ ಈಕೆಗಿರುವ ದೆವ್ವವನ್ನು ಬಿಡಿಸಿ ಯಾವ ದೆವ್ವವು ಈಕೆ ಹತ್ತಿರಕ್ಕೆ ಬಾರದಹಾಗೆ ನನ್ನನ್ನು ಕಾವಲು ಇಟ್ಟಿದ್ದಾನೆ.

**ನಾನು** :- ನೀನು ಹೇಳುವುದು ನನಗೇನು ಅರ್ಥವಾಗಲಿಲ್ಲ. ಬಾಬಯ್ಯನನ್ನು ಕೈ ಮುಗಿದಿರುವುದು, ಆರೋಗ್ಯ ಸರಿಯಾಗಿರುವುದು ಸರಿ, ಈಕೆ ಹೆಸರು ಬದಲಾಯಿಸಿಕೊಂಡಿದ್ದು ಸರಿ ಅದು ಈಕೆಯ ಇಷ್ಟ, ಆದರೆ ಇಲ್ಲಿ ಅರ್ಥವಾಗದಿರುವುದು, ಬಾಬಯ್ಯ ಈಕೆಯನ್ನು ಮಗಳಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದಾನೆ ಎನ್ನುತ್ತೀಯಲ್ಲ! ಹಾಗಾದರೆ ಬಾಬಯ್ಯ ಈಗ ಇದ್ದಾನಾ? ಪ್ರತಿ ವರ್ಷ ದೊಡ್ಡದಾಗಿ ಜಾತ್ರೆ ನಡೆಯುತ್ತದೆಂದು, ಆ ದಿನ ಅಲ್ಲಿಯೆ ಇರುವ ಗಿಡದಿಂದ ಸಕ್ಕರೆ ಬೀಳುತ್ತದೆಂದು ಕೇಳಿದ್ದೇನೆ. ನಾನು ಯಾವಾಗಲು ಅಲ್ಲಿಗೆ ಹೋಗಲಿಲ್ಲ, ನೋಡಲಿಲ್ಲ. ಆ ದರ್ಗಾವನ್ನು ಕುರಿತೇನಾ ನೀನು ಹೇಳುತ್ತಿರುವುದು?

**ಆಕೆ** :- ಹೌದು, ಆ ದರ್ಗಾವನ್ನು ಕುರಿತೆ ಹೇಳುತ್ತಿದ್ದೇನೆ. ಬಾಬಯ್ಯನವರು ಸುಮಾರು ಐದು (500) ನೂರು ವರ್ಷ ಕೆಳಗಿನಿಂದ ಇಂದಿಗೂ ಇದ್ದಾನೆ. ಪೆನುಕೊಂಡ ದರ್ಗಾದ ಹತ್ತಿರವೆ ಇದ್ದಾನೆ. ನಿಮಗೆ ಅರ್ಥವಾಗದೆ ಹೋದರೆ ವಿವರವಾಗಿ ಹೇಳುತ್ತೇನೆ.

**ನಾನು** :- ಬಾಬಾ ಯಾರು? ಮುಸ್ಲಿಮ್ ಮತಕ್ಕೆ ಸೇರಿದವರ ಹೆಸರು ಬಾಬಾ ಎಂದು ಇರುವುದಿಲ್ಲ ಅಲ್ಲವೆ! ಆತನು ಈಗಲು ಸಹ ಹೇಗಿದ್ದಾನೆ? ಆತನ ವಯಸ್ಸೆಷ್ಟು? ಆತನು ಏನು ಮಾಡುತ್ತಿರುತ್ತಾನೆ? ಆತನು ಮನುಷ್ಯನಾ? ಅಲ್ಲವಾ? ಎಲ್ಲ ವಿವರವಾಗಿ ಹೇಳಿದರೆ ಚೆನ್ನಾಗಿರುತ್ತದೆ.

**ಆಕೆ** :- ಎಲ್ಲಾ ವಿವರವಾಗಿ ಹೇಳುತ್ತೇನೆ. ಎಲ್ಲ ವಿಷಯಗಳು ನಿಮಗೆ ತಿಳಿದರೆ ಚೆನ್ನಾಗಿರುತ್ತದೆ. ಸುಮಾರು ಐದು (500) ನೂರು ವರ್ಷಗಳ ಕೆಳಗಿನ ಕಾಲದಲ್ಲಿ ಪೂರ್ವಗೋದಾವರಿ ಜಿಲ್ಲೆಯಲ್ಲಿ ಕ್ಷತ್ರಿಯರ (ರಾಜರ) ಕುಟುಂಬದಲ್ಲಿ ಸತ್ಯಂ

ರಾಜು ಎಂಬ ವ್ಯಕ್ತಿ ಹುಟ್ಟಿದನು. ಆತನು ಸುಮಾರು ನಲವತ್ತು ವರ್ಷಗಳ ವಯಸ್ಸಿನಲ್ಲಿ ಮನೆ ಬಿಟ್ಟು ದೈವಜ್ಞಾನವನ್ನು ತಿಳಿದುಕೊಳ್ಳಬೇಕೆಂದು, ಅದನ್ನು ತಿಳಿಸುವ ಗುರುವಿಗಾಗಿ ಅನ್ವೇಷಣೆ ಮಾಡುತ್ತಾ ಊರು ಬಿಟ್ಟು ಬಂದನು. ಆತನಿಗೆ ಗುರು ಎಲ್ಲಿಯೂ ಕಾಣಿಸಲಿಲ್ಲ. ಪೂರ್ವ ಗೋದಾವರಿ ಜಿಲ್ಲೆಯಿಂದ ಕಾಲ್ನಡಿಗೆಯಲ್ಲಿಯೆ ತಿರುಗುತ್ತಾ ಪಶ್ಚಿಮ ಗೋದಾವರಿ, ಕೃಷ್ಣ, ಗುಂಟೂರು, ಒಂಗೋಲು, ನೆಲ್ಲೂರು, ಚಿತ್ತೂರು ಜಿಲ್ಲೆಗಳು ಎಲ್ಲವನ್ನು ದಾಟಿ, ಮೂರು ವರ್ಷಗಳಿಗೆ ಅನಂತಪುರ ಜಿಲ್ಲೆ ಪೆನುಕೊಂಡ ಪ್ರಾಂತಕ್ಕೆ ಬಂದನು. ಆ ವಿಧವಾಗಿ ಏಳು ಜಿಲ್ಲೆಗಳು ದಾಟಿ ಬಂದ ಸತ್ಯಂರಾಜು ಕೊನೆಗೆ ಬಿಕಾರಿಯಾದನು. ಏನು ಸಿಕ್ಕರೆ ಅದನ್ನು ತಿಂದು, ಎಲ್ಲಂದರಲ್ಲೆ ಮಲಗುತ್ತಿದ್ದನು. ಒಂದು ದಿನ ಪೆನುಕೊಂಡ ಕೋಟೆಯೊಳಗೆ ಹೋಗಿ ಅಲ್ಲಿ ಸಿಕ್ಕಿದ್ದು ತಿಂದು, ಕೋಟೆ ಪಕ್ಕದಲ್ಲಿ ಬೆಟ್ಟದ ಮೇಲೆ ನೆರಳು ಇದ್ದ ಜಾಗದಲ್ಲಿ ಕುಳಿತುಕೊಂಡನು. ಆಗಿನ ಕಾಲದಲ್ಲಿ ಪೆನುಕೊಂಡ ಕೋಟೆಯನ್ನು ಒಬ್ಬ ಸಾಮಂತರಾಜ ಪಾಲಿಸುತ್ತಿದ್ದನು. ಐದು (500) ನೂರು ವರ್ಷ ಕಾಲದಲ್ಲಿ ಪೆನುಕೊಂಡ ಕೋಟೆ, ಕೃಷ್ಣದೇವರಾಯರ ವಂಶದವರ ಪಾಲನೆಯಲ್ಲಿ ಇದ್ದಿತು. ಕೋಟೆಯಲ್ಲಿ ಇರುವವರು ಇಟ್ಟಿದ್ದು ತಿಂದು ಸತ್ಯಂರಾಜು ಬೆಟ್ಟದ ಮೇಲೆಯೆ ಒಂದು ಗಿಡದ ಕೆಳಗೆ ಕುಳಿತು ನನಗೆ ಗುರು ದೊರಕುವುದಿಲ್ಲವೆ? ಜ್ಞಾನ ತಿಳಿಯುವುದಿಲ್ಲವೆ? ಎಂದು ಆಲೋಚಿಸುತ್ತಾ ಮನಸ್ಸಿನಲ್ಲಿಯೆ ನೋವನ್ನು ಅನುಭವಿಸುತ್ತಿದ್ದನು.

ಅಷ್ಟರಲ್ಲಿ ಒಂದು ಮಾತು ಆತನಿಗೆ ಕೇಳಿಸಿತು. "ನೀನು ನನ್ನ ಹತ್ತಿರಕ್ಕೆ ಬಾ" ಎಂದು ಕೇಳಿಸಿದಾಗ, ಆತನಿಗೆ ಏನೂ ಅರ್ಥವಾಗದೆ ಸುತ್ತಮುತ್ತ ತಿರುಗಿ ನೋಡಿದನು. ಆತನಿಗೆ ಯಾರು ಕಾಣಿಸಲಿಲ್ಲ, ನನ್ನನ್ನು ಯಾರು ಕರೆದರು, ಎಲ್ಲಿಂದ ಕರೆದರು ಎಂದು ಆಲೋಚಿಸುತ್ತಿರುವಾಗ ಮತ್ತೊಂದು ಬಾರಿ ಅದೇ ಮಾತು ಕೇಳಿಸಿತು. ಆ ಶಬ್ದ ಬಂದ ಕಡೆ ನೋಡಿದರೆ ಎರಡು ದೊಡ್ಡ ಕಲ್ಲಿನ ಗುಂಡುಗಳು ಕಾಣಿಸಿದವು. ಆ ಎರಡು ಗುಂಡುಗಳ ಮಧ್ಯೆದಲ್ಲಿ, ಮನುಷ್ಯ ಹೋಗುವುದಕ್ಕು ಸಹ ಇಕ್ಕಟ್ಟಾಗಿರುವ ಸ್ವಲ್ಪ ಸಂದಿ ಕಾಣಿಸಿತು. ಆ

ಸಂದಿನೊಳಗಿಂದ ಶಬ್ದ ಬಂದಹಾಗೆ ಸತ್ಯಂರಾಜುಗೆ ಅರ್ಥವಾಯಿತು. ಎರಡು ಬಂಡೆಗಳ ಸಂಧಿನೊಳಗೆ ಬಲವಂತವಾಗಿ ನುಸುಳಿ ನೋಡಿದಾಗ ಬಲಗಡೆಗೆ ಸ್ವಲ್ಪ ತಿರುವು ತಿರುಗಿದ್ದಿತು. ಮೇಲೆ ಮಣ್ಣಿನ ಹೊದಿಕೆ ಇದ್ದು, ತಿರುವು ತಿರುಗಿದ ದಾರಿ ಮುಂದಕ್ಕಿದ್ದ ಹಾಗೆ ಸತ್ಯಂರಾಜುವಿಗೆ ಅರ್ಥವಾಯಿತು. ಸತ್ಯಂರಾಜು ಧೈರ್ಯದಿಂದ ಒಳಗೆ ಹೋದನು. ಸುಮಾರು ನಲವತ್ತು ಅಡಿಗಳ ದೂರ ಹೋದ ನಂತರ ದಾರಿ ಬಲಗಡೆಗೆ ತಿರುಗಿದೆ. ಅಲ್ಲಿ ಹತ್ತು ಅಡಿಗಳ ಉದ್ದ, ಅಷ್ಟೇ ಅಗಲ, ಒಂಭತ್ತು ಅಡಿಗಳು ಎತ್ತರವಿರುವ ಬಯಲು ಕಾಣಿಸಿತು. ಪಕ್ಕದಿಂದ ಚಿಕ್ಕ ರಂಧ್ರದ ಮುಖಾಂತರ ಬೆಳಕು ಸಹ ಬೀಳುತ್ತಿದೆ. ಆ ಬಯಲಿನ ಮಧ್ಯೆದಲ್ಲಿ ಒಬ್ಬ ವ್ಯಕ್ತಿ ಕುಳಿತಿರುವುದು ಸಹ ಕಾಣಿಸಿತು. ಆ ವ್ಯಕ್ತಿಯನ್ನು ನೋಡುತ್ತಲೆ ಸತ್ಯಂರಾಜುಗೆ ಸ್ವಲ್ಪ ಭಯವಾಯಿತು. ಸತ್ಯಂ ರಾಜುವಿನ ಭಯವನ್ನು ನೋಡಿದ ಆ ವ್ಯಕ್ತಿ, ನೀನು ಭಯಪಡಬೇಡ ನೀನು ಹುಡುಕುತ್ತಿರುವುದು ನನ್ನನ್ನೇ ಎಂದನು. ಆಗ ಸತ್ಯಂರಾಜುಗೆ ಭಯವಿಲ್ಲದೆ ಹೋಗಿ, ಯಾವುದೋ ನಿಧಿ ದೊರಕಿದಷ್ಟು ಸಂತೋಷವಾಯಿತು. ತಕ್ಷಣವೆ ಸತ್ಯಂ ಆತನ ಕಾಲುಗಳ ಮೇಲೆ ಬಿದ್ದು ನೀನು ಯಾರೋ ಮಹಾನುಭಾವನು, ನಿನಗೆ ಕಾಣಿಸದಿದ್ದರೂ ಹೊರಗಿದ್ದ ನನ್ನನ್ನು ಕರೆದಿದ್ದೀರೆಂದರೆ ನೀವೇ ನನ್ನ ಗುರುಗಳು ಎಂದನು. ಅಲ್ಲಿರುವ ವ್ಯಕ್ತಿ ನೋಡುವುದಕ್ಕೆ ಉದ್ದನೆಯ ಜುಟ್ಟು, ಗಡ್ಡ ಒಬ್ಬ ಮಹರ್ಷಿಯ ಹಾಗೆ ಕಾಣಿಸುತ್ತಿದ್ದರೂ ತಾನು ಮುಸ್ಲಿಮ್ ಮತದಲ್ಲಿ ಹುಟ್ಟಿದವನೆಂದು, ಆದರೂ ಹಿಂದೂಮತದಲ್ಲಿನ ಜ್ಞಾನವನ್ನು ತಿಳಿದುಕೊಂಡು ಅದನ್ನೇ ಆಚರಿಸಿದವನೆಂದು, ಆದ್ದರಿಂದ ನನ್ನ ಹೆಸರು ಎರಡು ಮತಗಳಿಗೆ ಸಂಬಂಧಿಸಿದೆಯೆಂದು, ಮುಸ್ಲಿಮ್ ಮತಕ್ಕೆ ಗುರುತಾಗಿ ಸಾಯಬ್ ಎಂದು, ಹಿಂದೂಮತಕ್ಕೆ ಸಂಬಂಧಿಸಿದ ಗುರುತಾಗಿ ಬಾಬಾ ಎಂದು, ಎರಡು ಸೇರಿಸಿದರೆ "ಸಾಯಬ್ ಬಾಬಾ" ಎನ್ನುವ ಹೆಸರಿನಲ್ಲಿದ್ದೇನೆಂದು ಸತ್ಯಂಗೆ ಹೇಳಿದನು. ಅಷ್ಟೇ ಅಲ್ಲದೆ ಸಾಯಬ್‌ಬಾಬಾರವರು, ಹೀಗೆ ಮತ್ತೆ ಕೆಲವು ವಿಷಯಗಳು ಸಹ ಹೇಳಿದನು. ನಾನು ಇಲ್ಲಿಯೆ ಕೆಲವು ವರ್ಷ ಧ್ಯಾನ ಮಾಡಿದ್ದೇನೆ. ನನ್ನಲ್ಲಿ ಎಷ್ಟೋ ಶಕ್ತಿ ಏರ್ಪಟ್ಟಿದೆ. ಆದರೆ ಇಸ್ಲಾಮ್ ಖುರಾನ್‌ನಲ್ಲಿ ಹೇಳಿದಹಾಗೆ, ಸಾಮಾನ್ಯ ಮನುಷ್ಯರಿಗೆ ಸಹಾಯ

ಮಾಡಬೇಕೆಂದುಕೊಂಡಿದ್ದೇನೆ. ಆದ್ದರಿಂದ ನಾನು ಇಲ್ಲಿಂದ ಹೋಗಬೇಕೆಂದುಕೊಂಡಿದ್ದೇನೆ. ಇಷ್ಟು ದಿನಗಳು ನಿನಗೋಸ್ಕರವೆ ಕಾದು ನೋಡಿದೆನು. ಈಗ ನೀನು ಬಂದಿದ್ದೀಯ. ನನ್ನಲ್ಲಿರುವ ಶಕ್ತಿಯಿಂದ ನಾನು ಮೋಕ್ಷಕ್ಕೆ ಹೋಗಬಹುದು. ಆದರೆ ನಾನು ಮೋಕ್ಷಕ್ಕೆ ಹೋಗದಿದ್ದರೂ ಪರವಾಗಿಲ್ಲ. ಆ ಶಕ್ತಿಯನ್ನು ಪ್ರಜೆಗಳಿಗೆ ಉಪಯೋಗ ಆಗುವಂತೆ ದೇವರನ್ನು ಬೇಡಿಕೊಂಡಿದ್ದೇನೆ. ದೇವರು ನನ್ನ ನಿಸ್ವಾರ್ಥ ಕೋರಿಕೆಯನ್ನು ಮನ್ನಿಸಿ ನನ್ನ ಕೋರಿಕೆ ನೆರವೇರುವಂತೆ ಆಶೀರ್ವಧಿಸಿದ್ದಾನೆ. ನೀನು ಸಹ ಭವಿಷ್ಯತ್ತು ಕಾಲದಲ್ಲಿ ಪ್ರಜೆಗಳಿಗೆ ಉಪಯೋಗಪಡುವುದಕ್ಕೆ ನನ್ನಿಂದ ನಿನಗೆ ಸ್ವಲ್ಪ ಶಕ್ತಿಯನ್ನು ಕೊಡುತ್ತಿದ್ದೇನೆ. ನೀನು ನನ್ನ ಶಕ್ತಿಯನ್ನು ಹೊಂದಿ ಈ ಊರಿನಲ್ಲಿಯೇ ಇರು. ನಾನು ಎಷ್ಟೋ ಕಾಲದಿಂದ ಇದ್ದ ಊರು ಪೆನುಕೊಂಡ. ಆದ್ದರಿಂದ ನೀನು ಪೆನುಕೊಂಡದಲ್ಲಿಯೆ ಇರು ಎಂದನು. ಆಗ ಸತ್ಯಂ, ಸಂತೋಷಪಡುತ್ತಾ ಈಗ ನನ್ನ ಜೀವನಕ್ಕೆ ಒಂದು ಗಮ್ಯ ಸಿಕ್ಕಿದೆ, ನೀವು ಹೇಗೆ ಹೇಳಿದರೆ ಹಾಗೆ ಕೇಳುತ್ತೇನೆ ಎಂದನು.

ಸಾಯಬ್ ಬಾಬಾರವರು ಸತ್ಯಂರಾಜುನೊಂದಿಗೆ ಇನ್ನೂ ಸ್ವಲ್ಪ ವಿಷಯ ಹೇಳಿದನು. ನೀನು ಹಿಂದೂ ಮತಸ್ಥನು. ನೀನು ನನ್ನ ಶಿಷ್ಯನಾದ ನಂತರ ನಿನಗೆ ಈ ಮತದ ಹೆಸರು ಇರಬಾರದು. ಆದ್ದರಿಂದ ನಾನು ಎರಡು ಮತಗಳಿಗೆ ಸಂಬಂಧಿಸಿದ ಹೆಸರು ಇಟ್ಟುಕೊಂಡಹಾಗೆ, ನೀನು ಸಹ ಎರಡು ಮತಗಳಿಗೆ ಸಂಬಂಧಿಸಿದ ಹೆಸರಿನಿಂದ ಚಲಾವಣೆ ಆಗಬೇಕು. ನಾನು ಮೊದಲು ಇಸ್ಲಾಮ್ ಮತದವನು. ನಂತರ, ಹಿಂದೂ ಜ್ಞಾನವನ್ನು ತಿಳಿದುಕೊಂಡು ಅನುಸರಿಸಿದೆನಾದ್ದರಿಂದ ಮೊದಲು ಮುಸ್ಲಿಮ್ ಪದ "ಸಾಯಬ್" ನಂತರ, ಹಿಂದೂ ಪದ "ಬಾಬಾ" ಎಂದು ಪೂರ್ತಿಯಾಗಿ ಸಾಯಬ್‌ಬಾಬಾ ಎಂದು ಹೆಸರು ಇಟ್ಟುಕೊಂಡಹಾಗೆ, ನೀನು ಹಿಂದೂ ಮತದಲ್ಲಿ ಹುಟ್ಟಿರುವುದಾದ್ದರಿಂದ ಮೊದಲು ಹಿಂದೂ ಮತಕ್ಕೆ ಸಂಬಂಧಿಸಿದ ಹೆಸರು 'ಬಾಬಾ' ಎಂದು, ನಂತರ ಇಸ್ಲಾಮ್ ಜ್ಞಾನದ ಪ್ರಕಾರ ನಡೆದುಕೊಳ್ಳುತ್ತೀಯ ಆದ್ದರಿಂದ ಹಿಂದೆ ಮುಸ್ಲಿಮ್ ಹೆಸರು 'ಫಕರುದ್ದೀನ್' ಎಂದು ಎರಡೂ ಸೇರಿಸಿ 'ಬಾಬಾ ಫಕರುದ್ದೀನ್' ಅನ್ನುವ

ಹೆಸರಿನಿಂದ ಚಲಾವಣೆ ಆಗಬೇಕು. ನಾನು ಮುಸ್ಲಿಂ ಹಿಂದೂ ಆಗಿರುವುದರಿಂದ "ಸಾಯಬ್‌ಬಾಬಾ", ನೀನು ಹಿಂದೂ ಮುಸ್ಲಿಮ್ ಆದ್ದರಿಂದ "ಬಾಬಾ ಫಕರುದ್ದೀನ್" ನಂತರ, ಈಗಿನಿಂದ ನೀನು ಮುಸ್ಲಿಮ್ ಮತಸ್ಥನಾಗಿಯೇ ಕಾಣಿಸಬೇಕು. ನಾನು ಮುಸ್ಲಿಮ್ ಮತದಲ್ಲಿ ಹುಟ್ಟಿದರೂ, ಹಿಂದೂ ಮಹರ್ಷಿಯಂತೆ ಕಾಣಿಸುತ್ತಿದ್ದೇನೆ. ಹಾಗೆ ನೀನು ಹಿಂದೂ ಮತದಲ್ಲಿ ಹುಟ್ಟಿದರೂ ಇಸ್ಲಾಮ್ ಪಂಡಿತನಾಗಿ ಕಾಣಿಸಬೇಕು. ಹಾಗೆ ಇದ್ದರೇನೆ ನಿನಗೆ ನನ್ನ ಶಕ್ತಿ ಉಪಯೋಗಪಡುತ್ತದೆ. ಅಷ್ಟೇ ಅಲ್ಲದೆ ನೀನು ಈ ಊರಿನಲ್ಲಿ ಎಲ್ಲಿ ಇರಬೇಕೆಂದು ದೇವರೇ ನಿರ್ಣಯಿಸುತ್ತಾನೆ. ಅದಕ್ಕೆ ನೀನು ಒಂದು ಕೆಲಸ ಮಾಡಬೇಕು. ಅದೇನೆಂದರೆ! ನಾನು ಒಂದು ಕಡ್ಡಿಯನ್ನು ಕೊಡುತ್ತೇನೆ. ಆ ಕಡ್ಡಿಯನ್ನು ತೆಗೆದುಕೊಂಡು ನೀನು ರಾತ್ರಿಹೊತ್ತು ಮಲಗುವಾಗ, ತಲೆ ಪಕ್ಕ ಭೂಮಿಯಲ್ಲಿ ಒಂದು ಕೊನೆಯನ್ನು ಊತಿಟ್ಟು ಮಲಗು. ಬೆಳಗಾಗಿ ಅದು ಮೇಲಿನ ಕೊನೆ ಚಿಗುರಿದ್ದರೆ ಅದೇ ನಿನ್ನ ನಿವಾಸಸ್ಥಳವೆಂದು ತಿಳಿದುಕೊ! ನಾನು ಕೊಟ್ಟ ಕಡ್ಡಿ ಚಿಗುರುವವರೆಗು ಈ ಊರಿನಲ್ಲಿ ಬೇರೆ ಬೇರೆ ಜಾಗಗಳಲ್ಲಿ ಮಲಗಿಕೊಂಡು ನೋಡು. ತಪ್ಪದೆ ಯಾವುದೊ ಒಂದು ಸ್ಥಳ ನಿನಗೆ ದೊರಕುತ್ತದೆಂದು ಹೇಳಿ, ಸಾಯಬ್ ಬಾಬಾ ತಾನು ಹಲ್ಲು ಉಜ್ಜಿಕೊಳ್ಳುವ ಮಿಸ್ವಾಕ್ ಗಿಡದ ಕಡ್ಡಿಯನ್ನು ಕೊಟ್ಟನು. ಮಿಸ್ವಾಕ್ ಗಿಡವನ್ನು ಕೆಲವು ಪ್ರಾಂತಗಳಲ್ಲಿ ಸಕ್ಕರೆ ಗಿಡ ಎಂದು ಕರೆಯುತ್ತಾರೆ.

ಹಾಗೆ ಕಡ್ಡಿಯನ್ನು ಕೊಟ್ಟ ಸಾಯಬ್ ಬಾಬಾರವರು, ಸತ್ಯಂರಾಜುಗೆ ಮುಸ್ಲಿಮ್‌ರಲ್ಲಿ ಸನ್ಯಾಸಿಯಾಗಿ ಚಲಾವಣೆ ಆಗಬೇಕೆಂದು, ಕ್ರಮ ತಪ್ಪದೆ ನಮಾಜ್ ಮಾಡಿಕೊಳ್ಳಬೇಕೆಂದು, ದೇವರ ಮೇಲೆ ವಿಶ್ವಾಸ ಬೆಳೆಸಿಕೊಳ್ಳಬೇಕೆಂದು, ಇಸ್ಲಾಮ್‌ಗೆ ಸೇರಿದ ಜ್ಞಾನವನ್ನು ಹೇಳಿ ಇನ್ನು ಹೋಗೆಂದು ಕಳುಹಿಸಿದನು. ಅಷ್ಟೇ ಅಲ್ಲದೆ "ನೀನು ಎಂದಿಗೂ ಇಲ್ಲಿಗೆ ಬರಬೇಡ. ಇಲ್ಲಿ ನಾನಿರುವುದಿಲ್ಲ. ಇಲ್ಲಿಂದ ಹೊರಟು ಹೋಗುತ್ತೇನೆ" ಎಂದು ಸಹ ಹೇಳಿದನು. ಸಾಯಬ್ ಬಾಬಾ ಹತ್ತಿರ ಆಶೀರ್ವಾದ ಪಡೆದ ಸತ್ಯಮ್‌ರಾಜು ಹೊರಗಡೆ ಬಂದು ಪೆನುಕೊಂಡದಲ್ಲಿ ತಿರುಗುತ್ತಾ, ಪ್ರತಿ ರಾತ್ರಿ ಎಲ್ಲಿ ಮಲಗಿಕೊಂಡರೆ ಅಲ್ಲಿ

ಬಾಬಾರವರು ಕೊಟ್ಟ ಕಡ್ಡಿಯನ್ನು ಸ್ವಲ್ಪ ಊತಿಟ್ಟು ಮಲಗುತ್ತಿದ್ದನು. ಆ ವಿಧವಾಗಿ ಕೆಲವು ದಿನಗಳು ಕಳೆದವು. ಒಂದು ದಿನ ಪೆನುಕೊಂಡದಲ್ಲಿರುವ ಈಶ್ವರ ಆಲಯದಲ್ಲಿ ಸತ್ಯಂರಾಜು ಮಲಗಿಕೊಂಡನು. ಬೆಳಗಾಗಿ ನೋಡುವಷ್ಟರಲ್ಲಿ ತಲೆ ಭಾಗದಲ್ಲಿ ಊತಿಟ್ಟ ಮಿಸ್ವಾಕ್ ಕಡ್ಡಿ ಚಿಗುರಿದಂತೆ ಕಂಡಾಗ, ಆ ದಿನದಿಂದ ಸತ್ಯಂರಾಜು ಅಲ್ಲಿಯೆ ಮಲಗಲು ಪ್ರಾರಂಭಿಸಿದನು. ಈತನೊಂದಿಗೆ ಕೆಲವರು ಸಾಧುಗಳು ಊರಿನಲ್ಲಿ ಬಿಕ್ಷಾಟನೆ ಮಾಡಿಕೊಂಡು ಬಂದು, ರಾತ್ರಿ ಹೊತ್ತು ಆಲಯದಲ್ಲಿ ಮಲಗುತ್ತಿದ್ದರು. ಹಾಗೆ ಮಲಗುವ ಸಾಧುಗಳು ಐದಾರು ದಿನಗಳಿಗಿಂತ ಹೆಚ್ಚಾಗಿ ಇರುತ್ತಿರಲಿಲ್ಲ. ಸತ್ಯಂರಾಜು ಮಾತ್ರ ಎಲ್ಲಿಗೂ ಹೋಗದೆ ಆ ಶಿವಾಲಯದಲ್ಲಿಯೆ ನಿಂತು ಹೋದನು.

**ನಾನು** :– ನೀನು ಹೇಳುತ್ತಿರುವ ವಿಷಯವೆಲ್ಲಾ ಚೆನ್ನಾಗಿಯೆ ಇದೆ. ಆದರೆ ಚಿಕ್ಕ ಸಂಶಯ ಇದೆ ಕೇಳಂತೀಯಾ?

**ಆಕೆ** :– ಕೇಳಿರಿ ಸ್ವಾಮಿ! ನಿಮಗೆ ಹೇಳದೆ ಹೋದರೆ ಇನ್ಯಾರಿಗೆ ಹೇಳಬೇಕು. ಏನು ಆ ಸಂಶಯ?

**ನಾನು** :– ಸತ್ಯಂರಾಜು ಗುಹೆಯೊಳಗೆ ಹೋದಾಗ, ಅಲ್ಲಿ ಒಬ್ಬ ಸಾಯಬ್ ಬಾಬಾರವರು ಮಾತ್ರ ಇದ್ದಾರೆ. ನೀವು ಹೇಳಿದಹಾಗೆ ಸತ್ಯಂ ಮತ್ತು ಬಾಬಾರವರು ಅಲ್ಲದೆ ಬೇರೆ ಯಾರು ಇಲ್ಲ. ಅಲ್ಲಿ ಅವರ ಮಧ್ಯೆ ನಡೆದ ವಿಷಯ ಏನಿದೆಯೊ ಅದನ್ನು ಇತ್ತ ಸತ್ಯಂ ಆಗಲಿ ಅತ್ತ ಬಾಬಾ ಆಗಲಿ ಹೇಳಿದರೇನೆ ಹೊರಗಿನವರಿಗೆ ಗೊತ್ತಾಗುತ್ತದೆ. ಅವರು ಯಾರಿಗು ಹೇಳದೇ ಇದ್ದರೆ ಯಾರಿಗು ಗೊತ್ತಾಗುವುದಿಲ್ಲ. ಆಗಿರುವಾಗ ಅಲ್ಲಿ ನಡೆದ ವಿಷಯವೆಲ್ಲಾ ಮಣಿಪೋಣಿಸಿದ ಹಾಗೆ ನೀವು ಹೇಗೆ ಹೇಳುತ್ತಿದ್ದೀರಾ?

**ಆಕೆ** :– ಕ್ಷಮಿಸಿರಿ, ನಾನು ಮೊದಲೆ ಹೇಳಬೇಕಾದ ವಿಷಯವಿದೆ ಆದರೆ ಹೇಳಲಿಲ್ಲ. ನಾನು ಸತ್ಯಂ ರಾಜುಗೆ ಸ್ವಂತ ತಂಗಿಯಾಗುತ್ತೇನೆ. ನನ್ನ ಹೆಸರು ಅಂಬೋಜಮ್ಮ. ನಮ್ಮ ಅಣ್ಣ ಸತ್ಯಂ ಮನೆ ಬಿಟ್ಟು ಬರುವುದಕ್ಕಿಂತ ಮೊದಲೆ

ನಾನು ಸತ್ತುಹೋಗಿದ್ದೆನು. ಆದರೆ ಜನ್ಮಕ್ಕೆ ಹೋಗಲಿಲ್ಲ. ನಾನು ಆಗಿನಿಂದ ಇದ್ದೇನೆ, ಆದರೆ ಯಾರಿಗು ಕಾಣಿಸೆನು. ನಮ್ಮ ಅಣ್ಣ ಮನೆ ಬಿಟ್ಟು ಬರುವಾಗ ನಾನು ಸಹ ಅಣ್ಣನ ಜೊತೆಗೆ ಬಂದೆನು. ನಾನು ಕಾಣಿಸದೆ ಇದ್ದರೂ, ಅಣ್ಣ ಸತ್ಯಂಗೆ ಎಂತಹ ಹಾನಿ ಆಗದ ಹಾಗೆ ನೋಡಿಕೊಳ್ಳುತ್ತಿದ್ದೆನು. ಆ ವಿಧವಾಗಿ ಸತ್ಯಂ ಅಣ್ಣನನ್ನು ಹಿಂಬಾಲಿಸಿ ನಾನು ಸಹ ಗುಹೆಯೊಳಗೆ ಹೋಗಿ, ಒಂದು ಪಕ್ಕದಲ್ಲಿದ್ದು ಎಲ್ಲ ಕೇಳುವುದು, ಎಲ್ಲವನ್ನು ನೋಡುವುದು ನಡೆದಿದೆ. ಆದ್ದರಿಂದ ನಿಮಗೆ ಮಣಿಪೋಣಿಸಿದ ಹಾಗೆ ಹೇಳುತ್ತಿದ್ದೇನೆ.

**ನಾನು** :– ಸರಿ! ಈಗ ಸಂಶಯ ತೀರಿತು. ಮತ್ತೊಂದು ಸಂಶಯ ಹುಟ್ಟಿತು. ಅದನ್ನು ಕೇಳುತ್ತಿದ್ದೇನೆ. ನೀವು ಹೇಳಿರುವುದು ಸುಮಾರು ಐದು (500) ನೂರು ಸಂವತ್ಸರಗಳ ಕೆಳಗಿನ ವಿಷಯ. ಅಂದಿನಿಂದ ನೀವು ಸಜೀವವಾಗಿಯೆ ಇದ್ದೀರಾ?

**ಆಕೆ** :– ಹೌದು. ನಾನು ಸೂಕ್ಷ್ಮವಾಗಿ ಆಗ ಇರುವಹಾಗೆ ಈಗಲೂ ಇದ್ದೇನೆ. ಹಾಗೆ ಸತ್ಯಂ ಸ್ವಲ್ಪಕಾಲಕ್ಕೆ ಸತ್ತುಹೋಗಿ, ಆತನು ಸಹ ನನ್ನ ಹಾಗೆ ಸೂಕ್ಷ್ಮವಾಗಿ ಬದಲಾಗಿ ಸಜೀವವಾಗಿಯೆ ಇದ್ದಾನೆ. ಇಬ್ಬರು ಸೇರಿ ದರ್ಗಾದ ಹತ್ತಿರವೆ ಇದ್ದೇವೆ. ನಮಗೆ ಸಾವು ಯಾವಾಗ ಬರುತ್ತದೊ ಗೊತ್ತಿಲ್ಲ. ಹೀಗೆ ಇನ್ನೂ ಎಷ್ಟುಕಾಲ ಇರಬೇಕೊ ತಿಳಿಯದು.

**ನಾನು** :– ಆದರೆ ನೀವಿಬ್ಬರು ಸ್ಥೂಲಶರೀರವನ್ನು ಬಿಟ್ಟು ಸೂಕ್ಷ್ಮ ಶರೀರದೊಂದಿಗೆ ಇದ್ದೀರೆಂಬ ಮಾತು.

**ಆಕೆ** :– ಹೌದು ಹಾಗೆ ಇದ್ದೇವೆ.

**ನಾನು** :– ಸತ್ಯಂರಾಜುರವರು, ಶಿವಾಲಯದಲ್ಲಿ ನಿಂತುಹೋಗಿದ್ದಾನಲ್ಲವೆ! ಅಲ್ಲಿ ಎಷ್ಟುಕಾಲವಿದ್ದಾನೆ? ನಂತರ ನಡೆದ ವಿಷಯವನ್ನು ನೀನೆ ಹೇಳಬೇಕು.

**ಆಕೆ** :– ಸತ್ಯಂರಾಜುವಿನ ಗುರುಗಳಾದ ಸಾಯಬ್ ಬಾಬಾರವರು ಹೇಳಿದಹಾಗೆ ಕಡ್ಡಿ ಚಿಗುರಿದೆ, ಆದ್ದರಿಂದ ಸತ್ಯಂ ಶಾಶ್ವತವಾಗಿ ಅಲ್ಲಿಯೆ ಇರಬೇಕು. ಅದೇ

ವಿಧವಾಗಿ ಮೂರು ನಾಲ್ಕು ತಿಂಗಳುಗಳು ಕಳೆದಿವೆ. ಪ್ರತಿದಿನ ಬೆಳಗ್ಗೆ, ಸಾಯಂಕಾಲ ಸತ್ಯಂನನ್ನು ಗಮನಿಸಿದ ಪೂಜಾರಿ, ಶಾಶ್ವತವಾಗಿ ಅಲ್ಲಿಯೆ ಇರಬಾರದು, ಆಗಾಗ ಬಂದು ಇರಬಹುದೆಂದನು. ಆ ಪೂಜಾರಿ ಮಾತನ್ನು ಸತ್ಯಂ ಕೇಳಲಿಲ್ಲ. ಒಂದು ದಿನ ಪೂಜಾರಿ ಬಂದು, ನಿನ್ನ ಹೆಸರೇನು ಎಂದು ಕೇಳಿದನು. ಆಗ ಸತ್ಯಂ ನನ್ನ ಹೆಸರು ಸತ್ಯಂರಾಜು ಎಂದು ಹೇಳದೆ, ಬಾಬಾ ಫಕರುದ್ದೀನ್ ಎಂದನು. ಆ ಮಾತು ಕೇಳುತ್ತಲೆ ಪೂಜಾರಿಗೆ ಮತ್ತಷ್ಟು ಕೋಪ ಬಂದಿತು. ಈ ಗುಡಿಯೊಳಗೆ ಸಾಧುಗಳು, ಸನ್ಯಾಸಿಗಳು ಬರಬಹುದು, ಹೋಗಬಹುದು ಆದರೆ ನೀನು ಒಬ್ಬ ಮುಸ್ಲಿಮ್ ಫಕೀರನು! ಒಳಗೆ ಬರಬಾರದು ಎಂದು ಪೂಜಾರಿ ಅಂದಾಗ ಅದಕ್ಕೆ ಬಾಬಾ ಫಕರುದ್ದೀನ್ (ಸತ್ಯಮ್) ಇದು ನಮ್ಮ ಗುರುಗಳು ಆಜ್ಞೆ ಪ್ರಕಾರ ಇದು ನನ್ನ ಸ್ವಂತ ಸ್ಥಾನ. ಇಲ್ಲಿಂದ ನಾನು ಹೊರಗೆ ಹೋಗುವುದಿಲ್ಲ ಅಂದನು. ಈ ವಿಧವಾಗಿ ಪೂಜಾರಿ ಗುಡಿ ನನ್ನದು ನೀನು ಹೊರಗೆ ಹೋಗು! ಎಂದು ಅನ್ನುತ್ತಾನೆ, ಬಾಬಯ್ಯ ಈ ಸ್ಥಾನ ನನ್ನದು ಹೋಗುವುದಿಲ್ಲ ಎನ್ನುತ್ತಾನೆ. ಹಾಗೆ ಸ್ವಲ್ಪ ಕಾಲ ಕಳೆಯಿತು. ಗುಡಿಗೆ ಬಂದವರು ಅನಾರೋಗ್ಯಗಳನ್ನು ಬಾಬಯ್ಯನಿಗೆ ಹೇಳಿದರೆ, ಆತನು ತನ್ನ ಗುರುಗಳು ಕೊಟ್ಟ ಶಕ್ತಿಯಿಂದ ಗುಣಪಡಿಸಿ ಕಳುಹಿಸುತ್ತಿದ್ದನು. ಆ ವಿಧವಾಗಿ ಗುಡಿಯಲ್ಲಿ ಬಾಬಾರವರಿಗೆ ಸ್ವಲ್ಪ ಜನಬಳಕೆ ಬೆಳೆಯಿತು.

ಈಶ್ವರಾಲಯದೊಳಗಿನ ಪೂಜಾರಿಗೆ, ಬಾಬಾ ಪಕರುದ್ದಿನ್ (ಸತ್ಯಮ್‌ರಾಜು) ಪಕ್ಕದಲ್ಲಿರುವ ಶೂಲದಂತೆ ತಯಾರಾದನು. ಒಂದು ದಿನ ಪೂಜಾರಿ, ಬಾಬಾನನ್ನು ಮೋಸದಿಂದಲಾದರು ಸಾಯಿಸಬೇಕೆಂದು ಅಂದುಕೊಂಡನು. ಹಾಗೆ ಅಂದುಕೊಂಡ ನಂತರ ಒಂದು ದಿನ ವಿಷವನ್ನು ಬೆರಿಸಿ ಗಾರಿಗೆಗಳನ್ನು ತಯಾರು ಮಾಡಿ, ಇತರರಿಂದ ಬಾಬಾರವರಿಗೆ ಸೇರುವಂತೆ ಮಾಡಿದನು. ರಾತ್ರಿಗೆ ತಿಂದು, ಬೆಳಗ್ಗೆ ಸತ್ತುಹೋಗಬೇಕೆಂಬ ಉದ್ದೇಶದಿಂದ ಸಾಯಂಕಾಲ ಗಾರಿಗೆಗಳನ್ನು ಬಾಬಾರವರಿಗೆ ಕೊಡುವಂತೆ ಮಾಡಿದನು. ಯಾರು ಏನು ಕೊಟ್ಟರು ಬಾಬಾರವರು ತಿನ್ನುತ್ತಿದ್ದರು. ಆದ್ದರಿಂದ ಸುಲಭವಾಗಿ ಪಥಕ

ನೆರವೇರುತ್ತದೆಂದು ಪೂಜಾರಿ ಅಂದುಕೊಂಡನು. ಆದರೆ ಆ ದಿನ ಬಾಬಾ ಪಕರುದ್ದೀನ್ ತಾನು ತೆಗೆದುಕೊಂಡ ಗಾರಿಗೆಗಳನ್ನು ಪಕ್ಕದಲ್ಲಿಟ್ಟು ಮಲಗಿಕೊಂಡನು. ಆ ದಿನ ನಡುರಾತ್ರಿ ಸಮಯದಲ್ಲಿ ಪೂಜಾರಿಗೆ ಹೊಟ್ಟೆನೋವು ಬಂದಿತು. ಆ ರಾತ್ರಿಯೆಲ್ಲಾ ಪೂಜಾರಿ ವಿಪರೀತವಾಗಿ ನೋವು ಅನುಭವಿಸಿದನು. ಬೆಳಗ್ಗೆ ಬಂದು ನೋಡಿದರೆ, ಬಾಬಾರವರಿಗೆ ಏನು ಆಗಿರಲಿಲ್ಲ. ಪೂಜಾರಿಗೆ ಆಶ್ಚರ್ಯವಾಯಿತು. ರೋಗಗ್ರಸ್ತರಿಗೆ ಬಾಬಾ ಮಂತ್ರ ಓದಿಯೋ, ಏನಾದರು ಔಷಧ ಕೊಟ್ಟೋ ಚೆನ್ನಾಗಿ ಮಾಡುವನು. ಆದ್ದರಿಂದ ಪೂಜಾರಿ ಸಹ ಬಾಬಯ್ಯ ಹತ್ತಿರಕ್ಕೆ ಹೋಗಿ ಹೊಟ್ಟೆನೋವು ಹೋಗುವುದಕ್ಕೆ ಔಷಧ ಕೊಡು ಎಂದನು. ಆಗ ಬಾಬಾ ತನ್ನ ಹತ್ತಿರ ಪಕ್ಕದಲ್ಲಿ ಇಟ್ಟುಕೊಂಡ ಗಾರಿಗೆಗಳನ್ನು ಕೊಟ್ಟನು. ಇವು ತಿಂದರೆ ಹೊಟ್ಟೆನೋವು ಹೋಗುತ್ತದೆಂದು ಹೇಳಿದನು. ಅವುಗಳನ್ನು ನೋಡುತ್ತಲೆ ಪೂಜಾರಿಗೆ ವಿಷ ಜ್ಞಾಪಕಕ್ಕೆ ಬಂದಿತು. ಗಾರಿಗೆಗಳನ್ನು ಕೈಯಲ್ಲಿ ತೆಗೆದುಕೊಂಡು ತಿನ್ನದೆ ಇಟ್ಟುಕೊಳ್ಳುವುದನ್ನು ನೋಡಿದ ಬಾಬಾ ಅವುಗಳನ್ನು ತಿನ್ನು, ನೀನು ಏನು ಭಯಪಡಬೇಡ. ಅವುಗಳಲ್ಲಿನ ವಿಷವೇ ನಿನ್ನ ಹೊಟ್ಟೆನೋವನ್ನು ಇಲ್ಲದೆ ಮಾಡುತ್ತದೆಂದು ಹೇಳಿದನು. ಪೂಜಾರಿಗೆ ಏನು ಅರ್ಥವಾಗಲಿಲ್ಲ. ಇವುಗಳಲ್ಲಿ ವಿಷ ಇದೆಯೆಂದು ಆತನಿಗೇಗೆ ತಿಳಿಯಿತು? ಈಗ ಇವು ತಿಂದರೆ ನಾನು ಸಾಯುತ್ತೇನೆ, ತಿನ್ನದೆ ಹೋದರೂ ನೋವಿಗೆ ಸಹಿಸಿಕೊಳ್ಳದೆ ಸಾಯುತ್ತೇನೆ. ನೋವನ್ನು ಅನುಭವಿಸಿ ಸಾಯುವುದಕ್ಕಿಂತ ಇವುಗಳನ್ನು ತಿಂದು ಬೇಗ ಸಾಯುವುದು ಮೇಲೆಂದುಕೊಂಡು ಗಾರಿಗೆಗಳನ್ನು ತಿಂದನು. ತಿಂದ ತಕ್ಷಣವೆ ಬಾಬಾರವರು ಹೇಳಿದಹಾಗೆ ಹೊಟ್ಟೆನೋವು ಮಾಯವಾಗಿ ಹೋಯಿತು. ಅಲ್ಲಿಂದ ಪೂಜಾರಿ ತಲೆಬಗ್ಗಿಸಿಕೊಂಡು ಹೋದನು.

ಮತ್ತೆ ಕೆಲವು ದಿನಗಳಿಗೆ ಪೂಜಾರಿಗೆ ಬಾಬಾ ಮೇಲೆ ದ್ವೇಷ ಬೆಳೆದು ಹೋಯಿತು. ಈ ಬಾರಿ ನೇರವಾಗಿ ಕೋಟೆಯೊಳಗೆ ಹೋಗಿ, ರಾಜನಿಗೆ ಹೇಳಿ ಬಾಬಾಪಕರುದ್ದೀನ್ ವಿಷಯ ಹೇಳಿ, ಗುಡಿಯಿಂದ ರಾಜರ ಕೈಯಿಂದ ಹೊರಹಾಕಿಸಬೇಕೆಂದುಕೊಂಡನು. ಹಾಗೆ ಅಂದುಕೊಂಡ ನಂತರ ಒಂದು ದಿನ ಕೋಟೆಯೊಳಗಿನ ರಾಜರ ಹತ್ತಿರಕ್ಕೆ ಹೋಗಿ ಒಬ್ಬ ಫಕೀರ ಗುಡಿಯನ್ನು

ಆಕ್ರಮಿಸಿಕೊಂಡು, ಅಪವಿತ್ರತೆ ಮಾಡುತ್ತಿದ್ದಾನೆಂದು ಹೇಳಿದನು. ರಾಜ, ಭಟರಿಗೆ ಬಾಬಾಪಕರುದ್ದೀನ್‌ನನ್ನು ಕರೆಯಲು ಕಳುಹಿಸಿದನು. ಇಬ್ಬರ ವಾದಗಳನ್ನು ಕೇಳಿದನು. ದೇವಾಲಯ ಭಕ್ತರದೆ ಆಗಲಿ ಪೂಜಾರಿಯದಲ್ಲ ಎಂದು ಬಾಬಾ ಎನ್ನುತ್ತಿದ್ದಾನೆ. ಆಲಯ ಪೂಜಾರಿದೆ ಆಗಲಿ ಭಕ್ತರದಲ್ಲ ಎಂದು ಪೂಜಾರಿ ಎನ್ನುತ್ತಿದ್ದಾನೆ. ಕೊನೆಗೆ ರಾಜ ಯಾವಕಡೆಯೂ ಹೇಳಲಾಗದೆ ಇಬ್ಬರಿಗು ಸೇರಿಸಿ ಒಂದು ಪರೀಕ್ಷೆ ಇಟ್ಟನು. ಆ ಪರೀಕ್ಷೆಯಲ್ಲಿ ಯಾರು ಗೆದ್ದರೆ ಅವರಿಗೆ ಗುಡಿ ಸ್ವಂತವಾಗುತ್ತದೆಂದು ಹೇಳಿದನು. ಆ ಪರೀಕ್ಷೆಗೆ ಇಬ್ಬರೂ ಒಪ್ಪಿಕೊಂಡರು. ಆ ಪರೀಕ್ಷೆ ಏನೆಂದರೆ! ಒಂದೊಂದು ಸುಣ್ಣದ ಮೂಟೆಯಲ್ಲಿ ಒಬ್ಬೊಬ್ಬರನ್ನು ಸುಣ್ಣದೊಂದಿಗೆ ಸಹ ಇರಿಸಿ, ಮೂಟೆಕಟ್ಟಿ, ಪೆನುಕೊಂಡ ಕೆರೆಯಲ್ಲಿ ಹಾಕಿದರೆ, ಯಾರು ಮೊದಲು ಮೂಟೆಯನ್ನು ಬಿಚ್ಚಿಕೊಂಡು ಹೊರಬಿದ್ದರೆ ಅವರಿಗೇ ಗುಡಿಯನ್ನು ಕೊಡಲಾಗುತ್ತದೆ. ರಾಜ ಹೇಳಿದ ಪ್ರಕಾರ ಸುಣ್ಣದೊಂದಿಗೆ ಸಹ ಇಬ್ಬರನ್ನು ಮೂಟೆಗಳಂತೆ ಕಟ್ಟಿ ನಡುಕೆರೆಯಲ್ಲಿ ಹಾಕಿದರು. ಇದೆಲ್ಲಾ ರಾಜನ ಸಮಕ್ಷಮದಲ್ಲಿಯೇ ನಡೆದಿದೆ. ಮಧ್ಯಾಹ್ನ ಒಂದು ಗಂಟೆಯ ಸಮಯದಲ್ಲಿ ನೀರಿನಲ್ಲಿ ಹಾಕಿದಾಗ, ಐದು ನಿಮಿಷಗಳಲ್ಲಿ ಬಾಬಾದಡಕ್ಕೆ ಸೇರಿಕೊಂಡನು. ಪೂಜಾರಿ ಸುಣ್ಣದಲ್ಲಿ ಬೆಂದು ಹೋಗಿ ಸತ್ತುಹೋದನು. ಬಾಬಾರವರು ದಡಕ್ಕೆ ಸೇರಿದ ತಕ್ಷಣವೇ ಕೆರೆ ಕಟ್ಟೆಯ ಮೇಲೆ ನಮಾಜ್‌ಮಾಡಿ, ರಾಜನ ಹತ್ತಿರ ಅನುಮತಿ ತೆಗೆದುಕೊಂಡು ಹೊರಟು ಹೋದನು. ಆ ವಿಧವಾಗಿ ಶಿವಾಲಯ ಬಾಬಾ ಪಕುರುದ್ದೀನ್ ಸ್ವಂತವಾಯಿತು. ಆಗಿನಿಂದ ಶಿವಭಕ್ತರು ಬಂದು, ಪೂಜೆ ಮಾಡಿಕೊಂಡು ಬಾಬಾ ಹತ್ತಿರ ತಮ್ಮ ಕಷ್ಟಗಳನ್ನು ಹೇಳಿಕೊಂಡು ಹೋಗುತ್ತಿದ್ದರು. ಬಾಬಾ ಹತ್ತಿರ ಕಷ್ಟಗಳನ್ನು ಹೇಳಿಕೊಂಡರೆ ಪರಿಹಾರವಾಗುತ್ತವೆಂದು ನಂಬುತ್ತಿದ್ದರು. ಬಹಳ ಜನರಿಗೆ ಹಾಗೆ ನಡೆಯುವುದರಿಂದ, ಅಲ್ಲಿಗೆ ಬರುವವರ ಸಂಖ್ಯೆ ಬೆಳೆದು ಹೋಯಿತು. ಆ ವಿಧವಾಗಿ ಬಾಬಾಗೆ, ಪ್ರಜೆಗಳಿಗೆ ಸಂಬಂಧ ಬೆಳೆದು ಹೋಯಿತು. ಸ್ವಲ್ಪಕಾಲ ಕಳೆದಾಗ ಬಾಬಾಗೆ ವೃದ್ಧಾಪ್ಯ ಬಂದು ಕೊನೆಗೆ ಸತ್ತು ಹೋದನು. ಸತ್ತುಹೋದ ನಂತರ ಸೂಕ್ಷ್ಮ ಶರೀರದೊಂದಿಗೆ ಅಲ್ಲಿಯೇ ಇದ್ದಾನೆ.

ಬಾಬಾರವರು ಸತ್ತುಹೋದ ನಂತರ ಅಲ್ಲಿಯವರೆಗು ಆತನೊಂದಿಗೆ ಪರಿಚಯವೇರ್ಪಡಿಸಿಕೊಂಡ ಮುಸ್ಲಿಮ್ ಭಕ್ತರು, ಬಾಬಾ ಸಾಯದ ಮೊದಲೇ ತಮ್ಮೊಂದಿಗೆ ಹೇಳಿದ ಪ್ರಕಾರ ಆತನ ಶರೀರವನ್ನು ಗುಡಿಯೊಳಗೆ ಊತಿಟ್ಟು ದರ್ಗಾ ಕಟ್ಟಿದ್ದಾರೆ. (ಇಂದಿಗೂ ದರ್ಗಾ ಇದೆ ಶಿವಾಲಯ ಇದೆ. ಪ್ರಸ್ತುತ ಕಾಲದಲ್ಲಿ ಹಳುಬರಿಗೆ, ಆ ಊರಿನವರಿಗೆ ಅದು "ಶಿವಾಲಯ" ಎಂದು ತಿಳಿದಿದೆಯಾಗಲಿ ಹೊಸಬರಿಗೆ ಬಾಬಾ ಫಕರುದ್ದೀನ್ "ದರ್ಗಾ" ಎಂದೇ ತಿಳಿದಿದೆ. ಅಲ್ಲಿ ಪ್ರತಿ ವರ್ಷ ಬಾಬಾರವರ ಉರುಸು ನಡೆಯುತ್ತಿದೆ. ಆ ಉರುಸು ಪ್ರತ್ಯೇಕತೆ ಏನೆಂದರೆ ಬಾಬಾರವರು ಮೊದಲು ಕಡ್ಡಿ ನೆಟ್ಟಾಗ ಚಿಗುರಿದ ಮಿಸ್ವಾಕ್ ಗಿಡ (ಸಕ್ಕರೆ ಮರ)ದಿಂದ ಉರುಸು ದಿನದಂದು ಸಕ್ಕರೆ ಬೀಳುತ್ತಿರುತ್ತದಂತೆ. ಆ ಸಕ್ಕರೆಯನ್ನು ಬಾಬಾರವರಿಗೆ ಓದಿಕೆ ಮಾಡುತ್ತಾರಂತೆ. ಪೂರ್ವದಲ್ಲಿ ಆ ಗಿಡದಿಂದ ಆ ದಿನ ಒಂದು ಕೇಜಿ ಸಕ್ಕರೆ ಬೀಳುತ್ತಿತ್ತಂತೆ. ಪ್ರಸ್ತುತ ಕಾಲದಲ್ಲಿ ಒಂದು ಹಿಡಿ ಮಾತ್ರ ಬೀಳುತ್ತದೆಂದು ಹೇಳುತ್ತಿದ್ದಾರೆ. (ಇದು ಹೇಳಿದರೆ ಕೇಳುವುದೆ ಆಗಲಿ ನಾನು ನೋಡಿಲ್ಲ)

**ನಾನು** :- ಇದೆಲ್ಲಾ ಬಾಬಾ ಪಕರುದ್ದೀನ್ (ಸತ್ಯಂರಾಜು) ಚರಿತ್ರೆ. ಆದರೆ ಸಾಯಬ್ ಬಾಬಾ ಏನಾದಂಗೆ? ಒಂದು ಬಾರಿಯಾದರು ಆತನು ನಿಮ್ಮ ಹತ್ತಿರಕ್ಕೆ ಬಂದಿದ್ದಾನಾ? ಅಥವಾ ನೀವು ಆತನ ಹತ್ತಿರಕ್ಕೆ ಹೋಗಿದ್ದೀರಾ? ಆತನು ಎಲ್ಲಿದ್ದಹಾಗೆ?

**ಆಕೆ** :- ಪೆನುಕೊಂಡ ಕೋಟೆಹತ್ತಿರ ಗುಹೆಯೊಳಗೆ ಮಾತನಾಡಿದ ನಂತರ ಸಾಯಬ್ ಬಾಬಾರವರು ನೂರು ಸಂವತ್ಸರಗಳ ಕಾಲ, ಮಹಾರಾಷ್ಟ್ರದಲ್ಲಿನ ಷಿರಿಡಿ ಹತ್ತಿರ ಭೂಮಿಯಲ್ಲಿ ಏರ್ಪಡಿಸಿಕೊಂಡ ಗುಹೆಯಲ್ಲಿ ಧ್ಯಾನದಲ್ಲಿದ್ದು, ನಂತರ ಹೊರಗೆ ಬಂದು ಷಿರಿಡಿಯಲ್ಲಿಯೆ ತಿರುಗುತ್ತಿದ್ದನು. ಆಗಲು ಸಹ ಆತನ ಹೆಸರು ಸಾಯಬ್‌ಬಾಬಾನೆ! ಆದರೆ ಕಾಲಕ್ರಮೇಣ ಆತನ ಹೆಸರಿನಲ್ಲಿ ಸ್ವಲ್ಪ ಬದಲಾವಣೆ ಬಂದಿತು. ಚಿಕ್ಕಮಕ್ಕಳು ಬಾಯಿ ತಿರುಗದೆ **ಸಾಯಬ್** ಎನ್ನದೆ **ಸಾಯಬಾಬಾ** ಎನ್ನುತ್ತಿದ್ದರು. ಹಾಗೆ ಒಂದು ಅಕ್ಷರ ಆತನ ಹೆಸರಿನಲ್ಲಿ

ಮಾಯವಾಗಿ ಹೋಗಿದೆ. ಸಾಯಬಾಬಾನಾಗಿ ಆತನ ಜೀವನಕಾಲವೆಲ್ಲಾ ಕಳೆದುಹೋಯಿತು. ಅಲ್ಲಿ ಆತನು ಸತ್ತುಹೋದರೂ ಸೂಕ್ಷ್ಮವಾಗಿಯೆ ಉಳಿದುಹೋಗಿದ್ದಾನೆ. ಸೂಕ್ಷ್ಮ ಶರೀರದಿಂದ ಮತ್ತೆ ಪೆನುಕೊಂಡ ಪ್ರಾಂತಕ್ಕೆ ಬಂದು, ಇಲ್ಲಿ ನಮ್ಮನ್ನು ನೋಡಿ ಆಶೀರ್ವಧಿಸಿ ಇಲ್ಲಿಗೆ ಹತ್ತಿರದಲ್ಲಿಯೇ ಇರುತ್ತೇನೆಂದು ಹೇಳಿ, ಸತ್ಯನಾರಾಯಣ ರಾಜು ಎನ್ನುವ ಬಾಲಕನಲ್ಲಿ ಸೇರಿ ಆ ಶರೀರದಲ್ಲಿಯೆ ಇಂದಿಗೂ ಪುಟ್ಟಪರ್ತಿಯಲ್ಲಿ ಇದ್ದಾನೆ. ಈಗ ನೂರು ವರ್ಷಗಳಿಂದ **ಸಾಯಿಬಾಬಾ** ಎಂದು ಕರೆಯಲ್ಪಡುತ್ತಿದ್ದಾನೆ. ಮೊದಲು ಪೆನುಕೊಂಡದಲ್ಲಿ ಸಾಯಬ್ ಬಾಬಾ ನಂತರ ಷಿರಿಡಿಯಲ್ಲಿ ಸಾಯಬಾಬಾನಾಗಿ, ಪ್ರಸ್ತುತ ಕಾಲದಲ್ಲಿ ಪುಟ್ಟಪರ್ತಿಯಲ್ಲಿ ಸಾಯಿಬಾಬಾನೆಂದು ಕರೆಯಲ್ಪಡುತ್ತಿದ್ದಾನೆ.

**ನಾನು** :– ಸಾಯಿಬಾಬಾನಾಗಿ ಎಷ್ಟುಕಾಲ ಬದುಕುತ್ತಾನೊ ಹೇಳುತ್ತೀಯಾ?

**ಆಕೆ** :– ಈಗ ನಾನು ಹೇಳುವುದು ಏನಿದೆ? ಮೂರು ಸಂವತ್ಸರಗಳ ಕೆಳಗೆ ನೀವೆ ಹೇಳಿದ್ದೀರ. ಆತನ ವಯಸ್ಸು 90 ರಿಂದ 96ರವರೆಗೆ ಇದೆಯೆಂದು ಬಹುಶ 92ನೇ ವರ್ಷದಲ್ಲಿ ಸತ್ತುಹೋಗಬಹುದೆಂದು ಒಂದು ಸಂದರ್ಭದಲ್ಲಿ ಹೇಳಿದ್ದೀರ. ಚಂದ್ರನಲ್ಲಿ ನೀರು ಇವೆಯೆಂದು ಸಹ ಆಗಲೇ ಹೇಳಿದ್ದೀರ.

**ನಾನು** :– ನಾನು ಯಾವಾಗಲೋ ಹೇಳಿರುವುದು ನಿನಗೆ ಹೇಗೆ ಗೊತ್ತು?

**ಆಕೆ** :– ನೀವು ಇದೇ ಪೆನುಕೊಂಡ ಪ್ರಾಂತದಲ್ಲಿ ನಿಮ್ಮ ಶಿಷ್ಯರೊಂದಿಗೆ ಸಹ ಜೀಪಿನಲ್ಲಿ ಬಂದು ರಾತ್ರಿಹೊತ್ತು ರೈಲ್ವೇ ಗೇಟ್ ಹತ್ತಿರವಿರುವ ಆಂಜನೇಯಸ್ವಾಮಿ ಗುಡಿಹತ್ತಿರ ನಿಂತುಕೊಂಡಾಗ. ಅಲ್ಲಿ ನಿಮ್ಮ ಶಿಷ್ಯರಿಗೆ ಹೇಳುತ್ತಿರುವಾಗ ನಾನು ಕೇಳಿದೆನು. ನಾನೇ ಅಲ್ಲ ನಮ್ಮ ಅಣ್ಣ ಬಾಬಾಫಕರುದ್ದೀನ್ ಸಹ ಕೇಳಿದನು.

**ನಾನು** :– ಆ ಸಮಯದಲ್ಲಿ ನೀವು ಅಲ್ಲಿ ಏಕಿದ್ದೀರಾ. ಒಂದು ವಿಧದಲ್ಲಿ ಈ ಪ್ರಶ್ನೆ ನಾನು ಕೇಳಬಾರದು. ಆದ್ದರಿಂದ ಅದಕ್ಕೆ ಉತ್ತರ ಬೇಡ ಆದರೆ ಇಲ್ಲಿಗೆ ಏಕೆ ಬಂದಿದ್ದೀಯ? ಈ ಗರ್ಭಿಣಿ ಶರೀರದೊಳಗೆ ಏಕೆ ಬಂದಿದ್ದೀಯ?

**ಆಕೆ** :– ನಾನು ಮೊದಲೆ ಹೇಳಿದೆನಲ್ಲ! ಈಕೆ ನಮ್ಮ ಭಕ್ತಳೆಂದು, ಅಣ್ಣನ ಆಜ್ಞೆ ಪ್ರಕಾರ ನಾನು ಆಗಾಗ ಬಂದು ಯಾವ ದೆವ್ವಗಳು ಈಕೆ ಸುದ್ದಿಗೆ ಬಾರದಹಾಗೆ ನೋಡಿ ಹೋಗುತ್ತಿರುತ್ತೇನೆ. ಪ್ರಸ್ತುತ ಎರಡು ದಿನಗಳಿಂದ ನಾನು ಪೆನುಕೊಂಡದಲ್ಲಿಯೇ ಇದ್ದೆನು, ಇಲ್ಲಿಗೆ ಬರಲಿಲ್ಲ. ಸಮಯ ನೋಡಿ ಒಂದು ದೆವ್ವ ಈಕೆಯಲ್ಲಿ ಸೇರಿದ್ದು, ನೀವು ಹೋಗಿ ಹೊರಗೆ ಕಳುಹಿಸಿ ಬರುವುದು ನಡೆಯಿತು.

ಬಾಬಾರವರು ಮಕ್ಕಾಗೆ ಹೋಗಿದ್ದಾನೆ ಆದ್ದರಿಂದ ಎರಡು ದಿನಗಳಿಂದ ಇಲ್ಲಿಗೆ ಬರಲು ಆಗಲಿಲ್ಲ. ಈಗ ಇಲ್ಲಿಗೆ ಬಂದ ನಂತರ ನೀವು ಬಂದು ಈಕೆಯನ್ನು ನೋಡಿಬಂದಹಾಗೆ ನನಗೆ ತಿಳಿಯಿತು. ಮೊದಲು ಒಂದು ಬಾರಿ ನಿಮ್ಮನ್ನು ನೋಡಿದ್ದೇನೆ ಆದ್ದರಿಂದ ಈಗ ನೋಡಬೇಕೆಂದು, ನಿಮ್ಮೊಂದಿಗೆ ಮಾತನಾಡಬೇಕೆಂದು ಬಂದಿದ್ದೇನೆ. ನನ್ನ ಕೋರಿಕೆ ನೆರವೇರಿತು.

**ನಾನು** :– ನಿಮ್ಮ ಅಣ್ಣ ಸತ್ಯಂರಾಜು ಬಾಬಾ ಫಕರುದ್ದೀನ್ ಎಂದು ಹೆಸರು ಬದಲಾಯಿಸಿಕೊಂಡಾಗ, ನೀನು ನಿನ್ನಹೆಸರು ಬದಲಾಯಿಸಿಕೊಳ್ಳದೆ ಅಂಬೋಜಮ್ಮ ಎಂದು ಹಳೆಯ ಹೆಸರಿನಲ್ಲಿಯೆ ಇದ್ದೀಯ ಏಕೆ.

**ಆಕೆ** :– ಅಣ್ಣ ಸ್ವಂತವಾಗಿ ಹೆಸರು ಬದಲಾಯಿಸಿಕೊಂಡಿಲ್ಲ. ಅಣ್ಣನಿಗೆ ಸಾಯಬ್ ಬಾಬಾರವರು ಹೆಸರು ಬದಲಾಯಿಸಿದರು. ನನಗೆ ಯಾರೂ ಬದಲಾಯಿಸಲಿಲ್ಲ, ಆದ್ದರಿಂದ ಆ ಹೆಸರಿನಲ್ಲಿಯೇ ಇದ್ದೇನೆ.

**ನಾನು** :– ಪೆನುಕೊಂಡ ದರ್ಗಾದ ಹತ್ತಿರ ನೀವು ಇಬ್ಬರೆ ಇದ್ದೀರಾ?

ಆಕೆ :– ಸುಮಾರು ಎರಡು ನೂರು ಜನ ಇದ್ದಾರೆ. ಆದರೆ ನಮ್ಮಷ್ಟು ವಯಸ್ಸಿರುವವರು ಯಾರೂ ಇಲ್ಲ.

**ನಾನು** :– ಎರಡು ನೂರು ಜನ ಕಾಣಿಸುವವರಾ? ಕಾಣಿಸದೆ ಇರುವವರಾ?

**ಆಕೆ** :– ಕಾಣಿಸುವವರು ಬಂದು ಅವರ ಕೋರಿಕೆಗಳನ್ನು ಹೇಳಿಕೊಂಡು ಹೋಗುತ್ತಿರುತ್ತಾರೆ. ಕಾಣಿಸದವರೆ ಎರಡು ನೂರು ಜನ ಅಲ್ಲಿಯೇ ಇರುತ್ತಾರೆ. ಅಣ್ಣನಿಂದ ಜ್ಞಾನವನ್ನು ಹೇಳಿಸಿಕೊಳ್ಳುತ್ತಿರುತ್ತಾರೆ.

**ನಾನು** :– ಈಗ ನಿಮ್ಮ ಅಣ್ಣ ದರ್ಗಾದ ಹತ್ತಿರ ಇಲ್ಲವಲ್ಲ! ಈಗ ಯಾರು ಅಲ್ಲಿದೊಡ್ಡವರಾಗಿ ಇರುತ್ತಾರೆ.

**ಆಕೆ** :– ಯಾರೂ ಇರುವುದಿಲ್ಲ. ನಾನೇ ಹೋಗಬೇಕು. ಸ್ವಾಮಿಯವರೆ ಇನ್ನು ನನ್ನನ್ನು ಕಳುಹಿಸಿಕೊಡಿ ನಾನು ಹೋಗಿಬರುತ್ತೇನೆ.

(ಕೊನೆಯಲ್ಲಿ ಆಕೆ ನಮಸ್ಕಾರ ಮಾಡಿ, ಗರ್ಭಿಣಿ ಶರೀರವನ್ನು ಬಿಟ್ಟು ಹೊರಟು ಹೋದಳು)

ಇದೆಲ್ಲಾ ಒಂದು ಸಿನಿಮಾ ಕಥೆಯಂತೆ ಇದೆ ಅಲ್ಲವೆ! ಹಾಗೆಂದು ಕಥೆ ಅಂದುಕೊಂಡೀರ, ಎಲ್ಲಾ ವಾಸ್ತವವೆ! ಅಂಬೋಜಮ್ಮ ಮಾತನಾಡಿರುವುದರ ಮುಖಾಂತರ ಎಷ್ಟೋ ಹೊಸ ವಿಷಯಗಳು, ಯಾರಿಗು ತಿಳಿಯದ ರಹಸ್ಯಗಳು ತಿಳಿದಿವೆ. ಈ ಸಂಭಾಷಣೆ ನಡೆದು ಇಲ್ಲಿಗೆ ಮೂವತ್ತು ವರ್ಷಗಳಾಗಿವೆ. ನಾವು ಮಾತನಾಡಿದಾಗಿನಿಂದ ಮೂವತ್ತು ವರ್ಷ ಕಳೆದರೂ, ಶಿಷ್ಯನಾದ ಬಾಬಾ ಫಕರುದ್ದೀನ್, ಗುರುಗಳಾದ ಸಾಯಬ್‌ಬಾಬಾರವರು ಇಂದಿಗೂ ಒಬ್ಬರು ಕಾಣಿಸಿದರೆ, ಒಬ್ಬರು ಕಾಣಿಸದೆ ಇದ್ದಾರೆ. ಸಾಯಬ್‌ಬಾಬಾ ಕಾರಣದಿಂದಲೆ ಪೆನುಕೊಂಡ ಪ್ರಾಂತ ಚರಿತ್ರೆ ಹರಡಿಕೊಂಡಿದೆ. ವಿದೇಶಗಳಿಗು ಸಹಿತ ಬಾಬಾರವರಿಂದ ಪೆನುಕೊಂಡ ಹೆಸರು ತಿಳಿದಿದೆ, ಸೂಕ್ಷ್ಮ ಶರೀರಗಳನ್ನು ಕುರಿತು ಹೇಳುತ್ತಿದ್ದೇವಾದ್ದರಿಂದ ಇವರು ಸಹ ಸೂಕ್ಷ್ಮ ಶರೀರದಿಂದಲೆ ಇದ್ದಾರೆಂದು ತಿಳಿಸುವುದಕ್ಕೆ ಈ ಸಂಘಟನೆಯನ್ನು ಹೇಳಬೇಕಾಗಿ ಬಂದಿತು. ಬಾಬಾ ಭಕ್ತರು ಎಷ್ಟೋ ಜನ ದೆವ್ವಗಳು ಇಲ್ಲ ಎನ್ನುತ್ತಿದ್ದಾರೆ. ಅವರಿಗು ಸಹ ಸೂಕ್ಷ್ಮ ಶರೀರಗಳೆಂದರೆ ಏನೊ, ಹೇಗೆ ಇರುತ್ತವೊ ಇದರ ಮೂಲಕ ಸುಲಭವಾಗಿ ತಿಳಿಯಬಲ್ಲದು. ಅಷ್ಟೇ ಅಲ್ಲದೆ ಒಬ್ಬ ಮನುಷ್ಯ 70, 80, 90, 100 ವರ್ಷಗಳೇ ಅಲ್ಲದೆ ಸೂಕ್ಷ್ಮ ಶರೀರದಿಂದ ನೂರು ವರ್ಷಗಳು ಬದುಕುತ್ತಾನೆಂದು ಇದರ ಮೂಲಕ ತಿಳಿಯುತ್ತದೆ. ಮತ್ತು ಕಾಣಿಸದ ಜೀವನವನ್ನು ಸಹ ಒಳ್ಳೆಯ ಮಾರ್ಗದಲ್ಲಿ ನಡೆಸಿಕೊಳ್ಳುವವರು ಭೂಮಿ ಮೇಲೆ ಎಷ್ಟೋ ಜನರು ಇದ್ದಾರೆಂದು ಸಹ ಇದರ ಮೂಲಕ ತಿಳಿದುಬರುತ್ತದೆ. ಇನ್ನೊಂದು ಮುಖ್ಯವಾದ ವಿಷಯ.

ಕೆಲವರು ಹೊಸ ಜನ್ಮಕ್ಕೆ ಹೋಗದೆ ಶರೀರಗಳನ್ನು ಬದಲಾಯಿಸಿ ಬದು ಕುತ್ತಿದ್ದಾರೆಂದು ಸಹ ಇದರ ಮೂಲದಿಂದ ತಿಳಿಯುತ್ತದೆ.

ಎಷ್ಟೋ ಮಹಾನುಭಾವರು, ಎಲ್ಲರಿಗು ವಂದನೆಗಳು ಎಂದು ಒಬ್ಬರು ಅಂದರೆ, ಕೆಲವರೆ ಮಹಾನುಭಾವರು ಅವರಿಗೆ ವಂದನೆಗಳು ಎಂದಿದ್ದಾರಂತೆ ಮತ್ತೊಬ್ಬರು. ಇಲ್ಲಿ ಎರಡು ವಾಕ್ಯಗಳು, ಇಬ್ಬರು ವ್ಯಕ್ತಿಗಳು ಇದ್ದಾರೆ. ಇದರಲ್ಲಿ ಯಾವುದು ಸರಿಯಾದ ಮಾತು ಎಂದು ಯೋಚಿಸಿದರೆ ವಾಸ್ತವಕ್ಕೆ ಎರಡನೇ ಮಾತೇ ಸರಿಯಾದದ್ದೆಂದು ಹೇಳಬಹುದು. ಏಕೆಂದರೆ ಮಹಾನುಭಾವರು ಎಷ್ಟೋ ಇರುವುದಿಲ್ಲ, ಕೆಲವರೆ ಇರುತ್ತಾರೆ. ದೊಡ್ಡ ಭಾವವಿರುವವರನ್ನು ಮಹಾನುಭಾವರು ಎನ್ನುತ್ತೇವೆ. ಹಾಗೆ ದೊಡ್ಡ ಆತ್ಮ ಇರುವವರನ್ನು ಮಹಾತ್ಮರು ಎಂದು ಕರೆಯುತ್ತೇವೆ. ಮಹಾನುಭಾವರು ಬೇರೆ, ಮಹಾತ್ಮರು ಬೇರೆ. ಮಹಾನುಭಾವರಲ್ಲಿ ದೊಡ್ಡ ಭಾವನೆಗಳಿದ್ದರೂ ಅವರಲ್ಲಿ ಜ್ಞಾನಶಕ್ತಿಯಿಂದ ಕೂಡಿಕೊಂಡ ಆತ್ಮ ಇರುವುದಿಲ್ಲ. ಮಹಾತ್ಮರಲ್ಲಿ ಜ್ಞಾನಶಕ್ತಿಯಿಂದ ಕೂಡಿಕೊಂಡ ಆತ್ಮ ಇರುತ್ತದೆ. ಎಲ್ಲ ವಿಧಗಳ ಮಹಾನುಭಾವರಿಗಿಂತ ಮಹಾತ್ಮರೆ ದೊಡ್ಡವರೆಂದು ಹೇಳಬಹುದು. ಪ್ರಸ್ತುತ ಕಾಲದಲ್ಲಿ ಮಹಾನುಭಾವರು ಕೆಲವರಿದ್ದಾರೆಂದು ಹೇಳಿದಾಗ, ಅವರಿಗಿಂತ ದೊಡ್ಡವರಾದ ಮಹಾತ್ಮರು ಇನ್ನೂ ಕಡಿಮೆ ಇರುತ್ತಾರೆ. ಭೂಮಿ ಮೇಲೆ ಕಡಿಮೆಯಾಗಿರುವ ಮಹಾತ್ಮರು ಸ್ಥೂಲವಾಗಿಯಾದರು ಇರಬಹುದು, ಸೂಕ್ಷ್ಮವಾಗಿ ಯಾದರು ಇರಬಹುದು. ಈಗ ಸೂಕ್ಷ್ಮವಾಗಿರುವ ಒಬ್ಬ ಮಹಾತ್ಮನ ಕಥೆಯನ್ನು ಕೇಳೋಣ.

ಚಿತ್ತೂರು ಜಿಲ್ಲೆ ರಾಮಾಪುರ ಪಕ್ಕದಲ್ಲಿ, ಪಾಪಸಮುದ್ರ ಅದರ ಪಕ್ಕದಲ್ಲೆ ಗುಡಿಪಾಲ ಅನ್ನುವ ಒಂದು ಚಿಕ್ಕ ಗ್ರಾಮವಿದೆ. ಗುಡಿಪಾಲ ಗ್ರಾಮಕ್ಕೆ ನಾನು ಒಂದು ಬಾರಿ 1981ನೇ ವರ್ಷದಲ್ಲಿ ಹೋಗಿದ್ದೆನು. ಗುಡಿಪಾಲ ಗ್ರಾಮದಲ್ಲಿ ಗುರುಮೂರ್ತಿ ಎಂದು ಹೆಸರಿರುವ ವ್ಯಕ್ತಿ ಇದ್ದನು. ಆತನು, ಆತನ ಹೆಂಡತಿ ಇಬ್ಬರೆ ಮನೆಯಲ್ಲಿ ಇರುತ್ತಿದ್ದರು. ಆತನಿಗೆ ಮಕ್ಕಳು ಇಲ್ಲ, ಅವರ ವಯಸ್ಸು ಐವತ್ತು ವರ್ಷಗಳು ಇರಬಹುದು. ನಾನು ಆ ಊರಿನಲ್ಲಿ ಗುರುಮೂರ್ತಿ

ಮನೆಗೆ ಹೋದೆನು. ಆ ದಿನ ಸಾಯಂಕಾಲ ಐದು ಗಂಟೆಗಳ ಸಮಯದಲ್ಲಿ ಮನೆ ಹೊರಗೆ ಮೈದಾನದಲ್ಲಿ ಕುರ್ಚಿ ಮೇಲೆ ಕುಳಿತಿರುವಾಗ, ಅಲ್ಲಿಗೆ ಬಂದವರು ಪಾದನಮಸ್ಕಾರ ಮಾಡಿಕೊಳ್ಳುತ್ತಿದ್ದಾರೆ. ನನಗೆ ಮುಗಿಸಿಕೊಳ್ಳುವುದು ಇಷ್ಟವಿರುವುದಿಲ್ಲ. ಹಳ್ಳಿಜನ ಹೇಳಿದರೂ ಕೇಳುವುದಿಲ್ಲ. ನಾನು ಮೌನವಾಗಿ ಕುಳಿತಿದ್ದೇನೆ. ಹಾಗೆ ಎಲ್ಲರು ಒಬ್ಬೊಬ್ಬರಾಗಿ ಪಾದಗಳಿಗೆ ನಮಸ್ಕಾರ ಮಾಡುತ್ತಿರುವಾಗ, ಮಧ್ಯದಲ್ಲಿ ಗುರುಮೂರ್ತಿ ಹೆಂಡತಿ ಕೂಡ ಬಂದು ನಮಸ್ಕಾರ ಮಾಡಿ ಹೋಗಿ ಪಕ್ಕದಲ್ಲಿ ನಿಂತುಕೊಂಡಿದ್ದಳು. ಆಕೆ ನಮಸ್ಕಾರ ಮಾಡುವಾಗಲೆ ಪಾದಗಳ ಸ್ಪರ್ಶದಲ್ಲಿಯೆ ಸ್ವಲ್ಪ ನನಗೆ ವ್ಯತ್ಯಾಸ ಕಾಣಿಸಿತು. ನಂತರ ಆಕೆ ಪಕ್ಕದಲ್ಲಿ ನಿಂತುಕೊಂಡು ಆಗಾಗ ನನ್ನ ಕಡೆಗೆ ನೋಡುತ್ತಾ, ಕಣ್ಣಿನಲ್ಲಿ ನೀರು ಸೋರಿಸುತ್ತಿರುವುದನ್ನು ಗಮನಿಸಿದೆನು. ನಂತರ ರಾತ್ರಿ ಎಂಟುಗಂಟೆ ಸಮಯದಲ್ಲಿ ಬಿಡುವು ಇರುವುದರಿಂದ ಗುರುಮೂರ್ತಿ ಹತ್ತಿರ ಆತನ ಹೆಂಡತಿಯ ಪ್ರಸ್ತಾವನೆಯನ್ನು ತೆಗೆದುಕೊಂಡು ಬಂದು ಈಕೆಯ ಶರೀರದಲ್ಲಿ ಇನ್ನು ಯಾರೊ ಇದ್ದಾರೆ, ನಾನು ಸಾಯಂಕಾಲ ಗಮನಿಸಿದೆನು ಎಂದು ಹೇಳಿದೆನು. ಅದಕ್ಕೆ ಗುರುಮೂರ್ತಿ ಅಂತದ್ದು ಏನು ಇಲ್ಲ, ಹಾಗಿರುವಂತೆ ಯಾವಾಗಲಾದರು ಏನು ಕಾಣಿಸಲಿಲ್ಲ ಅಂದನು. ಅದನ್ನು ಕೇಳಿದನಾನು, "ಇಲ್ಲ ಆಕೆ ಶರೀರದಲ್ಲಿ ಯಾರೊ ದೊಡ್ಡ ವ್ಯಕ್ತಿ ಇರುವಂತೆ ಮತ್ತು ನನ್ನನ್ನು ನೋಡಿ ಆ ವ್ಯಕ್ತಿ ಸ್ವಲ್ಪ ಸಂತೋಷವನ್ನು ಹೊಂದಿದಂತೆ ನನಗೆ ಅನಿಸಿತು. ಆ ವಿಷಯವನ್ನು ಕುರಿತು ಆಂದೋಳನೆ ಪಡಬೇಕಾದ ಕೆಲಸವಿಲ್ಲ. ಒಳಗಿರುವ ಆ ವ್ಯಕ್ತಿಯಿಂದ ನಿಮಗೆ ಎಂತಹ ಕಷ್ಟ ಇರುವುದಿಲ್ಲವೆಂದುಕೊಳ್ಳುತ್ತೇನೆ." ಎಂದು ಹೇಳಿದೆನು. ಆ ಮಾತನ್ನು ಕೇಳಿದ ಗುರುಮೂರ್ತಿ ಸ್ವಲ್ಪ ಆಲೋಚಿಸಿ ಏನೊ ಜ್ಞಾಪಕ ಬಂದು ಹೀಗೆ ಹೇಳಿದನು.

ನನಗೆ ಮದುವೆಯಾದ ಹೊಸದರಲ್ಲಿ ನನ್ನ ಹೆಂಡತಿಗೆ ದೆವ್ವವಿದೆಯೆಂದು ಒಬ್ಬ ಮಾಂತ್ರಿಕನು ಹೇಳಿದನು. ಆಗ ಅದನ್ನು ಬಿಡಿಸಬೇಕೆಂದು ಆತನನ್ನೇ ಕೇಳಿದೆನು. ಆತನು ಪ್ರಯತ್ನ ಮಾಡಿ ನೋಡಿದನು. ಆ ದೆವ್ವ ಹೊರಗೆ ಸಹ ಬಂದು ಮಾತನಾಡಲಿಲ್ಲ. ಕೊನೆಗೆ ಆತನು ತನಗೊಬ್ಬ ದೊಡ್ಡ ಮಾಂತ್ರಿಕನು

ಗೊತ್ತಿದ್ದಾನೆಂದು ಆತನಿಗೆ ತೋರಿಸಿದರೆ ಸರಿಹೋಗುತ್ತದೆಂದು ತಿಳಿಸಿದನು. ಹೇಗಾದರೂ ಮಾಡಿ ಇರುವ ದೆವ್ವವನ್ನು ಬಿಡಿಸಿಕೊಳ್ಳಬೇಕೆಂದು ಛಲದಿಂದ ನಾನು, ಆ ದೊಡ್ಡ ಮಾಂತ್ರಿಕನ ಹತ್ತಿರಕ್ಕೆ ಹೋಗಿ ವಿಷಯವನ್ನು ಹೇಳಿ ಕರೆದೆನು. ಆತನು ಬರುತ್ತೇನೆಂದು ಬಂದನು. ಬಂದಿರುವ ಆತನು ಯಾವುದೊ ಪೂಜೆ ಮಾಡಿಸಿ ಆ ಪೂಜೆಯಲ್ಲಿ ನನ್ನ ಹೆಂಡತಿಯನ್ನು ಕೂರಿಸಿ ಮಂತ್ರಗಳು ಓದುತ್ತಾ ಇರುವಾಗ ಆಗ ನನ್ನ ಹೆಂಡತಿ ಶರೀರದ ಮೇಲೆ ದೆವ್ವ ಬಂದಿತು, ಬಂದ ತಕ್ಷಣವೆ ನಿನ್ನ ಮಂತ್ರಗಳು ನಿಲ್ಲಿಸು ಎಂದು ಗಧರಿಸಿ ಹೇಳಿತು. ಮಾಂತ್ರಿಕನು ಮಂತ್ರಗಳನ್ನು ನಿಲ್ಲಿಸಿದನು. ಆಗ ಆ ದೆವ್ವ ನನ್ನ ಕಡೆ ನೋಡಿ ಏಕೆ ಇವರೆಲ್ಲರನ್ನು ಕರೆದು ಹಣ ಕಳೆದುಕೊಳ್ಳುತ್ತೀಯ. ಇವರು ಯಾರು ಏನು ಮಾಡಿದರೂ ನಾನುಹೋಗುವುದಿಲ್ಲ. ಇವರು ಯಾರೂ ನನ್ನನ್ನು ಕಳುಹಿಸುವುದಿಲ್ಲ. ಈಗಿನಿಂದಲಾದರು ಇಂತಹ ಪ್ರಯತ್ನಗಳನ್ನು ಬಿಡು! ನಾನು ಇರುವುದರಿಂದ ನಿನಗೆ ಏನು ನಷ್ಟವಾಗಲಿ, ಕಷ್ಟವಾಗಲಿ ಇಲ್ಲವಲ್ಲವೆ! ಇಂತಹ ಕೆಲಸ ಬಿಡು, ಎಂದು ನನಗೆ ಹೇಳಿ ಒಳಗೆ ಅಡಗಿಕೊಂಡಿತು.

ಆ ದೆವ್ವ ಹಾಗೆ ಬುದ್ಧಿ ಹೇಳಿರುವುದು ನನಗೆ ಬಹಳ ಅವಮಾನವಾದ ಹಾಗೆ ಅನ್ನಿಸಿತು. ಬಂದಿರುವ ಮಾಂತ್ರಿಕನು ಸಹ ನನ್ನಿಂದ ಆಗುವುದಿಲ್ಲವೆಂದು ಹೇಳಿದನು. ಇದು ಹೋಗುವ ಮಾರ್ಗವೆ ಇಲ್ವಾ? ಇದನ್ನು ಕಳುಹಿಸುವವರೆ ಇಲ್ವಾ ಎಂದು ಮಾಂತ್ರಿಕರನ್ನು ಕೇಳಿದೆನು. ಆಗ ಇಬ್ಬರು ಮಾಂತ್ರಿಕರು ಸೇರಿ ಮಾತನಾಡಿಕೊಂಡು, ನನ್ನನ್ನು ಸಹ ಕರೆದುಕೊಂಡು ಪೋಸ್ಟ್ ಆಫೀಸಿನ ಹತ್ತಿರಕ್ಕೆ ಹೋಗಿ, ಅಲ್ಲಿಂದ ಯಾರಿಗೊ ಫೋನ್ ಮಾಡಿ ನನ್ನ ಮುಂದೆ ಮಾತನಾಡಿದರು. ನಂತರ ಅವರು ಮಾತನಾಡಿದ ವಿಷಯ ನನಗೆ ಹೇಳಿದರು. ನಮಗೆ ತಿಳಿದ ಒಬ್ಬ ದೇವತೆ ಉಪಾಸಕನು ಇದ್ದಾನೆ. ಆತನು ದೇವತೆಗಳನ್ನು ಕರೆದು, ಅವರಿಂದ ಎಷ್ಟು ದೊಡ್ಡ ದೆವ್ವವನ್ನಾದರೂ ಬಿಡಿಸುವನು. ಆತನು ಫೀಜು ಐದು ಸಾವಿರ ರೂಪಾಯಿಗಳನ್ನು ತೆಗೆದುಕೊಳ್ಳುತ್ತಾನೆ. ದೆವ್ವ ಹೋದರೆ ಫೀಜು ಕೊಡುತ್ತೇವೆ ಹೋಗದಿದ್ದರೆ ಕೊಡುವುದಿಲ್ಲ ಎಂದು ಹೇಳಿದ್ದೇವೆ. ಸರಿ!

ಹಾಗೆ ಆಗಲೆಂದು ಆತನು ಒಪ್ಪಿಕೊಂಡಿದ್ದಾನೆ. ಐದು ಸಾವಿರ ಕೊಡಬೇಕೆಂದರೆ ನಿನಗು ಕಷ್ಟವೆ! ಆದ್ದರಿಂದ ನಮಗೆ ಇಬ್ಬರಿಗೆ ಕೊಡಬೇಕಾದ ಹಣವನ್ನು ಸಹ ನಮಗೆ ಬೇಡ ಅದು ಸಹ ಆತನಿಗೆ ಕೊಡು! ನೀನು ಹೇಳಿದರೆ ಆತನನ್ನು ಕೇಳಿ ನೋಡುತ್ತೇವೆ ಎಂದು ನನಗೆ ಹೇಳಿದರು, ಸರಿ ಹೇಗಾದರು ಬರುವುದಕ್ಕೆ ಹೇಳಿರೆಂದು ಹೇಳಿದೆನು. ನಂತರ ಅವರು ಫೋನ್ ಮಾಡಿ ಮಾತನಾಡಿ, ಹತ್ತು ದಿನಗಳ ನಂತರ ಬರುತ್ತಾನೆಂದು ನನಗೆ ಹೇಳಿದರು. ಈ ಬಾರಿ ದೆವ್ವವನ್ನು ದೇವತೆಗಳೆ ಓಡಿಸುತ್ತಾರೆಂದು ಧೈರ್ಯದಿಂದ ಇದ್ದೆನು. ಹತ್ತು ದಿನಗಳಿಗೆ ಮೊದಲೆ ಬಂದಿದ್ದ ಮಾಂತ್ರಿಕರು ಇಬ್ಬರು ಹೋಗಿ ಆತನನ್ನು ಕರೆದುಕೊಂಡುಬಂದರು. ಬಂದಿರುವ ವ್ಯಕ್ತಿ ಸುಮಾರು ಅರವತ್ತು ಸಂವತ್ಸರಗಳ ವಯಸ್ಸಿನವನು, ಒಳ್ಳೆಯ ಅನುಭವ ಇರುವವನೆಂದು ಆತನನ್ನು ನೋಡಿದಾಗಲೆ ಅರ್ಥವಾಯಿತು. ಆತನು ಸಹ ಪೂಜಾದ್ರವ್ಯಗಳೆಲ್ಲವನ್ನು ಇಟ್ಟು, ಪೂಜೆ ಪ್ರಾರಂಭಿಸುವ ಮೊದಲು ನನ್ನ ಹೆಂಡತಿಯನ್ನು ಕರೆದು ಪೂಜೆ ಮುಂದೆ ಮಾಂತ್ರಿಕನಿಗೆ ಎದುರಿಗೆ ಕೂರಿಸಿ, ಪೂಜೆಯನ್ನು ಪ್ರಾರಂಭಿಸಿದನು. ಇಬ್ಬರು ಮಾಂತ್ರಿಕರು ಸಹ ಆತನಿಗೆ ಸಹಾಯವಾಗಿ ಆತನ ಪಕ್ಕದಲ್ಲಿಯೇ ಕುಳಿತುಕೊಂಡಿದ್ದರು. ಆಗ ಆ ಮಾಂತ್ರಿಕನು ಒಂದೊಂದು ದೇವತೆಗು, ಒಂದೊಂದು ಮಂತ್ರವನ್ನು ಓದುತ್ತಾ ಮೂವರು ದೇವತೆಗಳನ್ನು ಅಲ್ಲಿಗೆ ಬರಲು ಹೇಳಿದನು.

ಅಲ್ಲಿಯವರೆಗು ಮೌನವಾಗಿ ಕುಳಿತು ನೋಡುತ್ತಿದ್ದ ನನ್ನ ಹೆಂಡತಿ ಒಂದೇಬಾರಿಗೆ ಎದ್ದು, ಪಕ್ಕದಲ್ಲೇ ಇದ್ದ ರಂಗೋಲಿ ಹಿಟ್ಟಿನ ಡಬ್ಬ ತೆಗೆದುಕೊಂಡು ಬಾಗಿಲ ಹತ್ತಿರಕ್ಕೆ ಹೋಗಿ ಹೊಸ್ತಿಲ ಮುಂದೆ ಹೊರಗೆ ಮೂರು ಗೆರೆಗಳನ್ನು ಬಾಗಿಲಿಗೆ ಅಡ್ಡವಾಗಿ ಹಾಕಿದಳು. ರಂಗೋಲಿ ಹಿಟ್ಟಿನಿಂದ ಗೆರೆಗಳನ್ನು ಹಾಕಿದ ನಂತರ ಬಂದು ಮೊದಲು ಕುಳಿರಿತುವ ಸ್ಥಾನದಲ್ಲಿಯೆ ಮಾಂತ್ರಿಕರಿಗೆ ಎದುರಾಗಿ ಕುಳಿತುಕೊಂಡಳು. ನನ್ನ ಹೆಂಡತಿ ಆ ವಿಧವಾಗಿ ಎದ್ದು ಹೋದಾಗ ಮಾಂತ್ರಿಕರು ನಾನು ನೋಡುತ್ತಾ ಇದ್ದೆವು. ನಾವು ಏಕೆ ಹೋಗುತ್ತಿದ್ದಾಳೆಂದು

ಯೋಚಿಸುವುದರೊಳಗೆ, ಮೂರು ಗೆರೆಗಳು ಹಾಕಿ ಬಂದು ಕುಳಿತುಕೊಂಡಳು. ಕುಳಿತಿದ್ದಾಳೆ ಎಂದು ಆತನು ಮತ್ತೆ ಮಂತ್ರಗಳು ಪ್ರಾರಂಭಿಸಿ ದೇವತೆಗಳನ್ನು ಬೇಗ ಬರಲು ಹೇಳಿದನು. ಅಷ್ಟರಲ್ಲಿ ನನ್ನ ಹೆಂಡತಿ ಜೋರಾಗಿ ನಗುತ್ತಾ, "ಏಯ್ ಮೂರ್ಖ! ನೀನು ಯಾವ ದೇವತೆಯನ್ನು ಎಷ್ಟು ಕರೆದರೂ ಅವರು ಬರುವುದು ಆ ಬಾಗಿಲವರೆಗೆ, ನಾನು ಗೀಚಿದ ಗೆರೆ ದಾಟಿ ನೀನು ಕರೆಯುವ ಯಾವ ದೇವತೆಗಳು ಬರುವುದಿಲ್ಲ. ನನ್ನ ಮಾತು ಅರ್ಥವಾಗದಿದ್ದರೆ ಕರೆದು ನೋಡು ನಿನಗೆ ತಿಳಿಯುತ್ತದೆ" ಎಂದು ಹೇಳಿದಳು. ಆ ಮಾಂತ್ರಿಕನು ಸಹ ಸ್ವಲ್ಪ ಮಟ್ಟಿಗೆ ಪ್ರಯತ್ನಮಾಡಿ, ಇಲ್ಲಿಯವರೆಗೆ ನನಗೆ ಈ ವಿಧವಾಗಿ ಎಲ್ಲಿಯೂ ನಡೆಯಲಿಲ್ಲವೆಂದು, ತನ್ನ ಪ್ರಯತ್ನವನ್ನು ಬಿಟ್ಟನು. ಆದರೂ ನಾವು ಪಟ್ಟು ಬಿಡದೆ, ಕೊನೆಗೆ ಕೇರಳದಲ್ಲಿ ಬಹಳ ದೊಡ್ಡ ಮಾಂತ್ರಿಕನಿದ್ದಾನೆಂದು, ಆತನು ಹೆಜ್ಜೆ ಇಟ್ಟರೆ ಸಾಕು ದೆವ್ವಗಳೇ ಅಲ್ಲ, ದೇವತೆಗಳು ಸಹ ಓಡಿ ಹೋಗುತ್ತಾರೆಂದು ತಿಳಿಯಿತು. ತಿಳಿದ ತಕ್ಷಣವೆ ಕೇರಳಕ್ಕೆ ಹೋಗಿ ನಡೆದ ವಿಷಯವನ್ನೆಲ್ಲಾ ಹೇಳಿದೆವು. ನಮ್ಮ ಮಾತುಗಳನ್ನು ಕೇಳಿದ ಮಳಯಾಳ ಮಾಂತ್ರಿಕನು, ನೀವು ಹೇಳುವ ವಿಷಯ ಬಹಳ ಆಸಕ್ತಿಯಾಗಿದೆ! ಆದರೆ ಅದನ್ನು ನಾನು ನೋಡಬೇಕಾದ್ದೆ! ಎಂದನು. ಆತನು ಬಂದು ನೋಡುತ್ತೇನೆಂದು ಹೇಳಿದಾಗ ನಮಗೆ ಸಂತೋಷವಾಯಿತು.

ನಾವು ಅಲ್ಲಿ ಆತನಿಗೆ ಹಣಕೊಟ್ಟು ಬಂದೆವು. ಆತನು ಮೂರು ತಿಂಗಳಿಗೆ ಬರುತ್ತೇನೆಂದು ಹೇಳಿ ಹಾಗೆ ಬಂದನು. ಕೇರಳದಿಂದ ಒಟ್ಟು ಹನ್ನೆರಡು ಜನ ಶಿಷ್ಯರೊಂದಿಗೆ ಮಳಯಾಳ ಮಾಂತ್ರಿಕನು ಬಂದನು. ಆತನಿಂದ ತಪ್ಪದೆ ಕೆಲಸ ನಡೆಯುತ್ತದೆಂದು ನನಗೆ ಪೂರ್ತಿ ನಂಬಿಕೆ. ಆತನು ನನ್ನ ಹೆಂಡತಿಯನ್ನು ನೋಡಿ ಪಕ್ಕದಲ್ಲಿ ಕುಳಿತುಕೊ! ನಾನು ಕರೆದಾಗ ಬರುವಂತೆ ಎಂದು ಹೇಳಿದನು. ಆತನ ಪೂಜೆಗಳಿಗೆ ಗಂಟೆ ಸಮಯ ಬೇಕಾಗಿದೆ. ನಂತರ ನನ್ನ ಹೆಂಡತಿಯನ್ನು ಬಂದು, ಅವರು ಗೀಚಿದ ಗುರುತಿನಲ್ಲಿ ಕುಳಿತುಕೊ ಎಂದರು. ನಂತರ ಮಳಯಾಳ ಭಾಷೆಯಲ್ಲಿ ಮಂತ್ರಗಳನ್ನು ಪ್ರಾರಂಭಿಸಿ, ಸ್ವಲ್ಪ ಮಂತ್ರಿಸಿದ ವಿಭೂತಿಯನ್ನು

ನನ್ನ ಹೆಂಡತಿ ಮೇಲೆ ಚೆಲ್ಲಿದನು. ಅಲ್ಲಿಯವರೆಗು ಸುಮ್ಮನೆ ಕುಳಿತಿದ್ದ ನನ್ನ ಹೆಂಡತಿ ಶರೀರದ ಮೇಲೆ ಬಂದ ದೆವ್ವಕ್ಕೆ ಕೋಪ ಬಂದಿತು. ಆಗ ಆ ಮಾಂತ್ರಿಕನನ್ನು ಎಚ್ಚರಿಸಿದಂತೆ, ಇನ್ನೊಂದು ಬಾರಿ ನಿನ್ನ ವಿಭೂತಿಯನ್ನು ನನ್ನ ಮೇಲೆ ಚೆಲ್ಲಿದರೆ ನಾನು ನಿನ್ನನ್ನು ಏನು ಮಾಡುತ್ತೇನೊ ಹೇಳುವುದಿಲ್ಲ ಜಾಗ್ರತೆ ಎಂದಳು. ಆಗ ಆ ಮಾಂತ್ರಿಕನು ಮುಗುಳ್ನಕ್ಕು, ನಾನು ಯಾರೊ ನಿನಗೆ ಗೊತ್ತಿಲ್ಲ. ನೀನು ನನ್ನನ್ನು ಬೇಡಿಕೊಂಡರೂ ನಿನ್ನನ್ನು ಬಿಡುವುದಿಲ್ಲ. ನಿನ್ನನ್ನು ಬಂಧಿಸಿ ಭೂಸಮಾಧಿ ಮಾಡುತ್ತೇನೆ. ಎಷ್ಟೋಜನ ಮಾಂತ್ರಿಕರನ್ನು ಲೆಕ್ಕಮಾಡದೆ ಅವಮಾನಪಡಿಸಿದ್ದೀಯ. ಕೊನೆಗೆ ನಿನ್ನ ಕರ್ಮದಂತೆ ನನ್ನ ಕೈಗೆ ಸಿಕ್ಕಿದ್ದೀಯ. ಇನ್ನು ನಿನ್ನ ಗತಿ ನೋಡಿಕೊ! ನಾನು ಒಂದೊಂದು ಮಂತ್ರ ಹೇಳುವುದರಲ್ಲಿ, ನಿನ್ನ ಶರೀರದಲ್ಲಿ ಉರಿ ಏಳುವುದು, ನನ್ನ ಮಂತ್ರಗಳಿಂದ ನಿನ್ನ ಶರೀರವೆಲ್ಲ ಸೂಜಿ ಚುಚ್ಚಿದಾಗೆ ಆಗುತ್ತದೆ, ಎಂದು ಹೇಳಿ ಮಂತ್ರಗಳು ಓದಿ ಸ್ವಲ್ಪ ವಿಭೂತಿಯನ್ನು ಮತ್ತೆ ಆಕೆ ಮೇಲೆ ಚೆಲ್ಲಿದನು. ಆಗ ಆಕೆ ಜೋರಾಗಿ ತಲೆ ಕೊಡವಿಕೊಂಡು ನಾನು ಮೊದಲೆ ಹೇಳಿದ್ದೇನೆ. ಮತ್ತೊಂದು ಬಾರಿ ನನ್ನ ಮೇಲೆ ವಿಭೂತಿ ಚೆಲ್ಲಬೇಡವೆಂದು, ಆದರೂ ನೀನು ನನ್ನ ಮಾತನ್ನು ಲೆಕ್ಕಹಾಕದೆ ನನ್ನನ್ನೇ ಬಂಧಿಸುತ್ತೇನೆಂದು ಭೂಮಿಯಲ್ಲಿ ಊತಿಡುತ್ತೇನೆಂದಿದ್ದೀಯ. ನಿನ್ನ ಕರ್ಮದಂತೆ ನನಗೆ ಸಿಕ್ಕಿದ್ದೀಯೆಂದು ಅನ್ನುತ್ತೀಯ. ಅದೇ ಮಾತನ್ನು ನಾನು ಅನ್ನುತ್ತಿದ್ದೇನೆ, ಈಗ ನೀನು ನಿನ್ನ ಕರ್ಮದಂತೆ ನನಗೆ ಸಿಕ್ಕಿದ್ದೀಯ. ಇದೆ ನಿನಗೆ ನಾನು ಕೊಡುವ ಶಾಪ "ನಿನಗೆ ಮಂತ್ರಗಳು ಹೇಳುವ ಕಂಠವೇ ಇಲ್ಲದೆ ಹೋಗಲಿ" ಎಂದಳು. ಆ ಮಾತು ಅನ್ನುತ್ತಿದ್ದ ಹಾಗೆ, ಅಲ್ಲಿಯವರೆಗು ಮಂತ್ರಗಳು ಹೇಳುತ್ತಿದ್ದ ಆತನ ಕುತ್ತಿಗೆಯಲ್ಲಿ ಶಬ್ದವೇ ಬರಲಿಲ್ಲ. ಆತನ ಶಿಷ್ಯರು ತಕ್ಷಣವೆ ಮಂತ್ರಿಸಿ ಆತನ ಮೇಲೆ ನೀರು ಚೆಲ್ಲುವುದು, ವಿಭೂತಿ ಚೆಲ್ಲುವುದು ಮಾಡಿದರು ಆದರೂ ಫಲವಿಲ್ಲ. ಆತನ ಮಾತು ಬಿದ್ದುಹೋಗಿದೆ. ಆ ಮಾಂತ್ರಿಕನು ಅವಮಾನ ಪಾಲಾಗಿ ಅಳಲು ಪ್ರಾರಂಭಿಸಿದನು. ಆತನ ಶಿಷ್ಯರು ಆತನನ್ನು ಗುಣಪಡಿಸಿಕೊಳ್ಳುವುದಕ್ಕೆ ಕೇರಳಕ್ಕೆ ತೆಗೆದುಕೊಂಡು ಹೋದರು. ಆ ಸನ್ನಿವೇಶವನ್ನು ನೋಡಿದ ನಮಗೆ ಭಯ ಹುಟ್ಟಿಕೊಂಡಿತು.

ಒಂದು ಮಾತಿನಿಂದ ಅಷ್ಟು ದೊಡ್ಡ ಮಾಂತ್ರಿಕನ ಕುತ್ತಿಗೆ ಕೆಲಸ ಮಾಡದೆ ಹೋಗಿದೆಯೆಂದರೆ, ಆ ದೆವ್ವ ಅಂದುಕೊಂಡರೆ ನಾವೆಷ್ಟು ಅಂದುಕೊಂಡೆವು. ಆಗಿನಿಂದ ನಾವು ಯಾವ ಪ್ರಯತ್ನವು ಮಾಡಲಿಲ್ಲ. ಆ ದೆವ್ವದ ಜಾಡುಗಳು ಸಹ ಕಾಣಿಸದೆ ಹೋಗಿವೆ. ಮೂವತ್ತು (30) ಸಂವತ್ಸರಗಳಿಂದ ದೆವ್ವ ಕಾಣಿಸಲಿಲ್ಲ. ಇದೆಲ್ಲವು ನನಗೆ ಮದುವೆಯಾದ ಹೊಸದರಲ್ಲಿ ನಡೆಯಿತು. ಆಗಿನಿಂದ ಯಾವ ಪೀಡೆ ಇಲ್ಲದೆ ಹಾಯಾಗಿ ಇದ್ದೇವೆ. ಮತ್ತೆ ಇದೇನೊ ಹೊಸದು, ಇದನ್ನು ಕುರಿತು ನಮಗೆ ಏನು ತಿಳಿದಿಲ್ಲ ಎಂದು ಗುರುಮೂರ್ತಿ ನನಗೆ ಹೇಳಿದನು! ನಾನು ಅವರಿಗೆ ಹಿಂದೆ ನಡೆದ ಕಥೆಯೆಲ್ಲವನ್ನು ಗುರುಮೂರ್ತಿ ಹೇಳಿದಾಗ ಕೇಳಿದ್ದೇವಲ್ಲವೆ! ಆಗ ಪೂರ್ತಿ ವಿಷಯವೆಲ್ಲಾ ಅರ್ಥವಾಗಿ ಹೋಯಿತು. ನನಗೆ ಅರ್ಥವಾದ ವಿಷಯವೆಲ್ಲವನ್ನು ಗುರುಮೂರ್ತಿಗೆ ವಿವರವಾಗಿ ಹೇಳಿದೆನು. ಅದೇನೆಂದರೆ! ಮೊದಲ, ಸಾಯಂಕಾಲ ಗುರುಮೂರ್ತಿ ಹೆಂಡತಿ ನನ್ನ ಹತ್ತಿರಕ್ಕೆ ಬಂದು ಪಾದಗಳು ಹಿಡಿದುಕೊಂಡಾಗಲೆ ಆ ಸ್ಪರ್ಶ ಸ್ವಲ್ಪ ವ್ಯತ್ಯಾಸದಂತೆ ಕಾಣಿಸಿತು. ನಂತರ ಆಕೆ ಪಕ್ಕದಲ್ಲಿ ನಿಂತುಕೊಂಡು ನನ್ನ ಕಡೆ ನೋಡಿ ಕಣ್ಣತುಂಬ ನೀರು ಸೋರಿಸಿದ್ದು ನೋಡಿದೆನು. ನನ್ನ ಹತ್ತಿರ ನಡೆದ ಈ ಎರಡು ಕಾರ್ಯಗಳ ಆಧಾರದಿಂದ ಮತ್ತು ಮಾಂತ್ರಿಕರ ಹತ್ತಿರ ನಡೆದ ಕಾರ್ಯಗಳ ಆಧಾರದಿಂದ ವಿವರಿಸಿಕೊಂಡು ನೋಡಿದರೆ, ಗುರುಮೂರ್ತಿ ಹೆಂಡತಿ ಶರೀರದಲ್ಲಿ ಇರುವ ವ್ಯಕ್ತಿ ದೊಡ್ಡ ಮಹಾತ್ಮನೆಂದು ತಿಳಿಯುತ್ತಿದೆ. ಜ್ಞಾನಶಕ್ತಿ ಇರುವವನು ಮಹಾತ್ಮನೆಂದು ಮೊದಲೇ ಹೇಳಿಕೊಂಡಿದ್ದೇವೆ. ಜ್ಞಾನಶಕ್ತಿ ಮುಂದೆ ಯಾವ ವಿಧವಾದ ಮಂತ್ರಗಳು, ಎಷ್ಟೋ ಪ್ರಭಾವವಿರುವ ಮಂತ್ರಗಳು ಕೆಲಸ ಮಾಡುವುದಿಲ್ಲ. ಬಂದಿರುವ ಮಾಂತ್ರಿಕರು ದೊಡ್ಡ ಮಂತ್ರಶಕ್ತಿ ಇರುವವರಾದರೂ, ಅಷ್ಟು ದೊಡ್ಡ ಮಂತ್ರಶಕ್ತಿಗಳು ಸಹ ಆ ಮಹಾತ್ಮನ ಮುಂದೆ ಸ್ವಲ್ಪವಾದರೂ ಕೆಲಸ ಮಾಡಲಿಲ್ಲ.

ಜ್ಞಾನಶಕ್ತಿ ಇರುವ ಮಹಾತ್ಮರು ಗೆರೆ ಎಳೆದರೆ ಆ ಗೆರೆಯನ್ನು ಎಷ್ಟು ದೊಡ್ಡ ರೋಗಗಳಾದರೂ, ಎಷ್ಟು ದೊಡ್ಡ ದೇವತಾಶಕ್ತಿಗಳಾದರೂ ದಾಟುವುದಿಲ್ಲವೆಂದು ನಮ್ಮ ಬೋಧನೆಗಳಲ್ಲಿ ಅನೇಕ ಬಾರಿ ನಾನೇ ಹೇಳಿದ್ದೇನೆ.

ಆ ವಿಧವಾಗಿಯೇ ಗುರುಮೂರ್ತಿ ಹೆಂಡತಿ ಶರೀರದಲ್ಲಿರುವ ಮಹಾತ್ಮನು, ರಂಗೋಲಿ ಹಿಟ್ಟಿನಿಂದ ಗೆರೆ ಹಾಕಿದರೆ ಆ ಗೆರೆಯನ್ನು ಮಾಂತ್ರಿಕನು ಕರೆದಾಗ ಬಂದ ದೇವತೆಗಳು ದಾಟಿ ಒಳಗೆ ಬಾರದೇ ಹೋದರು. ಅಷ್ಟೇ ಅಲ್ಲದೆ ಈ ಕಡೆ ಗುರುಮೂರ್ತಿಯನ್ನು ಆ ಮಹಾತ್ಮನು ನನ್ನನ್ನು ನೀವು ಏನು ಮಾಡುವುದಿಲ್ಲ, ನನ್ನಿಂದ ನಿಮಗೆ ಯಾವ ನಷ್ಟವು ಇರುವುದಿಲ್ಲವೆಂದು ಹೇಳಿರುವುದು ನಡೆದಿದೆ. ಆ ಕಡೆ ಮಾಂತ್ರಿಕರಿಗೆ, ನನ್ನನ್ನು ರಚ್ಚಿಗೇಳಿಸಿದರೆ ನಿಮಗೆ ಕಷ್ಟ ಎಂದು ಸಹ ಹೇಳಲಾಗಿದೆ. ಆದರೂ ಗುರುಮೂರ್ತಿ ಆತನ ಮಾತು ಕೇಳದಿರುವುದರಿಂದ ಹಣ ನಷ್ಟ, ಶ್ರಮ ಎರಡು ಆಗಿವೆ. ಕೊನೆಗೆ ಮಾಂತ್ರಿಕನು ಭೂಮಿಯಲ್ಲಿ ಊತಿಡುತ್ತೇನೆಂದು ಪರಾಕ್ರಮ ಮಾಡಿ ಕೊನೆಗೆ ಕುತ್ತಿಗೆಯಲ್ಲಿ ಮಾತನ್ನೇ ಇಲ್ಲದೆ ಕಳೆದುಕೊಂಡನು. ನಾನು ನಿನ್ನನ್ನು ಶಪಿಸುತ್ತೇನೆಂದು ಮಹಾತ್ಮರೆ ಎನ್ನುತ್ತಾರೆ. ಅವರು ದೃಢಸಂಕಲ್ಪದಿಂದ ಆಡಿದ ಮಾತು ಯಾವುದಾದರೂ ಶಾಪವಾಗುತ್ತದೆ. ಈ ಸೂತ್ರದ ಪ್ರಕಾರ ಆ ಶರೀರದಲ್ಲಿ ಎಷ್ಟೋ ಜ್ಞಾನಶಕ್ತಿ ಇರುವ ಮಹಾತ್ಮ ನಿದ್ದಾನೆಂದು ತಿಳಿದುಬರುತ್ತದೆ. ಮಂತ್ರಶಕ್ತಿ ಜ್ಞಾನಶಕ್ತಿಗೆ ಯಾವ ವಿಷಯದಲ್ಲಿಯು ಸಾಟಿಯಾಗುವುದಿಲ್ಲ. ಅಷ್ಟೇ ಅಲ್ಲದೆ ಮಂತ್ರಶಕ್ತಿ ಇರುವವರು, ಜ್ಞಾನಶಕ್ತಿ ಇರುವವರನ್ನು ಗುರುತಿಸಲಾರರು. ಜ್ಞಾನಶಕ್ತಿ ಇರುವವರು ಜ್ಞಾನಶಕ್ತಿ ಇರುವವರನ್ನು ಗುರುತಿಸಬಲ್ಲರು. ಜ್ಞಾನಶಕ್ತಿ ಇರುವವರನ್ನು, ಜ್ಞಾನಶಕ್ತಿ ಇರುವವರು ನೋಡಿದರೆ ಅವರಿಗೆ ತಿಳಿಯದೇನೆ ಸಂತೋಷ ಆಗುತ್ತದೆ. ಆ ಪ್ರಕಾರವೇ ನನ್ನನ್ನು ನೋಡಿದಾಗ ಗುರುಮೂರ್ತಿ ಹೆಂಡತಿ ಶರೀರದಲ್ಲಿನ ವ್ಯಕ್ತಿಗೆ ಆನಂದ ಬಾಷ್ಪಗಳು ಉದುರಿದವು.

ಭೂಮಿಮೇಲೆ ಕೆಲವರ ಶರೀರಗಳು ಮಾತ್ರವೇ ಸೂಕ್ಷ್ಮ ಶರೀರಗಳು ನಿವಾಸ ಮಾಡುವುದಕ್ಕೆ ಯೋಗ್ಯವಾಗಿರುತ್ತವೆ. ಜಾತಕದಲ್ಲಿ (ಜಾಘತಕದಲ್ಲಿ) ಬುಧಗ್ರಹ ವಿರುದ್ಧವಾಗಿದ್ದು, ಆ ಬುಧಗ್ರಹ ಜಾತಕಲಗ್ನಕ್ಕೆ ಆರನೇ ಸ್ಥಾನದಲ್ಲಿದ್ದರೆ. ಅಂತವರ ಶರೀರದಲ್ಲಿ ತಪ್ಪದೆ ಬೇರೊಂದು ಸೂಕ್ಷ್ಮ ಶರೀರ (ದೆವ್ವ) ನಿವಾಸವಿರುತ್ತದೆಂದು ಹೇಳಬಹುದು. ಬುಧಗ್ರಹ ಅನುಕೂಲ ಇಲ್ಲದವರ ಜೀವನದಲ್ಲಿ, ದೆವ್ವಗಳ ಸಂಬಂಧ ಇರುತ್ತದೆ. ಆದ್ದರಿಂದ ಗುರುಮೂರ್ತಿ ಹೆಂಡತಿಗೆ

ಜಾತಕಚಕ್ರದಲ್ಲಿ ಬುಧಗ್ರಹ ವಿರುದ್ಧತೆ ಇರುವುದರಿಂದ, ಆಕೆ ಶರೀರ ಆ ಮಹಾತ್ಮನಿಗೆ ನಿವಾಸಯೋಗ್ಯವಾಗಿದೆ. ಆದ್ದರಿಂದ ಆಕೆಯಲ್ಲಿ ಸೇರಿ ಇರುವುದಾಗಿದೆ. ಮತ್ತೊಂದು ವಿಷಯವೇನೆಂದರೆ! ಜಾತಕ ಚಕ್ರದಲ್ಲಿ ಐದನೆಯ ಸ್ಥಾನ ಸ್ತ್ರೀಯರಿಗೆ ಸಂತಾನ ಸ್ಥಾನವಾಗುತ್ತದೆ. ಐದನೆಯ ಸ್ಥಾನ ಶತ್ರುಗ್ರಹಗಳಿಂದ ನೋಡಲ್ಪಟ್ಟರೂ ಇಲ್ಲವೆ ಶತ್ರುಗ್ರಹ ಆ ಸ್ಥಾನದಲ್ಲಿ ಇದ್ದರೂ, ಆ ಸ್ತ್ರೀಗೆ ಸಂತಾನವಾಗುವುದಿಲ್ಲ, ಆಕೆ ಬಂಜೆಯಾಗಿರುತ್ತಾಳೆ. ಇವು ಜ್ಯೋತಿಷ್ಯ ಶಾಸ್ತ್ರಗಳಲ್ಲಿನ ಸೂತ್ರಗಳು. ಇಂತಹ ಸೂತ್ರದ ಪ್ರಕಾರ ಸಹ ಆಕೆಗೆ ಸಂತಾನ ಆಗುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ಎಲ್ಲ ವಿಧಗಳಲ್ಲಿ, ಆ ಮಹಾತ್ಮನು ಇರುವುದಕ್ಕೆ ಅನುಕೂಲವಾಗಿರುವುದರಿಂದ ಆಕೆ ಶರೀರದಲ್ಲಿ ಇರುವುದಾಗಿದೆ. ಜ್ಞಾನಶಕ್ತಿ ಇರುವ ಮಹಾತ್ಮರು ಮಕ್ಕಳನ್ನು ಹೆರುವ ಶರೀರದಲ್ಲಿ ಇರುವುದಿಲ್ಲ. ಇಷ್ಟು ವಿಧಗಳ ಆಕೆ ಶರೀರ ಆ ಮಹಾತ್ಮನಿಗೆ ಅನುಕೂಲವಾಗಿದೆ. ಬೇಕಾಗಿಯೆ ಎಲ್ಲರು ಮಂತ್ರಗಾರರು ಬಿಡಿಸಬೇಕೆಂದು ನೋಡಿದರೂ ಶರೀರವನ್ನು ಬಿಟ್ಟು ಹೋಗಲಿಲ್ಲ. ಮೇಲಾಗಿ ನೀವು ಏನು ಮಾಡುವುದಿಲ್ಲ, ಸುಮ್ಮನಿರಿ, ನನ್ನನ್ನು ರಚ್ಚೆಗೇಳಿಸಬೇಡಿ ನನಗೆ ಕೋಪ ಬರುತ್ತದೆಂದು ಹೇಳಿದರೂ ಕೇಳದೆ ಹೋಗಿರುವುದರಿಂದ ಮಾಂತ್ರಿಕನು ಮಹಾತ್ಮನಿಂದ ಶಾಪಹೊಂದಬೇಕಾಗಿ ಬಂದಿತು. ಶಾಪದಿಂದ ಬಾಯಿ ಮಾತು ಹೋದಾಗ ಅವರು ಆಕೆ ಶರೀರದೊಳಗಿನ ವ್ಯಕ್ತಿಯನ್ನೇ ಪ್ರಾರ್ಥೇಯ ಪಟ್ಟಿದ್ದರೆ ಆಗಲೆ ಮಾತುಬರುತ್ತಿತ್ತೇನೊ! ಹಾಗಲ್ಲದೆ ಆಕೆ ಶರೀರದೊಳಗಿನ ಮಹಾತ್ಮನನ್ನು ಸಾಧಾರಣ ದೆವ್ವದಂತೆ ಲೆಕ್ಕ ಹಾಕಿದ ಮಾಂತ್ರಿಕರು, ಮಾತುಬರುವುದಕ್ಕೆ ಮಂತ್ರಗಳು ವೈದ್ಯಗಳ ಮೇಲೆ ಆಧಾರಪಟ್ಟಿದ್ದಾರೆ.

ಹೀಗೆ ಪಾಪಸಮುದ್ರ ಹತ್ತಿರ ಗುಡಿಪಾಲದಲ್ಲಿ ಗುರುಮೂರ್ತಿ ಮನೆಯಲ್ಲಿ ನಡೆದ ವಿಷಯಗಳೆಲ್ಲವನ್ನು ಅನುಸರಿಸಿ ನೋಡಿದರೆ, ಭೂಮಿ ಮೇಲೆ ಅಪರೂಪವಾಗಿರುವ ಮಹಾತ್ಮರು ಸಹ ಸೂಕ್ಷ್ಮ ಶರೀರಗಳಲ್ಲಿ ಇದ್ದಾರೆಂದು ತಿಳಿಯುತ್ತಿದೆ. ಈ ಸಂಘಟನೆ ನಡೆದು ಇಲ್ಲಿಗೆ ಸುಮಾರು ಅರವತ್ತು (60) ಸಂವತ್ಸರಗಳ ಕಾಲ ಕಳೆದುಹೋಗಿದೆ. ಹೀಗೆ ಎಷ್ಟೋ ಮುಖ್ಯವಾದ

ಸಂಘಟನೆಗಳು ಕಾಲಗರ್ಭದಲ್ಲಿ ಸೇರಿಹೋಗಿವೆ. ಎಲ್ಲಾದರೂ ಒಂದು ವಿಷಯ ಮನುಷ್ಯನ ಎದುರಿಗೆ ನಡೆದರೂ ಅದನ್ನು ಗುರುತಿಸುವುದಾಗಲಿ, ಅರ್ಥ ಮಾಡಿಕೊಳ್ಳುವುದಾಗಲಿ ಮನುಷ್ಯನಿಗೆ ಕೈಲಾಗಲಿಲ್ಲ. ಯಾರಾದರು ಒಬ್ಬನು ಇದು ದೈವ ಅಥವಾ ಸೂಕ್ಷ್ಮ ಶರೀರದ ಕೆಲಸವೇ ಎಂದು ಹೇಳಿದರೆ ಅವನನ್ನು ಕಲ್ಲಿನ ಯುಗಕಾಲದ ಮನುಷ್ಯನೆಂದು, ಈಗ ಸೈನ್ಸ್ ಅಭಿವೃದ್ಧಿಯಾದ ಈ ಕಾಲದಲ್ಲಿ ಕಲ್ಲಿನ ಯುಗಕಾಲದ ಮಾತು ಮಾತನಾಡುತ್ತಿದ್ದಾರೆಂದು ಹೀಯಾಳಿಸಿ, ತಿಳಿವಳಿಕೆ ಇಲ್ಲದವನಂತೆ ಲೆಕ್ಕಹಾಕಿ ಮಾತನಾಡುವವರು ಅವನ ಪಕ್ಕದಲ್ಲೆ ಹತ್ತು ಜನ ಇರುತ್ತಾರೆ. ಇದು ದೈವದ ಕೆಲಸವೇಯೆಂದು ಹೇಳುವ ಆ ಒಬ್ಬನಿಗು ಸಹ ದೈವಗಳನ್ನು ಕುರಿತು ಪೂರ್ತಿ ಅವಗಾಹನೆ ಜ್ಞಾನ ಇಲ್ಲವಾದ್ದರಿಂದ ವಿಜ್ಞಾನಿಗಳೆಂದು ಹತ್ತು ಜನ ಹೇಳುವ ಮಾತುಗಳನ್ನು ಖಂಡಿಸಿ ವಿವರ ಹೇಳಲಾರನು. ಆದ್ದರಿಂದ ದೇಶದಲ್ಲಿ ವಿಜ್ಞಾನವೆನ್ನುವ ಹೆಸರಿನಿಂದ ಅಜ್ಞಾನವನ್ನು ತಲೆಗೇರಿಸಿಕೊಂಡು ಕಾಣಿಸುವುದನ್ನೇ ಪರಿಶೋಧಿಸುತ್ತಾ, ಕಾಣಿಸದಿರುವುದನ್ನು ಮರೆತು ಹೋಗುತ್ತಿದ್ದಾರೆ. ಮರೆತುಹೋಗುವುದೇ ಅಲ್ಲದೆ ಯಾರಾದರು ಗುರುತು ಮಾಡಿದರು ಅದನ್ನು ಸಹ ಪರಿಶೋಧನೆ ದೃಷ್ಠಿಯಿಂದ ನೋಡದೆ ಕುರುಡರಂತೆ ಅದು ಇಲ್ಲವೇ ಇಲ್ಲ, ಇದು ನಡೆಯುವುದೆ ಇಲ್ಲ ಎಲ್ಲಾ ಸುಳ್ಳು, ಶಾಸ್ತ್ರಬದ್ಧ ಅಲ್ಲ ಎನ್ನುತ್ತಿದ್ದಾರೆ. ದೈವವೆನ್ನುವುದು ಸಹ ಶಾಸ್ತ್ರೀಯ ವಿಷಯವೇಯೆಂದು ಅವರಿಗೆ ತಿಳಿಯದೇ ಹೋಗಿದೆ. ತಾವು ಓದಿಕೊಂಡಿರುವುದೇ ಶಾಸ್ತ್ರ, ತಮಗೆ ತಿಳಿದಿರುವುದೇ ವಿಜ್ಞಾನ ಎನ್ನುವವರು ಬಹಳ ಜನ ಇದ್ದಾರೆ. ತಮಗೆ ತಿಳಿದ ಶಾಸ್ತ್ರಗಳು ನಾಲ್ಕು ಎಂದು, ತಮಗೆ ತಿಳಿಯದ ಶಾಸ್ತ್ರಗಳು ಇನ್ನು ಎರಡು ಉಳಿದಿವೆಯೆಂದು, ಆರು ಶಾಸ್ತ್ರಗಳು ತಿಳಿದ ದಿನವೆ ಒಬ್ಬ ಮನುಷ್ಯ ಪೂರ್ತಿ ವಿಜ್ಞಾನಿ ಆಗುವನೆಂದು, ಅಲ್ಲಿಯವರೆಗೂ ಯಾವ ಮನುಷ್ಯನಾದರೂ ಪೂರ್ತಿ ವಿಜ್ಞಾನಿ ಆಗಲಾರನೆಂದು, ಅವನು ಅಸಂಪೂರ್ಣ ಮೇಧಸ್ಸು ಇರುವವನೆಂದು ಹೇಳಬಹುದು. ಕೊನೆಗೆ ಯಾವ ಮನುಷ್ಯನಾದರು ಅವನ ಜೀವನದಲ್ಲಿ ಆರನೇ ಶಾಸ್ತ್ರವಾದ ಬ್ರಹ್ಮವಿದ್ಯಾಶಾಸ್ತ್ರವನ್ನು ತಿಳಿಯದೆ ಅವನಿಗೆ ಯಾವ ಶಕ್ತಿ ಇರದು. ಅಂತವನು ಮನುಷ್ಯ ಜೀವನದಲ್ಲಿ ಸಂಪಾದಿಸಿಕೊಳ್ಳುವ ಬಾಹ್ಯ ಪ್ರಪಂಚ

ಓದುಗಳ ಡಿಗ್ರೀಗಳು ಎಷ್ಟು ಸಂಪಾದಿಸಿಕೊಂಡರೂ, ತಾನು ಶಕ್ತಿಯನ್ನು ಹೊಂದುವ ಡಿಗ್ರೀಗಳನ್ನು ಒಂದನ್ನಾದರು ಸಹ ಹೊಂದದ ಹಾಗೆ ಬಾಹ್ಯ ವಿದ್ಯೆಗಳಲ್ಲಿ ಬಿ.ಎ, ಯಂ.ಎ, ಸಿ.ಎ, ಎನ್ನುವ ಡಿಗ್ರೀಗಳು ಅನೇಕವಿರುವಹಾಗೆ, ಬ್ರಹ್ಮವಿದ್ಯೆಯಲ್ಲಿ ಮಹರ್ಷಿ, ರಾಜರ್ಷಿ, ದೇವರ್ಷಿ, ಬ್ರಹ್ಮರ್ಷಿ ಎನ್ನುವ ನಾಲ್ಕು ಡಿಗ್ರೀಗಳು ಇವೆ. ಬಾಹ್ಯ ಪ್ರಪಂಚದಲ್ಲಿ ಮೂವತ್ತು ವರ್ಷಗಳು ಓದಿ ಯಾವುದೊ ಒಂದು ಡಿಗ್ರೀಯನ್ನು ತೆಗೆದುಕೊಂಡವನಿಗೆ, ಆ ಡಿಗ್ರೀ ಕುರಿತೆ ತಿಳಿದಿರುತ್ತದೆ. ಉಳಿದ ಡಿಗ್ರೀಗಳ ಕುರಿತು ತಿಳಿಯದು. ಉದಾಹರಣೆಗೆ ಯಂ.ಎ ಓದಿದವನಿಗೆ ಸಿ.ಎ ಡಿಗ್ರೀ ಓದಿನ ಬಗ್ಗೆ ತಿಳಿಯುವುದಿಲ್ಲ. ಅವನು ಓದಿದ ಯಂ.ಎನಲ್ಲಿ ಸಹ ಒಂದು ವಿಭಾಗವನ್ನು ಕುರಿತೆ ತಿಳಿದಿರುತ್ತದೆ. ಉಳಿದ ಎರಡನೇ ವಿಭಾಗ ತಿಳಿದಿರುವುದಿಲ್ಲ. ಆರ್ಥಿಕ ವಿಭಾಗವನ್ನು ಓದಿದವನಿಗೆ ರಾಜಕೀಯ ವಿಭಾಗ ತಿಳಿಯುವುದಿಲ್ಲ. ಈ ವಿಧವಾಗಿ ಹೊರಗೆ ಎಲ್ಲ ಡಿಗ್ರೀಗಳ ಕುರಿತು ತಿಳಿಯದೆ ಯಾವುದೋ ಒಂದು ಡಿಗ್ರೀಯನ್ನು ತಿಳಿದವರಿಗೆ, ಬ್ರಹ್ಮವಿದ್ಯಾ ಶಾಸ್ತ್ರವನ್ನು ಕುರಿತಾಗಲಿ, ಆ ಶಾಸ್ತ್ರದಲ್ಲಿನ ಡಿಗ್ರೀಗಳ ಕುರಿತಾಗಲಿ ಗೊತ್ತಿರುವುದಿಲ್ಲ. ಬ್ರಹ್ಮವಿದ್ಯಾಶಾಸ್ತ್ರದಲ್ಲಿ ಚಿಕ್ಕ ಸಬ್ಜಕ್ಟು ದೆವ್ವಗಳು! ಹೊರಗಿನ ಡಿಗ್ರೀಗಳನ್ನು ಹೊಂದಿದವರು ತಮ್ಮ ಸಬ್ಜಕ್ಟು ಅಲ್ಲದಿರುವುದನ್ನು ಕುರಿತು ಹೇಗೆ ಮಾತನಾಡುತ್ತಾರೆ? ತಿಳಿಯದೆ ಇರುವಾಗ ಎಲ್ಲ ಸುಳ್ಳು ಎನ್ನುವುದೇ ಅವರವಾದ. ಅದೇ ಈಗಿನ ಹೇತುವಾದಿಗಳೆಂದುಕೊಳ್ಳುವ ನಾಸ್ತಿಕವಾದದವರು ಮಾಡುತ್ತಿರುವ ಸಾರಾಂಶವಿಲ್ಲದ ವಾದ.

ಪುನರ್ಜನ್ಮ ಜ್ಞಾಪಕಬಂದು ಹೇಳಿದರೆ, ಅದು ಒಂದು ರೋಗ ಎನ್ನುತ್ತಾರೆ. ದೆವ್ವ ಹಿಡಿದು ಇತರೆ ಭಾಷೆ ಮಾತನಾಡಿದರೆ ಇದು ಬೂಟಾಟಿಕೆ, ಆ ಭಾಷೆ ಅವನಿಗೆ ಮೊದಲೆ ಬರುತ್ತಿತ್ತು ಎನ್ನುತ್ತಾರೆ. ದೆವ್ವ ಹಿಡಿದು ಮಾತನಾಡದೆ ಮೌನವಾಗಿ ಇರುವವನಿಗೆ ಹಿಸ್ಟೀರಿಯಾ ರೋಗವೆನ್ನುತ್ತಾರೆ. ಈ ವಿಧವಾಗಿ ತಮಗೆ ತಿಳಿಯದಿದ್ದರೂ, ತಿಳಿದವರೆಂಬ ಭಾವನೆಯಿಂದ, ಯಾವುದೋ ಒಂದನ್ನು ಆಪಾಧನೆ ಮಾಡುತ್ತಾ ಎಲ್ಲಾ ಸುಳ್ಳು ಎನ್ನುತ್ತಾರೆ. ಯಾವ ಒಂದನ್ನು ಪರಿಶೀಲಿಸಿ,

ಪರಿಶೋಧನೆರೀತಿಯಲ್ಲಿ ಹೇಳುತ್ತಿಲ್ಲ. ತಮಗೆ ತಿಳಿಯದ ವಿಷಯ ಹೇತುವಾದ ದೃಷ್ಠಿಯಲ್ಲಿ ಪರಿಶೀಲಿಸದ ಮೊದಲೆ, ಅದಲ್ಲ ಎನ್ನುವ ನಿರ್ಣಯದಿಂದ ಮಾತನಾಡುವವರು ಹೇತುವಾದಿಗಳಲ್ಲ. ಸತ್ಯವನ್ನು ಸತ್ಯವೆಂದು, ಅಸತ್ಯವನ್ನು ಅಸತ್ಯವೆಂದು ತೀರ್ಮಾನಿಸಿ ಹೇಳುವುದು ನಿಜವಾದ ಹೇತುವಾದ. ಹಾಗಲ್ಲದೆ ಶಾಸ್ತ್ರಬದ್ದತೆಯ ಪ್ರಕಾರ ತೀರ್ಮಾನಿಸಿ ನೋಡದ ಮೊದಲೆ ಇದೆಲ್ಲಾ ಭೂಟಾಟಿಕೆ, ನಾಟಕ, ಮೋಸ, ಸುಳ್ಳು ಎನ್ನುವುದು ಬದ್ದವಾ? ಹೇತುವಾದವಾ? ಶಾಸ್ತ್ರಬದ್ದವಾ? ಹಾಗೆಂದು, ನೋಡಿದ್ದನ್ನೆಲ್ಲ, ಕೇಳಿದ್ದನ್ನೆಲ್ಲ ನಂಬಬೇಕೆಂದು ನಾವು ಹೇಳಲಿಲ್ಲ. ನಾವು ಹೇಳುವುದು ಪ್ರತಿಯೊಂದಕ್ಕು ಕಾರಣವನ್ನು ಹುಡುಕದೆ, ಕಾರಣವನ್ನು ತೋರಿಸದೆ ಅಲ್ಲವೆನ್ನುವುದು ಹೇತುಪದ್ಧತಿಯಲ್ಲ. ನಾನು ಸಹ ಯಾವ ವಿಷಯವನ್ನು ಅಂಧಕಾರದಿಂದ ನಂಬುವುದಿಲ್ಲ. ಪ್ರಜೆಗಳೆಲ್ಲರು ತಿಳಿಯದೆ ನಂಬಿರುವುದನ್ನು ನಾನು ಪದ್ದತಿ ತೋರಿಸಿ ಖಂಡಿಸುತ್ತಾ, ಅವರ ನಂಬಿಕೆಯನ್ನು ಮೂಢನಂಬಿಕೆ ಎನ್ನುತ್ತೇನೆ. ಹಾಗೆ ನಾನು ಪರಿಶೀಲಿಸಿ ಎಲ್ಲರೂ ಸತ್ಯವೆಂದು ಕೊಂಡರೂ, ನಾನು ಮಾತ್ರ ಅಸತ್ಯವೆಂದು ಹೇಳುವುದೆ ಅಲ್ಲದೆ, ಅದಕ್ಕೆ ಪದ್ಧತಿಯಾಗಿ ವಿವರವನ್ನು ಸಹ ಹೇಳುತ್ತಿದ್ದೇನೆ. ಅಂತಹ ಒಂದು ಸಂಘಟನೆಯನ್ನು ಕೆಳಗೆ ನೋಡೋಣ.

ಅನಂತಪುರ ಜಿಲ್ಲೆಯ ಗುಂತಕಲ್ಲು ಉರವಕೊಂಡ ಮಾರ್ಗದ ಮಧ್ಯೆದಲ್ಲಿ ರಸ್ತೆ ಪಕ್ಕದಲ್ಲೆ 'ತಟ್ರಕಲ್ಲು' ಎನ್ನುವ ಗ್ರಾಮವಿದೆ. ನನಗೆ ಎಂಟು ಸಂವತ್ಸರಗಳ ವಯಸ್ಸಿನಲ್ಲಿ, ನಾನು ಜಾತ್ರೆಗೆ ಹೋಗಿ ಮೊದಲು ದೇವತೆ ಮೈದುಂಬಿರುವುದನ್ನು ನೋಡಿರುವುದು ಸಹ ಅದೇ ಊರು! ಆ ತಟ್ರಕಲ್ಲಿನಲ್ಲಿ ಸುಂಕುಲಮ್ಮ ಎನ್ನುವ ಗ್ರಾಮದೇವತೆ ಹೆಸರು ಬಹಳ ಜನರಿಗೆ ಗೊತ್ತಿದೆ. ಏಕೆಂದರೆ ವಾರದಲ್ಲಿ ಒಂದು ದಿನ, ಸುಂಕುಲಮ್ಮ ಒಬ್ಬ ವ್ಯಕ್ತಿಮೇಲೆ ಮೈತುಂಬಿ ಮಾತನಾಡುತ್ತಿರುತ್ತದೆ. ಆಗ ಪ್ರಜೆಗಳು ಅಲ್ಲಿಗೆ ಅವರವರ ಸಮಸ್ಯೆಗಳನ್ನು ಆ ದೇವತೆಗೆ ಹೇಳಿಕೊಳ್ಳುತ್ತಿದ್ದರು. ಆ ದೇವತೆ ಅವರಿಗೆ ಪರಿಷ್ಕಾರ ಮಾರ್ಗಗಳನ್ನು ಹೇಳುತ್ತಿದ್ದಳು. ಆದ್ದರಿಂದ 'ತಟ್ರಕಲ್ಲು ಸುಂಕುಲಮ್ಮ' ಎನ್ನುವ ಹೆಸರು ದೂರದ

ಪ್ರಾಂತದವರಿಗು ಸಹ ತಿಳಿದಿದೆ. ಪ್ರಜೆಗಳು ಒಂದು ಮಾರು ಮೂಲೆ ಗ್ರಾಮದಲ್ಲಿ ಇರುವ ಸುಂಕುಲಮ್ಮ ಹತ್ತಿರಕ್ಕೆ ಅಷ್ಟಾಗಿ ಹೋಗುವುದಕ್ಕೆ ಕಾರಣವೇನು ಎಂದು ನೋಡಿದರೆ, ಅಲ್ಲಿಗೆ ಹೋದ ಪ್ರತಿಯೊಬ್ಬರಿಗು, ಸುಂಕುಲಮ್ಮ ಹೇಳುವುದು ಏನಾದರೂ ನಿಜವೆಂಬ ನಂಬಿಕೆ ಮೊದಲೇ ಬರುತ್ತದೆ. ಆ ಒಂದು ನಂಬಿಕೆ ಪ್ರಜೆಗಳನ್ನು ಐದಾರು ವರ್ಷಗಳು ವಿಶೇಷವಾಗಿ ಆಕೆ ಸುತ್ತ ತಿರುಗಿಸಿದೆ. ಆ ದಿನವು ಸಹ ಕೆಲವರು ಹೇತುವಾದಿಗಳು ಸುಂಕಲಮ್ಮನನ್ನು ಅಡ್ಡ ಇಟ್ಟುಕೊಂಡು ಮೈತುಂಬಿದ ಹಾಗೆ ಡ್ರಾಮಾ ಮಾಡಿ ಹಣ ಸಂಪಾದಿಸಿಕೊಳ್ಳುತ್ತಿದ್ದಾರೆಂದು ಅಂದರು. ಅವರು ನಾಟಕವಾಡುತ್ತಿದ್ದರೆ ಪ್ರಜೆಗಳು ಮತ್ತೆ ಅಷ್ಟು ದಡ್ಡತನದಿಂದೇನು ಹೋಗುವುದಿಲ್ಲ. ಎಷ್ಟೋ ಸ್ವಲ್ಪ ಸತ್ಯ ಕಾಣಿಸುತ್ತಿರುವುದರಿಂದ ಹಾಗೆ ಹೋಗುತ್ತಾರೆಂದು ಅಂದುಕೊಳ್ಳುತ್ತೇನೆ.

ಎಲ್ಲರೂ ಮಾತನಾಡಿದ ಹಾಗೆ ಮಾತನಾಡದೆ, ಒಂದು ಸಮಸ್ಯೆಯಲ್ಲಿನ ಸತ್ಯ ಅಸತ್ಯಗಳನ್ನು ತಿಳಿದುಕೊಳ್ಳುವುದೆ ನಿಜವಾದ ಹೇತುವಾದವೆನ್ನುವ ನಾನು, ತಟ್ರಕಲ್ಲು ಸುಂಕುಲಮ್ಮ ವಿಷಯವನ್ನು ಪರಿಶೀಲಿಸಿ ನೋಡಿದೆನು. ಉದಾಹರಣಗೆ ಒಂದು ವಿಷಯವನ್ನು ತೆಗೆದುಕೊಂಡು ನೋಡೋಣ. ರಾಮಯ್ಯ ಎಂಬ ವ್ಯಕ್ತಿ ತನ್ನ ಮಗಳ ಮದುವೆ ವಿಷಯವನ್ನು ಕೇಳಬೇಕೆನ್ನುವ ಉದ್ದೇಶದಿಂದ ಅಲ್ಲಿಗೆ ಹೋಗಿದ್ದನು. ಶುಕ್ರವಾರ (ಗಮನಿಕೆ : ಇಂತದ್ದೆ ವಾರವೆಂದು ನೆನಪಿಲ್ಲ. ಅದನ್ನು ಶುಕ್ರವಾರವೆಂದು ಬರೆಯುತ್ತಿದ್ದೇವೆ.) ಪೂಜೆಗೆ ಹಾಜರಾಗಿ ಕುಳಿತಿದ್ದಾನೆ. ರಾಮಯ್ಯನ ಹಾಗೆ ಇನ್ನೂ ನೂರು ಜನರವರೆಗು ಅಲ್ಲಿ ರಾಮಯ್ಯನೊಂದಿಗೆ ಕುಳಿತಿದ್ದಾರೆ. ರಾಮಯ್ಯ 'ಮಲ್ಲೆಪಲ್ಲಿ' ಎನ್ನುವ ಊರಿನಿಂದ ಬಂದಿದ್ದಾನೆ. ಹಾಗೆ ವಿವಿಧ ಪ್ರಾಂತಗಳಿಂದ ವಿವಿಧ ಹೆಸರುಗಳಿರುವ ವ್ಯಕ್ತಿಗಳು, ವಿವಿಧ ಸಮಸ್ಯೆಗಳಿಂದ ಅಲ್ಲಿಗೆ ಬಂದಿದ್ದಾರೆ. ಸ್ವಲ್ಪ ಹೊತ್ತಿಗೆ ಒಬ್ಬ ಹೆಂಗಸು ಬಂದು ಪೂಜೆ ಮುಂದೆ ಕುಳಿತು ಸುಂಕುಲಮ್ಮನಿಗೆ ಪೂಜೆ ಮಾಡಿದಳು. ಪೂಜೆ ಮುಗಿದ ನಂತರ ನಿಮಿಷಕ್ಕೆ ಸುಂಕಲಮ್ಮ ದೇವತೆ ಆ ಹೆಂಗಸಿನ ಶರೀರದೊಳಗೆ ಸೇರಿ ಮಾತನಾಡಲು ಪ್ರಾರಂಭಿಸಿದಳು. ಹೆಂಗಸಿನ ಶರೀರದೊಳಗೆ ಬಂದ ಸುಂಕುಲಮ್ಮ, ಮೊದಲು ಅಲ್ಲಿ ಎದುರಿಗೆ ಕುಳಿತುಕೊಂಡವರನ್ನೆಲ್ಲ ನೋಡಿದಳು.

ನಂತರ ಒಬ್ಬ ವ್ಯಕ್ತಿಯನ್ನೇ ಒಂದು ನಿಮಿಷದ ಹೊತ್ತು ನೋಡುವುದು ನಡೆಯುತ್ತದೆ. ಒಂದೇ ವ್ಯಕ್ತಿಯನ್ನು ನೋಡಿದ ನಂತರ ಆ ವ್ಯಕ್ತಿಯನ್ನು ಹೆಸರು ಇಟ್ಟು ಕರೆಯುವುದು ನಡೆಯುತ್ತದೆ. ಹಾಗೆ ಕರೆದ ವ್ಯಕ್ತಿ ಬಂದು ಮುಂದೆ ಕುಳಿತುಕೊಳ್ಳಬೇಕು. ಆಕೆ ಮುಂದೆ ಕುಳಿತ ನಂತರ, ಆತನು ಯಾವ ಊರಿನಿಂದ ಬಂದಿರುವುದು, ಯಾವ ಕೆಲಸಕ್ಕಾಗಿ ಬಂದಿರುವುದು ಅಲ್ಲಿ ಕುಳಿತಿರುವ ವ್ಯಕ್ತಿ ಹೇಳದ ಮೊದಲೆ ಸುಂಕುಲಮ್ಮೇ ಹೇಳುತ್ತಾಳೆ. ಹೇತುವಾದಿಗಳು ಹೇಳಿದಹಾಗೆ ಅಲ್ಲಿ ಯಾರು ನಾಟಕ ಆಡಲಿಲ್ಲ. ವಾಸ್ತವವಾಗಿ ಸುಂಕಲಮ್ಮ ದೇವತೆಯನ್ನು ಪೂಜಿಸುವ ತನ್ನ ಭಕ್ತಳ ಶರೀರದೊಳಗೆ ಸುಂಕುಲಮ್ಮ ಬರುತ್ತಾಳೆ. ಸುಂಕುಲಮ್ಮ ಶರೀರದ ಮೇಲೆ ಬಂದು ಸೇರಿದ ನಂತರ, ಆ ದೇವತೆ ಏನು ಮಾತನಾಡಿರುವುದೆಂದು ಆ ಭಕ್ತಳಿಗೆ ತಿಳಿಯುವುದಿಲ್ಲ. ಆಗಿರುವಾಗ ಯಾರೂ ನಾಟಕಮಾಡಲಿಲ್ಲ ತಾನೆ! ತಪ್ಪು ಹೇಳಿದರೂ ಒಪ್ಪು ಹೇಳಿದರೂ, ಅದೆಲ್ಲವು ಸುಂಕುಲಮ್ಮನಿಗೆ ಸಂಬಂಧವೇ ಆಗಲಿ, ಆಕೆ ಭಕ್ತಳಿಗಾಗಲಿ, ಆ ಮನೆಯವರಿಗಾ ಗಲಿ ಏನು ಸಂಬಂಧ ಇರುವುದಿಲ್ಲ.

ಸುಂಕುಲಮ್ಮ ಶರೀರದ ಮೇಲೆ ಸೇರಿದ ನಂತರ ಸುಂಕುಲಮ್ಮನನ್ನು ಪೂಜಿಸಿದ ಆ ಹೆಂಗಸು ನಿದ್ರೆಯೊಳಗೆ ಹೊರಟುಹೋಗುವಳು. ಹೊರಗೆ ಏನು ನಡೆದಿರುವುದು ಶರೀರದ ಒಳಗೆ ನಿದ್ರೆಯೊಳಗಿರುವ ಆ ಭಕ್ತಳಿಗೆ ಏನು ಗೊತ್ತಾಗುವುದಿಲ್ಲ. ಸುಂಕಲಮ್ಮ ತನಗೆ ಎದುರಿಗೆ ಕುಳಿತಿರುವ ವ್ಯಕ್ತಿಗಳಲ್ಲಿ ಒಬ್ಬೊಬ್ಬರನ್ನು ಕರೆಯುತ್ತಾಳೆ. ಮಾತನಾಡಿ ಕಳುಹಿಸುತ್ತಾಳೆ. ಹಾಗೆ ನಡೆಯುತ್ತಿರುವಾಗ ಸುಂಕುಲಮ್ಮ ರಾಮಯ್ಯನ ಮುಖದ ಕಡೆ ನೋಡಿ ರಾಮಯ್ಯ! ನನ್ನ ಹತ್ತಿರಕ್ಕೆ ಬಾ ಎಂದು ಹೇಳಿದಳು. ರಾಮಯ್ಯ ಆಶ್ಚರ್ಯಪಡುತ್ತಾ ಹೋಗಿ ಅಲ್ಲಿ ಕುಳಿತುಕೊಂಡನು. ರಾಮಯ್ಯನಿಗೆ ಆಶ್ಚರ್ಯವಾದ ವಿಷಯವೇನೆಂದರೆ ತನ್ನ ಹೆಸರನ್ನು ಅಲ್ಲಿಗೆ ಹೋದಾಗಿನಿಂದಾಗಲಿ, ಆ ಊರಿನಲ್ಲಿ ಪ್ರವೇಶಿಸಿ ದಾಗಿನಿಂದಾಗಲಿ, ಬಸ್ಸಿನಲ್ಲಿ ಪ್ರಯಾಣಿಸುತ್ತಿರುವಾಗಲಾಗಲಿ, ಯಾರಿಗೂ ಹೇಳಲಿಲ್ಲ. ಆಗಿರುವಾಗ ತನ್ನ ಹೆಸರು ತಾನು ಹೇಳದಿದ್ದರು ಹೇಳುತ್ತಿದ್ದಾಳೆಂದರೆ ಈ ದೇವತೆಗೆ ಎಲ್ಲ ವಿಷಯಗಳು ತಿಳಿದೇ ಇರುತ್ತವೆಂದು ಅಂದುಕೊಂಡನು.

ಮುಂದೆ ಹೋಗಿ ಕುಳಿತುಕೊಂಡ ನಂತರ ಆಕೆ ರಾಮಯ್ಯನ ಕಡೆ ನೋಡಿ ರಾಮಯ್ಯ ನೀನು ಮಲ್ಲೆಪಲ್ಲಿಯಿಂದ ಬಂದಿದ್ದೀಯಲ್ಲ! ಎಂದಳು, ಅದಕ್ಕೆ ರಾಮಯ್ಯ ಹೌದು ಎನ್ನುವ ಹಾಗೆ ತಲೆ ಅಲ್ಲಾಡಿಸಿದ್ದಾನೆ. ಸುಂಕುಲಮ್ಮ ಅಂದ ಆ ಮಾತನ್ನು ರಾಮಯ್ಯ ಕೇಳಿ ನಾನು ಹೇಳದೇ ನನ್ನ ಊರನ್ನು ಸಹ ಹೇಳಿದಳು ಅಂದುಕೊಂಡನು. ನಂತರ ಸುಂಕುಲಮ್ಮ ರಾಮಯ್ಯ ನಿನಗೆ ಒಬ್ಬಳೇ ಮಗಳು ಇದ್ದಾಳೆ. ಆ ಹುಡುಗಿಯ ಮದುವೆ ವಿಷಯವನ್ನು ಕೇಳುವುದಕ್ಕೆ ಬಂದಿದ್ದೀಯ ಅಂದಳು. ಆ ಮಾತಿನಿಂದ ರಾಮಯ್ಯ ಆಶ್ಚರ್ಯಪಟ್ಟಿದ್ದಾನೆ. ಈ ದೇವತೆಗೆ ಸಮಸ್ತವೂ ತಿಳಿದಿದೆಯೆಂದು ನೂರಕ್ಕೆ ನೂರುಪಾಲು ಆ ದೇವತೆಯನ್ನು ನಂಬಿದ್ದಾನೆ.

ರಾಮಯ್ಯನದು ಯಾವ ಊರಾಗಿರುವುದು ಆತನ ಹೆಸರು ಯಾವುದಾಗಿರುವುದು, ಆತನು ಬಂದಿರುವುದು ಯಾವುದಕ್ಕೋಸ್ಕರವೆಂದು ಎನ್ನುವ ವಿಷಯ ವಾಸ್ತವವಾಗಿ ರಾಮಯ್ಯ ಯಾರಿಗೂ ಹೇಳದೇ ಇದ್ದರೂ ಸುಂಕುಲಮ್ಮ ನಿಜವಾಗಿಯೇ ಹೇಳಿದ್ದಾಳೆ. ಈ ವಿಷಯವನ್ನೇ ಹೇತುವಾದಿಗಳು ಖಂಡಿಸುತ್ತಿದ್ದಾರೆ. ಹಾಗೆ ಹೇಳುವುದಕ್ಕೆ ಆಗುವುದಿಲ್ಲ ಎನ್ನುತ್ತಿದ್ದಾರೆ. ಅವರು ಖಂಡಿಸಿದರೂ, ಸಾಧ್ಯವಿಲ್ಲವೆಂದರೂ, ವಾಸ್ತವವಾಗಿ ರಾಮಯ್ಯ ಹೆಸರು, ಊರು, ಬಂದಿರುವ ಕೆಲಸ ಹೇಳಿದ್ದಾಳೆ. ಈ ವಿಷಯ ಹೇತುವಾದಿಗಳು ಪರಿಶೀಲನೆಯಾಗಿ ಪರಿಶೋಧಿಸಿ ಹೇಳದೇ ಕುರುಡರಂತೆ ಅಲ್ಲವೆನ್ನುತ್ತಿದ್ದಾರೆ. ಆದ್ದರಿಂದ ಅಂಥವರದು ನಿಜವಾದ ಹೇತುವಾದ ಅಲ್ಲವೆನ್ನುತ್ತಿದ್ದೇನೆ. ನಿಜ ಹೇಳಬೇಕೆಂದರೆ ಹೇತುವಾದ ಶಾಸ್ತ್ರಬದ್ಧವಾದಾಗ ಹೇತುವಾದ ಹೇತುಬದ್ಧವಾಗುತ್ತದೆ. ಹೇತುಬದ್ಧತೆ ಪ್ರಕಾರ ಒಂದು ಗ್ರಾಮದೇವತೆ ಒಬ್ಬ ವ್ಯಕ್ತಿ ಯೊಂದರ ಹೆಸರನ್ನು, ಊರನ್ನು, ಕೆಲಸವನ್ನು ಹೇಗೆ ಹೇಳಿದ್ದಾಳೆ? ಹಾಗೆ ಹೇಳುವುದಕ್ಕೆ ಹೇತುವು (ಕಾರಣ) ಏನು ಎಂದು ಯೋಚಿಸಿ ನೋಡಿದರೆ, ಆ ಪ್ರಶ್ನೆಯನ್ನು ಶೋಧಿಸಿ ನೋಡಿದರೆ, ಉತ್ತರ ಸಿಗುವುದಕ್ಕೆ ಸ್ವಲ್ಪ ಆಧಾರವಿದೆ. ದೊರಕಿದ ಆಧಾರದ ಪ್ರಕಾರ ಆತನ ಹೆಸರನ್ನು, ಊರನ್ನು ಕೆಲಸವನ್ನು ತಿಳಿದುಕೊಳ್ಳಬಹುದು. ಒಂದು ವೇಳೆ ಹಾಗೆ ಹೇಳುವುದಕ್ಕೆ ಆಗುವುದಿಲ್ಲವೆಂದೆನಿಸಿದರೆ, ಹೇಗೆ ಆಗುವುದಿಲ್ಲವೋ ಅದಕ್ಕೂ ಸಹ ಆಧಾರ

ತೋರಿಸಬೇಕು. ತಿಳಿಯದ ವಿಷಯವನ್ನು ಹೇಗೆ ಹೇಳುತ್ತಿದ್ದಾರೋ ಹೇತುವಾದಿಗೆ ತಿಳಿಯದೇ ಹೋದರೆ, ಖಂಡಿಸುವುದಕ್ಕೂ ಸಹ ಶಾಸ್ತ್ರಬದ್ಧತೆ ಬೇಕು. ಎದುರಿಗಿರುವ ಮನುಷ್ಯನನ್ನು ನಿಮ್ಮ ಮಾತುಗಳಲ್ಲಿ ಶಾಸ್ತ್ರಬದ್ಧತೆ ಇಲ್ಲ ಅವು ಅಸತ್ಯ ಎಂದು ಹೇತುವಾದಿ ಅಂದರೇ, ಅವು ಹೇಗೆ ಅಸತ್ಯವೋ ಹೇಳುವುದಕ್ಕೂ ಸಹ ಶಾಸ್ತ್ರಬದ್ಧತೆ ಬೇಕು.

ಇಲ್ಲಿ ಒಂದು ಉದಾಹರಣೆಯನ್ನು ಹೇಳುತ್ತೇನೆ ನೋಡಿರಿ. ಈ ಮಧ್ಯೆ ಎರಡು ದಿನಗಳ ಕೆಳಗೆ 'ಟಿವಿ9' ಚಾನಲ್‌ನಲ್ಲಿ "ಬ್ರಹ್ಮಯ್ಯನವರ ಕಾಲಜ್ಞಾನ ನಿಜವಾ? ಅಸತ್ಯವಾ?" ಎಂದು ಚರ್ಚಾವೇದಿಕೆಯನ್ನು ನಿರ್ವಹಿಸಿದ್ದಾರೆ. ಅದರಲ್ಲಿ ಇಬ್ಬರು ಸೈನ್ಸ್ ಓದಿದವರು ಪಾಲ್ಗೊಂಡಿದ್ದಾರೆ. ಕಾಲಜ್ಞಾನ ನಿಜ ಎನ್ನುವ ವ್ಯಕ್ತಿಯೊಂದಿಗೆ ಫೋನ್‌ನಲ್ಲಿ ಮಾತನಾಡುತ್ತಿರುವಾಗ, ಫೋನ್‌ನಲ್ಲಿ ಮಾತನಾಡುವ ವ್ಯಕ್ತಿ ಕಾಲಜ್ಞಾನ ನಿಜ, ಬ್ರಹ್ಮಯ್ಯನವರು ಬರೆದ ಕಾಲಜ್ಞಾನ ವಾಕ್ಯಗಳಲ್ಲಿ ಇಂದಿಗೂ ಶೇಕಡ ಹದಿನೈದು, ಇಪ್ಪತ್ತರಷ್ಟು ಪ್ರತ್ಯಕ್ಷವಾಗಿ ನಡೆದಿವೆ. ಆದ್ದರಿಂದ ಮುಂಬರುವ ಕಾಲದಲ್ಲಿ ಉಳಿದ ವಾಕ್ಯಗಳು ನಡೆಯುತ್ತವೆಂದು ನಂಬುತ್ತಿದ್ದೇವೆ ಎಂದನು. ಆಗ ಆ ವೇದಿಕೆಯಲ್ಲಿ ಪಾಲ್ಗೊಂಡ ಗೋಗಿನೇನಿ ಬಾಬು ಎನ್ನುವವರು ಹೀಗೆ "ಆತನು ಶೇ.ಹದಿನೈದು ಇಪ್ಪತ್ತರಷ್ಟು ನಡೆದಿವೆ ಎನ್ನುತ್ತಿದ್ದಾನೆ. ಇವೆಲ್ಲಾ ಕಾಗೆ ಲೆಕ್ಕಗಳು, ಎಷ್ಟು ನಡೆದಿರುವುದು ಕರೆಕ್ಟಾಗಿ ಆತನಿಗೇ ತಿಳಿಯದು. ಇಷ್ಟು ನಡೆದಿವೆ ಎನ್ನುವುದಕ್ಕೆ ಶಾಸ್ತ್ರ ಬದ್ಧತೆ ಇಲ್ಲ" ಎಂದಿದ್ದಾನೆ. ಮೇಲಾಗಿ ಆತನು ನಾನು ಹೇತುವಾದಿ ಎನ್ನುತ್ತಿದ್ದಾನೆ. ಆತನು ಇತರರು ಮಾತನಾಡಿದ ಮಾತುಗಳಲ್ಲಿ ಶಾಸ್ತ್ರಬದ್ಧತೆ ಇಲ್ಲ ಎಂದಾಗ, ಎಷ್ಟೋ ಕೆಲವು ನಡೆದಿವೆ ಅಲ್ಲವೆ! ಅವು ನಡೆದಿಲ್ಲ ಎನ್ನುವುದಕ್ಕೆ ಆತನ ಹತ್ತಿರ ಶಾಸ್ತ್ರಬದ್ಧತೆ ಇದೆಯಾ? ಯಾವ ಶಾಸ್ತ್ರದ ಪ್ರಕಾರ ನಡೆದಿಲ್ಲ ಎಂದು ಹೇಳಬಲ್ಲನು? ಬ್ರಹ್ಮಯ್ಯನವರು ಹೇಳಿದ ಮಾತುಗಳು ಭವಿಷ್ಯತ್ತಿನಲ್ಲಿ ನಡೆಯುವುದಿಲ್ಲ ಎಂದು ಹೇಳುವುದಕ್ಕೆ ಶಾಸ್ತ್ರಬದ್ಧತೆ ಇದೆಯಾ? ಕೆಂಪು ವಸ್ತ್ರಗಳವರು ಎಂದು ಹೇಳುವ ಬದಲು ಕಮ್ಯೂನಿಷ್ಟುಗಳು ಎಂದು ಹೆಸರು ಹೇಳಬಹುದಲ್ಲವೆ! ಬ್ರಹ್ಮಯ್ಯನವರ ಹೆಸರು ಏಕೆ ಹೇಳಲಿಲ್ಲ ಎಂದು ಆತನು (ಗೋಗಿನೇನಿ ಬಾಬು) ಕೇಳಿದನು.

ಬ್ರಹ್ಮಯ್ಯನವರಿದ್ದದ್ದು ನಾಲ್ಕು ನೂರು ವರ್ಷಗಳ ಕೆಳಗೆ, ಆಗ ಇಂಗ್ಲೀಷ್ ಭಾಷೆಗೆ ಪ್ರಾಧಾನ್ಯತೆ ಇರಲಿಲ್ಲ. ಆ ಭಾಷೆ ಬ್ರಹ್ಮಯ್ಯನವರಿಗೆ ಗೊತ್ತಿಲ್ಲ. ಆಗಿರುವಾಗ ಕಮ್ಯುನಿಷ್ಟರು ಎಂದು ಹೇಗೆ ಇಂಗ್ಲೀಷ್ ಪದವನ್ನು ಹೇಳುತ್ತಾನೆ? ಒಂದು ವೇಳೆ ಆ ದಿನ ಕಮ್ಯುನಿಷ್ಟರು ಎಂದು ಆತನು ಬರೆದಿದ್ದರೆ, ಆ ದಿನ ಬ್ರಹ್ಮಯ್ಯನವರಿಗೆ ಇಂಗ್ಲೀಷ್ ಭಾಷೆ ಬರುತ್ತಿರಲಿಲ್ಲ. ಈ ಮಾತು ಆತನು ಬರೆದಿರುವುದಲ್ಲ. ನಡುವೆ ಬೇರೆಯವರು ಬ್ರಹ್ಮಯ್ಯನವರ ಹೆಸರಿನ ಮೇಲೆ ಬರೆದು, ಕಾಲಜ್ಞಾನವೆಂದು ಪ್ರಚಾರ ಮಾಡುತ್ತಿದ್ದಾರೆಂದು ಇದೇ ಬಾಬುರವರು ಎನ್ನುತ್ತಿದ್ದರು. ನಕ್ಸಲೈಟರು ಮಾವೊಯಿಷ್ಟರೆಂದು ಹೆಸರು ಬದಲಾಯಿಸಿಕೊಂಡಾಗ, ಮುಂಬರುವ ಕಾಲದಲ್ಲಿ ಕಮ್ಯುನಿಷ್ಟರು, ಹ್ಯೂಮನಿಷ್ಟುಗಳಾಗಿ ಹೆಸರು ಬದಲಾಯಿಸಿಕೊಳ್ಳಬಾರದಾ! ಯಾವ ಹೆಸರು ಬದಲಾಯಿಸಿಕೊಂಡರೂ, ಅವರಿಗೆ ಕೆಂಪು ವಸ್ತ್ರಗಳೆ ಗುರುತಾಗಿರುವುದರಿಂದ ಕೆಂಪು ವಸ್ತ್ರದವರು ಎನ್ನುವುದರಲ್ಲಿ ಬ್ರಹ್ಮಯ್ಯನವರಿಗೆ ದೂರದೃಷ್ಠಿ ಇದ್ದಹಾಗೆ ಅಲ್ಲವೆ!

ಗೋಗಿನೇನಿ ಬಾಬುರವರು ಅದೇ ವೇದಿಕೆಯಲ್ಲಿ ಬ್ರಹ್ಮಯ್ಯನವರು ಹೇಳಿದ ಮಾತುಗಳಿಗೆ ಶಾಸ್ತ್ರಬದ್ದತೆ ಇಲ್ಲ, ಸೈನ್ಸ್ ಒಪ್ಪಿಕೊಳ್ಳುವುದಿಲ್ಲವೆಂದಿದ್ದರು. ಅದಕ್ಕೆ ನಾನು ಏನನ್ನುತ್ತೇನೆಂದರೆ ಬ್ರಹ್ಮಯ್ಯನವರು ಸ್ವಲ್ಪ ಜ್ಞಾನವನ್ನು ಉಪಯೋಗಿಸಿ ಒಂದು ತತ್ವವನ್ನು ಹಾಡಿನ ರೂಪದಲ್ಲಿ ಹೇಳಿದ್ದಾನೆ. ಆ ತತ್ವ ನೂರಕ್ಕೆ ನೂರು ಪಾಲು ಭೌತಿಕಶಾಸ್ತ್ರಕ್ಕೆ ಸಂಬಂಧಿಸಿರುವುದು. ಭೌತಿಕಶಾಸ್ತ್ರದಲ್ಲಿ ಧಾತುಕಣವನ್ನು ಕುರಿತು ವಿವರವಾಗಿ ಹೇಳಿದ ನೀವು, ಆತನು ಹೇಳಿದ ತತ್ವವು ಭೌತಿಕ ಶಾಸ್ತ್ರಕ್ಕೆ ಸಂಬಂಧಿಸಿರುವುದಲ್ಲವೆಂದು ಹೇಳಬಲ್ಲಿರಾ? ನಮಗೆ ಗೊತ್ತು, ನೀವು ಅಲ್ಲವೆಂದೆ ಹೇಳುತ್ತೀರ. ಏಕೆಂದರೆ ನೀವು ಭೌತಿಕಶಾಸ್ತ್ರಕಾರರಾದರೂ, ನಿಮಗೆ ತಿಳಿಯದಿರುವುದು ಎಷ್ಟೋ ಇದೆ ಎನ್ನುವುದಕ್ಕೆ ಆ ತತ್ವ ಒಂದು ಆಧಾರ. ಸೈನ್ಸ್ ಓದಿ ನಾವು ಹೇತುವಾದಿಗಳೆಂದು ಹೇಳಿಕೊಳ್ಳುವವರು ಯಾರೂ ಅದನ್ನು ಭೌತಿಕಶಾಸ್ತ್ರಕ್ಕೆ ಸಂಬಂಧಿಸಿರುವುದೆಂದು ಹೇಳುವುದಿಲ್ಲ. ಆದರೇ ನಾವು ಪ್ರತಿ ಪದವನ್ನು, ಪ್ರತಿ ವಾಕ್ಯವನ್ನು ಭೌತಿಕಕ್ಕೆ ಸಂಧಾನ ಮಾಡಿ ಹೇಳಬಲ್ಲೆವು. ನಾವು ಹೇಳಿರುವುದನ್ನು ಶಾಸ್ತ್ರೀಯವಾಗಿ ಯಾರು ಖಂಡಿಸುವುದಕ್ಕೆ ಅವಕಾಶವಿಲ್ಲ.

ಬ್ರಹ್ಮಯ್ಯನವರು ಅಷ್ಟು ದೊಡ್ಡ ಭೌತಿಕಶಾಸ್ತ್ರಕಾರನಾದಾಗ, ಆತನ ಶರೀರ ರಹಸ್ಯವನ್ನು ಶಾಸ್ತ್ರಬದ್ದತೆಯಿಂದ ಕಕ್ಕಯ್ಯನಿಗೆ ಹೇಳಿದಾಗ, ಆತನ ಮಾತುಗಳಲ್ಲಿ ಶಾಸ್ತ್ರೀಯತೆ ಇಲ್ಲ ಎಂದರೆ, ನಾವು ಒಪ್ಪಿಕೊಳ್ಳುತ್ತೀವಾ! ಹೇತುವಾದಿಗಳೆಂದು, ಸೈನ್ಸ್ ಓದಿದ್ದೇವೆಂದು, ಹೇಳಿಕೊಳ್ಳುವವರು ಬ್ರಹ್ಮಯ್ಯನವರ ತತ್ವದೊಳಗಿನ ಶಾಸ್ತ್ರವನ್ನು ಗುರುತಿಸದವರು ಕುರುಡರಲ್ಲವೆ? ಭಗವದ್ಗೀತೆಯಲ್ಲಿ ಐದು ಸಾವಿರ ವರ್ಷಗಳ ಪೂರ್ವದಲ್ಲಿ ಕ್ಷೇತ್ರ ಕ್ಷೇತ್ರಜ್ಞ ವಿಭಾಗವನ್ನು ಕುರಿತು ಹೇಳಿರುವುದು ಭೌತಿಕಶಾಸ್ತ್ರ ಅಲ್ಲವೆಂದು ಯಾರಾದರು ಹೇಳಬಲ್ಲಿರಾ? ಭೌತಿಕ ಶಾಸ್ತ್ರ ತಿಳಿದವರು ಯಾರೂ ಅಲ್ಲ ಎನ್ನುವುದಿಲ್ಲ. ಹೀಗೆ ಬರೆಯುತ್ತಾ ಹೋದರೆ ನಡೆಯುವ ದಾರಿಯನ್ನು ಬಿಟ್ಟು ಪಕ್ಕಕ್ಕೆ ಹೋದ ಹಾಗೆ ಆಗುತ್ತದೆ. ಇದು ಕೇವಲ ಉದಾಹರಣೆಗೆ ಮಾತ್ರ ಹೇಳಿಕೊಂಡ ವಿಷಯ. ಈಗ ಅಸಲು ವಿಷಯಕ್ಕೆ ಬರೋಣ.

ಧರ್ಮವರಂನಲ್ಲಿ ನಮ್ಮ ಜ್ಞಾನ ತಿಳಿದ ಒಂದು ಮನೆಯಲ್ಲಿ, ಒಂದು ಸಮಸ್ಯೆ ಬಂದಿತು. ಆ ಸಮಸ್ಯೆ ಯಾವಾಗ ತೀರುತ್ತದೊ ತಿಳಿದುಕೊಳ್ಳುವುದಕ್ಕೆ ಆ ಮನೆಯವರು ಒಬ್ಬ ದೇವತೆ ಹತ್ತಿರಕ್ಕೆ ಹೋಗಬೇಕೆಂದುಕೊಂಡಿದ್ದರು. ಯಲ್ಲಪು ಶ್ರೀರಾಮುಲು ಎನ್ನುವ ಆ ಮನೆ ಯಜಮಾನ ಬೇಡ ಎಂದನು. ಮನೆಯಲ್ಲಿರುವವರು ಹೋಗಬೇಕೆಂದು ಹಠ ಹಿಡಿದಿದ್ದಾರೆ. ಆಗ ಮನೆ ಯಜಮಾನ ಆ ದೇವತೆಗೇನು ಗೊತ್ತು, ಅದು ಒಂದು ದೆವ್ವ ಎಂದು ಅಂದನು. ಆಗ ಹಾಗೆ ಅನ್ನ ಬೇಡವೆಂದು ಆತನನ್ನು ಒಪ್ಪಿಸಿ, ಬಲವಂತವಾಗಿ ಆತನನ್ನು ಆ ದೇವತೆ ಹತ್ತಿರಕ್ಕೆ ಕರೆದುಕೊಂಡು ಬಂದರು. ಅಲ್ಲಿಗೆ ಬಂದ ಯಜಮಾನನನ್ನು, ಮೈತುಂಬಿರುವ ಆ ದೇವತೆ ನೋಡಿ, ಏನೊ? ನಿಮ್ಮ ಮನೆಯ ಹತ್ತಿರ ನನ್ನನ್ನು ನೀನು ಬೈಯ್ಯಲಿಲ್ಲವೆ? ಹೇಳು? ನನ್ನನ್ನು ದೇವತೆಯಲ್ಲ ದೆವ್ವ ಅನ್ನಲಿಲ್ವಾ ಹೇಳು ಎಂದು ಕೇಳಿದಳಂತೆ. ಆ ದೇವತೆ ಹಾಗೆ ಕೇಳುತ್ತಿದ್ದಹಾಗೆ, ಆ ವ್ಯಕ್ತಿ ಹೌಹಾರಿ ನಾವು ಮನೆಹತ್ತಿರ ಮಾತನಾಡಿದ ವಿಷಯ ಈಕೆಗೆ ಹೇಗೆ ತಿಳಿದಿದೆ? ಅಂದುಕೊಂಡು, ನನ್ನದು ತಪ್ಪು, ಕ್ಷಮಿಸೆಂದು ಬೇಡಿಕೊಂಡನು. ಈ ಸಂಘಟನೆಯನ್ನು ನೋಡಿದರೂ, ತಟ್ರಕಲ್ಲು ಸುಂಕಲಮ್ಮ ಹೇಳಿದಹಾಗೆ

ಧರ್ಮವರದ ದೊಡ್ಡಮ್ಮ ಸಹ ಹೇಳಿದಳು. ಈ ಸಂಘಟನೆಯನ್ನು ಯೋಚಿಸಿ, ಅದರೊಳಗಿನ ರಹಸ್ಯವನ್ನು ಎಂದರೆ ನಮಗೆ ತಿಳಿಯದ ವಿಧಾನ ಏನಿದೆಯೊ ತಿಳಿದುಕೊಳ್ಳುವುದು ಶಾಸ್ತ್ರ ಪರಿಶೋಧಕನ ಕರ್ತವ್ಯ. ಹಾಗಲ್ಲದೆ ತನಗೆ ತಿಳಿಯದಿರುವುದೆಲ್ಲ ಇಲ್ಲ, ಅಲ್ಲ ಅಂದುಕೊಂಡರೆ ಅದು ಶಾಸ್ತ್ರಶೋಧನೆ ಅಲ್ಲ, ಶಾಸ್ತ್ರ ಶೋಧನೆ ಇಲ್ಲದಾದ್ದರಿಂದ ಕೆಲವರು ದೇವತೆಗಳು ಕೆಲವು ವಿಷಯಗಳನ್ನು ಮೊದಲೆ ಹೇಳುತ್ತಾ ಪೂಜ್ಯರಾಗಿದ್ದಾರೆ. ಕೆಲವರು ಜ್ಯೋತಿಷ್ಯರಿದ್ದಾರೆ ಅವರು ಜ್ಯೋತಿಷ್ಯ ಕೇಳುವುದಕ್ಕೆ ಬಂದವರನ್ನು ಮೊದಲು ಮೂರು ಹೂವುಗಳ ಹೆಸರುಗಳನ್ನು ಹೇಳೆನ್ನುತ್ತಾರೆ. ಅದರಲ್ಲಿ ಯಾವುದೊ ಒಂದನ್ನು ಗುರುತು ಇಟ್ಟುಕೊಳ್ಳಲು ಹೇಳುತ್ತಾರೆ. ನಂತರ ಮೂರು ಅಂಕೆಗಳನ್ನು ಹೇಳು ಎನ್ನುತ್ತಾರೆ, ಅವುಗಳಿಂದ ಯಾವುದೋ ಲೆಕ್ಕಗಳು ಮಾಡಿ ನಾವು ಗುರುತು ಇಟ್ಟುಕೊಂಡ ಹೂವಿನ ಹೆಸರನ್ನೇ ಹೇಳುತ್ತಾರೆ. ಹಾಗೆ ಹೇಳುವುದರಿಂದ ನಮಗೆ ಆತನ ಮೇಲೆ ಒಂದು ನಂಬಿಕೆ ಏರ್ಪಡುತ್ತದೆ. ನಮ್ಮ ಮನಸ್ಸಿನಲ್ಲಿ ಅಂದುಕೊಂಡಿರುವುದು ಹೇಳಿದ್ದಾರಲ್ಲ! ಹಾಗೆ ನಮ್ಮ ಜ್ಯೋತಿಷ್ಯವನ್ನೆಲ್ಲಾ ಸರಿಯಾಗಿ ಹೇಳುತ್ತಾರೆಂದು ನಂಬಿ, ಆತನು ಎಷ್ಟು ಕೇಳಿದರೆ ಅಷ್ಟು ಕೊಟ್ಟು ಭವಿಷ್ಯತ್ತನ್ನು ಹೇಳಿಸಿಕೊಳ್ಳುತ್ತೇವೆ. ನಂತರ ಆತನು ಹೇಳಿರುವುದು ಸತ್ಯವೊ ಅಲ್ಲವೊ ಅದು ದೇವರಿಗೆ ಗೊತ್ತು. ಆದರೆ ಪ್ರಸ್ತುತಕ್ಕೆ ಆತನು ಸತ್ಯವೆ ಹೇಳುತ್ತಾನೆಂದು ಮೂಢವಾಗಿ ನಂಬುತ್ತಿದ್ದೇವೆ.

ಈ ದೇವತೆಗಳ ಹತ್ತಿರ ಸಹ ಇಂತಹ ತಂತು ಏನೊ ನಡೆಯುತ್ತದೆಂದು ಜ್ಯೋತಿಷ್ಯನ ವಿಷಯುವನ್ನು ಆಧಾರ ಮಾಡಿಕೊಂಡು ನೋಡಿದರೆ ಅರ್ಥವಾಗುತ್ತದೆ. ಜ್ಯೋತಿಷ್ಯನ ಹತ್ತಿರ ಮೊದಲು ನಮ್ಮ ಮನಸ್ಸಿನಲ್ಲಿನ ಮಾತು ಹೇಳಿದ್ದಾನಲ್ಲ! ಇನ್ನು ಆತನು ಹೇಳುವವೆಲ್ಲ ಸತ್ಯವೇ ಆಗುತ್ತವೆಂದು ಹೇಗೆ ಒಂದು ನಿರ್ಣಯಕ್ಕೆ ಬರುತ್ತೇವೊ, ಹಾಗೆ ದೇವತೆ ಮೊದಲು ನಮ್ಮ ಊರು, ಹೆಸರು, ಬಂದಿರುವ ಕೆಲಸವನ್ನು ಹೇಳಿದ ತಕ್ಷಣವೆ ನಮ್ಮ ಮನಸ್ಸಿನಲ್ಲಿನ ಮಾತನ್ನು ಹೇಳಿದಳು. ಇನ್ನು ಆಕೆ ಹೇಳುವವೆಲ್ಲ ಸತ್ಯವೆಯೆಂದು ನಿರ್ಣಯಕ್ಕೆ ಬರುತ್ತೇವೆ. ಜ್ಯೋತಿಷ್ಯನು ಮೊದಲೆ ಹೇಳಿರುವುದು ನಾವೆಂದುಕೊಂಡ ಹೂವನ್ನು,

ದೇವತೆ ಮೊದಲೆ ಹೇಳಿರುವುದು ನಾವು ಅಂದುಕೊಂಡ ಕೆಲಸವನ್ನು ಹೇಗೆ ನೋಡಿದರೂ ಎರಡು ಒಂದೇ ಗುಂಪಿಗೆ ಸೇರಿದವುಗಳೆ! ಇದರಲ್ಲಿ ನಮಗೆ ಏನೊ ತಿಳಿಯದ ವಿಧಾನವಿದೆ ಎಂದು ನಾನು ಚೆನ್ನಾಗಿ ಯೋಚಿಸಿ, ಜ್ಯೋತಿಷ್ಯನ ಹತ್ತಿರ ಹೇಳಬೇಕಾದ ಮೂರು ಅಂಕೆಗಳಲ್ಲಿ ಎರಡು ಬೇರೆಬೇರೆ ಅಂಕೆಗಳು ಹೇಳಿ, ಮೂರನೆಯದು ಮೊದಲು ಹೇಳಿದ ಎರಡು ಅಂಕೆಗಳಲ್ಲಿರುವುದೇ ಮತ್ತೊಂದು ಹೇಳಿದಾಗ, ಆ ಜ್ಯೋತಿಷ್ಯನು ಈ ಅಂಕೆಯನ್ನು ಮೊದಲೆ ಹೇಳಿದ್ದೀಯ, ಹೇಳಿರುವುದು ಬೇಡ ಮತ್ತೊಂದು ಅಂಕೆಯನ್ನು ಹೇಳೆಂದನು. ಇಲ್ಲಿ ಹೇಳಿದ ಅಂಕೆಯನ್ನು ಹೇಳಿದರೂ ಇಲ್ಲವೆ ಎರಡು ಅಂಕೆಗಳು ಹೇಳಿದರೂ ನಾವು ನಿರ್ಣಯಿಸಿಕೊಂಡ ಹೂವನ್ನು ಆತನು ಗುರುತಿಸಲಾರ. ಹಾಗೆ ದೇವತೆಗಳ ಹತ್ತಿರ ಸಹ ನಮಗೆ ತಿಳಿಯದ ವಿಧಾನ ಒಂದು ಇದೆ. ಅದರ ಮೂಲಕವಾಗಿಯೇ ನಮ್ಮ ಮನಸ್ಸಲ್ಲಿರುವ ಮಾತನ್ನು ಅವರು ನಾವು ಹೇಳುವುದಕ್ಕಿಂತ ಮೊದಲೆ ಹೇಳುತ್ತಿದ್ದಾರೆ. ಈ ವಿಧಾನವನ್ನು ಹೊರಗೆ ಇಡುವುದಕ್ಕೆ ಒಂದು ಚಿಕ್ಕ ಪ್ರಯೋಗ ಮಾಡಿದ್ದೇವೆ. ಅದೇನೆಂದರೆ ಧರ್ಮವರಂನಲ್ಲಿ ಮನೆಹತ್ತಿರ ದೂಷಿಸಿ ದೇವತೆ ಹತ್ತಿರಕ್ಕೆ ಹೋಗಿರುವುದು ನನ್ನ ಅನುಚರನೇ! ಆತನಿಂದ ಆ ದೇವತೆ ತನ್ನನ್ನು ದೂಷಿಸಿದ ವಿಷಯ ಹೇಗೆ ತಿಳಿದು ಹೇಳಿದಳೆಂದು ಆತನು ನನಗೆ ಹೇಳಿದಾಗ, ನಾನು ಆತನಿಗೆ ಆಕೆ ಹೇಗೆ ಹೇಳಿದ್ದಾಳೊ ಅರ್ಥವಾಗುವುದಕ್ಕೆ ಒಂದು ಉಪಾಯ ಹೇಳಿದೆನು. ಈ ಸಾರಿ ಎರಡನೆಬಾರಿ ಯಾವುದೋ ಒಂದು ಸಮಸ್ಯೆಯನ್ನು ಇಟ್ಟು ಅದನ್ನು ಕೇಳುವುದಕ್ಕೆ ನಿಮ್ಮ ಮನೆಯಲ್ಲಿರುವವರನ್ನು ಕಳುಹಿಸು. ನೀನು ಮಾತ್ರ ಹೋಗಬೇಡ. ಆದರೇ ನೀನು ಈ ಬಾರಿ ಸಹ ಅದು ದೇವತೆ ಅಲ್ಲ ಅದರಮೇಲೆ ನನಗೆ ನಂಬಿಕೆಯಿಲ್ಲ ನೀವೇ ಹೋಗಿ ಎಂದು ಹೇಳಿ ಕಳುಹಿಸು. ಆಗ ನೀನು ಹೋಗದಿದ್ದರು ನಿಮ್ಮ ಮನೆಯವರೊಂದಿಗೆ ಆ ದೇವತೆ ನಿಮ್ಮ ಮನೆ ಯಜಮಾನ ಹೀಗೆ ಮತ್ತೆ ನನ್ನನ್ನು ದೂಷಿಸಿದ್ದಾನೆ ಎಂದು ಹೇಳುತ್ತಾಳೊ ಇಲ್ಲವೊ ನೋಡೆಂದು ಹೇಳಿ ಕಳುಹಿಸಿದೆನು. ಆತನು ನಾನು ಹೇಳಿದ ಹಾಗೆ ಮಾಡಿದನು. ಆ ದೇವತೆಯನ್ನು ನಾನು ಹೇಳಿರುವುದಕ್ಕಿಂತ ಹೆಚ್ಚಿಗೆ ದೂಷಿಸಿ ನನಗೆ ನಂಬಿಕೆಯಿಲ್ಲ, ನಾನು ಬರುವುದಿಲ್ಲ ನೀವೇ ಹೋಗಿರೆಂದು ಹೇಳಿ

ಕಳುಹಿಸಿದನು. ಆ ಮನೆಯವರು ಆ ದೇವತೆಹತ್ತಿರಕ್ಕೆ ಹೋಗಿ ತಮ್ಮ ಸಮಸ್ಯೆಯನ್ನು ಹೇಳಿದಾಗ ಅದಕ್ಕೆ ಆಕೆ ಏನೊ ಒಂದು ಸಮಾಧಾನ ಹೇಳಿ ಕಳುಹಿಸಿದಳು. ಆದರೆ ನಿಮ್ಮ ಯಜಮಾನ ನನ್ನನ್ನು ಎರಡನೆ ಬಾರಿ ಸಹ ದೂಷಿಸಿದ್ದಾನೆಂದು ಅವರ ಹತ್ತಿರ ಹೇಳಲಿಲ್ಲ. ಈತನು ಅಲ್ಲಿಗೆ ಹೋಗಿದ್ದರೆ ಆತನನ್ನು ನೋಡಿ ನೀನು ಮತ್ತೆ ನನ್ನನ್ನು ದೂಷಿಸಿದ್ದೀಯ ಎಂದು ಕೇಳುತ್ತಿದ್ದಳು. ಆತನು ಹೋಗಲಿಲ್ಲವಾದ್ದರಿಂದ, ಆತನು ತನ್ನನ್ನು ದೂಷಿಸಿದ ಹಾಗೆ ಆ ದೇವತೆಗೆ ತಿಳಿಯಲಿಲ್ಲ.

ಇದಕ್ಕೆ ಆಧಾರವೇನು? ನೀವು ಹೇಗೆ ಹೇಳುತ್ತಿದ್ದೀರೆಂದು ಕೆಲವರು ಕೇಳಬಹುದು. ಅದಕ್ಕೆ ನನ್ನ ಸಮಾಧಾನವನ್ನು ನೋಡಿರಿ. ಮನುಷ್ಯ ಕಾಣಿಸಿದರೆ ಮಾತ್ರ ಆತನ ಮನಸ್ಸಿನಲ್ಲಿ ಆತನಿಗೆ ತಿಳಿದಿರುವುದನ್ನು ದೇವತೆ ಗ್ರಹಿಸಬಹುದು. ಮನುಷ್ಯ ಕಾಣಿಸದೆ ಹೋದರೆ ಆತನೊಳಗಿನ ಉದ್ದೇಶವನ್ನು ಯಾವ ದೇವತೆಯು ಹೇಳುವುದಿಲ್ಲ. ಧರ್ಮವರಂ ದೊಡ್ಡಮ್ಮನಹತ್ತಿರ ನಡೆದಿರುವುದು, ತಟ್ರಕಲ್ಲು ಸುಂಕಲಮ್ಮ ಹತ್ತಿರ ನಡೆದಿರುವುದು ಒಂದೇ ವಿಧಾನ! ಈಗ ಅಸಲು ವಿಷಯಕ್ಕೆ ಬರೋಣ. ತಟ್ರಕಲ್ಲು ಸುಂಕಲಮ್ಮ ಹತ್ತಿರಕ್ಕೆ ಹೋದ ರಾಮಯ್ಯ ತನ್ನ ಮಗಳ ಮದುವೆ ವಿಷಯವನ್ನು ಕೇಳಬೇಕೆನ್ನುವ ಉದ್ದೇಶದಿಂದಲೆ ಹೋಗಿದ್ದಾನೆ. ಆದ್ದರಿಂದ ಆ ವಿಷಯವನ್ನು ಆ ದೇವತೆ ಹೇಳಿದ್ದಾಳೆ. ಇಲ್ಲಿ ಇನ್ನೊಂದು ಮುಖ್ಯವಾದ ಪ್ರಶ್ನೆ ಬರಬಹುದು. ಅದೇನೆಂದರೆ! ಎದುರಿನ ವ್ಯಕ್ತಿ ತಲೆಯಲ್ಲಿ ಆ ಸಮಯದಲ್ಲಿದ್ದ ವಿಷಯವನ್ನು ದೇವತೆ ಗ್ರಹಿಸಿ ಹೇಳುತ್ತಾಳೆ ಎಂದಿದ್ದೀರಲ್ಲ! ಮನುಷ್ಯನವೊಂದು ತಲೆಯಲ್ಲಿರುವ ವಿಷಯುವನ್ನು ದೇವತೆ ಹೇಗೆ ಗುರುತಿಸಿದ್ದಾಳೆ? ಎಂದು ಕೇಳಬಹುದು. ಅದಕ್ಕು ಸಹ ಉತ್ತರ ಹೇಳುತ್ತಿದ್ದೇನೆ. ಈಗ ನಾನು ಹೇಳುವ ಉತ್ತರ ಶಾಸ್ತ್ರಬದ್ಧವಾದದ್ದೆಂದು ಸಹ ಹೇಳುತ್ತಿದ್ದೇನೆ. ಭೌತಿಕ ಶಾಸ್ತ್ರದ ಪ್ರಕಾರ ಹೇಳಲ್ಪಡುವ ಈ ವಿವರವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕೆಂದು ಹೇಳುತ್ತಿದ್ದೇನೆ. ಭೌತಿಕ ಶರೀರ ಎರಡು ಭಾಗಗಳಿಂದ ಇದೆಯೆಂದು ಮೊದಲೆ ಹೇಳಿಕೊಂಡಿದ್ದೇವೆ. ಒಂದು ಸ್ಥೂಲಶರೀರ, ಎರಡು ಸೂಕ್ಷ್ಮ ಶರೀರವೆಂದು ಅವುಗಳ ಹೆಸರುಗಳು. ಸ್ಥೂಲ ಶರೀರದೊಳಗೆ ಸೂಕ್ಷ್ಮ

ಶರೀರವಿದೆ. ಕಾಣಿಸುವ ಸ್ಥೂಲಶರೀರ ಕಾಣಿಸದ ಸೂಕ್ಷ್ಮ ಶರೀರಕ್ಕೆ ಮೇಲಿನ ತೊಡುಗೆ (ಮೇಲಿನ ಕವರ್)ಯಂತಹುದು. ನಿಮಗೆ ಸುಲಭವಾಗಿ ಅರ್ಥವಾಗುವುದಕ್ಕೆ ಸ್ಥೂಲ ಸೂಕ್ಷ್ಮ ಶರೀರಗಳಿಗೆ ಉದಾಹರಣೆಯಾಗಿ ಒಂದು ಟ್ಯೂಬ್‌ಲೈಟನ್ನು ತೆಗೆದುಕೊಂಡು ನೋಡೋಣ. ಟ್ಯೂಬ್‌ಲೈಟನ್ನು ವಿಭಜಿಸಿ ನೋಡಿದರೆ ಒಳಗೆ ಬೆಳಕು ಬೇರೆ, ಮೇಲೆ ಕಾಣಿಸುವ ಟ್ಯೂಬ್ ಬೇರೆ. ಮೇಲೆ ಕಾಣಿಸುವ ಗಾಜಿನ ಟ್ಯೂಬ್‌ಗೆ ಸ್ವತಃವಾಗಿ ಬೆಳಗುವ ಶಕ್ತಿ ಇಲ್ಲ.

ಬೆಳಗುವ ಶಕ್ತಿ ಟ್ಯೂಬ್‌ನ ಒಳಗೆ ಇರುತ್ತದೆ. ಒಳಗೆ ಬೆಳಗಿದ ಪ್ರಕಾಶ ಹೊರಗೆ ಟ್ಯೂಬ್ ಮುಖಾಂತರವೆ ಕಾಣಿಸುತ್ತದೆ. ಒಳಗಿನಿಂದ ಬರುವ ಪ್ರಕಾಶ ಟ್ಯೂಬ್ ಗಾಜಿನ ಪೊರೆಯಲ್ಲಿ ತೂರಿ ಹೊರಗೆ ಬರಬೇಕಾಗುತ್ತದೆ. ಮನುಷ್ಯ ಒಳಗೆ ಸೂಕ್ಷ್ಮ ಶರೀರಕ್ಕೆ ಮೇಲೆ ಸ್ಥೂಲಶರೀರ ಮೇಲಿನ ತೊಡುಗೆಯಾಗಿ ಇದೆಯೆಂದು ಹೇಳಿಕೊಂಡಿದ್ದೇವಲ್ಲವೆ! ಹಾಗೆ ಒಳಗಿನ ಬೆಳಕಿಗೆ ಹೊರಗಿನ ಟ್ಯೂಬ್ ಮೇಲಿನ ಕವರ್‌ನಂತೆ ಇದೆ. ಮೇಲೆ ಟ್ಯೂಬ್ ಧೂಳಿನಿಂದಿದ್ದರೆ ಒಳಗಿನ ಬೆಳಕಿಗೆ ಧೂಳು ಸ್ವಲ್ಪ ಅಡಚಣೆಯಾಗಿದ್ದು ಪೂರ್ತಿ ಬೆಳಕು ಹೊರಗೆ ಬರುವುದಿಲ್ಲ. ಹಾಗೆ  ಮೇಲಿನ ಟ್ಯೂಬ್‌ಗೆ ಸ್ವಲ್ಪ ಎಣ್ಣೆ ಜಿಡ್ಡು ಅಂಟಿಕೊಂಡು, ಅದರ ಮೇಲೆ ಸ್ವಲ್ಪ ಧೂಳು ಹಿಡಿದಿದೆ ಎಂದುಕೊಳ್ಳೋಣ. ಆಗ ಒಳಗಿನಿಂದ ಬರುವ ಬೆಳಕು ಇನ್ನೂ ಸ್ವಲ್ಪ ಸ್ಥಗಿತವಾಗಿ ಬೆಳಕು ಕಡಿಮೆಯಾಗಿ ಕಾಣಿಸುತ್ತದೆ. ಒಳಗಿನಿಂದ ಬರುವ ಬೆಳಕು ಎಲೆಹಸಿರು ಬಣ್ಣದಂತೆ ಕಾಣಿಸಬೇಕೆಂದು ಟ್ಯೂಬ್ ಮೇಲೆ ಎಲೆ ಹಸಿರು ಪೇಪರನ್ನು ಸುತ್ತಿ ಇಟ್ಟಿದ್ದೇವೆಂದುಕೊಳ್ಳಿ, ಆಗ ಟ್ಯೂಬ್ ಹಸಿರು ಬಣ್ಣದಲ್ಲಿ ಬೆಳಕು ಕಾಣಿಸುತ್ತದೆ. ಆದರೆ ಬೆಳಕು ತೊಂಭತ್ತು ಪಾಲು ಪೇಪರ್‌ನಿಂದ ನಿರೋಧಿಸಲ್ಪಟ್ಟು ಕೇವಲ ಹತ್ತುಪಾಲು ಬೆಳಕು ಮಾತ್ರ ಹೊರಗೆ ಬರುತ್ತದೆ. ಟ್ಯೂಬ್ ಶುಭ್ರವಾಗಿರುವುದು ಒಂದು, ಟ್ಯೂಬ್ ಸ್ವಲ್ಪ ಧೂಳಾಗಿರುವುದು ಒಂದು, ಎಣ್ಣೆ ಜಿಡ್ಡು ಧೂಳು ಆಗಿರುವುದು ಒಂದು, ಕಲರ್ ಪೇಪರ್ ಸುತ್ತಿದ ಟ್ಯೂಬ್ ಒಂದು ಒಟ್ಟು ನಾಲ್ಕನ್ನು ತೆಗೆದುಕೊಂಡು ನೋಡಿದರೆ ಒಳಗೆ ಬೆಳಗುವ ಬೆಳಕು ಎಲ್ಲವುಗಳಿಗು ಸಮಾನವಾಗಿಯೆ ಇದೆ. ಆ ಬೆಳಕು ಹೊರಗೆ ಬರುವುದರಲ್ಲಿ ನಾಲ್ಕು ವಿಧಗಳಲ್ಲಿ ವ್ಯತ್ಯಾಸಗಳಿವೆ. ಶುಭ್ರವಾಗಿರುವ ಟ್ಯೂಬ್‌ನಿಂದ ಪೂರ್ತಿ

ಬೆಳಕು ಹೊರಗೆ ಬರುತ್ತಾ ಚೆನ್ನಾಗಿ ಕಾಣಿಸುತ್ತದೆ. ಉಳಿದ ಮೂರು, ಒಂದೊಂದು ಒಂದೊಂದು ವಿಧವಾಗಿ ಕಾಣಿಸುತ್ತವೆ. ಬೆಳಕು ಒಂದೆ ಆದರೂ, ಹೊರಗಿನ ಟ್ಯೂಬ್‌ಗಳನ್ನು ಅನುಸರಿಸಿ ನೋಡಿದಾಗ ಬೆಳಕು ಹೊರಗೆ ಬರುತ್ತದೆಂದು ಎಲ್ಲರಿಗು ಅರ್ಥವಾಗಿದೆಯೆಂದುಕೊಳ್ಳುತ್ತೇವೆ. ವಿವರವಾಗಿ ಹೇಳಬೇಕೆಂದರೆ ಲೈಟ್‌ಗೆ ಸ್ಥೂಲವಾಗಿ ಕಾಣಿಸುವ ಗಾಜುಟ್ಯೂಬ್ ಒಳಗೆ ಸೂಕ್ಷ್ಮವಾಗಿ ಕಾಣಿಸದ ಎರಡು ಫಿಲಮೆಂಟುಗಳು ಇವೆ. ನಮಗೆ ಹೊರಗೆ ಕಾಣಿಸದ ಟ್ಯೂಬ್‌ಲೈಟ್ ದೊಳಗಿನ ಫಿಲಮೆಂಟುಗಳಿಂದ ಬರುವ ಬೆಳಕು, ಹೊರಗೆ ಸ್ಥೂಲವಾಗಿ ಕಾಣಿಸುವ ಟ್ಯೂಬ್‌ನಿಂದ ಹೊರಗೆ ಬರುತ್ತದೆ. ಹಾಗೆ ಬರುವ ಬೆಳಕು, ಮೇಲೆ ಸ್ಥೂಲವಾಗಿರುವ ಟ್ಯೂಬ್ ಸಾಮರ್ಥ್ಯವನ್ನು ಅನುಸರಿಸಿ ಇರುತ್ತದೆ. ಹಾಗೆ ಮನುಷ್ಯನ ಸ್ಥೂಲ ಶರೀರ ಒಳಗಿರುವ ಸೂಕ್ಷ್ಮ ಶರೀರಕ್ಕು ಸಹ ದೃಷ್ಠಿ ಅನ್ನುವಂತಹ ಫಿಲಮೆಂಟ್ ಇದೆ. ಆ ಫಿಲಮೆಂಟ್ ಬೆಳಕು ಸ್ಥೂಲಶರೀರಕ್ಕಿರುವ ಎರಡು ಕಣ್ಣುಗಳು ಎನ್ನುವ ಕನ್ನಡಕಗಳ ಮುಖಾಂತರ ಹೊರಗೆ ಬರುತ್ತದೆ. ಕಣ್ಣುಗಳು ಎನ್ನುವ ಎರಡು ಕನ್ನಡಿಗಳು ಶುಭ್ರವಾಗಿ ಯಾವ ಲೋಪವಿಲ್ಲದೆ ಇದ್ದರೆ ಒಳಗಿನ ದೃಷ್ಠಿ ಹೊರಗಡೆಗೆ ಚೆನ್ನಾಗಿ ಕಾಣಿಸುತ್ತದೆ. ಕನ್ನಡಕಗಳಲ್ಲಿ ಲೋಪವಿದ್ದರೆ ದೃಷ್ಠಿ ಹೊರಗೆ ಬರುವುದು ಸಹ ಅಷ್ಟಷ್ಟು ಮಾತ್ರವೇ ಇರುತ್ತದೆ.

ಸ್ಥೂಲಶರೀರಕ್ಕೆ ಎರಡು ಕಣ್ಣುಗಳು ದೇವರು ಕೊಟ್ಟ ಎರಡು ಕನ್ನಡಿಗಳಂತವು. ಮನುಷ್ಯನಿಗೆ ವಯಸ್ಸು ಬೆಳೆಯುತ್ತಿದ್ದಂತೆ ಎರಡು ಕಣ್ಣುಗಳಲ್ಲಿ ಸ್ವಲ್ಪ ಸಾಮರ್ಥ್ಯ ಕಡಿಮೆಯಾಗಿ, ಒಳಗಿನಿಂದ ದೃಷ್ಠಿ ಇದ್ದರೂ, ಹೊರಗಿನ ಕಣ್ಣುಗಳು ಸರಿಯಾಗಿ ನೋಡಲಾರದೆ ಹೋಗುತ್ತವೆ. ಹಾಗಿರುವಾಗ ಕಣ್ಣಿನ ಡಾಕ್ಟರುಗಳ ಹತ್ತಿರಕ್ಕೆ ಹೋಗಿ ದೇವರು ಕೊಟ್ಟ ಕಣ್ಣುಗಳು ಎನ್ನುವ ಕನ್ನಡಿಗಳಿಗೆ ಜೋಡಿ, ಹೊರಗಡೆಯೆ ಮತ್ತೊಂದು ಜೋಡಿ ಬೂಸ್ಟರ್ ಕನ್ನಡಿಗಳು ತಗುಲಿಸಿಕೊಂಡು ಕಣ್ಣುಗಳ ಸಾಮರ್ಥ್ಯಗಳನ್ನು ಬೆಳೆಸಿಕೊಂಡು ದೃಷ್ಠಿಯನ್ನು ಬೆಳೆಸಿಕೊಳ್ಳುತ್ತಿದ್ದೇವೆ. ನಾಲ್ಕು ವಿಧಗಳ ಟ್ಯೂಬ್‌ಗಳಲ್ಲಿ ಒಳಗಿನ ಬೆಳಕು ನಾಲ್ಕು ವಿಧಗಳಲ್ಲಿ ಹೊರಗೆ ಬಂದಹಾಗೆ, ಮನುಷ್ಯರ ಶರೀರ ಕಣ್ಣುಗಳ ಆರೋಗ್ಯವನ್ನು ಅನುಸರಿಸಿ ದೃಷ್ಠಿ ಅನೇಕ ವಿಧಗಳಲ್ಲಿ ಕಾಣಿಸುತ್ತದೆ. ಟ್ಯೂಬ್‌ಲೈಟ್‌ನಲ್ಲಿ ಒಳಗೆ

ಫಿಲಮೆಂಟಿನ ಬೆಳಕು ಹೊರಗೆ ಬರುವಾಗ ಶುಭ್ರವಾಗಿರುವ ಟ್ಯೂಬ್‌ನಲ್ಲಿ ಸಹ ಸ್ವಲ್ಪ ಬೆಳಕು ನಿರೋಧಿಸಲ್ಪಡುತ್ತದೆ. ಟ್ಯೂಬ್‌ಗೆ ಇರುವ ಬಿಳಿ ಕನ್ನಡಿಯಲ್ಲಿ ತೂರಿ ಬರುವಾಗ ಬೆಳಕು ಸ್ವಲ್ಪ ಕಡಿಮೆಯಾಗಿ ಬರುತ್ತದೆ. ಹಾಗೆ ಮನುಷ್ಯ ಸ್ಥೂಲ ಕಣ್ಣುಗಳಿಂದ ಹೊರಗೆ ಬರುವ ದೃಷ್ಠಿ, ಯಾವ ರೋಗವಿಲ್ಲದ ಆರೋಗ್ಯವಾದ ಕಣ್ಣುಗಳಲ್ಲಿಯು ಸಹ ಶೇಕಡ ಹತ್ತು ಭಾಗವೇ ಹೊರಗಡೆ ಬರುತ್ತದೆಂದು ಹೇಳಬಹುದು. ಒಬ್ಬನಿಗೆ ದೃಷ್ಠಿ ಚೆನ್ನಾಗಿದೆ ಎಂದು ಹೇಳಿದರೂ, ಅದು ಅವನ ಸೂಕ್ಷ್ಮ ಶರೀರಕ್ಕಿರುವ ದೃಷ್ಠಿಯಲ್ಲಿ ಕೇವಲ ಶೇಕಡ ಐದರಿಂದ ಹತ್ತರಷ್ಟು ಮಾತ್ರ ಇದೆಯೆಂದು ಹೇಳುವುದಕ್ಕೆ ಆಧಾರವಿದೆ. ಈ ನಮ್ಮ ಮಾತು ನಂಬದಿದ್ದರೂ ಶಾಸ್ತ್ರಬದ್ಧವಾದದ್ದು, ಸತ್ಯವಾದದ್ದು. ಸ್ಥೂಲ ಕಣ್ಣುಗಳನ್ನು ಕನ್ನಡಿಯಲ್ಲಿಂದ ಬರುವ ದೃಷ್ಠಿ ಎನ್ನುವ ಬೆಳಕು ಶೇಕಡ ಹತ್ತರಷ್ಟು ಇರುವಾಗ ಕಣ್ಣು ಎಂಬ ಕನ್ನಡಿಯನ್ನು ಇಲ್ಲದಂತೆ ನೋಡುವವನಿಗೆ ನೂರಕ್ಕೆ ನೂರು ಪಾಲು ದೃಷ್ಠಿ ಎನ್ನುವ ಬೆಳಕು ಹೊರಗೆ ಬಂದು ದೂರವಾಗಿ ಪ್ರಸರಿಸುತ್ತದೆ.

ಸ್ಥೂಲಶರೀರವಿರುವವನ ದೃಷ್ಠಿಗಿಂತ, ಸ್ಥೂಲ ಶರೀರವಿಲ್ಲದವನಿಗೆ ದೃಷ್ಠಿ ನೂರು ಪಟ್ಟು ಜಾಸ್ತಿ ಇರುವುದೆನ್ನುವುದು ಸೂತ್ರ! ಈ ಸೂತ್ರದ ಪ್ರಕಾರ ಸ್ಥೂಲಕಣ್ಣುಗಳಿಂದ ಒಂದು ಕಿಲೋಮೀಟರು ದೂರದವರೆಗು ನೋಡುವ ಶಕ್ತಿಯುಳ್ಳವನು, ಸ್ಥೂಲ ಶರೀರ ಇಲ್ಲದಾಗ ಸೂಕ್ಷ್ಮ ಶರೀರದಿಂದ ನೂರು ಕಿಲೋಮೀಟರುಗಳ ದೂರದವರೆಗು ನೋಡುವನು. ಅಷ್ಟೇ ಅಲ್ಲದೆ ಮತ್ತೊಂದು ವಿಷಯ ಏನೆಂದರೆ! ಸೂಕ್ಷ್ಮಶರೀರದಿಂದ ಇರುವಾಗ ಎದುರುಗಡೆ ಇರುವ ವ್ಯಕ್ತಿಯ ಸ್ಥೂಲ ಶರೀರದಲ್ಲಿರುವ ಸೂಕ್ಷ್ಮದೊಳಗಿನ ಮನೋಬುದ್ಧಿಯವೊಂದು ಪ್ರಸ್ತುತ ಸಂಕಲ್ಪಗಳು ಸುಲಭವಾಗಿ ತಿಳಿಯುತ್ತಾನೆ. ಆದ್ದರಿಂದ ಒಂದು ದೇವತಾ ಸೂಕ್ಷ್ಮವು, ಎದುರಿನ ಮನುಷ್ಯನ ಶರೀರದಲ್ಲಿ ಪ್ರಸ್ತುತವಾಗಿರುವ ಯೋಚನೆಗಳನ್ನು ನಿರ್ಣಯಗಳನ್ನು ತಿಳಿದುಕೊಳ್ಳುತ್ತಿದೆ. ಹಾಗೆ ತಿಳಿಯುವುದರಿಂದಲೇ ರಾಮಯ್ಯನ ಮನಸ್ಸಿನಲ್ಲಿನ ಮಾತನ್ನು ರಾಮಯ್ಯ ಹೇಳುವುದಕ್ಕಿಂತ ಮೊದಲೇ ಸುಂಕುಲಮ್ಮ ಹೇಳಿದಳು. ಆದರೆ ಪ್ರಸ್ತುತ ಸಮಯದಲ್ಲಿ ರಾಮಯ್ಯನ ತಲೆಯಲ್ಲಿರುವುದು ಹೇಳಿದ ಸುಂಕುಲಮ್ಮನಿಗೆ ಭವಿಷ್ಯತ್ತಿನಲ್ಲಿ ಏನು ನಡೆಯುತ್ತದೊ ತಿಳಿಯದು.

ಆ ದೇವತೆಗೆ ಭವಿಷ್ಯತ್ತು ತಿಳಿದಿಲ್ಲವೆಂದು, ಮನುಷ್ಯರಿಗು ಸಹ ತಿಳಿದಿಲ್ಲ. ವರ್ತಮಾನದಲ್ಲಿ ನಮ್ಮ ತಲೆಯಲ್ಲಿನ ವಿಷಯವನ್ನು ನಾವು ಹೇಳದೇ ದೇವತೆ ಹೇಳುವುದರಿಂದ, ಆ ದೇವತೆಗೆ ಎಲ್ಲ ತಿಳಿದಿದೆ ಎಂದು, ಮನುಷ್ಯ ಒಂದು ನಿರ್ಣಯಕ್ಕೆ ಬಂದು ಆಕೆ ಹೇಳುವ ಮಾತುಗಳೆಲ್ಲ ಸತ್ಯವೇ ಎಂದು ನಂಬುತ್ತಿದ್ದಾನೆ. ಧರ್ಮವರಂ ದೊಡ್ಡಮ್ಮ ಈ ಸೂತ್ರದ ಪ್ರಕಾರವೆ ಯಲ್ಲಪು ಶ್ರೀರಾಮುಲುರೊಂದಿಗೆ ನೀನು ಮನೆಯ ಹತ್ತಿರ ನನ್ನನ್ನು ದೂಷಿಸಿದ್ದೀಯ ಎಂದು ಹೇಳಿ, ತನಗೆ ಎಲ್ಲ ತಿಳಿದಿದೆಯೆನ್ನುವಂತೆ ನಂಬಿಸಿದಳು. ಹಾಗೆ ತಟ್ರಕಲ್ಲು ಸುಂಕಲಮ್ಮ ಸಹ ರಾಮಯ್ಯನನ್ನು ನಂಬಿಸಿದಳು. ಸ್ವಲ್ಪಕಾಲ ಪ್ರಜೆಗಳು ಆಕೆ ಹೇಳುವವೆಲ್ಲ ನಡೆಯುತ್ತವೆಂದು ಹೋದವರು ಕಾಲಕ್ರಮೇಣ ಹಾಗೆ ನಡೆಯದೆ ಇರುವುದರಿಂದ, ಸ್ವಲ್ಪ ಅಲ್ಲಿಗೆ ಹೋಗುವುದು ಸ್ಥಗಿತವಾಗಿದೆ. ಕೆಲವು ವರ್ಷಗಳವರೆಗು ಅಲ್ಲಿಗೆ ಹೋಗುವುದು, ಬೆಳೆದ ಸಂಖ್ಯೆ ಸ್ಥಗಿತವಾಗುವುದಕ್ಕೆ ಮತ್ತೆ ಕೆಲವು ವರ್ಷಗಳು ಬೇಕಾಗಿದೆ.

ಒಂದು ತಟ್ರಕಲ್ಲಿನಲ್ಲಿಯೇ ಅಲ್ಲ ದೇಶದಲ್ಲಿ ಅನೇಕ ಕಡೆ ಇಂತಹ ತಂತುಗಳೆ ನಡೆಯುತ್ತಿವೆ. ಅವುಗಳನ್ನು ಹೇತುವಾದಿಗಳು ಹೇತುಬದ್ಧವಾಗಿ ಖಂಡಿಸುವುದಿಲ್ಲ, ಅಂಧಕಾರದಿಂದ ಖಂಡಿಸುತ್ತಾರೆ. ನಮ್ಮ ತಲೆಯಲ್ಲಿನ ಪ್ರಸ್ತುತ ಮಾತನ್ನು ಅವರು ಹೇಳುವುದು ಸತ್ಯವಲ್ಲ ಎಂದು ಮೊರಟರಂತೆ ವಾದಿಸುತ್ತಾರೆ. ಒಬ್ಬ ವ್ಯಕ್ತಿ ಹೇಳುವ ಮೊದಲೆ ಅವನ ಮನಸ್ಸಿನೊಳಗಿನ ಮಾತನ್ನು ಎದುರುಗಡೆಯಿರುವ ದೇವತೆ ಹೇಳಿದಾಗ ಆ ವ್ಯಕ್ತಿಗೆ ಸತ್ಯವೆಂದು ತಿಳಿದಾಗ, ಹೇತುವಾದಿಗಳು ದೇವತೆಗಳು ಹೇಳುವುದು ಸುಳ್ಳು, ಬೂಟಾಟಿಕೆ, ನಾಟಕ ಎಂದು ಅರಚಿದರೂ, ಆ ವ್ಯಕ್ತಿಯೆ ಅಲ್ಲ ಯಾರೂ ಕೇಳುವುದಿಲ್ಲ. ವಾಸ್ತವಕ್ಕೆ ಹೇತುವಾದಿ ಹೇಳಿರುವುದು ಅಸತ್ಯವಾಗುತ್ತದೆ. ಆದ್ದರಿಂದ ದೇಶದಲ್ಲಿ ಪ್ರಜೆಗಳಲ್ಲಿ ಹೇತುವಾದಕ್ಕೆ ಉನ್ನತ ಸ್ಥಾನ ಇಲ್ಲದೆ ಹೋಗಿದೆ. ಹೇತುವಾದ ಪದ್ಧತಿ ಸರಿಯಾದದ್ದು, ದೊಡ್ಡದು ಆದರೂ ಅದರ ಹೆಸರು ಹೇಳಿಕೊಂಡು ನಾವು ಹೇತುವಾದಿಗಳೆನ್ನುವವರು ಅಂಧಕಾರದಿಂದ ವಾದಿಸುತ್ತಾರೆ. ಆದ್ದರಿಂದ ಹೇತುವಾದಕ್ಕೆ ಮರ್ಯಾದೆ ಇಲ್ಲದಂತೆ ಮಾಡಿದವರಾಗುತ್ತಾರೆ. ನನಗೆ ತಿಳಿದ

ಹೇತುವಾದದ ಪ್ರಕಾರ, ವರ್ತಮಾನದಲ್ಲಿ ಮನುಷ್ಯನಲ್ಲಿನ ವಿಷಯ ಗ್ರಹಿಸಿ ದೇವತೆಗಳು ಹೇಳುವುದು ಸತ್ಯವೇ ಎಂದು, ಆದರೆ ಅವರು ಭವಿಷ್ಯತ್ತು ಹೇಳುವುದಿಲ್ಲವೆಂದು ಹೇಳುವುದೆ ಅಲ್ಲದೆ ಎಲ್ಲರಿಗು ಅರ್ಥವಾಗುವಂತೆ ವಿವರಿಸಿದ್ದೇವೆ. **ಸತ್ಯವನ್ನು ಅಂಗೀಕರಿಸಿ, ಅಸತ್ಯವನ್ನು ಅಂಗೀಕರಿಸದಂತೆ ಹೋಗುವುದೆ ನಿಜವಾದ ಹೇತುವಾದ** ಎಂದು ನಾವು ಹೇಳುತ್ತಿದ್ದೇವೆ.

ದೇವತೆಗಳು ಗುಡಿಗಳಲ್ಲಿ, ಕಲ್ಲಿನ ಪ್ರತಿಮೆಗಳಲ್ಲಿಯೇ ಅಲ್ಲದೆ ಮನುಷ್ಯರ ಶರೀರದೊಳಗೂ ಸಹ ಬಂದು ಮಾತನಾಡುತ್ತಾರೆಂದು ತಿಳಿಸುವುದಕ್ಕೆ ಒಂದು ಸಂಘಟನೆಯನ್ನು ವಿವರಿಸುತ್ತೇನೆ ನೋಡಿರಿ. ನಾವು ಹೇಳುವ ವಿಷಯಗಳು ಸತ್ಯವನ್ನು ತಿಳಿಸುವುದಕ್ಕೆ ಆಗಲಿ, ಯಾವ ದೇವತೆಗಳನ್ನು ಕೀಳಾಗಿಸಲು ಅಲ್ಲವೆಂದು ಮುಖ್ಯವಾಗಿ ತಿಳಿಸುತ್ತೇನೆ. 1975 ನೇ ವರ್ಷದಲ್ಲಿ ಅಂದರೆ ಇಲ್ಲಿಗೆ ಮೂವತ್ತೈದು (35) ವರ್ಷಗಳ ಕೆಳಗೆ ಒಂದು ದಿನ ತೊಂಡಪಾಡು ಎನ್ನುವ ಗ್ರಾಮದಲ್ಲಿ ಇರುವ ರಂಗನಾಯಕ ಸ್ವಾಮಿ ಗುಡಿಯೊಳಗೆ ಹೋದೆನು. ನಾನು ಗುಡಿಗೆ ಹೋಗಿದ್ದೇನೆಂದರೆ ಪೂಜೆ ಮಾಡುವುದಕ್ಕಲ್ಲ, ತೆಂಗಿನಕಾಯಿ ಒಡೆಯುವುದಕ್ಕಲ್ಲ. ತಣ್ಣಗೆ ಇರುತ್ತದೆಂದು ಒಳಗೆ ಹೋಗಿ ಕುಳಿತುಕೊಂಡೆನು. ಸ್ವಲ್ಪಹೊತ್ತಿಗೆ ಬಿಳಿ ಜುಬ್ಬಾ ಪೈಜಾಮ ಹಾಕಿಕೊಂಡ ಸುಮಾರು ಐವತ್ತು ವರ್ಷಗಳ ವಯಸ್ಸಿರುವ ವ್ಯಕ್ತಿ ದೇವಾಲಯದ ಒಳಗೆ ಬಂದನು. ಆ ಸಮಯದಲ್ಲಿ ಉಳಿದ ಭಕ್ತರು ಸಹ ಪೂಜೆ ಮಾಡಿಸಿಕೊಳ್ಳುತ್ತಿದ್ದಾರೆ. ಅಷ್ಟರಲ್ಲಿ ಇದ್ದಕ್ಕಿದ್ದಂತೆ ಅಲ್ಲಿಯೆ ಇದ್ದ ಒಬ್ಬ ಸ್ತ್ರೀಗೆ ಸೂಕ್ಷ್ಮ ಬಂದಿತು. ಕಣ್ಣುಗಳು ದೊಡ್ಡವು ಮಾಡಿ ತೀಕ್ಷಣವಾಗಿ ಆಗತಾನೆ ಬಂದ ದೊಡ್ಡ ಮನುಷ್ಯನ ಕಡೆ ನೋಡುತ್ತಾ, ತೂಗಾಡುತ್ತಾ ಇರುವಾಗ ಪಕ್ಕದಲ್ಲೆ ಇದ್ದ ಆಕೆ ಬಂದುಗಳು ಆಕೆಯನ್ನು ಇಡಿದುಕೊಂಡರು. ಅಲ್ಲೆ ಇದ್ದ ಪೂಜಾರಿ "ಯಾರು ನೀನು? ರಂಗನಾಯಕಸ್ವಾಮಿ ಗುಡಿಯೊಳಗೆ ನೇರವಾಗಿ ಬಂದಿದ್ದೀಯ? ಇಲ್ಲಿಗೆ ಬರಬಾರದು ಹೊರಗೆ ಹೋಗು!" ಎಂದನು. ಆಗ ಆಕೆ ಪೂಜಾರಿಕಡೆ ನೋಡುತ್ತಾ "ಏನೊ! ನನ್ನ ಗುಡಿಯೊಳಗೆ ನಾನು ಅಲ್ಲದೆ ಯಾರು ಬರುತ್ತಾರೆ. ನನ್ನನ್ನು ನೀವು ಗುರುತಿಸಲಿಲ್ಲ. ನಾನೇ ರಂಗನಾಯಕನು"

ಎನ್ನುತ್ತಿದ್ದ ಹಾಗೆ ಎಲ್ಲರು ಮುಗಿಯಲು ಪ್ರಾರಂಭಿಸಿದರು. ರಂಗನಾಯಕ ಸ್ವಾಮಿ ಆಕೆಯೊಳಗೆ ಬಂದಿದ್ದಾನೆಂದು ಎಲ್ಲರಿಗು ಅರ್ಥವಾಯಿತು. ನಾನು ಪಕ್ಕದಲ್ಲಿ ಕುಳಿತುಕೊಂಡು ಅದನ್ನೆಲ್ಲಾ ನೋಡುತ್ತಿದ್ದೇನೆ. ಆಕೆ ಮತ್ತೆ ಬಿಳಿ ಜುಬ್ಬಾ ಹಾಕಿಕೊಂಡ ದೊಡ್ಡ ಮನುಷ್ಯನ ಕಡೆ ನೋಡಿ ಹೀಗೆ ಅಂದಳು.

**ರಂಗನಾಯಕ :–** ಏನೊ ನಿನಗೆ ನಾನು ಐದು ವರ್ಷಗಳಿಗೆ ಜ್ಞಾಪಕ ಬಂದೆನೊ? ಈ ದಿನ ಬಂದಿದ್ದೀಯ.

**ದೊಡ್ಡ ಮನುಷ್ಯ :–** (ಏನು ಹೇಳಬೇಕೊ ತಿಳಿಯದೆ ಬಾಯಿ ತಡವಾಡಿಸುತ್ತಿದ್ದಾಗ) ಇಲ್ಲ ಸ್ವಾಮಿ! ನಿನ್ನನ್ನು ನಾನು ಎಂದಿಗೂ ಮರೆತುಹೋಗಿಲ್ಲ. ನಿನ್ನ ಪೂಜೆಯೆ ಮಾಡುತ್ತಿದ್ದೇನೆ. ಬಹಳ ದಿನಗಳಿಂದ ಇಲ್ಲಿಗೆ ಬರಬೇಕೆಂದುಕೊಳ್ಳುತ್ತಿದ್ದೆ. ಬರಲಿಲ್ಲ. ಅದೇ ನನ್ನ ತಪ್ಪು.

**ರಂಗನಾಯಕ :–** ಬಾರದೆ ಹೋಗಿದ್ದೀಯ. ಐದು ವರ್ಷಗಳ ಕೆಳಗೆ ಏನೂ ಇಲ್ಲ, ಆ ದಿನ ನನ್ನ ಅವಶ್ಯಕತೆ ಇದ್ದು ನನ್ನ ಹತ್ತಿರಕ್ಕೆ ಬಂದಿದ್ದೆ. ಆ ದಿನ ಬಸ್ಸಿನಲ್ಲಿ ಬಂದಿದ್ದೆ. ಈ ದಿನ ಕಾರು, ಧನ, ಮನೆ ಎಲ್ಲ ಬಂದಿವೆ. ಇನ್ನು ನನ್ನ ಅಗತ್ಯ ಏನಿದೆ.

**ದೊಡ್ಡ ಮನುಷ್ಯ :–** ನನಗೆ ಎಷ್ಟಿದ್ದರೂ ಎಲ್ಲ ನೀನು ಕೊಟ್ಟಿರುವವೇ. ನೀನು ಎಂದಿಗೂ ಬೇಕು. ನಾನು ನಿನ್ನನ್ನು ಮರೆಯುವುದಿಲ್ಲ. ಈಗಿನಿಂದ ಪ್ರತಿ ವರ್ಷ ಬರುತ್ತೇನೆ.

**ರಂಗನಾಯಕರು :–** ಐದು ವರ್ಷಗಳ ಕೆಳಗೂ ಸಹ ಹೀಗೇ ಕೈ ಮುಗಿದಿದ್ದೀಯ. ನೀನು ಮುಗಿದಿದ್ದಕ್ಕೆ ನಾನೇ ಮೋಸಹೋಗಿದ್ದೇನೆ. ಆ ದಿನದಿಂದ ಈ ದಿನದವರೆಗು ನಿನ್ನ ಜಾಡೆ ಇಲ್ಲ. ಈ ದಿನವು ಸಹ ನನ್ನ ಹತ್ತಿರಕ್ಕೆ ಬರಬೇಕೆಂದು ಬರಲಿಲ್ಲ, ಬೇರೆ ಕೆಲಸದ ಮೇಲೆ ಹೋಗುತ್ತಾ ದಾರಿಯಲ್ಲಿ ಗುಡಿ ಇದೆ ಆದ್ದರಿಂದ ಕೈ ಮುಗಿದುಹೋಗೋಣವೆಂದು ಬಂದಿದ್ದೀಯ. ಮೊದಲು ಬಂದಾಗ ನನ್ನನ್ನು ಕಷ್ಟಗಳಿಂದ ಕಾಪಾಡು, ನಿನಗೆ ಅಭಿಷೇಕಗಳು ಮಾಡಿಸುತ್ತೇನೆ, ಪೂಜೆಗಳು ಮಾಡಿಸುತ್ತೆನೆಂದು ಹೇಳಿ ನಂತರ ಕಾಣಿಸದಂತೆ ಹೋಗುತ್ತೀಯಾ?

**ದೊಡ್ಡಮನುಷ್ಯ :–** ಇಲ್ಲ ಸ್ವಾಮಿ ನಾನು ಕೈಮುಗಿದುಕೊಂಡಹಾಗೆ ನಿನ್ನಿಂದ ಚೆನ್ನಾಗಾಗಿದ್ದೇನೆ. ನಾನು ನಿನ್ನನ್ನು ಮರೆತುಹೋಗದಂತೆ ಪೂಜೆಗಳು ಮಾಡಿಸುತ್ತಿದ್ದೇನೆ. ತಿಂಗಳಿಗೊಮ್ಮೆ ಅಭಿಷೇಕ ಮಾಡಿಸುತ್ತಿದ್ದೇನೆ.

**ರಂಗನಾಯಕ :–** ಸುಳ್ಳು ಹೇಳಬೇಡ ಯಾವಾಗ ಮಾಡಿಸಿದ್ದೀಯ?

**ದೊಡ್ಡ ಮನುಷ್ಯ :–** ಆಲೂರಿನಲ್ಲಿ ಪೂಜಾರಿಗೆ ಮೊದಲೇ ಹಣಕೊಟ್ಟು, ಒಂದುವೇಳೆ ನಾನು ಕೆಲಸ ಇದ್ದು ಬಾರದಿದ್ದರೂ, ತಿಂಗಳಲ್ಲಿ ಏಕಾದಶಿ ದಿನದಂದು ಅಭಿಷೇಕ ಮಾಡುವಂತೆ ಏರ್ಪಾಟು ಮಾಡಿದ್ದೇನೆ. ನಾನು ಸಹ ಹಾಜರಾಗಿ ಪೂಜೆ ಮಾಡಿಸಿ ಬರುತ್ತಿದ್ದೇನೆ.

**ರಂಗನಾಯಕ :–** ನೀನು ಮುಗಿದಿರುವುದು ನನ್ನ ಹತ್ತಿರ! ನನಗೆ ಮಾಡದೆ ಆಲೂರು ರಂಗನಾಯಕನಿಗೆ ಪೂಜೆ ಮಾಡಿದರೆ ಸರಿ ಹೋಗುತ್ತದಾ? ಅಲ್ಲಿ ಮಾಡಿದರೆ ಆತನಿಗೆ ಮಾಡಿದಹಾಗೆ, ಇಲ್ಲಿ ಮಾಡಿದರೆ ನನಗೆ ಮಾಡಿದ ಹಾಗೆ, ಎಲ್ಲಿ ಮುಗಿದರೆ ಅಲ್ಲಿಯೆ ಮಾಡಬೇಕು.

**ದೊಡ್ಡ ಮನುಷ್ಯ :–** ನನಗೆ ಏನು ಅರ್ಥವಾಗಲಿಲ್ಲ. ಅಲ್ಲಿ ಮಾಡಿದರೆ ನಿನಗೆ ಮಾಡಿದಂತಲ್ಲವೆ! ಅಲ್ಲಿರುವುದು ಸಹ ನೀನೇ ಅಲ್ಲವೆ!

**ರಂಗನಾಯಕರು :–** ಚೆನ್ನಾಗಿ ಅರ್ಥವಾಗುವಂತೆ ಹೇಳುತ್ತೇನೆ ಕೇಳು. ಇಲ್ಲಿರುವುದು ನಾನು ಬೊಲ್ಲಿಕೊಂಡ ರಂಗನಾಯಕನು. ಅಲ್ಲಿರುವುದು ಆಲೂರು ರಂಗನಾಯಕ. ನಾನು ಬೇರೆ, ಆತನು ಬೇರೆ. ನನಗೆ ಮುಗಿದು, ಆತನಿಗೆ ಹರಕೆ ತೀರಿಸಿದರೆ ಹೇಗೆ ಸರಿಹೋಗುತ್ತದೆ? ನನಗೆ ಮುಗಿದಿದ್ದೀಯ ನನಗೆ ತೀರಿಸಲಿಲ್ಲ. ನೀನು ನನಗೆ ಬಾಕಿ ಇದ್ದಂತೆ. ತಿಳಿಯದೆ ತಪ್ಪು ಮಾಡಿದ್ದೀಯ. ಈಗಿನಿಂದ ನಿನ್ನ ಹರಕೆಗಳನ್ನು ಇಲ್ಲಿಯೇ ತೀರಿಸಿಕೊ! ಇಲ್ಲದೆ ಹೋದರೆ ನೀನು ಕೆಟ್ಟು ಹೋಗುತ್ತೀಯ.

**ದೊಡ್ಡ ಮನುಷ್ಯ :–** ತಪ್ಪಾಗಿದೆ ಸ್ವಾಮಿ! ತಿಳಿಯದೆ ನಿನ್ನ ಹತ್ತಿರಕ್ಕೆ ಬರಲಿಲ್ಲ. ಈಗಿನಿಂದ ತಿಂಗಳು ತಿಂಗಳು ಇಲ್ಲಿಗೇ ಬಂದು, ಪೂಜೆ ಮಾಡಿಕೊಂಡು ಹೋಗುತ್ತೇನೆ.

ಆ ದೊಡ್ಡ ಮನುಷ್ಯ ಹೇಳಿದ ನಂತರ ರಂಗನಾಯಕ ಸ್ವಾಮಿ ಆಕೆ ಶರೀರದಿಂದ ಬಿಟ್ಟು ಹೋದನು. ಪಕ್ಕದಲ್ಲಿರುವವರಿಗೆ ಏನು ಅರ್ಥವಾಗಲಿಲ್ಲ. ಆ ದೊಡ್ಡ ಮನುಷ್ಯನಿಗು ಸಹ ಏನು ಅರ್ಥವಾಗಲಿಲ್ಲ. ಆದರೆ ಅಲ್ಲಿಗೆ ಹೋಗಿ ಕೈಮುಗಿದರೂ ನನಗೆ ಮಾತ್ರ ಇಲ್ಲಿಗೇ ಬಂದು ಮುಗಿಯಬೇಕು ಎನ್ನುವುದು ಮಾತ್ರ ಅರ್ಥವಾಯಿತು.

ರಂಗನಾಯಕ ಯಾವ ಗುಡಿಯಲ್ಲಿದ್ದರೂ, ಯಾವ ಊರಿನಲ್ಲಿದ್ದರೂ ಎಲ್ಲಾಕಡೆ ಒಂದೇ ರಂಗನಾಯಕನು ಅಲ್ಲವೆ! ಎಂದು ಎಲ್ಲರೂ ಅಂದು ಕೊಳ್ಳುವುದು ಸಹಜ. ಆದರೆ ಒಂದೇ ರಂಗನಾಯಕನು, ಎಲ್ಲ ಗುಡಿಗಳಲ್ಲಿ ಇರುವುದಿಲ್ಲ. ಒಂದೊಂದು ಗುಡಿಯಲ್ಲಿ ಒಬ್ಬೊಬ್ಬ ರಂಗನಾಯಕನು ಇದ್ದಾನೆನ್ನುವುದು ಸತ್ಯ. ಹಾಗೆ ಆಂಜನೇಯ ಸ್ವಾಮಿ ಗುಡಿಗಳು ಬಹಳ ಇವೆ ಅಲ್ಲವೆ! ಅಲ್ಲಿಯೂ ಸಹ ಪ್ರಜೆಗಳೆಲ್ಲರೂ ತಪ್ಪಾಗಿ ಅರ್ಥೈಸಿಕೊಳ್ಳುವುದೇನೆಂದರೆ ರಾಮನ ಬಂಟ ಆಂಜನೇಯನೆಂದು, ಆಂಜನೇಯನ ಗುಡಿ ಎಲ್ಲಿದ್ದರೂ ಶ್ರೀರಾಮನ ಭಕ್ತನಾದ ಆಂಜನೇಯನೇ ಇರುತ್ತಾನೆಂದು ಅಂದುಕೊಳ್ಳುತ್ತಾರೆ. ಆದರೆ ಅದು ಸತ್ಯವಲ್ಲ. ತೊಂಡಪಾಡುನಲ್ಲಿ ಬೊಲ್ಲಿಕೊಂಡ ರಂಗನಾಯಕ ಸ್ವಾಮಿ ಹೇಳಿದಹಾಗೆ, ಬೇರೆಬೇರೆ ಗುಡಿಗಳಲ್ಲಿ, ಬೇರೆಬೇರೆ ದೇವರು ಗಳಿರುತ್ತಾರೆನ್ನುವುದು ಸತ್ಯ. ಕಸಾಪುರದ ಆಂಜನೇಯಸ್ವಾಮಿ ಬೇರೆ, ಗಂಡಿ ಆಂಜನೇಯಸ್ವಾಮಿ ಬೇರೆ. ಆಂಜನೇಯನೆಂದು ಒಂದೇ ಹೆಸರಿದ್ದರೂ, ನಿಜವಾಗಿ ಅವರು ಬೇರೆಬೇರೆ ದೇವತೆಗಳು. ಸ್ವಭಾವವು ಸಹ ಬೇರೆಬೇರೆಯಾಗಿ ಇರುತ್ತವೆ. ಭಕ್ತರು ಮುಡುಪುಗಳು ಕೊಡುತ್ತೇವೆಂದು ಹರಕೆ ಹೊತ್ತುಕೊಂಡು ಕೊಡದೇ ಹೋದರೂ ಒಬ್ಬ ಆಂಜನೇಯಸ್ವಾಮಿ ತಲೆಕೆಡಿಸಿಕೊಳ್ಳುವುದಿಲ್ಲ, ಒಬ್ಬ ಆಂಜನೇಯ ಸ್ವಾಮಿ ಮೂಗುಹಿಂಡಿ ಬಾಕಿಯನ್ನು ವಸೂಲಿ ಮಾಡಿದಹಾಗೆ ಮುಡುಪುಗಳು ವಸೂಲಿ ಮಾಡುತ್ತಾರೆ. ತೊಂಡಪಾಡು ರಂಗನಾಯಕಸ್ವಾಮಿ ಆ ದೊಡ್ಡ ಮನುಷ್ಯನನ್ನು ನಿಲ್ಲಿಸಿ ಕೇಳುವುದು ನ್ಯಾಯವೆ. ಸಾಲಮಾಡಿದ ತೊಂಡಪಾಡಿನಲ್ಲಿ ಬಾಕಿತೀರಿಸದೆ, ಆಲೂರುನಲ್ಲಿ ಕೊಟ್ಟಿದ್ದೇನೆಂದರೆ ಆ ದೊಡ್ಡ ಮನುಷ್ಯ ತಪ್ಪು ಮಾಡಿದಂತೆ.

ನೀನು ಸಾಹುಕಾರ ಮಲ್ಲಾರೆಡ್ಡಿ ಹತ್ತಿರ ಸಾಲ ತೆಗೆದುಕೊಂಡು, ನಿನಗೆ ಹತ್ತಿರವಾಗಿದ್ದಾನೆಂದು ಹುಣಸೆಮರದ ಮಲ್ಲಾರೆಡ್ಡಿಗೆ ಹಣಕೊಟ್ಟು ನನ್ನ ಬಾಕಿ ತೀರಿತೆಂದು, ನಾನು ಕೊಟ್ಟಿದ್ದು ಮಲ್ಲಾರೆಡ್ಡಿಗೇ ತಾನೆ! ಎಂದರೆ ಸಾಲ ಕೊಟ್ಟ ಸಾಹುಕಾರ ಮಲ್ಲಾರೆಡ್ಡಿ ಸುಮ್ಮನಿರುತ್ತಾನಾ? ಕೋರ್ಟಿಗೆ ಎಳೆದು ರಂಫ ಮಾಡುತ್ತಾನೆ. ಹಾಗೆ ಒಬ್ಬ ಆಂಜನೇಯನಿಗೆ ಕೈಮುಗಿದು, ಇನ್ನೊಬ್ಬ ಆಂಜನೇಯನಿಗೆ ಕೊಟ್ಟರೂ, ಒಬ್ಬ ರಂಗನಾಯಕ ಸ್ವಾಮಿಗೆ ಹರಕೆ ಹೊತ್ತು ಇನ್ನೊಬ್ಬ ರಂಗನಾಯಕ ಸ್ವಾಮಿಗೆ ಹರಕೆ ತೀರಿಸಿದರೂ ಒಪ್ಪಿಕೊಳ್ಳುವುದಿಲ್ಲ. ಅದೇ ಆ ದೊಡ್ಡ ಮನುಷ್ಯನ ವಿಷಯದಲ್ಲಿ ನಡೆದಿರುವುದು. ಇದೆಲ್ಲಾ ನಿಮಗೆ ಹೇಗೆ ತಿಳಿದಿದೆಯೆಂದು ಯಾರಾದರು ಪ್ರಶ್ನಿಸಿದರೆ ಅದಕ್ಕೆ ನನ್ನ ಉತ್ತರ ಏನೆಂದರೆ! ನನಗೆ ಹತ್ತುವರ್ಷ ವಯಸ್ಸಿನಲ್ಲಿ ವಜ್ರಕರೂರಿನಲ್ಲಿ ಇದ್ದೆನು. ಆ ಊರಿನಲ್ಲಿ ಪೀರ್ಲ ಚಾವಡಿಗಳು ಹೆಚ್ಚಾಗಿದ್ದವು. ಆ ಊರಿಗೆ ಹೊಸದಾಗಿ ಬಂದ ಕರೆಂಟು ಆಫೀಸ್‌ನಲ್ಲಿ ಕೆಲಸ ಮಾಡುವ ಒಬ್ಬ ಹೆಲ್ಪರ್ ಒಂದು ಬೀದಿಯಲ್ಲಿ ಮನೆ ಬಾಡಿಗೆಗೆ ತೆಗೆದುಕೊಂಡು ಇರುತ್ತಿದ್ದನು. ಅಷ್ಟರಲ್ಲಿ ಅಲ್ಲಿ ಪೀರ್ಲ ಹಬ್ಬ ಬಂದಿತು. ಆ ಹಬ್ಬದಲ್ಲಿ ಪೀರ್ಲನ್ನು ನಿಲ್ಲಿಸಿದ್ದರು. ಹೆಲ್ಪರ್ ಪ್ರಸಾದ್ ಇದ್ದ ಬೀದಿಯಲ್ಲಿಯು ಸಹ ಪೀರ್ಲಚಾವಡಿ ಇತ್ತು. ಹೆಲ್ಪರ್ ಪ್ರಸಾದ್ ಪೀರ್ಲ ಚಾವಡಿ ಹತ್ತಿರಕ್ಕೆ ಸಾಯಂಕಾಲ ಹೋಗಿ, ನನಗೆ ಮದುವೆ ಈ ವರ್ಷದಲ್ಲಿ ಆದರೆ ಬರುವ ಪೀರ್ಲ ಹಬ್ಬಕ್ಕೆ ಬಟ್ಟೆಗಳನ್ನು ಕೊಡುತ್ತೇನೆ, ಐದು ಸೇರು ಸಕ್ಕರೆ ಓದಿಸುತ್ತೇನೆಂದು ಹುಸ್ಸೇನ್ ಎನ್ನುವ ಹೆಸರಿರುವ ಪೀರನಿಗೆ ಹರಕೆ ಹೊತ್ತಿದ್ದನು. ಆ ಬೀದಿಯಲ್ಲಿ ಹುಸ್ಸೇನ್‌ಪೀರು ಶಕ್ತಿವಂತವಾದದ್ದೆಂದು, ಹರಕೆ ಹೊತ್ತರೆ ತಪ್ಪದೆ ನೆರವೇರುತ್ತದೆಂದು ಆ ಬೀದಿಯಲ್ಲಿ ಎನ್ನುತ್ತಿದ್ದರು. ಆದ್ದರಿಂದ ಪ್ರಸಾದ್ ತನ್ನ ಮದುವೆ ವಿಷಯ ಕುರಿತು ಹರಕೆ ಹೊತ್ತುಕೊಂಡನು. ಆ ಹಬ್ಬ ಹೋದ ನಂತರ ನಾಲ್ಕು ತಿಂಗಳಿಗೆ ಪ್ರಸಾದ್‌ಗೆ ಮದುವೆ ಆಗಿದೆ. ನಂತರ ತಿಂಗಳಿಗೆ ಹೆಂಡತಿ ಸಂಸಾರಕ್ಕೆ ಬಂದಳು. ಆಗ ಪ್ರಸಾದ್ ಇರುವ ಮನೆ ಬಹಳ ಚಿಕ್ಕದು. ಆದ್ದರಿಂದ ಆತನು ಅದೇ ಊರಿನಲ್ಲಿಯೆ, ಬೇರೆ ಪ್ರಾಂತದ ಬೀದಿಯಲ್ಲಿನ ದೊಡ್ಡ ಮನೆಯೊಳಗೆ ಬಂದನು. ನಂತರ ಆರು ತಿಂಗಳಿಗೆ ಪೀರ್ಲಹಬ್ಬ ಬಂದಿತು. ಆಗ ಹೆಲ್ಪರ್ ಪ್ರಸಾದ್

ಹುಸ್ಸೇನ್ ಪೀರನಿಗೆ ಮುಡುಪು ತೀರಿಸಬೇಕೆಂದು ಆ ದಿನ ಹೇಳಿದ ಮುಡುಪಿಗೋಸ್ಕರ, ಪ್ರಸಾದ್ ಐದು ಸೇರು ಸಕ್ಕರೆ ಮತ್ತು ಹೊಸ ಬಟ್ಟೆಗಳು ತಂದು ಪ್ರಸ್ತುತ ಪ್ರಸಾದ್ ಇರುವ ಬೀದಿಯಲ್ಲಿನ ಪೀರ್ಲಚಾವಿಡಿಯಲ್ಲಿರುವ ಹುಸ್ಸೇನ್ ಅನ್ನುವ ಪೀರನಿಗೆ ಸಕ್ಕರೆ ಓದಿಸಿ, ಬಟ್ಟೆಗಳನ್ನು ಕೊಟ್ಟನು. ಅಷ್ಟಕ್ಕೆ ತಾನು ಹರಕೆ ಹೊತ್ತುಕೊಂಡಂತೆ ಹುಸ್ಸೇನ್‌ಗೆ ಹರಕೆಯನ್ನು ಸಲ್ಲಿಸಿದ್ದೇನೆಂದು ತೃಪ್ತಿಪಟ್ಟನು. ಹಾಗೆ ಮಾಡಿದ ಎರಡನೆ ದಿನವೆ, ಮೊದಲು ಪ್ರಸಾದ್ ಸಂಸಾರವಿದ್ದ ಬೀದಿಯಲ್ಲಿನ ಹುಸ್ಸೇನ್ ಎನ್ನುವ ಪೀರನು ಪ್ರಸಾದ್ ಮನೆಮುಂದಕ್ಕೆ ಬಂದಿತು. ಪೀರನನ್ನು ಎತ್ತಿಕೊಂಡ ಮನುಷ್ಯನಿಗೆ ಮೈತುಂಬಿ ಬಂದು ಮಾತನಾಡುತ್ತಾ "ಪ್ರಸಾದ್! ಸಕ್ಕರೆ, ಬಟ್ಟೆಗಳು ಕೊಡುತ್ತೇನೆಂದು ಹೇಳಿ, ನೀನು ಆ ಕಡೆಗೆ ಬರಲಿಲ್ಲ. ನನ್ನ ಹರಕೆ ಕೊಡಬೇಕಾದದ್ದೆ" ಎಂದು ಹೇಳಿದನು. ಅದನ್ನು ನೋಡಿದ ಪ್ರಸಾದ್ ಆಶ್ಚರ್ಯ ಪಟ್ಟು ನಿನ್ನೆಯೆ ಐದು ಸೇರು ಸಕ್ಕರೆ, ಹೊಸ ಬಟ್ಟೆಗಳು ಕೊಟ್ಟಿದ್ದೇನಲ್ಲ" ಎಂದನು. "ನೀನು ನನಗೆ ಹರಕೆ ಹೊತ್ತಿದ್ದೀಯ ನನಗೆ ಕೊಡಬೇಕು. ಅದು ಬಿಟ್ಟು ಈ ಬೀದಿಯಲ್ಲಿನ ಹುಸ್ಸೇನ್‌ಗೆ ಕೊಟ್ಟರೆ ನನಗೆ ಕೊಟ್ಟಹಾಗೆ ಹೇಗಾಗುತ್ತದೆ? ಈ ಬೀದಿಯಲ್ಲಿನ ಹುಸ್ಸೇನ್‌ಗೆ ನನಗೆ ಸಂಬಂಧವಿಲ್ಲ. ನೀನು ಮಾತ್ರ ನನಗೆ ಕೊಡಬೇಕಾದದ್ದೆ." ಎಂದು ಪೀರ ಹೇಳಿತು. ಆ ಮಾತಿನಿಂದ ಆ ಪೀರು ಹುಸ್ಸೇನ್ ಬೇರೆ, ಈ ಪೀರು ಹುಸ್ಸೇನ್ ಬೇರೆ ಎಂದು ಪ್ರಸಾದ್‌ಗೆ ಅರ್ಥವಾಯಿತು. ನಾಳೆ ತಪ್ಪದೆ ಹರಕೆಹೊತ್ತಿರುವುದು ಕೊಡುತ್ತೇನೆಂದು ಪ್ರಸಾದ್ ಹೇಳಿದಾಗ ಬಂದಿರುವ ಪೀರ ಹೋಯಿತು. ಆತನು ಮರುದಿನ ಸಕ್ಕರೆ, ಬಟ್ಟೆಗಳು ತೆಗೆದುಕೊಂಡು, ಮೊದಲು ಸಂಸಾರವಿದ್ದ ಬೀದಿಗೆ ಹೋಗಿ ಅಲ್ಲಿ ಪೀರ್ಲ ಚಾವಡಿಯಲ್ಲಿರುವ ಹುಸ್ಸೇನ್ ಪೀರ್ಲುಗೆ ಸಮರ್ಪಿಸಿ ಬಂದನು.

ಈ ವಿಷಯವನ್ನೆಲ್ಲ ಹತ್ತು ವರ್ಷ ವಯಸ್ಸಿನಲ್ಲಿ ವಜ್ರಕರೂರಿನಲ್ಲಿದ್ದ ನಾನು ಪ್ರತ್ಯಕ್ಷವಾಗಿ ನೋಡಿದೆನು. ಆ ದಿನವೆ ಪೀರ್ಲ ವಿಷಯ ಅರ್ಥವಾಯಿತು. ನಂತರ, ಕಾಲ ಕಳೆಯುವ ಕಾಲದಿ ಪೀರ್ಲ ಚಾವಡಿಯಲ್ಲಿನ ಪೀರ್ಲಗಳೆ ಅಲ್ಲದೆ, ದೇವತೆಗಳ ಗುಡಿಯಲ್ಲಿನ ದೇವತೆಗಳು ಸಹ ಒಂದೇ ಹೆಸರು

ಇರುವವರಾದರೂ, ಗುಡಿ ಗುಡಿಗು ಬೇರೆ ಬೇರೆಯಾಗಿ ಇದ್ದಾರೆಂದು ಅರ್ಥವಾಯಿತು. ಆದ್ದರಿಂದ ತೊಂಡಪಾಡು ಗುಡಿಯಲ್ಲಿ ನನ್ನ ಮುಂದೆ ನಡೆದಿರುವುದು ನನಗೆ ತಿಳಿದ ಹಳೇ ವಿಷಯವೆ, ಅದರಿಂದ ನನಗೇನು ಆಶ್ಚರ್ಯವಾಗಲಿಲ್ಲ. ಆದರೆ ಆಗ ಅಲ್ಲಿರುವವರೆಲ್ಲರಿಗು ಅದು ಹೊಸ ವಿಷಯವಾದ್ದರಿಂದ ಅವರಿಗೆ ಒಂದು ಬಾರಿಗೆ ಅರ್ಥವಾಗದೆ, ರಂಗನಾಯಕ ಸ್ವಾಮಿ ಮಾತುಗಳಿಗೆ ಗಡಿಬಿಡಿಯಾಗಿ ಕೊನೆಗೆ ತೊಂಡಪಾಡು ರಂಗನಾಯಕ ಬೇರೆ, ಆಲೂರು ರಂಗನಾಯಕ ಬೇರೆ ಎನ್ನುವ ವಿಷಯ ಅರ್ಥವಾಗಲಿಲ್ಲ. ಅವರಿಗೆ ಅರ್ಥವಾಗಿರುವುದೆಲ್ಲಾ ಯಾವ ಗುಡಿಯಲ್ಲಿ ಕೈಮುಗಿದರೆ, ಆ ಗುಡಿಯಲ್ಲಿಯೆ ಹರಕೆಗಳನ್ನು ಸಲ್ಲಿಸಬೇಕೆನ್ನುವ ವಿಷಯ ಮಾತ್ರ ಅರ್ಥವಾಯಿತು.

ಈ ವಿಧವಾಗಿ ಹೇಳಿಕೊಳ್ಳುತ್ತಾ ಹೋದರೆ, ಮನುಷ್ಯನಿಗೆ ತಿಳಿಯದ ರಹಸ್ಯಗಳು ಎಷ್ಟೋ ಇವೆ. ಒಂದೇ ಹೆಸರಿರುವ ವ್ಯಕ್ತಿಗಳು ನಾಲ್ವರಿದ್ದರೆ, ಅವರಿಗಿರುವ ಹೆಸರುಗಳು ಒಂದೇ ಆದರೂ ಅವರು ಮಾತ್ರ ಬೇರೆ, ಅವರ ಉದ್ದೇಶಗಳು ಬೇರೆ, ಅವರ ಪ್ರವರ್ತನೆ ಹೇಗೆ ಬೆರೆಯಾಗಿರುತ್ತವೊ, ಹಾಗೆ ಒಂದು ಊರಿನಲ್ಲಿ ಒಂದೇ ಹೆಸರಿರುವ ಆಂಜನೇಯನ ಗುಡಿಗಳು ನಾಲ್ಕು ಇವೆಯೆಂದುಕೊಳ್ಳೋಣ. ಆ ನಾಲ್ಕು ಗುಡಿಗಳಲ್ಲಿರುವ ನಾಲ್ವರು ಆಂಜನೇಯರು ಬೇರೆ ಬೇರೆಯಾಗಿ ಇದ್ದಾರೆ. ಹಾಗೆ ಅವರ ಗುಣಗಳು ಬೇರೆ, ಅವರ ಪ್ರವರ್ತನೆ ಬೇರೆ ಇರುತ್ತವೆಂದು, ಮೇಲೆ ಹೇಳಿದ ರಂಗನಾಯಕಸ್ವಾಮಿ, ಹುಸ್ಸೇನ್ ಪೀರು ಕಥೆಯೆಲ್ಲಾ ನೋಡಿದ ನಂತರ ಯಾರಿಗಾದರೂ ಅರ್ಥವಾಗುತ್ತದೆ. ನನಗೆ ಚಿಕ್ಕ ವಯಸ್ಸಿನಲ್ಲಿಯೆ ಅರ್ಥವಾಯಿತು, ಆದ್ದರಿಂದ ನಾನು ನಿಮಗೆ ಹೇಳುತ್ತಿದ್ದೇನೆ. ನನ್ನ ಮಾತನ್ನು ವಿವರವಾಗಿ ಅರ್ಥಮಾಡಿಕೊಂಡವರಿಗೆ, ಒಂದೇ ಹೆಸರಿರುವವರೆಲ್ಲ ಒಂದೇ ದೇವರು ಅಲ್ಲವೆಂದು ಸ್ವಲ್ಪಮಟ್ಟಿಗೆ ಅರ್ಥವಾಗುತ್ತದೆ. ಆದರೆ ಈ ಗ್ರಂಥವನ್ನೇ ಓದದವರಿಗೆ ದೇವತೆಗಳ ಕುರಿತು ಏನು ಅರ್ಥವಾಗುವುದಿಲ್ಲ. ಅಂತವರು ಒಬ್ಬರ ಹತ್ತಿರ ಸಾಲ ಮಾಡಿ ಅದೇ ಹೆಸರಿರುವ ಇನ್ನೊಬ್ಬರ ಹತ್ತಿರ ಸಾಲ ತೀರಿಸಿದಂತೆ, ಪಳನಿ ಸುಬ್ರಹ್ಮಣ್ಯಸ್ವಾಮಿಗೆ ಕಾಣಿಕೆ

ಕೊಡುತ್ತೇನೆಂದು ಹೇಳಿ ತಿರುತ್ತಣಿ ಸುಬ್ರಹ್ಮಣ್ಯಸ್ವಾಮಿಗೆ ಕೊಡುವುದಾಗಲಿ, ಗಂಡಿ ಆಂಜನೇಯಸ್ವಾಮಿಗೆ ಮುಡುಪು ಕೊಡುತ್ತೇನೆಂದು, ಕಸಾಪುರದ ಆಂಜನೇಯಸ್ವಾಮಿಗೆ ಕೊಡುವುದಾಗಲಿ ನಡೆಯುತ್ತಿದೆ. ಹಾಗೆ ಮಾಡುವುದರಿಂದ ಹರಕೆ ಹೊತ್ತವರಿಗೇ ಕಷ್ಟ ನಷ್ಟ ಆಗುತ್ತದೆಂದು ತಿಳಿದುಕೊಳ್ಳಬೇಕು. ಇಂತಹ ದೇವತೆಗಳನ್ನು ಕುರಿತು ಹೇತುವಾದಿಗಳು ಏನನ್ನುತ್ತಾರೊ?

ಮನುಷ್ಯನ ಶರೀರಕ್ಕೆ ಬಾಲ್ಯ, ಯೌವನ, ಕೌಮಾರ, ವೃದ್ಧಾಪ್ಯ ಎನ್ನುವ ನಾಲ್ಕು ದಶೆಗಳು ಇವೆ. ನಾಲ್ಕು ದಶೆಗಳು ಮುಗಿದುಹೋದ ನಂತರ ಶರೀರ ಸತ್ತುಹೋಗುವುದು ಸಹ ನಡೆಯುತ್ತಿದೆ. ಶರೀರ ನಾಲ್ಕು ದಶೆಗಳಲ್ಲಿ, ಶರೀರದಲ್ಲಿ ನಿವಾಶಿಸುವ ಜೀವಾತ್ಮ ಮರಣದಲ್ಲಿ ಶರೀರವನ್ನು ಬಿಟ್ಟು ಹೋಗುತ್ತಾನೆ. ಇದು ಎಲ್ಲರಿಗು ತಿಳಿದ ವಿಷಯ. ಆದರೆ ಯಾರಿಗು ತಿಳಿಯದ ವಿಷಯವು ಸಹ ಒಂದಿದೆ. ಅದು ಏನೆಂದರೆ! ಮನುಷ್ಯನಿಗೆ ಮಾಂಸದಿಂದ ಕೂಡಿಕೊಂಡ ಶರೀರವಿದ್ದಹಾಗೆ, ಒಂದು ದೇವತೆಗಾಗಲಿ, ಒಬ್ಬ ದೇವರಿಗಾಗಲಿ, ಕಲ್ಲಿನಿಂದ ತಯಾರುಮಾಡಿದ ಪ್ರತಿಮೆಯೆ ಶರೀರವಾಗಿ ಇದೆ. ಒಬ್ಬ ದೇವತೆಗೆ ಆ ದೇವತೆಯ ಪ್ರತಿಮೆ ಸ್ಥೂಲಶರೀರವಾಗಿದ್ದರೆ, ಸೂಕ್ಷ್ಮ ಶರೀರ ಮಾತ್ರ ಮನುಷ್ಯರಿಗೆ ಇದ್ದ ಹಾಗೆ ಇದೆ. ದೇವತೆ ಪ್ರತಿಮೆಯಲ್ಲಿ ಮನುಷ್ಯನ ಸ್ಥೂಲ ಶರೀರಕ್ಕೆ ಕಾಣಿಸುವಂತೆ ಬಾಲ್ಯ, ಯೌವನ, ಕೌಮಾರ, ವೃದ್ಧಾಪ್ಯ ಮತ್ತು ಮರಣಗಳು ಕಾಣಿಸುವುದಿಲ್ಲ. ಪ್ರತಿಮೆಯಲ್ಲಿ ಶರೀರ ದಶೆಗಳು ಕಾಣಿಸದಂತೆ ಹೋದರೂ, ಪ್ರತಿಮೆಯ ಸೂಕ್ಷ್ಮ ಶರೀರಕ್ಕೆ ಎಲ್ಲ ದಶೆಗಳು ಮನುಷ್ಯರಿಗೆ ಇದ್ದಹಾಗೆ ತಪ್ಪದೆ ಇರುತ್ತವೆ. ಮನುಷ್ಯನ ಶರೀರ ಮರಣಾನಂತರ ಕೊಳೆತುಹೋಗಿ ನಾಶನವಾಗಿ ಹೋಗುತ್ತದೆ. ಆದರೆ ಒಂದು ದೇವತೆ ಶರೀರವಾದ ಪ್ರತಿಮೆ ಆ ದೇವತೆ ಮರಣಿಸಿದರೂ ಸಹ ಪ್ರತಿಮೆ ನಾಶವಾಗುವುದಿಲ್ಲ, ಹೇಗಿರುವುದು ಹಾಗೇ ಇರುತ್ತದೆ. ಮನುಷ್ಯನ ಶರೀರ ಮರಣದಲ್ಲಿ ಚಲನೆಯಿಲ್ಲದೆ ಬಿದ್ದುಹೋಗುತ್ತದೆ, ಆದ್ದರಿಂದ ಆ ಮನುಷ್ಯ ಸತ್ತುಹೋಗಿದ್ದಾನೆಂದು ಶರೀರವನ್ನು ನೋಡಿ ಹೇಳಬಹುದು. ಆದರೆ ದೇವತೆ ಸತ್ತು ಹೋಗಿದೆಯೆಂದು ಪ್ರತಿಮೆಯನ್ನು ನೋಡಿ ಹೇಳಲಾರೆವು. ಇಲ್ಲಿ ಕೆಲವರಿಗೆ

ಅಲ್ಲದೆ ಎಲ್ಲರಿಗೂ ಸಹ ಬರುವ ಪ್ರಶ್ನೆ ಒಂದಿದೆ. ಒಬ್ಬ ಮನುಷ್ಯ ತನ್ನ ಶರೀರದಲ್ಲಿ ಸತ್ತುಹೋದಂತೆ, ಒಬ್ಬ ದೇವತೆ ತನ್ನ ಶರೀರವಾದ ಪ್ರತಿಮೆಯಲ್ಲಿ ಸತ್ತುಹೋಗುತ್ತದಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ!

ಒಬ್ಬ ಮನುಷ್ಯನಾದರೂ, ಅಥವಾ ದೇವತೆಯಾದರೂ ಯಾವುದೊ ಒಂದು ದಿನ ಸತ್ತುಹೋಗಬೇಕಾಗಿದೆ. ಗುಡಿಯಲ್ಲಿನ ದೇವತೆಗಳಿಗು ಸಹ ಸಾವು ಇದೆ, ಮತ್ತು ತಕ್ಷಣವೆ ಹುಟ್ಟು ಸಹ ಇದೆ. ಇದನ್ನು ಅನುಸರಿಸಿ ನೋಡಿದಾಗ ಸಾವುಹುಟ್ಟುಗಳಿಗೆ, ದೇವತೆಗಳು ಸಹ ಅತೀತರಲ್ಲ ಎನ್ನುವುದು ತಿಳಿಯುತ್ತಿದೆ. ಮನುಷ್ಯನಿಗೆ ಆಯಸ್ಸಿನ ಪರಿಮಿತಿ 120 ವರ್ಷಗಳು. ಹಾಗೆ ದೇವತೆಗಳ ಆಯಸ್ಸು, ಪ್ರತಿಮೆಗಳೆನ್ನುವ ಶರೀರಗಳಲ್ಲಿ 120 ವರ್ಷಗಳು ಮನುಷ್ಯರಿಗೆ ಇದ್ದಹಾಗೆ ಇದೆ. ಆದ್ದರಿಂದ ಮನುಷ್ಯನಿಗೆ, ದೇವತೆಗಳಿಗೆ ಆಯಸ್ಸಿನ ಪರಿಮಿತಿಯಲ್ಲಿ ಎಂತಹ ವ್ಯತ್ಯಾಸವಿಲ್ಲ. ಆದರೆ ಮನುಷ್ಯರಾದರು, ದೇವತೆಗಳಾದರು ಆ ಜನ್ಮಕ್ಕಿರುವ ಪ್ರಾರಬ್ಧ ಕರ್ಮಪ್ರಕಾರ ಕೆಲವು ವರ್ಷಗಳು ಬದುಕಿ ಸತ್ತುಹೋಗುತ್ತಿದ್ದಾರೆ. ಒಂದು ಪ್ರತಿಮೆಯಲ್ಲಿ ಒಬ್ಬ ದೇವನಿದ್ದಾನೆಂದು ಕೊಳ್ಳೋಣ. ಆ ದೇವರು 80 ವರ್ಷಗಳಿಗೆ ಸತ್ತುಹೋದರೆ, ಆ ಪ್ರತಿಮೆ ಖಾಲಿ ಆಗಿಹೋಗುತ್ತದೆ. ಹಾಗೆ ಖಾಲಿಯಾದ ಪ್ರತಿಮೆಯೊಳಗೆ, ಹೊಸ ಜೀವಿ ಜನ್ಮ ತೆಗೆದುಕೊಂಡು ಹುಟ್ಟುತ್ತಿದ್ದಾನೆ. ಹಾಗೆ ಹುಟ್ಟಿದ ಜೀವಿಯು ಆ ಪ್ರತಿಮೆಯಲ್ಲಿನ ದೇವರಾಗಿ ಚಲಾವಣೆ ಆಗುತ್ತಾನೆ. ಹಾಗೆ ಕಾಲಗಮನದಲ್ಲಿ ಒಂದು ಪ್ರತಿಮೆಯಲ್ಲಿ ಎಷ್ಟೋ ಜೀವಿಗಳು ದೇವರಾಗಿ ಚಲಾವಣೆಯಾದಂತೆ ತಿಳಿದುಬರುತ್ತದೆ. ಒಂದು ಪ್ರತಿಮೆಯಲ್ಲಿ ಸ್ವಲ್ಪ ಕಾಲ ಒಬ್ಬ ಜೀವಿಯು, ಆ ಪ್ರತಿಮೆಯ ಹೆಸರನ್ನು ಅನುಸರಿಸಿ, ಆ ದೇವರಾಗಿ ಪ್ರವರ್ತಿಸಿದರೂ ಆತನಿಗು ಸಹ ಗುಣಗಳು ಕರ್ಮವನ್ನು ಅನುಸರಿಸಿ ಕೆಲಸ ಮಾಡುತ್ತವೆ. ಆದ್ದರಿಂದ ಒಬ್ಬ ದೇವರ ಗುಣ, ಕೆಲಸಗಳು, ಉದ್ದೇಶಗಳು, ಸ್ವಭಾವಗಳು ಅದೇ ಪ್ರತಿಮೆಯಲ್ಲಿ ಸೇರಿದ ಬೇರೊಬ್ಬ ದೇವರಿಗೆ (ಜೀವಿಗೆ) ಇರುವುದಿಲ್ಲ. ಇದೆಲ್ಲಾ ಕೆಲವು ಜನರಿಗೆ ಸಾಧಾರಣವಾಗಿ ಕಾಣಿಸಿದರೂ, ನಾನು ಹೇಳುವುದು ಸತ್ಯ ಎನ್ನುವುದಕ್ಕೆ ಎಷ್ಟೋ ಆಧಾರಗಳು ಇವೆ. ಅಂತಹ ಆಧಾರವನ್ನು ಕೆಳಗೆ ವಿವರಿಸುತ್ತೇವೆ ನೋಡಿರಿ.

ಈ ವಿಷಯವನ್ನು ಹೇಳುವ ಮೊದಲು ಮುಖ್ಯವಾಗಿ ಒಂದು ಮಾತನ್ನು ಹೇಳಬಯಸುತ್ತೇನೆ. ಇದಕ್ಕಿಂತ ಮೊದಲು ಹೇಳಿರುವುದು ದೆವ್ವಗಳ ವಿಷಯಗಳೆ. ಆದರೆ ಈಗ ಹೇಳುವುದು ಗುಡಿಯಲ್ಲಿನ ದೇವರ ವಿಷಯಗಳು. ಸತ್ಯವನ್ನು ಮುಂಬರುವ ಪೀಳಿಗೆಗೆ ಒದಗಿಸುವುದಕ್ಕೆ ಯಥಾರ್ಥವಾದ ವಿಷಯಗಳನ್ನು ಹೇಳಬೇಕಾಗಿ ಬಂದಿದೆ. ಆದರೆ ಇದರಲ್ಲಿ ಯಾವ ದೇವರನ್ನು ಕೀಳಾಗಿಸುವ ಉದ್ದೇಶವೇನೂ ಇಲ್ಲ. ದೈವಜ್ಞಾನ ತಿಳಿದ ವ್ಯಕ್ತಿಯಾಗಿ ಬರೆಯುತ್ತಿದ್ದೇನೆ ಹೊರತು, ಅಜ್ಞಾನದಿಂದ ಏನು ಬರೆದಿಲ್ಲ. ಭಗವದ್ಗೀತೆಯಲ್ಲಿ ಭಗವಂತನು ಹೇಳಿದ ಜ್ಞಾನ, ಇಂದೂ ಸಮಾಜದಲ್ಲಿ ಗುರುತಿಸುವಷ್ಟು ಪ್ರಚಾರವಾಗಬೇಕೆಂದು, ಪ್ರತಿಯೊಬ್ಬರಿಗು ತಿಳಿಯಬೇಕೆಂದು ಗೀತೆಯಲ್ಲಿನ ಶ್ಲೋಕಗಳ ಆಧಾರದಿಂದಲೆ ಇಲ್ಲಿ ಹೇಳುವ ವಿಷಯಗಳು ಇರುತ್ತವೆಂದು ತಿಳಿಸುತ್ತಿದ್ದೇವೆ. ಭಗವದ್ಗೀತೆ ಪ್ರಕಾರ ದೈವತ್ವವನ್ನು ಎರಡು ವಿಧಗಳಾಗಿ ಮನುಷ್ಯರು ಅರ್ಥಮಾಡಿಕೊಂಡಿದ್ದಾರೆ. ಎಷ್ಟೋ ಜನರು ದೈವತ್ವವನ್ನು ಅನೇಕ ದೇವತೆಗಳ ರೂಪದಲ್ಲಿ ನೋಡುತ್ತಿದ್ದಾರೆ. ಕೆಲವರೇನೊ ದೈವತ್ವವನ್ನು ಒಬ್ಬ ದೇವರಂತೆಯೇ ನೋಡುತ್ತಿದ್ದಾರೆ. ಆ ಒಬ್ಬ ದೇವರನ್ನು ರೂಪ, ನಾಮ, ಕ್ರಿಯೆಗಳು ಎನ್ನುವ ಮೂರು ಇಲ್ಲದವನಂತೆ ಲೆಕ್ಕಹಾಕುತ್ತಿದ್ದಾರೆ. ಬಹಳ ಜನ ಆಕಾರ, ಹೆಸರು, ಕೆಲಸ ಮೂರು ಇರುವವನನ್ನು ದೇವರಂತೆ ಲೆಕ್ಕಹಾಕುತ್ತಿದ್ದಾರೆ. ದೇವರಿಗೆ ರೂಪ, ನಾಮ, ಕ್ರಿಯೆಗಳು ಇವೆಯೆಂದು ಅಂದುಕೊಳ್ಳುವವರು ರೂಪವಿರುವ ಪ್ರತಿಮೆಗಳನ್ನು ದೇವರೆಂದು ಲೆಕ್ಕಹಾಕಿಕೊಳ್ಳುವುದು, ಆರಾಧಿಸುವುದು ಮಾಡುತ್ತಿದ್ದಾರೆ. ಆ ನೇತೃತ್ವದಲ್ಲಿ ಅನೇಕ ಜನ, ಅನೇಕ ದೇವತೆಗಳನ್ನು ತಯಾರು ಮಾಡಿಕೊಂಡಿದ್ದಾರೆ. ಭೂಮಿಮೇಲೆ ಇರುವ ಅನೇಕ ದೇವತೆಗಳಲ್ಲಿ ಒಬ್ಬೊಬ್ಬರು ಒಂದೊಂದು ದೇವತೆಯುನ್ನು ಇಷ್ಟ ದೈವವಾಗಿಯೊ, ಮನೆ ದೇವರೆಂದಾಗಿಯೊ ಇಟ್ಟುಕೊಂಡಿದ್ದಾರೆ. ಆ ವಿಧವಾಗಿ ಒಬ್ಬ ದೇವರನ್ನು ಇಷ್ಟವಾಗಿ ಜೀವನಾಂತ್ಯ ದವರೆಗು ಆರಾಧಿಸುವವನು, ಸತ್ತುಹೋದ ನಂತರ ಆ ದೇವನಂತೆ ಬದಲಾಗಿಹೋಗುವನು. ಒಬ್ಬ ವ್ಯಕ್ತಿ ಜೀವನಾಂತ್ಯದವರೆಗು ಒಬ್ಬ ದೇವರನ್ನು ಇಷ್ಟದಿಂದ ಆರಾಧಿಸಿದರೆ ಆ ವ್ಯಕ್ತಿ ಸತ್ತುಹೋದರೆ, ಆತನು ತಾಯಿಗರ್ಭದಲ್ಲಿ

ತಯಾರಾದ ಶಿಶುವಿನ ಶರೀರದೊಳಗೆ ಪ್ರವೇಶಿಸದೆ, ತನ್ನ ಜೀವನದಲ್ಲಿ ಯಾವ ದೇವರನ್ನು ದೊಡ್ಡದಾಗಿ ಪೂಜಿಸಿದ್ದಾನೊ ಅದೇ ಹೆಸರಿರುವ ಪ್ರತಿಮೆಯ ಶರೀರ ಎಲ್ಲಿದ್ದರೂ ಅಲ್ಲಿಗೇ ಸೇರುವನು. ಉದಾಹರಣೆಗೆ ಒಬ್ಬ ವ್ಯಕ್ತಿ ಪ್ರೊದ್ದುಟೂರಿನಲ್ಲಿ ರಾಮನ ಗುಡಿಯಲ್ಲಿನ ರಾಮನನ್ನು ಹೆಚ್ಚಿನ ಶ್ರದ್ಧೆಯಿಂದ ಜೀವನಪೂರ್ತಿ ಪೂಜಿಸಿದ್ದಾನೆ. ಆಗ ಆ ವ್ಯಕ್ತಿ ಸತ್ತುಹೋಗಿ ಟಂಗುಟೂರು ಎನ್ನುವ ಊರಿನಲ್ಲಿ ರಾಮನ ಗುಡಿಯಲ್ಲಿರುವ ರಾಮನ ಪ್ರತಿಮೆಯಲ್ಲಿ ಹುಟ್ಟಿದ್ದಾನೆ. ಇದನ್ನು ಅನುಸರಿಸಿದಾಗ ತಿಳಿಯುವುದೇನೆಂದರೆ ಪೂಜಿಸಿರುವುದು ರಾಮನನ್ನು ಆದ್ದರಿಂದ ಪೂಜಿಸಿದ ಗುಡಿಯಲ್ಲಿಯೇ ಅಲ್ಲದೆ, ಯಾವ ಗುಡಿಯಲ್ಲಾದರು ರಾಮನ ಹೆಸರಿರುವ ಯಾವ ಪ್ರತಿಮೆಯಲ್ಲಾದರು ಸೇರಿ ಹುಟ್ಟಬಹುದು.

ದೇವತಾಭಕ್ತರು ದೇವತೆಗಳಾಗಿ ಬದಲಾಗುತ್ತಾರೆಂದು ಭಗವದ್ಗೀತೆಯಲ್ಲಿ ಭಗವಂತನು ಹೇಳಿದಹಾಗೆ ನಡೆಯುತ್ತದೆ. ಈ ವಿಷಯವನ್ನು ಕುರಿತು ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯಾಯೋಗ ಎನ್ನುವ ಅಧ್ಯಾಯದಲ್ಲಿ 25ನೇ ಶ್ಲೋಕದಲ್ಲಿ ಹೀಗಿದೆ.

**ಶ್ಲೋ॥** ***“ಯಾನ್ತಿದೇವ ವ್ರತಾನ್ ದೇವಾನ್ ಪಿತ್ರೂನ್ ಯಾನ್ತಿ ಪಿತೃವ್ರತಾಃ,***
***ಭೂತಾನಿ ಯಾನ್ತಿ ಭೂತೇಜ್ಯಾಃ ಯಾನ್ತಿ ಮಧ್ಯಾಜಿನೋ ಪಿ ಮಾಮ್.”***

ಭಗವಂತನು ಈ ಶ್ಲೋಕದಲ್ಲಿ ಹೇಳಿದಹಾಗೆ, ಪೂರ್ತಿ ಶ್ರದ್ಧೆಯಿಂದ ಜೀವನಾಂತ್ಯದವರೆಗು ಆಕಾರವಿರುವ ದೇವರನ್ನಾಗಲಿ, ಪಿತೃದೇವತೆಗಳನ್ನಾಗಲಿ, ಜೀವರಾಶಿಗಳಾದ ಪಕ್ಷಿಗಳು, ಜಂತುಗಳು, ವೃಕ್ಷಗಳನ್ನಾಗಲಿ ಪೂಜಿಸಿದವನು ಅವುಗಳಲ್ಲಿಯೆ ಸೇರುವನು. ಆಗಲ್ಲದೆ ಆಕಾರ, ಹೆಸರು, ಕೆಲಸ ಇಲ್ಲದವನಾದ ದೇವರನ್ನು ಪೂಜಿಸಿದರು ಅಥವಾ ಆರಾಧಿಸಿದಂತಾದರೂ ಆ ದೇವನಲ್ಲಿಯೇ ಸೇರಿಹೋಗುವನು. ಇಲ್ಲಿ ದೇವರಲ್ಲಿಯೆಂದರೆ ಮತ್ತೆ ಹುಟ್ಟದಂತೆ, ಪರಮಾತ್ಮನಾದ ದೇವರೊಳಗೆ ಐಕ್ಯವಾಗಿ ಹೋಗುವುದೆಂದು ಅರ್ಥ. ದೇವರು ದೇವತೆಗಳು ಎನ್ನುವ ವಿಷಯ ಅರ್ಥವಾಗುವುದಕ್ಕೆ ಹೇಳುವುದೇನೆಂದರೆ! ಹುಟ್ಟಿಸಿದವನು

ದೇವರು, ಹುಟ್ಟಿದವರು ದೇವತೆಗಳು. ರೂಪ, ನಾಮ, ಕ್ರಿಯೆ ಇಲ್ಲದವನು ದೇವರು, ರೂಪ, ನಾಮ, ಕ್ರಿಯೆಗಳಿರುವವರು ದೇವತೆಗಳು. ವಿಶ್ವವೆಲ್ಲಾ ಅಣುವಣುವಿನಲ್ಲಿ ತುಂಬಿರುವವನು ದೇವರು, ವಿಶ್ವದಲ್ಲಿ ಎಲ್ಲೊ ಒಂದು ಕಡೆ ಇರುವವರು ದೇವತೆಗಳು. ಯಾವ ಗುಣವಿಲ್ಲದವನು ದೇವರು, ಎಲ್ಲ ಗುಣಗಳಿರುವವರು ದೇವತೆಗಳು. ಹುಟ್ಟದವನು, ಸಾಯದವನು, ದೇವರು! ಸಾವು, ಹುಟ್ಟು ಎರಡು ಇರುವವರು ದೇವತೆಗಳು. ಯೋಗಶಾಸ್ತ್ರ ಅಥವಾ ಬ್ರಹ್ಮವಿದ್ಯಾಶಾಸ್ತ್ರವನ್ನು ತಿಳಿದವರು ದೇವರನ್ನು ಆರಾಧಿಸುತ್ತಾರೆ. ಬ್ರಹ್ಮವಿದ್ಯಾ ಶಾಸ್ತ್ರವನ್ನು ತಿಳಿಯದವರು ದೇವತೆಗಳನ್ನು ಆರಾಧಿಸುತ್ತಾರೆ. ಅಸಲಾದ ದೈವತ್ವವನ್ನು ಕುರಿತು ತಿಳಿಯದವರು ಅವರಿಗೆ ತಿಳಿದಿರುವುದೇ ಜ್ಞಾನವೆಂದು ಕೊಂಡು, ದೇವತೆಗಳನ್ನು ಆರಾಧಿಸಿ, ಸತ್ತು ಹೋದನಂತರ ದೇವತಾ ಪ್ರತಿಮೆಯಲ್ಲಿಯೆ ಹುಟ್ಟುತ್ತಿದ್ದಾರೆ.

ಒಂದು ದೇವತಾ ಪ್ರತಿಮೆಯಲ್ಲಿ ದೇವರೆನ್ನುವ ಜೀವಿಯು ಹುಟ್ಟಬೇಕೆಂದರೆ, ಆ ಪ್ರತಿಮೆಯಲ್ಲಿ ಅಲ್ಲಿಯವರೆಗು ಇದ್ದ ದೇವರೆನ್ನುವ ಜೀವಾತ್ಮ ಮರಣಿಸಿ, ಆ ಪ್ರತಿಮೆಯೊಳಗಿನಿಂದ ಹೊರಗೆ ಹೋಗಿರಬೇಕು. ಒಂದು ಪ್ರತಿಮೆಯೊಳಗಿರುವ ದೇವರು ಸತ್ತುಹೋದರೆ, ಆ ಪ್ರತಿಮೆಯಲ್ಲಿಯೇ ಹೊಸ ದೇವರು ಹುಟ್ಟುವನೆಂದು ತಿಳಿದುಬರುತ್ತದೆ. ಹಾಗೆ ಹುಟ್ಟಿದ ಹೊಸ ದೇವರಿಗೆ ಅದೇ ಪ್ರತಿಮೆಯಲ್ಲಿದ್ದ ಹಳೇ ದೇವರಿಗೆ ಸ್ವಭಾವದಲ್ಲಾಗಲಿ, ಪ್ರವರ್ತನೆಯಲ್ಲಾಗಲಿ ಎಷ್ಟೋ ವ್ಯತ್ಯಾಸ ಇರುತ್ತದೆ. ಭೂಮಿಮೇಲೆ ಯಾವ ದೇವಾಲಯದಲ್ಲಿರುವ ಎಷ್ಟು ದೊಡ್ಡ ದೇವರಾಗಲಿ, ಎಂದೊ ಒಂದು ದಿನ ಪ್ರತಿಮೆಯನ್ನು ಬಿಟ್ಟು ಹೋಗಬೇಕಾಗುತ್ತದೆ! ಹಾಗೆ ಸತ್ತುಹೋದ ದಿನದಂದು ಹೊಸ ಜೀವಿಯು ದೇವರಾಗಿ ಆ ಪ್ರತಿಮೆಯಲ್ಲಿಯೆ ಸೇರಬೇಕಾದದ್ದೇ! ಈ ವಿಧಾನದ ಪ್ರಕಾರ ನೋಡಿದರೆ ದಕ್ಷಿಣ ಭಾರತದೇಶದಲ್ಲಿಯೆ ಅತೀ ದೊಡ್ಡದಾದ ಪುಣ್ಯಕ್ಷೇತ್ರ ತಿರುಮಲ ತಿರುಪತಿ ದೇವಸ್ಥಾನ. ಆ ದೇವಸ್ಥಾನದಲ್ಲಿರುವುದು ಸಾಕ್ಷಾತ್ತು ವಿಷ್ಣುಮೂರ್ತಿ ಅವತಾರವಾದ ವೆಂಕಟೇಶ್ವರಸ್ವಾಮಿ. ಈ ದಿನವಿರುವ ವೆಂಕಟೇಶ್ವರಸ್ವಾಮಿ ಶಾಂತಿ ಸ್ವಭಾವದವನು, ಕ್ಷಮಾ ಗುಣವಿರುವವನು ತನ್ನನ್ನು

ದೂಷಿಸಿದವನನ್ನು ಸಹ ಆಶೀರ್ವದಿಸುವಂತವನು, ತನ್ನ ಒಡವೆಗಳನ್ನು ಅಪಹರಿಸಿದವನನ್ನು ಸಹ ನೋಡಿ ನೋಡದಂತೆ ಬಿಟ್ಟು ಹಾಕುವನು. ತನ್ನ ಭಕ್ತರು ಎಲ್ಲಾ ವೇಳೆಯಲ್ಲಿ ಸುಖಸಂತೋಷಗಳಿಂದ ಇರಬೇಕೆಂದುಕೊಳ್ಳುವನು, ಹೀಗೆ ಈ ದಿನ ಎಲ್ಲ ವಿಧಗಳಲ್ಲಿ ದೊಡ್ಡ ದೇವರು ತಿರುಮಲ ವೆಂಕಟೇಶ್ವರನು!

ಇಲ್ಲಿಗೆ ಸರಿಯಾಗಿ ಅರವತ್ತು ವರ್ಷಗಳ ಕೆಳಗೆ ಇದೇ ತಿರುಮಲದಲ್ಲಿ ಇದ್ದ ವೆಂಕಟೇಶ್ವರಸ್ವಾಮಿ, ತನ್ನ ಸ್ವತ್ತು ಒಂದು ರೂಪಾಯಿ ಹೋದರೂ ಸಹಿಸಿಕೊಳ್ಳುವವನಲ್ಲ. ಯಾರಾದರು ತನಗೆ ತೆಗೆದಿಟ್ಟ ಹಣವನ್ನು ಮುಗಿದು ಬಳಸಿಕೊಂಡರೂ, ನಂತರ ಅದಕ್ಕೆ ಬಡ್ಡಿ ಹಾಕಿ ಕೊಡಬೇಕು. ತನ್ನ ಸ್ವತ್ತನ್ನು ಬಳಸಿಕೊಂಡು ಬಡ್ಡಿಯೊಂದಿಗೆ ಸಹ ಕೊಡದೆ ಹೋದರೆ ಅವರನ್ನು ಬಿಡದೆ ತನ್ನ ಸ್ವತ್ತು ಎಷ್ಟು ಬೆಲೆಯುಳ್ಳದ್ದೊ ತಿಳಿಯುವಂತೆ ಕಷ್ಟಗಳ ಪಾಲು ಮಾಡುತ್ತಿದ್ದನು. ಯಾವನಾದರು ತನ್ನ ಒಡವೆಗಳನ್ನು ಕಳ್ಳತನ ಮಾಡಿದರೆ ಅವನಿಗೆ ಕಾಲೊ, ಕೈಯ್ಯೊ ಕೆಲಸಮಾಡದಂತೆ ಮಾಡಿ ಶಿಕ್ಷಿಸುತ್ತಿದ್ದನು. ಆದ್ದರಿಂದ ಆ ಕಾಲದಲ್ಲಿ ತಿರುಪತಿ ವೆಂಕಟೇಶ್ವರಸ್ವಾಮಿ ಎಂದರೆ, ಭಕ್ತಿಗಿಂತ ಭಯವೆ ಹೆಚ್ಚಾಗಿರುತ್ತಿತ್ತು. ಆದ್ದರಿಂದ ಆತನ ಸ್ವತ್ತನ್ನು ಬಳಸಿಕೊಳ್ಳುವುದಕ್ಕೆ ಯಾರು ಸಾಹಸ ಮಾಡುತ್ತಿರಲಿಲ್ಲ. ಕಳ್ಳರು ಸಹಿತ ತಾವು ಕಳ್ಳತನ ಮಾಡಿದ ಒಡವೆಗಳಲ್ಲಿ ಮೊದಲು ಮುಗಿದುಕೊಂಡಂತೆ, ದೇವರ ಪಾಲು ಎಷ್ಟೋ ಅಷ್ಟು ಹುಂಡಿಯಲ್ಲಿ ಹಾಕಿ ಹೋಗುತ್ತಿದ್ದರು. ಆ ದಿನ ವೆಂಕಟೇಶ್ವರ ಸ್ವಾಮಿಯನ್ನು ಬಡ್ಡಿ ಕಾಸಿನವನೆಂದು, ಕಳ್ಳರನ್ನು ಸಹಿತ ದೋಚಿಕೊಳ್ಳುವವನೆಂದು ಹೇಳುತ್ತಿದ್ದರು. ಹಾಗೆ ಆ ದಿನ ಬಹಳ ಜನರಲ್ಲಿ ಭಯ, ಭಕ್ತಿ ಎರಡೂ ಇರುತ್ತಿದ್ದವು. ಅಂದಿಗೂ, ಇಂದಿಗೂ ವ್ಯತ್ಯಾಸ ನೋಡಿದರೆ ಈ ದಿನ ವೆಂಕಟೇಶ್ವರ ಸ್ವಾಮಿ ಅಂದರೆ ಭಕ್ತಿ ಇದೆ, ಆದರೆ ಭಯ ಸ್ವಲ್ಪವಾದರು ಇಲ್ಲ. ಎಷ್ಟೋ ಜನ ಭಕ್ತರು ಭಕ್ತಿಯಿಂದ ಕಾಣಿಕೆಗಳನ್ನು ತಂದು ವೆಂಕಟೇಶ್ವರಸ್ವಾಮಿ ಹುಂಡಿಯಲ್ಲಿ ಹಾಕುತ್ತಾ, ತಮ್ಮ ಭಕ್ತಿಯನ್ನು ಪ್ರದರ್ಶಿಸಿಕೊಳ್ಳುತ್ತಾ ಇದ್ದರೆ, ಭಯವಿಲ್ಲದ ಎಷ್ಟೋ ಜನರು ದೇವರ ಸ್ವತ್ತನ್ನು ಇಷ್ಟ ಬಂದ ಪದ್ಧತಿಯಲ್ಲಿ ಕೊಳ್ಳೆ ಹೊಡೆಯುವುದು ಸಹ ನಡೆಯುತ್ತಿದೆ. ಆ ದಿನ ಯಾರಾದರೂ ಮಾಂಸವನ್ನು ತಿಂದು ಗುಡ್ಡದ ಮೇಲೆ ಹೋಗಬೇಕೆಂದರೂ

ಭಯಪಡುತ್ತಿದ್ದರು. ಈ ದಿನ ಗುಡ್ಡದ ಮೇಲೆಯೆ ಮಾಂಸ, ಮದ್ಯಪಾನ ಇರುವಂತೆ ವಾರ್ತೆಗಳಲ್ಲಿ ಹೇಳುತ್ತಿದ್ದಾರೆ. ಈ ವಿಧವಾಗಿ ಹೇಳಿಕೊಳ್ಳುತ್ತಾ ಹೋದರೆ ಅಂದಿಗೂ, ಇಂದಿಗೂ ಎಷ್ಟೋ ವ್ಯತ್ಯಾಸವಿದೆಯೆಂದು ತಿಳಿಯುತ್ತಿದೆ.

ಇವುಗಳೆಲ್ಲವನ್ನು ಆಧಾರ ಮಾಡಿಕೊಂಡು ನೋಡಿದರೆ ಆ ದಿನ ಪ್ರತಿಮೆಯಲ್ಲಿರುವ ವೆಂಕಟೇಶ್ವರನು ಬೇರೆ, ಈ ದಿನ ಅದೇ ಪ್ರತಿಮೆಯಲ್ಲಿರುವ ವೆಂಕಟೇಶ್ವರನು ಬೇರೆ ಎಂದು ತಿಳಿಯುತ್ತಿದೆ. ಆ ದಿನ ಒಂದು ರೂಪಾಯಿ ಹೋದರೂ ಆ ವೆಂಕಟೇಶ್ವರ ಸ್ವಾಮಿ ಬಿಡುವವನಲ್ಲ. ಈ ದಿನ ಕೋಟಿಗಳು ಹೋದರೂ, ಈ ವೆಂಕಟೇಶ್ವರಸ್ವಾಮಿ ದರ ಬಗ್ಗೆ ಗಮನ ಹರಿಸುತ್ತಿಲ್ಲ. ನೋಡಿದರೂ ನೋಡದಂತೆ ಬಿಟ್ಟು ಹಾಕುತ್ತಿದ್ದಾನೆ. **(ಇದೆಲ್ಲಾ ನಿಮಗೆ ಹೊಸ ಕಥೆಯಂತೆ ಕಾಣಿಸಬಹುದು. ಆದರೆ ಇದನ್ನು ಕಥೆಯಂತೆ ನೋಡದೆ ಸತ್ಯವನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಿರಿ.)** ಈ ದಿನ ತಿರುಮಲದಲ್ಲಿ ದೇವಸ್ಥಾನ ಪರಿಪಾಲನೆಯಲ್ಲಿಯೇ ಎಷ್ಟೋ ಅಡ್ಡಿ ಆತಂಕಗಳು ಇದ್ದಹಾಗೆ, ಎಷ್ಟೋ ಹಣವನ್ನು ಅಭಿವೃದ್ಧಿ ಹೆಸರಿನಲ್ಲಿ ದೋಚಿಕೊಳ್ಳುತ್ತಿದ್ದಾರೆಂದು ಎನ್ನುತ್ತಿದ್ದಾರೆ. ಇದನ್ನು ಅನುಸರಿಸಿ ಪರಿಶೀಲಿಸಿನೋಡಿದರೆ ಅರವತ್ತು ವರ್ಷಗಳ ಕೆಳಗಿರುವ ವೆಂಕಟೇಶ್ವರಸ್ವಾಮಿ, ಈಗಿರುವ ಸ್ವಾಮಿಯಲ್ಲವೆಂದು ನಿರಾತಂಕವಾಗಿ ಹೇಳಬಹುದು. ನೀವು ಅಷ್ಟು ಖಚಿತವಾಗಿ ಹೇಗೆ ಹೇಳುತ್ತಿದ್ದೀರೆಂದು ಯಾರಾದರೂ ಪ್ರಶ್ನಿಸಿದರೂ, ಅದಕ್ಕೆ ಉತ್ತರವಾಗಿ ಪೂರ್ವದಲ್ಲಿ ಅರವತ್ತು ವರ್ಷಗಳ ಕೆಳಗೆ ನಡೆದ ಸಂಘಟನೆಯನ್ನು ವಿವರಿಸುತ್ತೇನೆ ನೋಡಿರಿ.

ಅನಂತಪುರ ಜಿಲ್ಲೆಯ ಪುಟ್ಟಪರ್ತಿ ಸಮೀಪದಲ್ಲಿ ಗೋರಂಟ್ಲ ಎನ್ನುವ ಗ್ರಾಮವಿದೆ. ಅರವತ್ತು ವರ್ಷಗಳ ಕೆಳಗೆ ಬಹಳ ಚಿಕ್ಕ ಗ್ರಾಮವಾಗಿ ಇದ್ದಿತೆಂದು ಕೊಳ್ಳುತ್ತೇನೆ. ಆ ಊರಿನಲ್ಲಿ ಪುರಾತನ ದೇವಾಲಯಗಳು, ಒಳ್ಳೆಯ ಶಿಲ್ಪಕಲೆ ಯಿಂದ ಕೂಡಿಕೊಂಡಿರುವವು ಇರುವುದರಿಂದ, ಆ ಗ್ರಾಮ ಸ್ವಲ್ಪ ಚರಿತ್ರೆ ಇರುವುದೆಂದು ಅನಿಸುತ್ತಿದೆ. ಗೋರಂಟ್ಲದಲ್ಲಿ ಚಿತ್ರಾವತಿ ನದಿ ದಡದಲ್ಲಿರುವ ಮಾಧವರಾಯನ ಗುಡಿ ಪ್ರಸಿದ್ಧಿ ಹೊಂದಿದೆ. ಗೋರಂಟ್ಲದಲ್ಲಿ ಅದ್ವೈತ ಪೀಠಕ್ಕೆ

ಸೇರಿದ ಆಶ್ರಮವು ಸಹ ಇದೆ. ಆ ಆಶ್ರಮದಲ್ಲಿ ರಮಣಾನಂದ ಭಾರತಿ ಎನ್ನುವ ಸ್ವಾಮಿ ಇದ್ದು, ಆ ಪ್ರಾಂತದವರಿಗೆ ಆಧ್ಯಾತ್ಮಿಕ ಬೋಧನೆಗಳನ್ನು ಹೇಳುತ್ತಿದ್ದರು. ಆದ್ದರಿಂದ ಆ ಊರಿನವರಿಗೆಲ್ಲ ಸುಪರಿಚಿತ ವ್ಯಕ್ತಿ ಆ ಸ್ವಾಮೀಜಿ. ಅರವತ್ತು ವರ್ಷಗಳ ಕೆಳಗೆ ಆ ಊರಿನಲ್ಲಿ ಕೆಲವರು ತಿರುಪತಿಗೆ ಹೋಗಬೇಕೆಂದುಕೊಂಡರು. ಸುಮಾರು ಹತ್ತು ಕುಟುಂಬಗಳಿಂದ ಕುಟುಂಬಕ್ಕೆ ಒಬ್ಬರ ಪ್ರಕಾರ ಹತ್ತುಜನ ಹೊರಡಬೇಕೆಂದುಕೊಂಡರು. ಆ ಪ್ರಯತ್ನದಲ್ಲಿ ಎಲ್ಲರೂ ಸೇರಿ ರಮಣಾನಂದ ಭಾರತಿ ಸ್ವಾಮೀಜಿಯನ್ನು ತಮ್ಮ ಜೊತೆ, ತಮ್ಮ ಖರ್ಚುಗಳಿಂದಲೆ ಕರೆದುಕೊಂಡು ಹೋಗಬೇಕೆಂದುಕೊಂಡರು. ಅವರು ಕೇಳಿದರೆ ಸ್ವಾಮೀಜಿ ಸಹ ಬರುತ್ತೇನೆಂದು ಒಪ್ಪಿಕೊಂಡರು. ಅಲ್ಲಿಗೆ ಸ್ವಾಮಿಯೊಂದಿಗೆ ಸಹ ಒಟ್ಟು ಹನ್ನೊಂದು ಜನರಾದರು. ಅದರಲ್ಲಿ ಒಂದು ಕುಟುಂಬದಿಂದ ಸುಮಾರು ಹತ್ತು ಸಂವತ್ಸರಗಳ ವಯಸ್ಸಿರುವ ಹುಡುಗನನ್ನು ಕಳುಹಿಸಿದರು. ಅವರೆಲ್ಲರು ವೆಂಕಟೇಶ್ವರಸ್ವಾಮಿಗೆ ತೆಗೆದಿಟ್ಟ ಕಾಣಿಕೆಯ ಹಣವನ್ನು ತೆಗೆದುಕೊಂಡು ಹೊರಟರು. ಆಕಾಲದಲ್ಲಿ ಈಗಿನಂತೆ ಹೋಟಲ್‌ಗಳ ಸೌಕರ್ಯವಿರಲಿಲ್ಲ, ಆದ್ದರಿಂದ ಮನೆಯಿಂದ ಅನ್ನ, ರೊಟ್ಟಿ ಮೊದಲಾದ ತಿಂಡಿಪದಾರ್ಥಗಳನ್ನು ಮೂಟೆಕಟ್ಟಿಕೊಂಡು ಹೊರಟರು. ಗೋರಂಟ್ಲದಿಂದ ಕದಿರಿ, ರಾಯಚೋಟಿ, ಪೀಲೇರು ಮೇಲೆ ತಿರುಪತಿಗೆ ಬಸ್ಸಿನಲ್ಲಿ ಪ್ರಯಾಣಿಸಿ ಸೇರಿಕೊಂಡರು. ಆ ಕಾಲದಲ್ಲಿ ಈಗಿನಂತೆ ಕ್ಯೂಲೈನ್ ಇಲ್ಲ. ದರ್ಶನಕ್ಕೆ ತಡವಾಗುತ್ತಿರಲಿಲ್ಲ. ಹೋದ ತಕ್ಷಣವೆ ದರ್ಶನ ಸಿಗುತ್ತಿತ್ತು. ತಿರುಪತಿ ಸೇರಿಕೊಂಡ ಗೋರಂಟ್ಲ ಬೃಂದವು, ಬೆಳಗ್ಗೆ ಒಂಬತ್ತುಗಂಟೆಗಳಿಗೆ ವೆಂಕಟೇಶ್ವರ ಸ್ವಾಮಿ ದರ್ಶನ ಮಾಡಿಕೊಂಡು, ಕಾಣಿಕೆಗಳನ್ನೆಲ್ಲ ಹುಂಡಿಯಲ್ಲಿ ಹಾಕಿ ಕುಡಿಯುವ ನೀರಿನ ಸೌಕರ್ಯವಿರುವ ಜಾಗಕ್ಕೆ ಹೋಗಿ ಕುಳಿತುಕೊಂಡರು. ಅವರು ತಂದುಕೊಂಡ ರೊಟ್ಟಿಗಳನ್ನು ತಿಂದು, ಅಲ್ಲಿಂದ ಪಾಪನಾಶನ ತೀರ್ಥದವರೆಗು ಹೋಗಿ ಬರಬೇಕೆಂದುಕೊಂಡು, ರೊಟ್ಟಿಗಳ ಮೂಟೆಗಳನ್ನು ಬಿಚ್ಚಿಕೊಂಡು ತಿನ್ನುವುದಕ್ಕೆ ಪ್ರಾರಂಭಿಸುವ ಸಮಯದಲ್ಲಿ, ಆ ಗುಂಪಿನಲ್ಲಿ ಬಂದ ಹತ್ತು ಸಂವತ್ಸರಗಳ ಬಾಲಕನಿಗೆ ಸೂಕ್ಷ್ಮವು ಬಂದಿತು. ಆಗ ಆ ಹುಡುಗನ ಶರೀರವೆಲ್ಲ

ಗಟ್ಟಿಯಾಗಿ ನಡುಗುತ್ತಾ ಬಾಯಿಂದ ನನ್ನ ಮೂರು ಬೊಟ್ಟುಗಳು ನನಗೆ ಕೊಡು ಎನ್ನುವ ಮಾತು ಮಾತು ಮಾತಿಗು ಬರುತ್ತಿದೆ. ಇದ್ದಕ್ಕಿದ್ದಂತೆ ಆ ಬಾಲಕನಿಗೆ ಹಾಗೆ ನಡೆಯುವುದು ಅಲ್ಲಿರುವವರಿಗೆ ಏನು ಅರ್ಥವಾಗಲಿಲ್ಲ. ಆ ಹುಡುಗನು ಹಾಗೆ ಶರೀರವನ್ನೆಲ್ಲಾ ನಡುಗಿಸುತ್ತಾ 'ನನ್ನ ಮೂರು ಬೊಟ್ಟುಗಳು ನನಗೆ ಕೊಡು' ಎಂದು ಅನ್ನುವುದೇನು ಎಂದು ಅಲ್ಲಿಯೇ ಇದ್ದ ರಮಣಾನಂದ ಸ್ವಾಮಿ ಆಲೋಚಿಸಿ, ಅದು ಸೂಕ್ಷ್ಮವೆಯೆಂದು ನಿರ್ಧಾರಿಸಿಕೊಂಡು ನೀನು ಯಾರು? ನಿನ್ನ ಮೂರು ಬೊಟ್ಟುಗಳ ವಿಷಯವೇನು? ಎಂದು ಕೇಳಿದನು. ಆ ಹುಡುಗನು ಯಾರ ಮಾತುಗಳನ್ನು ಕೇಳಲಿಲ್ಲ. ಹಾಗೆ ನಡುಗುತ್ತಾ ನನ್ನ ಮೂರು ಬೊಟ್ಟುಗಳು ನನಗೆ ಕೊಡು ಎನ್ನುವ ಮಾತು ಮಾತುಮಾತಿಗು ಅನ್ನುತ್ತಿದ್ದಾನೆ. ಆಗ ರಮಣಾನಂದಸ್ವಾಮಿಗೆ ಒಂದು ಆಲೋಚನೆ ಬಂದಿತು. ಹುಡುಗನ ಕುಟುಂಬದವರು ವೆಂಕಟೇಶ್ವರಸ್ವಾಮಿಯ ಕಾಣಿಕೆ ಹಣವನ್ನು ಹುಂಡಿಯಲ್ಲಿ ಹಾಕಲು ಹುಡುಗನ ಹತ್ತಿರ ಕಳುಹಿಸಿದ್ದರು. ಈ ಹುಡುಗನು ಆ ಹಣವನ್ನು ಎಲ್ಲ ಹುಂಡಿಯಲ್ಲಿ ಹಾಕದೆ ಮೂರುಬೊಟ್ಟುಗಳನ್ನು ಬಚ್ಚಿಟ್ಟು ಕೊಂಡಿದ್ದಾನೇನೊ ಎಂದು ಅನುಮಾನದಿಂದ ಹುಡುಗನ ಜೇಬುಗಳನ್ನೆಲ್ಲ ಹುಡುಕಿದರು. ಆದರೆ ಹಣ ಕಾಣಿಸಲಿಲ್ಲ. ಅಂಗಿಯನ್ನು ಅಲುಗಾಡಿಸಿದಾಗ ಅಂಗಿಯ ಕಾಲರ್‌ನಲ್ಲಿ ಹಣದ ಶಬ್ದ ಬಂದಿತು. ಆ ಶಬ್ಧವನ್ನು ನೋಡಿದಾಗ ಕತ್ತಿನ ಪಟ್ಟಿಯ (ಕಾಲರ್‌ನ)ಲ್ಲಿ ಮೂರು ಬೊಟ್ಟುಗಳನ್ನು ಬಚ್ಚಿಟ್ಟುಕೊಂಡಂತೆ ಅರ್ಥವಾಯಿತು.

ಆಗ ರಮಣಾನಂದಸ್ವಾಮಿ, ವೆಂಕಟೇಶ್ವರಸ್ವಾಮಿಗೆ ಹರಕೆಹೊತ್ತನು. ಹುಡುಗನು ತಿಳಿಯದೆ ತಪ್ಪು ಮಾಡಿದ್ದಾನೆ. ನಿನ್ನ ಮೂರು ಬೊಟ್ಟುಗಳಿಗೆ ಮತ್ತೊಂದು ಮೂರುಬೊಟ್ಟುಗಳು ಬಡ್ಡಿಯಾಗಿ ಹಾಕಿ, ನಿನ್ನ ಹುಂಡಿಯಲ್ಲಿ ಈಗಲೆ ಹಾಕುತ್ತೇವೆಂದು ವೆಂಕಟೇಶ್ವರಸ್ವಾಮಿಗೆ ಮುಗಿದಾಗ ಆಗ ಸೂಕ್ಷ್ಮವು ಹೋಗಿ ಆ ಹುಡುಗನಿಗೆ ಜ್ಞಾಪಕ ಬಂದಿತು. ತಕ್ಷಣವೆ ಆರು ಬೊಟ್ಟುಗಳನ್ನು ಹುಂಡಿಯಲ್ಲಿ ಹಾಕಿ ಬಂದರು. (**ಆ ಕಾಲದಲ್ಲಿ ನಯಾಪೈಸೆಗಳು ಇಲ್ಲ ರೂಪಾಯಿಗೆ**

**ಹದಿನಾರು ಆಣೆಗಳು ಇರುತ್ತಿದ್ದವು. ಒಂದು ಆಣೆಗೆ ನಾಲ್ಕು ಬೊಟ್ಟುಗಳು ಇರುತ್ತಿದ್ದವು. ಎರಡು ಬೊಟ್ಟುಗಳು ಸೇರಿಸಿದರೆ ಅರ್ಧಆಣೆ ಅನ್ನುತ್ತಿದ್ದರು. ಬೊಟ್ಟುಗಳು, ಅರ್ಧಆಣೆಗಳು, ನಾಲ್ಕಾಣೆ, ಅರ್ಧರೂಪಾಯಿ ಎಂದು ಹೇಳುತ್ತಿದ್ದರು. ಆಗಿನ ಒಂದು ಬೊಟ್ಟು ರೂಪಾಯಿಯಲ್ಲಿನ 64ನೇ ಭಾಗವಾದರೆ, ಆ ಬೊಟ್ಟಿನ ಬೆಲೆ ಈಗಿನ ಕಾಲದಲ್ಲಿ ಹತ್ತು ರೂಪಾಯಿಗಳಿಗಿಂತ ಹೆಚ್ಚಿನ ಬೆಲೆ ಇರುತ್ತದೆ.)** ಹಾಗೆ ಆರು ಬೊಟ್ಟುಗಳು ಹುಂಡಿಯಲ್ಲಿ ಹಾಕಿ ಬಂದಾಗ, ಆ ದಿನ ಸೂಕ್ಷ್ಮದ ಸಮಯದಲ್ಲಿ ಬಂದ ನಡುಕ ಅದೇ ವಿಧವಾಗಿ ಹಾಗೇ ನಿಂತುಹೋಯಿತು. ಆ ನಡುಕ ಜೀವನಕಾಲವೆಲ್ಲಾ ಇರುವುದರಿಂದ ಆತನ ಜೀವನವೆ ದುರ್ಭಲವಾಗಿದೆ. ನಡೆಯುವಾಗ ಕಾಲು ನಡುಗುವುದರಿಂದ ಹೆಜ್ಜೆಯನ್ನು ಅಂದುಕೊಂಡ ಸ್ಥಳದಲ್ಲಿ ಇಡಲಾರ. ಆದ್ದರಿಂದ ಕೆಳಗೆ ಬೀಳುವುದಕ್ಕೆ ಅವಕಾಶವಿದೆ. ಶರೀರವೆಲ್ಲಾ ನಡುಗುವುದರಿಂದ ಎಲ್ಲರಂತೆ ಆತನು ತನ್ನ ಕೆಲಸಗಳನ್ನು ಮಾಡುವುದಕ್ಕೆ ಸಹ ಅವಕಾಶವಿಲ್ಲ. ಮೊದಲು ಸೂಕ್ಷ್ಮವು ಬಂದಾಗ ನರಗಳ ಮೇಲೆ ಬಂದ ನಡುಕ, ಸೂಕ್ಷ್ಮವು ಹೋದ ನಂತರ ಸಹ ಹೋಗಿರುವುದರಿಂದ ಆತನ ಜೀವನವೆ ದುರ್ಭರವಾಗಿದೆ.

ನನಗೆ ಹದಿಮೂರು ಅಥವಾ ಹದಿನಾಲ್ಕು ಸಂವತ್ಸರಗಳ ವಯಸ್ಸಿನಲ್ಲಿ, ನಾನು ಗೋರಂಟ್ಲ ಊರಿನಲ್ಲಿ ಎಂಟನೆ ತರಗತಿ ಓದುತ್ತಿರುವಾಗ ಕೈ ಕಟ್ಟಿಗೆ ಆಧಾರದಿಂದ ಅತಿ ಕಷ್ಟದಿಂದ ನಡುಗುತ್ತಾ ನಡೆಯುವ ವ್ಯಕ್ತಿಯನ್ನು ನೋಡಿ, ರಮಣಾನಂದಸ್ವಾಮಿಯನ್ನು ಈತನೇಕೆ ಹಾಗೆ ನಡೆಯುತ್ತಿದ್ದಾನೆಂದು ಕೇಳಿದಾಗ, ರಮಣಾನಂದಸ್ವಾಮಿ ಒಟ್ಟಾರೆ ಸಮಾಚಾರವನ್ನೆಲ್ಲ ಹೇಳಿದನು. ರಮಣಾನಂದಸ್ವಾಮಿ ಆಶ್ರಮದಲ್ಲಿಯೆ ನಾವು ನಿವಾಸವಿರುವುದರಿಂದ, ಅನುಮಾನ ಬಂದ ಪ್ರತಿ ವಿಷಯವನ್ನು ಮತ್ತು ತಿಳಿಯದ ವಿಷಯಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದೆನು. ನಡುಗುತ್ತಾ ನಡೆಯುವ ವ್ಯಕ್ತಿಗೆ ಸೂಕ್ಷ್ಮವು ಬಂದ ದಿನದಂದು, ಪ್ರತ್ಯಕ್ಷ ಸಾಕ್ಷಿಯಾಗಿ ರಮಣಾನಂದ ಸ್ವಾಮಿ ಇರುವುದರಿಂದ, ವಿಷಯವನ್ನೆಲ್ಲ ವಿವರವಾಗಿ ತಿಳಿಸಿದನು. ನನ್ನ ಚಿಕ್ಕ ವಯಸ್ಸಿನಲ್ಲಿ ಆ ದಿನ

ಆತನು ಹೇಳಿರುವುದು ಸೋಜಿಗದ ಕಥೆಯಂತೆ ಕಾಣಿಸಿದರೂ ನನಗೆ ಇಪ್ಪತ್ತೈದು ಸಂವತ್ಸರಗಳ ವಯಸ್ಸು ಬರುವ ಸಮಯಕ್ಕೆ, ಸೂಕ್ಷ್ಮ ಶರೀರಗಳ ವಿಷಯಗಳೆಲ್ಲವು ಸುಮಾರಾಗಿ ಅರ್ಥವಾದವು. ಅರವತ್ತು ಸಂವತ್ಸರಗಳ ಕೆಳಗೆ ಚಿಕ್ಕ ಹುಡುಗನು ತಪ್ಪುಮಾಡಿದರೂ ಬಿಡದೆ ದೊಡ್ಡ ಶಿಕ್ಷೆ ಹಾಕಿದ ಆ ದಿನದ ವೆಂಕಟೇಶ್ವರಸ್ವಾಮಿಗೆ, ಈ ದಿನ ತನ್ನ ಸ್ವತ್ತನ್ನು ಯಾರು ಎಷ್ಟು ತಿಂದರೂ ಗಮನಿಸದ ವೆಂಕಟೇಶ್ವರಸ್ವಾಮಿಗೆ ಎಲ್ಲಾ ವಿಧಗಳಲ್ಲಿ ವ್ಯತ್ಯಾಸ ಕಾಣಿಸುತ್ತದೆ. ಆದ್ದರಿಂದ ಪೂರ್ವದಲ್ಲಿದ್ದ ವೆಂಕಟೇಶ್ವರಸ್ವಾಮಿ ಪ್ರತಿಮೆಯಲ್ಲಿ ಸತ್ತುಹೋಗಿದ್ದಾನೆಂದು, ಹೊಸ ವೆಂಕಟೇಶ್ವರ ಸ್ವಾಮಿ ಆ ಪ್ರತಿಮೆಯಲ್ಲಿ ಹುಟ್ಟಿದ್ದಾನೆಂದು ಹೇಳಬಹುದು. ಇದನ್ನು ಅನುಸರಿಸಿ ನೋಡಿದಾಗ ಒಂದು ಪ್ರತಿಮೆಯಲ್ಲಿದ್ದವನು ಸತ್ತುಹೋದರೆ, ಆ ಪ್ರತಿಮೆಯೊಳಗೆ ದೇವರಾಗಿ ಬರಬೇಕಾದ ಜೀವಾತ್ಮ ಯಾರೆಂದು ಹುಡುಕದಂತೆ ಭಗವದ್ಗೀತೆಯಲ್ಲಿ ಭಗವಂತನು ಇಂತವನೆ ಪ್ರತಿಮೆಯಲ್ಲಿ ಹುಟ್ಟಬಲ್ಲನೆಂದು ಹೇಳುತ್ತಾ **"ಯಾನ್ತಿ ದೇವವ್ರತಾನ್ ದೇವಾನ್"** ಎಂದಿದ್ದಾನೆ. ಆ ಮಾತು ಬಹಳಕಡೆ ನೆರವೇರುತ್ತದೆಂದು ತಿಳಿಯುವುದಕ್ಕೆ ತಿರುಪತಿ ವೆಂಕಟೇಶ್ವರಸ್ವಾಮಿ ವಿಷಯವೆ ನಮಗೆ ನಿದರ್ಶನ. ಈ ವಿಧಾನ ಕೆಲವು ಸಂವತ್ಸರಗಳಿಗೆ ಒಂದುಬಾರಿ ಪ್ರತಿ ದೇವಾಲಯದಲ್ಲಿ ಪ್ರತಿಮೆಗಳಲ್ಲಿ ನಡೆಯುತ್ತಿದ್ದರೂ, ಆ ವಿಷಯ ಕಣ್ಣಿಗೆ ಕಾಣಿಸುವಂತದ್ದಲ್ಲ, ಆದ್ದರಿಂದ ಯಾರಿಗು ದೇವತೆಗಳ, ದೇವರುಗಳ ಜನನ ಮರಣಗಳ ವಿಷಯ ತಿಳಿದಿಲ್ಲವೆಂದು ಹೇಳಬಹುದು. ದೇವರಿದ್ದಾನೆಂದು, ಹಾಗೆ ದೆವ್ವಗಳು ಸಹ ಇವೆಯೆನ್ನುವವರಿಗೆ ದೇವರುಗಳ ಜನನ ಮರಣ ವಿಷಯ ತಿಳಿಯದೆ ಹೋದರೆ, ಇನ್ನು ದೇವರಾಗಲಿ, ದೆವ್ವಾಗಲಿ ಇಲ್ಲವೆ ಇಲ್ಲ ಅನ್ನುವವರಿಗೆ ಈ ವಿಷಯ ಅಗಮ್ಯಗೋಚರವಾಗಿ ಕಾಣಿಸುತ್ತದೆ. ಎಷ್ಟೋ ವಿಷಯಗಳು ತಿಳಿಯದಿದ್ದರೂ, ಎಲ್ಲಾ ತಿಳಿದಿವೆಯೆಂದುಕೊಳ್ಳುವ ಹೇತುವಾದಿ ಗಳು, ನಾಸ್ತಿಕವಾದಿಗಳು ತಿರುಪತಿಯಲ್ಲಿ ಬಂದ ಆ ಬಾಲಕನ ನಡುಕ ರೋಗವನ್ನು ಕುರಿತ ಕಾರಣ ಹೇಳಬಲ್ಲಿರಾ? ಸೂಕ್ಷ್ಮವು ಬಂದ ಸಮಯದಿಂದಲೆ, ಹಾಗೆ ಆಗುವುದಕ್ಕೆ ಕಾರಣ ಹೇಳಬಲ್ಲಿರಾ?? ಯಾರಿಗು ತಿಳಿಯದಂತೆ ಬಚ್ಚಿಟ್ಟುಕೊಂಡ ಮೂರು ಬೊಟ್ಟುಗಳ ವಿಷಯ ಗುಡಿಯಲ್ಲಿರುವ ವೆಂಕಟೇಶ್ವರನಿಗೆ ಹೇಗೆ

ತಿಳಿದಿದೆಯೆಂಬುದನ್ನು ಹೇಳಬಲ್ಲಿರಾ??? ಮೂರಕ್ಕೆ ಮೂರು ಬಡ್ಡಿಯಾಗಿ ಆರು ಬೊಟ್ಟುಗಳು ಕೊಡುತ್ತೇವೆಂದು ಹೇಳುವವರೆಗು, ನನ್ನ ಮೂರು ಬೊಟ್ಟುಗಳು ನನಗೆ ಕೊಡು ಅನ್ನುವ ಮಾತು ನಿಲ್ಲದಂತೆ ಆ ಬಾಲಕನ ಬಾಯಿಂದ ಮಾತು ಬರುವುದಕ್ಕೆ ಕಾರಣವನ್ನು ಹೇಳಬಲ್ಲಿರಾ? ಹೀಗೆ ತಿರುಪತಿ ಸಂಘಟನೆಯಲ್ಲಿ ಎಷ್ಟೋ ಕಾರಣಗಳನ್ನು ಕೇಳಬಹುದು. ಇದರಲ್ಲಿ ಒಂದು ಹೇತುವನ್ನು ಸಹ ತೆಗೆದುಕೊಂಡು ಸಮಾಧಾನ ಹುಡುಕದೆ ಒಟ್ಟಾರೆ ಇದೆಲ್ಲವನ್ನು ಅಸತ್ಯವೆಂದು ಎನ್ನುವವರು ಹೇತುವಾದಿಗಳು ಆಗುತ್ತಾರಾ?

ಪ್ರತಿ ಮನುಷ್ಯರಲ್ಲಿ ಯಾವ ವಿಷಯವನ್ನಾದರು ಗ್ರಹಿಸಿಕೊಳ್ಳುವ ಗ್ರಾಹಿತಶಕ್ತಿ ಇರುತ್ತದೆ. ಆ ಗ್ರಾಹಿತ ಶಕ್ತಿ ಒಬ್ಬೊಬ್ಬ ಮನುಷ್ಯನಲ್ಲಿ ಒಂದೊಂದು ವಿಧವಾಗಿ ಇರುತ್ತದೆ. ಗ್ರಹಿಸಿಕೊಳ್ಳುವ ಶಕ್ತಿ ಇದೆ, ಆದ್ದರಿಂದ ಮನುಷ್ಯನನ್ನು ಸಹ ಗ್ರಹ ಎನ್ನಬಹುದು. ಕೆಲವರಲ್ಲಿ ಗ್ರಹಿಸಿಕೊಳ್ಳುವ ಶಕ್ತಿ ಎಷ್ಟಿದ್ದರೂ ಕೆಲವು ವಿಷಯಗಳನ್ನು ಗ್ರಹಿಸಿಕೊಳ್ಳಲಾರರು. ಅಂತಹ ವಿಷಯಗಳನ್ನು ಎದುರಿಗಿರುವವರು ತಮ್ಮ ಅನುಭವಗಳನ್ನು ಎಷ್ಟು ಹೇಳಿದರೂ, ಗ್ರಹಿಸಿಕೊಳ್ಳದೆ ಸ್ವಂತವಾಗಿ ಅನುಭವಿಸಿದರಾಗಲಿ ನಾವು ನಿಮ್ಮ ಮಾತನ್ನು ನಂಬುವುದಿಲ್ಲ ಎನ್ನುವವರು ಇದ್ದಾರೆ. ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ! ಕಣ್ಣಿನಿಂದ ನೋಡಿದರಾಗಲಿ, ಕಿವಿಯಿಂದ ಕೇಳಿದರಾಗಲಿ ಅದರಲ್ಲಿನ ವಾಸ್ತವವನ್ನು ತಿಳಿದುಕೊಳ್ಳುವುದನ್ನು ಗ್ರಾಹಿತಜ್ಞಾನ ಎನ್ನುತ್ತೇವೆ. ಹಾಗಲ್ಲದೆ ಸ್ವಂತವಾಗಿ ಅನುಭವಿಸಿ ತಿಳಿದುಕೊಳ್ಳುವುದನ್ನು ಅನುಭವ ಜ್ಞಾನ ಎನ್ನುತ್ತೇವೆ. ಒಬ್ಬ ಮನುಷ್ಯ ಹೊಸ ವಿಷಯಗಳನ್ನು ತಿಳಿದುಕೊಳ್ಳುವುದಕ್ಕೆ ಗ್ರಾಹಿತ ಜ್ಞಾನ ಅವಶ್ಯ. ಸ್ವಂತವಾಗಿ ತಾನು ಒಂದು ಕೆಲಸವನ್ನು ಮಾಡಬೇಕಾಗಿ ಬಂದಾಗ ಅನುಭವಜ್ಞಾನ ಅವಶ್ಯ. ಉದಾಹರಣೆಗೆ ವಿದ್ಯಾರ್ಥಿಗಳು ಟೀಚರ್‌ಗಳು ಹೇಳುವ ವಿಷಯಗಳನ್ನು ತಮಗಿರುವ ಗ್ರಾಹಿತಶಕ್ತಿಯಿಂದ ಗ್ರಹಿಸಿಕೊಳ್ಳುತ್ತಾ ಹೋದರೆ ಅವನಿಗೆ 'ಗ್ರಾಹಿತಜ್ಞಾನ' ಏರ್ಪಡುತ್ತದೆ. ಹಾಗೆ ಒಬ್ಬನು ಡ್ರೈವರ್ ಆಗಿ ಬದಲಾಗಬೇಕೆಂದರೆ ಆಗ ಅನುಭವಜ್ಞಾನ ತನಗೆ ಅವಶ್ಯ. ಆತನು ಸ್ವಂತವಾಗಿ ವಾಹನವನ್ನು ನಡೆಸಿ

ಅನುಭವದಿಂದ ತಿಳಿದುಕೊಂಡಿರುವುದನ್ನು 'ಅನುಭವಜ್ಞಾನ' ಎನ್ನುತ್ತೇವೆ. ಈ ವಿಧವಾಗಿ ನೋಡಿದರೆ ಮನುಷ್ಯನಿಗೆ ಅನೇಕ ವಿಷಯಗಳಲ್ಲಿ ಗ್ರಾಹಿತಜ್ಞಾನ ಅವಶ್ಯ. ಕೆಲವು ಕಡೆ ಕೆಲವು ವಿಷಯಗಳಲ್ಲಿ ಮಾತ್ರ ಅನುಭವಜ್ಞಾನ ಅವಶ್ಯ. ಗ್ರಾಹಿತ ಜ್ಞಾನ ಅವಶ್ಯವಿದ್ದ ಕಡೆ ಅನುಭವಜ್ಞಾನ ಬೇಕೆಂದುಕೊಂಡವರು, ಎಷ್ಟು ಮೇಧಾವಿಗಳೆಂದನಿಸಿಕೊಂಡರೂ ತಿಳಿವಳಿಕೆ ಕಡಿಮೆ ಇರುವವರೆ. ಯಾವಾಗ ಏನು ಅವಶ್ಯವೊ ತಿಳಿಯದೆ ಕೇಳುವವನನ್ನು ತಿಳಿವಳಿಕೆ ಕಡಿಮೆ ಇರುವವನೆಂದೆ ಹೇಳಬಹುದು. ಉದಾಹರಣೆಗೆ ಅನ್ನ ತಿನ್ನುವಾಗ ತಟ್ಟೆ (ಪ್ಲೇಟು) ಅವಶ್ಯ. ಮಲಗುವಾಗ ಮಂಚ ಅವಶ್ಯ. ಹಾಗಲ್ಲದೆ ತಿನ್ನುವಾಗ ಮಂಚವನ್ನು ಮಲಗುವಾಗ ತಟ್ಟೆಯನ್ನು ಕೇಳುವವನು ತಿಳಿವಳಿಕೆ ಇಲ್ಲದವನಾಗದೆ ಏನಾಗುತ್ತಾನೆ? ಆದ್ದರಿಂದ ಮನುಷ್ಯ ಕೆಲವು ಕೇಳುವುದರಿಂದ ತಿಳಿದುಕೊಳ್ಳ ಬಹುದು. ಆದರೆ ಅವುಗಳನ್ನು ಅನುಭವಿಸದೆ ನಂಬುವುದಿಲ್ಲ ಎನ್ನುವವನು ತಿಳುವಳಿಕೆ ಕಡಿಮೆ ಇರುವವನಾಗುತ್ತಾನೆ.

ಕೆಲವರು ಹೇತುವಾದಿಗಳು, ನಾಸ್ತಿಕವಾದದವರು ಕೇಳಬೇಕೆಂದವುಗಳನ್ನು ನೋಡಬೇಕೆಂದು, ನೋಡಬೇಕಾದವುಗಳನ್ನು ಅನುಭವಿಸಿ ನೋಡಬೇಕೆಂದು ಕೇಳುತ್ತಾರೆ. ಅವರೇ ಅಲ್ಲದೆ ಮತ್ತೆ ಕೆಲವರು ಸಹ ಅದೇ ರೀತಿ ಮಾತನಾಡುತ್ತಿರುತ್ತಾರೆ. ಎಲ್ಲಿ ಯಾವ ವಿಧವಾದ ಗ್ರಾಹಿತ ಬೇಕೊ, ತಿಳಿಯದೆ ಮಾತನಾಡಿದ ಅವರ ವಿಷಯವನ್ನು ಈಗ ವಿವರಿಸಿಕೊಂಡು ನೋಡೋಣ. ಇಲ್ಲಿಗೆ ಮೂವತ್ತೈದು ಸಂವತ್ಸರಗಳ ಕೆಳಗೆ ನಾನು ವೈದ್ಯವನ್ನು ಮಾಡುವ ಸಮಯದಲ್ಲಿ ಒಬ್ಬ ಮಾಂತ್ರಿಕನು ಬಂದು ನನ್ನೊಂದಿಗೆ ಮಾತನಾಡಿದನು. ಆತನ ಊರು ಕನಗಾನಹಳ್ಳಿಯಾಗಲಿ, ಕುಂಟಿಮದ್ದಿಯಾಗಲಿ ಆಗಿರುತ್ತದೆಂದು ಕೊಂಡಿದ್ದೇನೆ. ಆತನ ವೃತ್ತಿ ಭೂತವೈದ್ಯ ಮಾಡುವುದು, ಗೃಹವಾಸ್ತು ಹೇಳುವುದು ವಗೈರಾ ವಗೈರಾ ಮಾಡುತ್ತಿದ್ದನು. ಆ ನೇತೃತ್ವದಲ್ಲಿ ಸುತ್ತ ಮುತ್ತ ಪ್ರಾಂತಗಳಲ್ಲಿ ತಿರುಗುತ್ತಿದ್ದನು, ಅಷ್ಟೇ ಅಲ್ಲದೆ ದೂರದ ಪ್ರಾಂತಗಳಿಗು ಸಹ ಹೋಗುತ್ತಿದ್ದನು. ಆ ವಿಧವಾಗಿ ಕನಗಾನಹಳ್ಳಿಗೆ ಸುತ್ತಮುತ್ತ ಪ್ರಾಂತಗಳು ಎಲ್ಲವು ಆತನಿಗೆ

ಸುಪರಿಚಿತವಾದವುಗಳೆ. ಕನಗಾನಹಳ್ಳಿಗೆ ಹದಿನೈದು ಅಥವಾ ಇಪ್ಪತ್ತು ಕಿಲೋಮೀಟರುಗಳ ದೂರದಲ್ಲಿ ಕುಂಟಿಮದ್ದಿ ಅನ್ನುವ ಗ್ರಾಮವಿದೆ. ಆ ಗ್ರಾಮದಲ್ಲಿ ಪೀರ್ಲಹಬ್ಬ ಮಾಡುತ್ತಾರೆ. ಆ ಪೀರ್ಲ ಹಬ್ಬದ ಸಮಯದಲ್ಲಿ ಅಲ್ಲಿ ಪೀರ್ಲನ್ನು ಎತ್ತಿಕೊಂಡ ಮನುಷ್ಯರೊಳಗೆ, ಪೀರ್ಲು ಅನ್ನುವ ದೇವತೆಗಳು ಬಂದು ಮಾತನಾಡುವುದು ಸಹ ನಡೆಯುತ್ತಿತ್ತು. ಆ ವಿಧವಾಗಿ ಮಾತನಾಡುವುದು ಎಲ್ಲ ಊರುಗಳಲ್ಲಿ ನಡೆಯುವ ವಿಷಯವೆ. ಆದರೆ ಮನುಷ್ಯರಲ್ಲಿ ಕೆಲವರು ಪ್ರತ್ಯೇಕತೆಯನ್ನು ಸಂಪಾಧಿಸಿಕೊಂಡಂತೆ, ಕೆಲವು ಗ್ರಾಮಗಳಲ್ಲಿ ಕೆಲವು ಪೀರ್ಲ ದೇವರುಗಳು ಸಹ ಸ್ವಲ್ಪ ಪ್ರತ್ಯೇಕತೆಯನ್ನು ಹೊಂದಿರುತ್ತಾರೆ. ಗ್ರಾಮದಲ್ಲಿರುವ ಪೀರ್ಲುಗಳಿಗೆ ಒಂದೊಂದು ಪೀರನಿಗು ಒಂದೊಂದು ಹೆಸರು ಇರುತ್ತದೆ. ಪ್ರತ್ಯೇಕತೆಯನ್ನು ಸಂಪಾದಿಸಿಕೊಂಡ ಪೀರ್ಲುಗಳ ಹೆಸರುಗಳನ್ನು, ಆ ಊರಿನ ಪ್ರಜೆಗಳು ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದರು. ಊರಿನಲ್ಲಿ ಎಷ್ಟು ಪೀರ್ಲು ಇದ್ದರೆ ಅದರಲ್ಲಿ ಎಲ್ಲ ಪೀರ್ಲುಗಳು ಚುರುಕುತನದಿಂದ ಇರುವುದಿಲ್ಲ.

ವರ್ಷಕ್ಕೆ ಒಂದುಬಾರಿ ಬರುವ ಪೀರ್ಲಹಬ್ಬದ ಸಮಯದಲ್ಲಿ ಪೀರ್ಲ ಚಾವಡಿಯಲ್ಲಿ ಪೀರ್ಲನ್ನು ಅಲಂಕರಿಸಿ ನಿಲ್ಲಿಸುತ್ತಾರೆ. ಆ ಪೀರ್ಲನ್ನು ಒಂದೊಂದನ್ನು ಒಬ್ಬೊಬ್ಬರು ಎತ್ತಿಕೊಂಡು, ಊರಿನಲ್ಲಿ ತಿರುಗಿಸುವುದು ಸಹ ನಡೆಯುತ್ತದೆ. ಹಾಗೆ ಎತ್ತಿಕೊಂಡು ಊರಿನಲ್ಲಿ ತಿರುಗುವಾಗ ಪೀರುನನ್ನು ಎತ್ತಿಕೊಂಡ ಮನುಷ್ಯನೊಳಗೆ ಆ ಹೆಸರಿರುವ ಸೂಕ್ಷ್ಮವು ಸೇರಿ, ಎತ್ತಿಕೊಂಡವನಿಗೆ ಜ್ಞಾಪಕವಿಲ್ಲದೆ ಹೋಗುತ್ತದೆ. ಆಗ ಎತ್ತಿಕೊಂಡ ವ್ಯಕ್ತಿಯೊಳಗೆ ಸೇರಿದ ಪೀರು, ಆ ವ್ಯಕ್ತಿ ಶರೀರದ ಮುಖಾಂತರ ಮಾತನಾಡುವುದು, ತೂಗಾಡುವುದು ಎಗರುವುದು ಮಾಡುತ್ತದೆ. ಹಾಗೆ ಸೂಕ್ಷ್ಮವು ಬಂದ ಪೀರ್ಲುಗಳು ಕೆಲವು ಶಾಂತ ಸ್ವಭಾವದಿಂದ ಇರುತ್ತವೆ. ಕೆಲವು ಚುರುಕುತನದಿಂದ ಪ್ರಜೆಗಳನ್ನು ಬೆದರಿಸಿ, ತಮ್ಮ ಕೋರಿಕೆಗಳನ್ನು ಹರಕೆಗಳನ್ನು ನೆರವೇರುವಂತೆ ಮಾಡಿಕೊಳ್ಳುತ್ತಾರೆ. ಅಂತಹ ಪೀರ್ಲುಗಳು ಹೆಸರು ಹೊಂದಿರುತ್ತವೆ. **(ಊರಿನ ಹೆಸರು ಸರಿಯಾಗಿ ಜ್ಞಾಪಕವಿಲ್ಲ, ಬಹುಶ ಆ ಮಾಂತ್ರಿಕನು ಹೇಳಿರುವುದು ಕುಂಟಿಮದ್ದಿ ಎನ್ನುವ**

**ಗ್ರಾಮವೇ ಅಂದುಕೊಳ್ಳುತ್ತೇನೆ.)** ಕುಂಟಿಮದ್ದಿ ಗ್ರಾಮದಲ್ಲಿ ಒಂದು ಪೀರನ್ನು ಯಾರು ಎತ್ತಿಕೊಂಡರೂ, ಸೂಕ್ಷ್ಮವು ಬಂದು ಊರೆಲ್ಲ ತಿರುಗಿ ತನಗೆ ಇಷ್ಟ ಬಂದವರ ಮನೆಗೆ ಹೋಗಿ ಅಲ್ಲಿ ಅವರನ್ನು ಪರಾಮರ್ಶಿಸುವುದೊ, ವಿಚಾರಿಸುವುದೊ, ವಿಮರ್ಶಿಸುವುದೊ, ದಂಡಿಸುವುದೊ ಮಾಡಿಬರುತ್ತಿತ್ತು. ಹಾಗೆ ಮಾಡುವುದರಿಂದ ಕೆಲವರು ಮನುಷ್ಯರು, ಎಲ್ಲ ಪೀರ್ಲಗಳಲ್ಲಿ ಆ ಪೀರು ದೊಡ್ಡದೆಂದು ಹೇಳಿಕೊಳ್ಳುತ್ತಿರುವಾಗ, ಕೆಲವರು ಆ ಪೀರು ದೊಡ್ಡಸ್ತಿಕೆ ಏನೂ ಇಲ್ಲ, ಆದರೆ ಆ ಪೀರನ್ನು ಎತ್ತಿಕೊಂಡ ಮನುಷ್ಯರು ಸೂಕ್ಷ್ಮವು ಬಂದಂತೆ ನಟಿಸಿ, ಅವರೆ ಕೆಲವು ಮನೆಗಳಿಗೆ ಹೋಗಿ ರಾದ್ಧಾಂತ ಮಾಡಿ ಬರುತ್ತಾರೆ. ಆದ್ದರಿಂದ ಆ ಪೀರುಗೆ ಹೆಸರು ಬಂದಿದೆ, ಎಂದು ಹೇಳುವವರು ಸಹ ಇದ್ದಾರೆ. ಹೆಸರುಪಡೆದ ಪೀರನ್ನು ಎತ್ತಿಕೊಂಡ ಮನುಷ್ಯನಿಗೆ, ಆ ಪೀರು ಸೂಕ್ಷ್ಮವೆ ಬರಲಿಲ್ಲ ಅನ್ನುವವರಲ್ಲಿ, ನನ್ನ ಹತ್ತಿರಕ್ಕೆ ಬಂದು ಮಾತನಾಡಿದ ಮಾಂತ್ರಿಕನು ಸಹ ಒಬ್ಬನಿದ್ದಾನೆ. ಪೀರ್ಲು ಮೆರವಣಿಗೆಯಲ್ಲಾಗಲಿ, ಪೀರ್ಲು ಚಾವಡಿಯಲ್ಲಿ ನಿಲ್ಲಿಸಿದಾಗಾಗಲಿ, ಪೀರ್ಲುಗೆ ಸಕ್ಕರೆಯನ್ನು ಓದಿಸುವುದಕ್ಕೆ, ಅಲಂಕರಿಸುವುದಕ್ಕೆ ಪ್ರತ್ಯೇಕವಾದ ವ್ಯಕ್ತಿ ಪೀರ್ಲ ಪೂಜಾರಿಯಂತೆ ಒಬ್ಬ ವ್ಯಕ್ತಿ ಇರುವನು. ಪೀರ್ಲ ಪೂಜಾರಿಯನ್ನು ಮುಜಾವರ್ ಹೆಸರಿನಿಂದ ಕರೆಯುತ್ತಾರೆ. ಪೀರ್ಲಹತ್ತಿರವಿರುವ ಆ ವ್ಯಕ್ತಿಯೊಂದಿಗೆ ಒಂದು ದಿನ ಮಾಂತ್ರಿಕನು ಪೂರ್ತಿಯಾಗಿ ವಾದಿಸುತ್ತಾ ಹೀಗೆ ಅಂದನು. “ನಾನು ಮಾಂತ್ರಿಕನು ಎಷ್ಟೋ ಮೊರಟು ದೆವ್ವಗಳನ್ನು ಸಹ ಬಿಡಿಸಿದ್ದೇನೆ. ನನಗೆ ಎಲ್ಲ ಗೊತ್ತು, ಪ್ರತಿ ಸಂವತ್ಸರ ಒಂದೆ ಮನುಷ್ಯನು ಆ ಪೀರನ್ನು ಎತ್ತಿಕೊಳ್ಳುತ್ತಿದ್ದಾನೆ. ಪ್ರತಿಸಾರಿ ಆ ಮನುಷ್ಯನೆ ಏಕೆ ಎತ್ತಿಕೊಳ್ಳಬೇಕು? ನೀವು ಹೇಳಿದಂತೆ ಆ ಪೀರು ಸೂಕ್ಷ್ಮ ಬರದಿದ್ದರೂ, ಅದನ್ನು ಎತ್ತಿಕೊಂಡ ಮನುಷ್ಯ ಸೂಕ್ಷ್ಮ ಬಂದಂತೆ ನಟಿಸಿ ಪೀರುಗೆ ದೊಡ್ಡ ಹೆಸರು ಬರುವಂತೆ ಮಾಡಿದ್ದಾನೆ.” ಆ ಮಾತಿಗೆ ಬದುಲು ಆ ಪೂಜಾರಿ ಮುಜಾವರ್ ಬದುಲಾಗಿ ಹೀಗಂದನು. “ನೀನು ಅಂದುಕೊಂಡಂತೆ ಏನು ನಡೆಯುವುದಿಲ್ಲ. ಯಾರು ನಟಿಸುವುದಿಲ್ಲ. ಆ ಪೀರನ್ನು ಯಾರು ಎತ್ತಿಕೊಂಡರೂ, ಅವರ ಮೇಲೆ ಆ ಪೀರು ಬಂದು ಮಾತನಾಡುತ್ತದೆ. ಆ ಪೀರನ್ನು ಪ್ರತಿ

ವರ್ಷವು ಒಬ್ಬನೆ ಮನುಷ್ಯ ಎತ್ತಿಕೊಳ್ಳುವುದಕ್ಕೆ ಕಾರಣ ಏನೆಂದರೆ? ಆ ಪೀರನ್ನು ಎತ್ತಿಕೊಳ್ಳುವುದಕ್ಕೆ ಯಾರೂ ಮುಂದಕ್ಕೆ ಬರುವುದಿಲ್ಲ. ಯಾವ ಪೀರನ್ನು ಎತ್ತಿಕೊಂಡರೂ ಅರ್ಧಗಂಟೆಗಿಂತ ಹೆಚ್ಚಿನ ಹೊತ್ತು ಎತ್ತಿಕೊಂಡವರಿಗೆ ಆ ಪೀರು ಸೂಕ್ಷ್ಮದಲ್ಲಿರುವುದಿಲ್ಲ. ಈ ಪೀರು ಮಾತ್ರ ಮೂರು ಗಂಟೆಗಳ ಕಾಲ ಸೂಕ್ಷ್ಮದಲ್ಲಿ ಇರುತ್ತದೆ. ಅಷ್ಟು ಹೊತ್ತು ಸೂಕ್ಷ್ಮದಲ್ಲಿರುವುದರಿಂದ, ಆ ಪೀರನ್ನು ಎತ್ತಿಕೊಂಡ ಮನುಷ್ಯನಿಗೆ ಎರಡು ದಿನಗಳವರೆಗೆ ಶರೀರದಲ್ಲಿ ನೋವುಗಳು ಇರುತ್ತವೆ. ಆದ್ದರಿಂದ ಆ ಪೀರನ್ನು ಮೊದಲಿನಿಂದಲು ಧೈರ್ಯವಾಗಿ ಒಬ್ಬನೆ ವ್ಯಕ್ತಿ ಎತ್ತಿಕೊಳ್ಳುತ್ತಿದ್ದಾನೆ. ಅಷ್ಟೇ ಹೊರತು ಇದರಲ್ಲಿ ಮೋಸವಿಲ್ಲ."

ಆಗ ಮಾಂತ್ರಿಕನು "**ನಿನ್ನ ಮಾತು ನಿಜವಾದರೆ ಈ ಸಂವತ್ಸರ ಆ ಪೀರುನನ್ನು ನಾನು ಎತ್ತಿಕೊಳ್ಳುತ್ತೇನೆ. ನೀನು ಹೇಳಿದ ಹಾಗೆ ನನಗೆ ಸೂಕ್ಷ್ಮವು ಬಂದರೆ ನಾನು ಸಹ ಈ ಪೀರು ದೊಡ್ಡದೆಂದು ಪ್ರಚಾರ ಮಾಡುತ್ತೇನೆ. ಒಂದು ವೇಳೆ ನನಗೆ ಸೂಕ್ಷ್ಮವು ಬರದಿದ್ದರೆ, ನೀವು ಹೇಳುವುದೆಲ್ಲಾ ಅಸತ್ಯವೆಂದು, ಪೀರುನಲ್ಲಿ ಏನು ಇಲ್ಲವೆಂದು, ಪೀರುನನ್ನು ಎತ್ತಿಕೊಂಡ ಮನುಷ್ಯನೇ ಹಾಗೆ ಮಾಡುತ್ತಿದ್ದಾನೆಂದು ನಾನು ಊರಿನಲ್ಲಿ ಡಂಗೂರ ಹೊಡೆಸುತ್ತೇನೆ**" ಎಂದನು. ಪೀರ್ಲ ಪೂಜಾರಿ ಸಹ ಸರಿ ಎಂದನು. ಇದೆಲ್ಲಾ ಮಾಂತ್ರಿಕನು ಸ್ವತಹವಾಗಿ ನನ್ನೊಂದಿಗೆ ಹೇಳಿದ ವಿಷಯ. ಅಷ್ಟೇ ಅಲ್ಲದೆ ಆ ಮಾಂತ್ರಿಕನು ಇನ್ನೂ ಏನು ಹೇಳಿದ್ದಾನೆಂದರೆ! ಒಂದು ವೇಳೆ ಆ ಪೂಜಾರಿ ಮುಜಾವರ್ ಹೇಳಿದಂತೆ ಎತ್ತಿಕೊಂಡ ಮನುಷ್ಯನೊಳಗೆ ಆ ಪೀರು ಬರುವ ಮಾತು ಸತ್ಯವೆ ಆದರೂ ಕೊನೆಗೆ ನಾನೆ ಗೆಲ್ಲುತ್ತೇನೆ ಏಕೆಂದರೆ! ನಾನು ಮಾಂತ್ರಿಕನಾಗಿರುವುದರಿಂದ ನನ್ನೊಳಗೆ ಯಾರೂ ಸೇರುವುದಿಲ್ಲ. ಯಾರಿಗಾದರು ಇಡಿದ ದೆವ್ವಗಳನ್ನು ನಾನೆ ಬಿಡಿಸುತ್ತಾ ಇರುತ್ತೇನೆ. ನನ್ನನ್ನು ನೋಡಿದರೆ ದೆವ್ವಗಳು ಭಯಪಡುತ್ತವೆ. ಆಗಿರುವಾಗ ಪೀರು ಸಹ ಒಂದು ದೆವ್ವವಿದ್ದಂತೆ ತಾನೆ! ಆಗಿರುವಾಗ ಅದು ನನ್ನೊಳಗೆ ಹೇಗೆ ಸೂಕ್ಷ್ಮ ಬರುತ್ತದೆ? ಏನೂ ಬರುವುದಿಲ್ಲ, ಆದ್ದರಿಂದ ನಾನೆ ಗೆಲ್ಲುತ್ತೇನೆ ಎಂದನು.

ಆ ಪೀರನನ್ನು ನಾನೇ ಎತ್ತಿಕೊಳ್ಳುತ್ತೇನೆಂದು ಮಾಂತ್ರಿಕನು ಹೇಳಿದ ನಂತರ ಸ್ವಲ್ಪ ದಿನಗಳಿಗೆ ಪೀರ್ಲಹಬ್ಬ ಬಂದಿತು. ಆಗ ಮಾಂತ್ರಿಕನು ಮೊದಲೇ ಹೇಳಿದ ಪ್ರಕಾರ ಪೀರನನ್ನು ಎತ್ತಿಕೊಳ್ಳುವುದಕ್ಕೆ ಹೋದನು. ಎಲ್ಲರೂ ಪೀರ್ಲು ಎತ್ತಿಕೊಂಡಂತೆ ಮಾಂತ್ರಿಕನು ಸಹ ಅಲ್ಲಿದ್ದ ಪ್ರತ್ಯೇಕವಾದ ಪೀರನನ್ನು ಎತ್ತಿಕೊಂಡನು. ಪೀರ್ಲಚಾವಡಿ ಮುಂದೆ ಬಗೆದಿರುವ ಕುಣಿಯ ಹತ್ತಿರ ಬಂದು ಕುಣಿಯ ಸುತ್ತ ತಿರುಗಿ ಮೆರವಣಿಗೆಗಾಗಿ ಊರಿನೊಳಗೆ ಪೀರ್ಲು ಹೋಗಬೇಕು. ಚಾವಡಿ ಹತ್ತಿರ ಪೀರ್ಲನ್ನು ಎತ್ತಿಕೊಂಡವರೆಲ್ಲ ಕುಣಿಯ ಮುಂದಕ್ಕೆ ಬರುತ್ತಲೆ ಪೀರ್ಲ ಸೂಕ್ಷ್ಮವು ಬಂದಿವೆ. ಆದರೆ ಮಾಂತ್ರಿಕನಿಗೆ ಸೂಕ್ಷ್ಮವು ಬರಲಿಲ್ಲ. ಆಗ ಸಾಯಂಕಾಲ ಐದುಗಂಟೆಗಳಾಗಿವೆ. ಮಾಂತ್ರಿಕನು ಕುಣಿಯ ಸುತ್ತ ಪೀರನ್ನು ಎತ್ತಿಕೊಂಡು ತಿರುಗಿದನು. ಅಲ್ಲಿಗೂ ಸೂಕ್ಷ್ಮವು ಬರಲಿಲ್ಲ. ಕುಣಿಯ ಸುತ್ತ ತಿರುಗಿ ಕುಣಿಯ ಮುಂದೆ ನಿಂತುಕೊಂಡು ಕಾದು ನೋಡಿದರು. ಅಲ್ಲಿಗೂ ಬರಲಿಲ್ಲ. ನನ್ನೊಳಗೆ ಏನೂ ಬರುವುದಿಲ್ಲ ಅನ್ನುವ ಧೈರ್ಯದಿಂದ ಮಾಂತ್ರಿಕನಿದ್ದಾನೆ. ಹಾಗೆ ನಿಂತುಕೊಂಡಾಗ ಮುಜಾವರ್ ಉರ್ದೂ ಭಾಷೆಯಲ್ಲಿ ಕಲ್ಮಾ ದಂತಹ ಒಂದು ಮಂತ್ರ ಓದುತ್ತಿದ್ದಾನೆ. ಮಾಂತ್ರಿಕನ ಬೆನ್ನಿನ ಮೇಲೆ ಯಾರೊ ಜೋರಾಗಿ ಹೊಡೆದಂತೆ ಪಠಾರ್ ಎಂಬ ಶಬ್ದ ಬಂದಿತು. ಆ ಏಟಿಗೆ ಮಾಂತ್ರಿಕನು ಹಿಡಿತ ತಪ್ಪಿಹೋಗಿ ಗಿರ್ರೆಂದು ಒಂದು ಸುತ್ತು ತಿರುಗಿದನು. ಅಲ್ಲಿಯವರೆಗೆ ಜ್ಞಾಪಕವಿದ್ದ ಮಾಂತ್ರಿಕನಿಗೆ, ಒಂದು ಸುತ್ತು ತಿರುಗುವುದರೊಳಗೆ ಜ್ಞಾಪಕ ಹೋಗಿದೆ. ನಂತರ ಏನು ನಡೆದಿದೆಯೊ ಏನೊ ಆತನಿಗೆ ತಿಳಿದಿಲ್ಲ. ಮೂರುಗಂಟೆಗಳ ನಂತರ ಪೀರುನನ್ನು ಇಳಿಸಿದ ಸಮಯದಲ್ಲಿ ಜ್ಞಾಪಕ ಬಂದಿದೆ. ಅಲ್ಲಿಯವರೆಗೆ ಚೆನ್ನಾಗಿ ನಿದ್ರೆಹೋಗಿ ಎದ್ದಂತಾಗಿದೆ. ಆತನು ಜ್ಞಾಪಕದೊಳಗೆ ಬಂದು ನೋಡುವಷ್ಟೊತ್ತಿಗೆ ರಾತ್ರಿ ಒಂಬತ್ತು ಗಂಟೆಗಳಾಗಿವೆ. ಲೆಕ್ಕ ಪ್ರಕಾರ ನಾಲ್ಕು ಗಂಟೆಗಳ ಕಾಲ ತನಗೆ ತಿಳಿಯದಂತೆ ಹೋಗಿದೆ. ಆ ನಾಲ್ಕು ಗಂಟೆಗಳು ಶರೀರದೊಳಗೆ ಪೀರು ಸೇರಿದಂತೆ ಆತನಿಗೆ ಅರ್ಥವಾಯಿತು. ಆಗ ಮುಜಾವರ್ ಮುಂದೆ ತಾನು ಸೋತುಹೋದಂತೆ ಮಾಂತ್ರಿಕನಿಗೆ ಅರ್ಥವಾಯಿತು.

ಹಾಗೆ ಮಾಂತ್ರಿಕನು ಅವಮಾನ ಪಾಲಾಗಿ, ಸ್ವಲ್ಪ ಮರ್ಯಾದೆಯನ್ನು ಪ್ರಜೆಗಳ ಹತ್ತಿರ ಕಳೆದುಕೊಂಡು, ತನಗೆ ಸೂಕ್ಷ್ಮವು ಹೇಗೆ ಬಂದಿದೆಯೊ ಅರ್ಥವಾಗದೆ, ಅದರ ವಿವರವನ್ನು ತಿಳಿದುಕೊಳ್ಳುವುದಕ್ಕೆ ನನ್ನ ಹತ್ತಿರಕ್ಕೆ ಬಂದು ವಿಷಯವನ್ನೆಲ್ಲ ಮಣಿಪೋಣಿಸಿದಂತೆ ಹೇಳಿದನು. ಅದನ್ನೆಲ್ಲವನ್ನು ಕೇಳಿ ನಾನು ಹೀಗೆ ಹೇಳಿದೆನು. "ನೀನು ಕೇವಲ ಮಾಂತ್ರಿಕನು ಮಾತ್ರ, ನಿನ್ನ ಮಂತ್ರಬಲದ ಮೇಲೆ ನಿನಗೆ ನಂಬಿಕೆ ಎಷ್ಟಿದ್ದರೂ, ನಿನ್ನ ಮಂತ್ರ ಬಲಕ್ಕಿಂತ ದೊಡ್ಡ ಬಲ ಇಲ್ಲವೆಂದುಕೊಂಡಿರುವುದು ನಿನ್ನ ತಪ್ಪು. ನೀನು ಮಾಂತ್ರಿಕನಾಗಿರುವುದರಿಂದ ನಿನಗೆ ದೆವ್ವಗಳು ಭಯಪಡುತ್ತವೆ, ನಿನ್ನ ಮಂತ್ರಬಲದಿಂದ ಓಡಿಹೋಗುತ್ತವೆ. ಅಷ್ಟು ಮಾತ್ರಕ್ಕೆ ನೀನು ಪೀರು ನನ್ನ ಶರೀರದೊಳಗೆ ಬರಲಿಲ್ಲ ಎಂದು ಕೊಂಡಿದ್ದೀಯ. ಆದರೆ ಆ ಪೀರು ಸಾಧಾರಣ ದೆವ್ವವಾ, ಅಸಾಧಾರಣ ದೆವ್ವವಾ ಎಂದು ಆಲೋಚಿಸದೆ ಹೋಗಿದ್ದೀಯ. ನಮ್ಮ ಭಾಷೆಯಲ್ಲಿ ದೆವ್ವವನ್ನು ಗ್ರಹ ಎನ್ನುತ್ತೇವೆ. **(ಗ್ರಹ ಎಂದರೆ ಮೊದಲೆ ವಿವರವನ್ನು ಹೇಳಿದ್ದೇವೆ.)** ಗ್ರಹಕ್ಕಿಂತ ಎಲ್ಲ ವಿಧಗಳಲ್ಲಿ ಶಕ್ತಿ ಹೆಚ್ಚಾಗಿರುವುದನ್ನು ವಿಗ್ರಹ ಎನ್ನುತ್ತೇವೆ. ಗ್ರಹ ಅಂದರೂ, ವಿಗ್ರಹ ಅಂದರೂ ಎರಡು ದೆವ್ವಗಳೆ ಆದರೂ ಶಕ್ತಿಯಲ್ಲಿ ಎಷ್ಟೋ ವ್ಯತ್ಯಾಸ ಇರುತ್ತದೆ. ಅಂತಹ ವ್ಯತ್ಯಾಸವಿರುವ ವಿಗ್ರಹ ಆ ಪೀರುನಲ್ಲಿ ಇರಬಹುದು. ಆದ್ದರಿಂದ ಅದು ನಿನ್ನಲ್ಲಿ ಸೇರಲಾಗಿದೆ. ನೀನು ನನ್ನ ಒಳಗೆ ಯಾವುದೂ ಸೇರಲಿಲ್ಲ ಎನ್ನುವ ಜ್ಞಾಪಕದಿಂದಿರುವಾಗ, ಆ ಜ್ಞಾಪಕವನ್ನು ಮರೆಸುವುದಕ್ಕೆ ಆ ಪೀರು ವಿಗ್ರಹ ನಿನ್ನನ್ನು ಬೆನ್ನಿನ ಮೇಲೆ ಗಿರ್ರೆಂದು ತಿರುಗುವಂತೆ ಹೊಡೆದಿದೆ. ಊಹಿಸದ ಆ ಏಟಿಗೆ ನೀನು ಒಂದು ಪಕ್ಕಕ್ಕೆ ತಿರುಗುತ್ತಾ ದೆವ್ವ (ಪೀರು) ಆಲೋಚನೆಯನ್ನು ನೀನು ಮರೆತುಹೋಗಿ ನಿನ್ನನ್ನು ನೀನು ರಕ್ಷಿಸಿಕೊಳ್ಳುವ ಧ್ಯಾಸದಲ್ಲಿ ಇರುವಾಗ ಆ ಪೀರು ನಿನ್ನೊಳಗೆ ಸೇರಿದೆ. ನನ್ನೊಳಗೆ ಏನು ಸೇರುವುದಿಲ್ಲ ಎನ್ನುವ ಉದ್ದೇಶವನ್ನು ಒಂದು ಕ್ಷಣ ಇಲ್ಲದಂತೆ ಮಾಡುವುದಕ್ಕೆ ನಿನ್ನನ್ನು ಒಡೆದಿದೆ. ಆ ಕ್ಷಣದಲ್ಲಿಯೆ ನಿನ್ನೊಳಗೆ ಸೇರಿಹೋಗಿದೆ.

ಅಲ್ಲಿ ನಡೆದ ವಿಷಯವನ್ನು ಅನುಸರಿಸಿ ನೋಡಿದರೆ, ನೀನು ನನ್ನೊಳಗೆ ಸೇರುವುದಿಲ್ಲ ಅಂದ ಮಾತನ್ನು ಪಂದ್ಯವಾಗಿ ತಿಳಿದು ಪಟ್ಟುಬಿಡದೆ ಆ ಪೀರು ನಿನ್ನೊಳಗೆ ಸೇರಿದೆ. ಅಷ್ಟೇ ಹೊರತು ಅದು ನಿನ್ನ ಮೇಲೆ ಕಕ್ಷೆಯಿಂದಲೊ, ಕೋಪದಿಂದಲೊ ಸೇರಲಿಲ್ಲ. ಆದ್ದರಿಂದ ನಾಲ್ಕು ಗಂಟೆಗಳ ಕಾಲ ನಿನ್ನ ಶರೀರವನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡು, ಯಾವ ಹಾನಿ ಮಾಡದಂತೆ ಬಿಟ್ಟುಹೋಗಿದೆ. ಒಂದುವೇಳೆ ನಿನ್ನ ಮೇಲೆ ಕೋಪದಿಂದ ನಿನ್ನ ಶರೀರದಲ್ಲಿ ಸೇರಿದ್ದರೆ ಅದು ಅಷ್ಟು ಸುಲಭವಾಗಿ ಬಿಡುತ್ತಿರಲಿಲ್ಲ. ನಾಲ್ಕು ಗಂಟೆಗಳಿದ್ದು ಬಿಟ್ಟುಹೋದ ನಂತರ, ನೀನು ನಾಲ್ಕು ವಾರಗಳು ಆಸ್ಪತ್ರೆಗೆ ಹೋಗಬೇಕಾಗಿದ್ದಿತು. ನಿನಗೆ ಅರ್ಥವಾಗುವುದಕ್ಕೆ ಕಳೆದು ಹೋದ ಕಾಲದಲ್ಲಿ ನಡೆದ ಚಿಕ್ಕ ಉದಾಹರಣೆಯನ್ನು ಹೇಳುತ್ತೇನೆ ಕೇಳು. ಅನಂತಪುರ ಜಿಲ್ಲೆಯಲ್ಲಿಯೆ ಗುತ್ತಿ ಎನ್ನುವ ಊರಿನ ಸಮೀಪದಲ್ಲಿ ಓಬಳಾಪುರ ಅನ್ನುವ ಗ್ರಾಮವಿದೆ. ಆ ಗ್ರಾಮದಲ್ಲಿ ಉಪಾಧ್ಯಕ್ಷನಾಗಿ ಇರುವ ವ್ಯಕ್ತಿ ಆ ಊರಿನಲ್ಲಿನ ಪೀರನ್ನು ಕುರಿತು ನೀನು ಮಾತನಾಡಿದಂತೆ ಮಾತನಾಡಿದನು. ಅಷ್ಟೇ ಅಲ್ಲದೆ ಆ ಊರಿನ ಪೀರುನನ್ನು ಕುರಿತು ದುರ್ಭಾಷೆಯಿಂದ ಮಾತನಾಡಿದನು. ನೀನು ನನ್ನೊಳಗೆ ಬರುವುದಿಲ್ಲ ಎಂದು ಮಾತ್ರ ಅಂದಿದ್ದೀಯ. ಆದರೆ ಆತನು ಪೀರು ಸೂಕ್ಷ್ಮ ಬರುವುದು ಅಸತ್ಯವೆಂದು, ಹಾಗೆ ಬಂದಿದೆಯೆಂದು ಹೇಳಿದರೆ ಪೀರು ಎತ್ತಿಕೊಂಡವನನ್ನು ಚಪ್ಪಲಿಯಿಂದ ಸೂಕ್ಷ್ಮವಿದ್ದಾಗಲೆ ಒಡೆಯುತ್ತೇನೆ, ಯಾವನು ಎತ್ತಿಕೊಳ್ಳದೆ ಹೋದರೆ ನಾನೇ ಎತ್ತಿಕೊಂಡು ಸೂಕ್ಷ್ಮವು ಅಸತ್ಯವೆಂದು ತೋರಿಸುತ್ತೇನೆ, ಮನುಷ್ಯರು ಆಡುವ ನಾಟಕವೇ ಸೂಕ್ಷ್ಮವು. ಗೇಣು ತಗಡಿಗೆ ಕೋಲನ್ನು ಸಿಕ್ಕಿಸಿಕೊಂಡು ಎತ್ತಿಕೊಂಡು ದೇವರು ಬಂದಿದ್ದಾನೆಂದು ಎಗರುತ್ತೀರಾ? ಎಂದನು. ಪೀರನನ್ನು ಗೇಣುತಗಡು ಅಂದಿರುವುದಕ್ಕೆ, ಸೂಕ್ಷ್ಮ ಬಂದವನನ್ನು ಚಪ್ಪಲಿಯಿಂದ ಒಡೆಯುತ್ತೇನೆಂದು ಅಂದಿರುವುದಕ್ಕೆ ಆ ಪೀರುಗೆ ಕೋಪ ಬಂದಿತು. ಇನ್ನು ಮೇಲೆ ಯಾರೂ ತನ್ನನ್ನು ಕುರಿತು ಮಾತನಾಡದೆ ಭಯವಿರುವಂತೆ ಮಾಡಬೇಕೆಂದುಕೊಂಡಿತು. ಪೀರ್ಲಹಬ್ಬ ಆತನು ಮಾತನಾಡಿದ ಮೂರನೆ ದಿನಕ್ಕೆ ಬಂದಿತು.

ಪೀರ್ಲಹಬ್ಬದ ದಿನದಂದು ದೊಡ್ಡ ಹೆಸರಿರುವ ಆ ಪೀರನ್ನು ಯಾರೂ ಎತ್ತಿಕೊಳ್ಳಲಿಲ್ಲ. ಉಪಾಧ್ಯಕ್ಷ ಬೈದಿರುವುದರಿಂದ ಯಾರೂ ಎತ್ತಿಕೊಳ್ಳುವುದಕ್ಕೆ ಮುಂದಕ್ಕೆ ಬರಲಿಲ್ಲ. ಯಾರೂ ಎತ್ತಿಕೊಳ್ಳದೆ ಹೋಗಿರುವುದರಿಂದ ಆ ಪೀರನನ್ನು ಬೈದ ಆ ಉಪಾಧ್ಯಕ್ಷ ನಾನೆ ಎತ್ತಿಕೊಳ್ಳುತ್ತೇನೆಂದು ಎತ್ತಿಕೊಂಡನು. ಮೆರುವಣಿಗೆ ಪ್ರಾರಂಭವಾಯಿತು ಸಮಯಕ್ಕಾಗಿ ಕಾದು ನೋಡುತ್ತಿದ್ದ ಆ ಪೀರುವಿನ ಸೂಕ್ಷ್ಮವು ಆ ಉಪಾಧ್ಯಕ್ಷನ ಶರೀರದೊಳಗೆ ಪ್ರವೇಶಿಸಿತು. ತಕ್ಷಣವೆ ಆತನು ಕಣ್ಣು ಕೆಕ್ಕರಿಸಿಕೊಂಡು ನೋಡುತ್ತಾ, ಮೊಣಕಾಲಿನಲ್ಲಿ ನಡೆಯಲು ಪ್ರಾರಂಭಿಸಿದನು. ಅದನ್ನು ನೋಡಿದ ಪಕ್ಕದವರು ಮೇಲಕ್ಕೆತ್ತಿ ನಿಲ್ಲಿಸಿದರೂ, ಮತ್ತೆ ಮೊಣಕಾಲಿನ ಮೇಲೆ ಕುಳಿತು ನಡೆಯುತ್ತಿದ್ದಾನೆ. ಅದು ಚಿಕ್ಕ ಊರು ಆಗಿರುವುದರಿಂದ ಒಂದು ಗಂಟೆಗೆ ಮೆರವಣಿಗೆ ಮುಗಿದು ಹೋಯಿತು. ಮೆರವಣಿಗೆ ಮುಗಿದ ನಂತರ ಆ ಪೀರು ಆತನ ಶರೀರದಿಂದ ಬಿಟ್ಟುಹೋಯಿತು. ಆಗ ಆ ವ್ಯಕ್ತಿಗೆ ಜ್ಞಾಪಕಬಂದಿತು. ಆತನಿಗೆ ಜ್ಞಾಪಕ ಬರುತ್ತಿದ್ದಹಾಗೆ ಮೊಣಕಾಲುಗಳಲ್ಲಿ ನೋವು ಕಾಣಿಸಿತು. ಕಾಲುಗಳ ಕಡೆಗೆ ನೋಡಿಕೊಂಡರೆ ಮೊಣಕಾಲುಗಳ ಚರ್ಮವೆಲ್ಲಾ ಕಚ್ಚು ಕಚ್ಚುಗಳಾಗಿ ಸೀಳಿ ರಂಧ್ರಗಳು ಬಿದ್ದು ರಕ್ತದಿಂದ ಒದ್ದೆಯಾಗಿವೆ. ಏನು ನಡೆದಿದೆಯೆಂದು ಪಕ್ಕದವರನ್ನು ಕೇಳಿದಾಗ ಅವರು ನಡೆದ ವಿಷಯವನ್ನೆಲ್ಲಾ ಹೇಳಿದರು. ಆಗ ಪೀರು ಅಂದರೆ ಭಯ ತುಂಬಿಕೊಂಡಿತು. ಕಾಲುಗಳನ್ನು ಸರಿಪಡಿಸಿಕೊಳ್ಳುವುದಕ್ಕೆ ಹತ್ತು ದಿನಗಳು ಆಸ್ಪತ್ರೆಯಲ್ಲಿಯೇ ಇದ್ದನು.

ಒಂದು ಲೆಕ್ಕದ ಪ್ರಕಾರ ನೋಡಿದರೆ, ಓಬಳಾಪುರದಲ್ಲಿನ ಪೀರು ಆತನಿಗೆ ಹಾಕಿದ ಶಿಕ್ಷೆಗಿಂತ ನಿನಗೆ ನಡೆದ ಅವಮಾನ ದೊಡ್ಡದಲ್ಲ. ನೀನು ಮಾಂತ್ರಿಕನಾಗಿದ್ದು, ಗ್ರಹಗಳಿಗೂ (ದೆವ್ವಗಳಿಗೂ) ವಿಗ್ರಹಗಳಿಗೂ (ದೇವತೆಗಳಿಗೂ) ವ್ಯತ್ಯಾಸ ತಿಳಿಯದಿರುವುದರಿಂದ ಆ ಪೀರು ತನ್ನ ಇರುವಿಕೆಯನ್ನು ತಿಳಿಸುವ ನಿಮಿತ್ತವೆ ನಿನ್ನೊಳಗೆ ಪ್ರವೇಶಿಸಿ ಬಿಟ್ಟಿದೆ. ಅಧ್ಯಕ್ಷನಿಗೆ ಆಗಲ್ಲ. ಆ ಊರಿನಲ್ಲಿ ಎಲ್ಲರಿಗು ಭಯಬರುವಂತೆ ಮೊಣಕಾಲುಗಳ ಮೇಲೆ ನಡೆಸಿದೆ. ಆ ಅಧ್ಯಕ್ಷನಿಗೆ ಕೇವಲ ಅಜ್ಞಾನವಲ್ಲದೆ ಯಾವ ಶಕ್ತಿ ಇಲ್ಲ. ನಿನಗೆ ಸ್ವಲ್ಪ ಮಂತ್ರಶಕ್ತಿಯಾದರೂ

ಇದೆ. ಆದರೆ ನಿನ್ನೊಳಗೆ ಸೇರಿದ ಪೀರುಗೆ ಏನೊ ಸ್ವಲ್ಪಶಕ್ತಿ, ನಿನ್ನ ಮಂತ್ರ ಶಕ್ತಿಗಿಂತ ಹೆಚ್ಚಾಗಿ ಇರುವುದರಿಂದ ನಿನ್ನೊಳಗೆ ಸೇರಿ ನಿನಗಿಂತ ನಾನೇ ದೊಡ್ಡವನೆಂದು ಅರ್ಥವಾಗುವಂತೆ ಮಾಡಿದೆ. ನೀನು ಏನೊ ದೊಡ್ಡದಾಗಿ ಅಂದುಕೊಂಡ ಮಂತ್ರಶಕ್ತಿ, ಒಂದು ಪೀರು ಮುಂದೆ ಲೆಕ್ಕಕ್ಕೆ ಬರಲಿಲ್ಲ. ಆದ್ದರಿಂದ ಇಂತಹ ಮಂತ್ರಗಳನ್ನು, ಅದರ ಶಕ್ತಿಗಳನ್ನು, ನಂಬಿಕೊಂಡಿರುವುದಕ್ಕಿಂತ ಎಲ್ಲದಕ್ಕೂ ಮಿಗಿಲಾದ ದೈವಜ್ಞಾನವನ್ನು, ಅದರ ಶಕ್ತಿಯನ್ನು ಸಂಪಾಧಿಸಿಕೊ! ದೈವಶಕ್ತಿ ಇರುವ ಮನುಷ್ಯನ ಹತ್ತಿರ ಎಷ್ಟು ದೊಡ್ಡ ದೆವ್ವಗಳಾದರೂ, ದೇವತೆಗಳಾದರು ತಲೆಬಗ್ಗಿಸಿ ನಡೆದುಕೊಳ್ಳುತ್ತಾರೆ. ನೀನು ಈಗಿನಿಂದ ಕ್ಷುದ್ರವಾದ ಮಂತ್ರಗಳನ್ನು ಬಿಟ್ಟುಹಾಕಿ, ಪವಿತ್ರವಾದ ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸು ಎಂದು ಆತನಿಗೆ ಹಿತ ಹೇಳಿದಾಗ ಆತನು ಚೆನ್ನಾಗಿ ಕೇಳಿ ಸ್ಪಂದಿಸಿ, ತನಗೆ ತಿಳಿಯದ ಜ್ಞಾನವನ್ನು ಕುರಿತು ಕೇಳಿ ತಿಳಿದುಕೊಂಡು ಜ್ಞಾನಮಾರ್ಗದಲ್ಲಿಯೆ ನಡೆದುಕೊಳ್ಳುತ್ತೇನೆಂದು ಹೇಳಿ ಹೋದನು.

ಭೂಮಿಮೇಲೆ ಕಾಣಿಸದ ಜಗತ್ತಿನಲ್ಲಿ ದೆವ್ವಗಳು, ದೇವತೆಗಳು ಒಗ್ಗೂಡಿ ಇದ್ದಾರೆ. ಎಲ್ಲರೂ ಜೀವಿಗಳೇ ಆಗಿರುವಾಗ, ಕೆಲವು ಜೀವಿಗಳು ದೆವ್ವಗಳ ಗುಂಪಿಗೆ ಸೇರಿದವರು, ಕೆಲವರು ದೇವತೆಗಳ ಗುಂಪಿಗೆ ಸೇರಿದವರೆಂದು ತಿಳಿಯುತ್ತಿದೆ. ಬಹಳ ಜನ ಶಾಸ್ತ್ರಕಾರರು ಕಾಣಿಸದಿರುವುದನ್ನು ನಂಬುವುದಿಲ್ಲ, ತಿಳಿದುಕೊಳ್ಳುವುದಕ್ಕೆ ಪ್ರಯತ್ನವು ಸಹ ಮಾಡುವುದಿಲ್ಲ. ಕಾಣಿಸದಿರುವುದನ್ನು ಇಲ್ಲ ಎನ್ನುವುದು, ಕಾಣಿಸುವುದನ್ನು ಇದೆಯೆನ್ನುವುದು ಅವರ ಸೂತ್ರ. ಏನೋ ಸಮಾಜಕ್ಕೆ ನಾವು ಒಳಿತು ಮಾಡುತ್ತೇವೆಂಬ ಉದ್ದೇಶದಿಂದ ಸತ್ಯವನ್ನು ಸಹ ಅಸತ್ಯವೆಂದರೆ ಅದರಿಂದ ಸಮಾಜಕ್ಕೆ ಕೇಡೆ ನಡೆಯುತ್ತದೆ. ಸಮಾಜದಲ್ಲಿ ದೇವರುಗಳ ಹೆಸರಿನಲ್ಲಿ ಮೋಸ ಮಾಡುವವರು ಕೆಲವರಿರಬಹುದು. ಅಂತವರನ್ನು ಅಡ್ಡ ಇಟ್ಟುಕೊಂಡು ದೇವತೆಗಳು, ದೆವ್ವಗಳು ಇಲ್ಲ ಎನ್ನುವುದು ಸಮಂಜಸವಲ್ಲ. ಈಗ ಹೇಳಿದ ಪೀರ್ಲ ವಿಷಯದಲ್ಲಿ ನಡೆದಿರುವುದನ್ನು ಅಂದರೆ ಸೂಕ್ಷ್ಮ ಬಂದು ಮೊಣಕಾಲುಗಳಿಗೆ ಗಾಯವಾದದ್ದನ್ನು ಸತ್ಯ ಎನ್ನೋಣವಾ? ಅಸತ್ಯ

ಎನ್ನೋಣವಾ? ನೋಡುವುದಕ್ಕೆ ಮೇಲೆ ಕಾಣಿಸುವುದು ಸತ್ಯ, ಆದ್ದರಿಂದ ಅದನ್ನು ಸತ್ಯ ಎಂದರೆ, ಅದು ನಡೆದಂತೆ ಆತನಿಗೆ ಜ್ಞಾಪಕ ಬರುವವರೆಗು ತಿಳಿಯುವುದಿಲ್ಲ. ಕಾಲುಗಳು ಗಾಯವಾದಾಗ, ಸೂಕ್ಷ್ಮದಲ್ಲಿರುವಾಗ, ಆ ವಿಷಯ ಯಾರಿಗೆ ತಿಳಿದಿದೆ? ಅಂದರೆ ಆ ಸತ್ಯವನ್ನು ಹೇತುವಾದಿಗಳು ಹೇಳಲಾರರು ಏಕೆಂದರೆ! ಆ ಸಮಯದಲ್ಲಿ ಶರೀರದಲ್ಲಿ ಯಾರಿರುವುದೆಂದು ಅವರಿಗೆ ತಿಳಿಯದು. ಮೇಲೆ ಕಾಣಿಸುವ ಮನುಷ್ಯರ ಶರೀರದೊಳಗೇ ಕಾಣಿಸದ ಜೀವಾತ್ಮನನ್ನು ತಿಳಿಯದವರು, ತಮ್ಮ ಶರೀರದೊಳಗೆ ತಾವು ಹೇಗಿದ್ದಾರೊ ತಮಗೇ ಗೊತ್ತಿಲ್ಲದವರು, ತಮಗೆ ತಿಳಿದ ಶಾಸ್ತ್ರಗಳನ್ನು ಅನುಸರಿಸಿ ಒಳಗಿನ ವಿಧಾನವನ್ನು, ಒಳಗೆ ಜೀವಾತ್ಮನನ್ನು ಗುರುತಿಸಲಾರರು. ಕಾಣಿಸುವ ಶರೀರಗಳಲ್ಲಿ ನಡೆಯುವ ವಿಧಾನವೇನೊ ತಿಳಿಯದಿರುವಾಗ, ಅಸಲಿಗೆ ಶರೀರ ಇಲ್ಲದವರನ್ನು, ಶರೀರದಲ್ಲಿ ಸೇರದವನನ್ನು ಕುರಿತು ಏನೂ ಹೇಳಲಾರೆವು. ಇಲ್ಲಿಯವರೆಗು ಶರೀರದೊಳಗೆ ಸೇರುವ ದೆವ್ವಗಳನ್ನು, ದೇವತೆಗಳನ್ನು, ಅವರೊಳಗೇ ಮಹಾತ್ಮರನ್ನು ಕುರಿತು ಹೇಳಿಕೊಂಡಿದ್ದೇವೆ ಅಲ್ಲವೆ! ಈಗ ಶರೀರದಲ್ಲಿ ಸೇರದಂತೆ, ಅನ್ಯಾಯವನ್ನು ಖಂಡಿಸಿ, ಅನ್ಯಾಯವನ್ನು ಮಾಡಿದವರಿಗೆ ಕಲ್ಪಿಸಿದ ನಷ್ಟವನ್ನು ನೋಡಿದರೆ, ಇನ್ನೂ ಇಂತಹುಗಳು ಮನುಷ್ಯರಿಗೆ ತಿಳಿಯದೆ ಎಷ್ಟು ನಡೆಯುತ್ತಿವೆಯೋ ಹೇಗೆ ತಿಳಿಯಬಲ್ಲವು? ಎನ್ನುವ ಪ್ರಶ್ನೆ ಬರಬಹುದು. ಅಂತಹ ಒಂದು ಯಥಾರ್ಥ ಸಂಘಟನೆಯನ್ನು ಕುರಿತು ಹೇಳಿಕೊಳ್ಳೋಣ.

ಅದು ಒಂದು ಹಳ್ಳಿ. ಆ ಊರಿನ ಹೊರಗೆ ರಸ್ತೆ ಪಕ್ಕದಲ್ಲಿ ಒಂದು ಹಸಿ ಮೆಣಸಿನ ಕಾಯಿಯ ತೋಟವಿತ್ತು. ಅದಕ್ಕೆ ಒಬ್ಬ ಮನುಷ್ಯ ಕಾವಲು ಸಹ ಇದ್ದಾನೆ. ಒಂದು ದಿನ ದಾರಿಯಲ್ಲಿ ಹೋಗುವ ಒಬ್ಬ ಸಾಧುವು ತೋಟದ ಪಕ್ಕದಲ್ಲಿ ಹೋಗುತ್ತಾ, ತೋಟದಲ್ಲಿನ ಮೆಣಸಿನಕಾಯಿಗಳನ್ನು ನೋಡಿ ಎರಡು ಮೆಣಸಿನಕಾಯಿಗಳನ್ನು ಕಿತ್ತುಕೊಳ್ಳಬೇಕೆಂದುಕೊಂಡು ತಕ್ಷಣವೆ ತೋಟದೊಳಗೆ ಹೋಗಿ, ಎರಡೇ ಎರಡು ಮೆಣಸಿನಕಾಯಿಗಳನ್ನು ಕಿತ್ತುಕೊಂಡನು. ಆತನ ಹತ್ತಿರ ಅನ್ನ ಮಾತ್ರವಿದೆ, ಸಾರು ಇಲ್ಲ. ಆದ್ದರಿಂದ ಸಾರಿನ ಬದಲು

ಮೆಣಸಿನಕಾಯಿ ಕಡಿದುಕೊಂಡು ಅನ್ನ ತಿನ್ನಬಹುದೆಂದುಕೊಂಡನು. ಆತನು ಮೆಣಸಿನಕಾಯಿಗಳನ್ನು ಕೀಳುವುದು ತೋಟದ ಕಾವಲುಗಾರ ನೋಡಿದನು. ಕಾವಲುಗಾರ ಅರಚುತ್ತಾ ಅಲ್ಲಿಗೆ ಬಂದನು. ಸಾಧುವನ್ನು ನಾನಾ ದುರ್ಭಾಷೆಗಳನ್ನಾಡಿ, ಮೆಣಸಿನಕಾಯಿಗಳನ್ನು ಏಕೆ ಕಿತ್ತಿದ್ದೀಯೆಂದು ಅರಚುತ್ತಾ ಆತನು ಏನು ಹೇಳಿದರೂ ಕೇಳದೆ, ಕೇವಲ ಎರಡು ಕಾಯಿಗಳೆ ಕಿತ್ತಿರುವುದೆಂದು ಹೇಳಿದರೂ ಕೇಳದೆ, ಸಾಧುವನ್ನು ಚೆನ್ನಾಗಿ ಥಳಿಸಿದನು. ಎರಡು ಮೆಣಸಿನ ಕಾಯಿಗಳಿಗೆ ಸಾಧುವನ್ನು ಅಷ್ಟೊಂದು ಥಳಿಸುವುದು ನೋಡುವವರಿಗೆ ಯಾರಿಗಾದರೂ ಅನ್ಯಾಯವೆನಿಸುತ್ತದೆ. ಆದರೆ ಅಲ್ಲಿ ಯಾರೂ ಇಲ್ಲ. ಸಾಧುವು ಬಾಧೆಬೀಳುತ್ತಾ ತನ್ನ ದಾರಿಯಲ್ಲಿ ತಾನು ಹೋದನು. ಆದರೂ ಆ ವಿಷಯವೆಲ್ಲವನ್ನು ಒಬ್ಬ ವ್ಯಕ್ತಿ ಗಮನಿಸಿದನು. ಇಬ್ಬರ ಸ್ಥೂಲಶರೀರಗಳ ಮಧ್ಯೆ ನಡೆದ ಸಂಘಟನೆಯನ್ನು ಒಬ್ಬ ಸೂಕ್ಷ್ಮಶರೀರದ ವ್ಯಕ್ತಿ ನೋಡಿದನು. ಸೂಕ್ಷ್ಮಶರೀರ ಎಂದರೆ ಕಾಣಿಸದ ವ್ಯಕ್ತಿ ಎಂದು ಅರ್ಥ. ಕಾಣಿಸದ ವ್ಯಕ್ತಿಗೆ ಆ ಸಂಘಟನೆ ಬಹಳ ಅನ್ಯಾಯವೆನಿಸಿತು. ಆದರೂ ತಾನು ಕಾಣಿಸದ ವ್ಯಕ್ತಿ ಆಗಿರುವುದರಿಂದ ಆಗ ತಾನೇನು ಅನ್ನಲಾರದೆ ಹೋದನು. ಆದರೂ ಆ ತೋಟದ ಕಾವಲುಗಾರನಿಗೆ ತಕ್ಕ ಪ್ರಾಯಶ್ಚಿತ್ತ ಮಾಡಬೇಕೆಂದುಕೊಂಡನು. ಆ ದಿನ ರಾತ್ರಿಗೆ ಬಂದು ಆ ತೋಟದಲ್ಲಿ ಒಂದು ಸೆಂಟು ಜಾಗದಲ್ಲಿದ್ದ ಮೆಣಸಿನ ಗಿಡಗಳನ್ನು ಕಿತ್ತು ಕುಪ್ಪೆಹಾಕಿ ಹೋದನು. ಬೆಳಗಾದ ನಂತರ ಆ ತೋಟದ ಕಾವಲುಗಾರನು ಬಂದು ನೋಡಿ ಲಬೋ ದಿಬೋ ಎಂದನು. ನಿನ್ನೆ ಎರಡು ಮೆಣಸಿನಕಾಯಿಗಳಿಗೆ ಒಬ್ಬ ಸಾಧುವನ್ನು ಒಡೆದಿದ್ದೇನಲ್ಲ! ಆತನೆ ಕಕ್ಷೆಯಿಂದ ರಾತ್ರಿಗೆ ಬಂದು ನನ್ನ ಗಿಡಗಳನ್ನು ಕಿತ್ತಿದ್ದಾನೆಂದುಕೊಂಡನು. ಆದರೆ ಸಾಧುವಿಗೆ ಏನು ಗೊತ್ತಿಲ್ಲ. ತನ್ನ ದಾರಿಯಲ್ಲಿ ತಾನು ಅಳುತ್ತಾ ಹೋದನು. ಆ ಸಂಘಟನೆಯನ್ನು ನೋಡಿದ ಮೂರನೆವ್ಯಕ್ತಿ ಕಿತ್ತುಹಾಕಿದ್ದಾನೆನ್ನುವ ವಿಷಯ ತೋಟದ ಮಾಲೀಕನಿಗೆ ತಿಳಿಯದು. ಎರಡನೆ ರಾತ್ರಿಸಹ ಒಂದು ಸೆಂಟು ಜಾಗದಲ್ಲಿನ ಮೆಣಸಿನ ಗಿಡಗಳನ್ನು ಕಿತ್ತಿರುವುದನ್ನು ತೋಟದ ಮಾಲೀಕನು ನೋಡಿದನು. ಈ ಬಾರಿ ಸಾಧುವಿನ ಮೇಲೆ ಬಹಳ ಕೋಪ ಬಂದಿತು. ಮೂರನೆ ದಿನವು ಸಹ ಆ ವಿಧವಾಗಿಯೆ

ಮಾಡುತ್ತಾನೆಂದು ಊಹಿಸಿದ ತೋಟದಮಾಲೀಕನು ರಾತ್ರಿಗೆ ಬಂದು ತೋಟದಹತ್ತಿರವೆ ಮಲಗಬೇಕೆಂದುಕೊಂಡನು. ಹಾಗೆ ರಾತ್ರಿಗೆ ಬಂದು ತೋಟದಲ್ಲಿ ಮಲಗಿಕೊಂಡನು. ರಾತ್ರಿ 12ಗಂಟೆಗಳವರೆಗು ಎಚ್ಚರದಿಂದಿದ್ದು ನಂತರ ನಿದ್ರೆಹೋದನು. ಬೆಳಗಾದನಂತರ ನೋಡಿದನು. ಇನ್ನೇನಿದೆ ಮೂರನೆದಿನವು ಸಹ ಗಿಡಗಳು ಕಿತ್ತುಬಿದ್ದಿವೆ. ತಾನು ಇಲ್ಲಿಯೇ ಮಲಗಿಕೊಂಡರು ಫಲವಿಲ್ಲವೆಂದು ಅಂದುಕೊಂಡನು. ಕಿತ್ತಿರುವ ಗಿಡಗಳನ್ನು ನೋಡಿ ಬಹಳ ಬಾಧೆಪಟ್ಟನು. ಈ ಬಾರಿ ಸಾಧುವನ್ನು ಹೇಗಾದರು ಹಿಡಿದುಕೊಂಡು ಚೆನ್ನಾಗಿ ಥಳಿಸಿ ತನ್ನ ತೋಟದಕಡೆಗೆ ಬಾರದಂತೆ ಮಾಡಬೇಕೆಂದುಕೊಂಡನು. ನಾಲ್ಕನೇ ದಿನ ರಾತ್ರಿ ತೋಟದ ಹತ್ತಿರಕ್ಕೆ ಬಂದು ಕಾವಲಾಗಿ ಕುಳಿತುಕೊಂಡನು. ಈ ಬಾರಿ ನಿದ್ರೆಹೋಗದಂತೆ ಜಾಗ್ರತೆಯಿಂದ ಇದ್ದಾನೆ. ರಾತ್ರಿ 12 ಗಂಟೆಗಳು ದಾಟಿದೆ, ಬಿಳಿವಸ್ತ್ರಗಳು ಹಾಕಿಕೊಂಡ ಒಂದು ಆಕಾರ ದೂರದಿಂದ ಬರುವಂತೆ ಅನ್ನಿಸಿತು. ತಕ್ಷಣವೆ ತೋಟದಮಾಲೀಕ ಜಾಗ್ರತೆಗೊಂಡನು. ಕೈಯಲ್ಲಿ ಕೋಲನ್ನು ತೆಗೆದುಕೊಂಡು ಆಕಡೆ ಹೋದನು. ತೋಟದಮಾಲೀಕ ತಾನು ಹೋಗುತ್ತಿರುವಾಗ ಕಾಣಿಸಿದ ವ್ಯಕ್ತಿ ತೋಟದೊಳಗೆ ಬಂದಿರುವುದು ಗಿಡಗಳನ್ನು ಕಿತ್ತು ಆ ವ್ಯಕ್ತಿ ತಿರುಗಿ ಹೋಗುವುದು ನಡೆದಿದೆ. ಈ ಬಾರಿ ತಾನು ನೋಡುತ್ತಾ ಬರುತ್ತಿದ್ದಂತೆ ಇಷ್ಟು ಜೋರಾಗಿ ಕೆಲಸ ನಡೆದು ಹೋಗಿರುವುದು ತೋಟದಮಾಲೀಕನಿಗೆ ಆಶ್ಚರ್ಯವಾಯಿತು. ನಾಲ್ಕನೆ ದಿನವು ಸಹ ಸೆಂಟು ಜಾಗದಲ್ಲಿ ಗಿಡಗಳು ಕಿತ್ತು ಬಿದ್ದಿವೆ. ಯಾರು ಬಂದಿರುವುದೆಂದು ಅರ್ಥವಾಗಲಿಲ್ಲ, ಸಾಧುವಾದರೆ ಅಲ್ಲವೆಂದೆನಿಸಿತು. ದೂರದಿಂದ ನೋಡುತ್ತಿದ್ದಹಾಗೆ ತೋಟದೊಳಗೆ ಬಂದಿರುವುದು, ಹೋಗಿರುವುದು ನಡೆದುಹೋಗಿದೆಯೆಂದರೆ ಆಶ್ಚರ್ಯವಾಗಿದೆ. ಈ ವಿಷಯವನ್ನೆಲ್ಲಾ ಊರಿನಲ್ಲಿ ಹೇಳಿದನು. ಎಲ್ಲರಿಗು ಒಂದು ಸೋಜಿಗದ ಕಥೆಯಂತೆ ಕಾಣಿಸಿತು. ಐದನೆ ದಿನ ಊರಿನೊಳಗೆ ಐದುಜನ ಸಹ ಬಂದು ಒಂದು ಕಡೆ ಕುಳಿತು ಜಾಗ್ರತೆಯಿಂದ ನೋಡತೊಡಗಿದರು. ಅವರೆಲ್ಲರು ತೋಟದ ಒಂದು ಮೂಲೆಯಲ್ಲಿ ಕುಳಿತುಕೊಂಡಿದ್ದಾರೆ. ಅರ್ಧರಾತ್ರಿ ದಾಟಿತು. ಅವರಿಗೆ ಎದುರಾಗಿ ಇನ್ನೊಂದು ಬದಿಯಿಂದ ಒಬ್ಬ ಮನುಷ್ಯ ಬಂದಂತೆ ಕಾಣಿಸಿತು.

ತಕ್ಷಣವೆ ಎಲ್ಲರು ಕೇಕೆಗಳನ್ನು ಹಾಕುತ್ತಾ ಆಕಡೆ ಹೋದರು. ಆ ಕಡೆ ಹೋಗುವುದರೊಳಗೆ ಬಂದಿರುವ ವ್ಯಕ್ತಿ ಗಿಡಗಳನ್ನು ಕಿತ್ತು ಹೋಗಿದ್ದಾನೆ. ದೂರದಿಂದ ಬಿಳಿಯ ಆಕಾರ ಕಾಣಿಸುತ್ತಿದೆ, ಆದರೆ ಇಂತವನೆ ಮನುಷ್ಯ ಎಂದು ಯಾರಿಗು ಗೊತ್ತಾಗಲಿಲ್ಲ. ಆಕಡೆ ಹೋಗುವುದರೊಳಗೆ ತನ್ನ ಕೆಲಸ ಮುಗಿಸಿಕೊಂಡು ಹೋಗುವುದೆಂದರೆ, ಅದು ಮನುಷ್ಯರಿಂದ ಆಗುವ ಕೆಲಸವಲ್ಲವೆಂದು, ಅದು ದೆವ್ವದ ಕೆಲಸವೇ ಆಗಿರಬಹುದೆಂದು ಕೆಲವರಿಗೆ ಅನುಮಾನ ಬಂದಿತು. ಮರುದಿನ ಈ ವಿಷಯುವೇ ಊರೆಲ್ಲಾ ಚರ್ಚನೀಯಾಂಶವಾಗಿದೆ. ಏನೊ ದೆವ್ವವಂತೆ! ಮೆಣಸಿನಕಾಯಿ ತೋಟವನ್ನು ಪ್ರತಿ ದಿನ ಕಿತ್ತು ಹಾಕುತ್ತದಂತೆ! ಎಂದು ಸ್ವಲ್ಪ ಪ್ರಚಾರವಾಯಿತು, ಯಾವ ದೆವ್ವಗಳು ಹಾಗೆ ಮಾಡುವುದಿಲ್ಲ ಇದೇನೊ ಮನುಷ್ಯರ ಕೆಲಸವೇಯೆಂದು ಕೆಲವರು ಅಂದುಕೊಳ್ಳಲು ಪ್ರಾರಂಭಿಸಿದರು. ಆರನೇ ದಿನ ಆ ವಿಷಯವನ್ನು ಕುರಿತು ತೇಲಿಸಬೇಕೆಂದು ಊರಿನಲ್ಲಿರುವವರಿಗು ಸಹ ಹಠ ಬಂದಿತು. ಆ ದಿನ ನಲವತ್ತು ಜನ ಯುವಕರು ಎಲ್ಲರು ಜೊತೆಯಾಗಿ ಕೋಲುಗಳನ್ನು ತೆಗೆದುಕೊಂಡು ರಾತ್ರಿ ತೋಟದ ಹತ್ತಿರಕ್ಕೆ ಬಂದರು. ನಲವತ್ತು ಜನ ನಾಲ್ಕು ಗುಂಪುಗಳಾಗಿ, ನಾಲ್ಕು ಕಡೆಗಳಲ್ಲಿ ಕಾವಲು ಇರುವಂತೆ ಮಾತನಾಡಿಕೊಂಡರು. ಒಂದು ಗುಂಪಿಗೆ ಹತ್ತು ಜನ ಪ್ರಕಾರ ಭಾಗವಾಗಿ ನಾಲ್ಕು ಕಡೆಗಳಲ್ಲಿ ಸಾವಿರ ಕಣ್ಣುಗಳಿಂದ ನೋಡುತ್ತಿದ್ದಾರೆ. ರಾತ್ರಿ 12 ಗಂಟೆಗಳಾಗಿವೆ. ಒಂದು ಗುಂಪಿನಲ್ಲಿ ಚಿಕ್ಕ ಕಲ್ಲು ಬಿತ್ತು. ಎಲ್ಲಿಯದು ಆ ಕಲ್ಲು ಎಂದು ನೋಡಿಕೊಳ್ಳುವುದರೊಳಗೆ ಮತ್ತೊಂದು ಚಿಕ್ಕ ಕಲ್ಲು ಬಿತ್ತು. ಬಿದ್ದಕಲ್ಲು ಅಡಿಕೆ ಗಾತ್ರಕ್ಕಿಂತ ದಪ್ಪ ಇಲ್ಲ. ನೀನೇನಾದರು ಹಾಕಿದೆಯಾ ಎಂದು ಒಬ್ಬರನ್ನೊಬ್ಬರು ಕೇಳಿಕೊಂಡು ಯಾರು ಹಾಕಲಿಲ್ಲವೆಂದು ನಿರ್ಧಾರಿಸಿಕೊಂಡರು. ಆದರೂ ಚಿಕ್ಕಕಲ್ಲುಗಳು ಯಾವಕಡೆ ಯಿಂದ ಬಿದ್ದಿವೆಯೆಂದು ಆಲೋಚಿಸಿಕೊಂಡರು. ಅಷ್ಟರಲ್ಲಿ ಅವರ ಮುಂದೆ ಇದ್ದ ಚಿಕ್ಕಕಲ್ಲು ನೋಡುತ್ತಿದ್ದಹಾಗೆ ಎಗರಿಬಿತ್ತು. ಎಲ್ಲರು ಆಶ್ಚರ್ಯದಿಂದ ನೋಡುತ್ತಿದ್ದಂತೆ ಒಂದು ಕಲ್ಲಿನ ನಂತರ ಒಂದು ಕೆಳಗಿರುವ ಕಲ್ಲುಗಳು ಎಗರಲು ಪ್ರಾರಂಭಿಸಿದವು. ಅವುಗಳಷ್ಟಕ್ಕವೆ ಮನುಷ್ಯನ ಎತ್ತರಕ್ಕೆ ಎಗರೆಗರಿ ಬೀಳುತ್ತಿದ್ದ

ಆ ಕಲ್ಲುಗಳನ್ನು ನೋಡಿ ಎಲ್ಲರಿಗು ಭಯವಾಯಿತು. ಮನುಷ್ಯರು ಮಾಡುವ ಕೆಲಸವಲ್ಲವೆಂದು ಅರ್ಥವಾಯಿತು. ಕಲ್ಲುಗಳು ಬಿದ್ದಗುಂಪು ಭಯಪಟ್ಟು ಮತ್ತೊಂದು ಗುಂಪಿನ ಹತ್ತಿರಕ್ಕೆ ಹೋದರು. ಅವರ ಹತ್ತಿರ ಸಹ ಆ ವಿಧವಾಗಿ ನಡೆದಿರುವುದನ್ನು ಕೇಳಿ ಆಶ್ಚರ್ಯವಾದರು. ಎಲ್ಲರು ಒಂದು ಕಡೆ ಸೇರಿ ಎಲ್ಲರಿಗು ಅದೇ ರೀತಿ ನಡೆದಿದೆಯೆಂದು ಹೇಳಿಕೊಂಡರು. ಹೀಗೆ ಎಲ್ಲರು ಭಯಪಡುತ್ತಾ ಒಂದು ಕಡೆ ಗುಂಪು ಕೂಡಿ ನೋಡುತ್ತಿದ್ದಹಾಗೆ ತೋಟದಲ್ಲಿ ಒಂದು ಆಕಾರ ಕಾಣಿಸಿತು. ಈ ಸಾರಿ ಯಾರೂ ಆಕಡೆ ಹೋಗಲಿಲ್ಲ. ಯಾರಿಗು ಆಕಡೆ ಹೋಗುವುದಕ್ಕೆ ಧೈರ್ಯ ಸಾಲಲಿಲ್ಲ. ಪ್ರತಿ ದಿನ ನಡೆದಂತೆ ಆ ದಿನವು ಸಹ ನಡೆದಿದೆ, ಗಿಡಗಳು ಕಿತ್ತುಬಿದ್ದಿವೆ. ಆ ಆಕಾರ ಅಲ್ಲಿಂದ ಹೋದಹಾಗೆ ನಿರ್ಧಾರಿಸಿಕೊಂಡ ನಂತರ ಎಲ್ಲರು ತೋಟದೊಳಗೆ ಹೋಗಿ ನೋಡಿ ಗಿಡಗಳು ಆ ದಿನವು ಸಹ ಕಿತ್ತುಹಾಕಿದಂತೆ ತಿಳಿದುಕೊಂಡರು. ಎಲ್ಲರು ಇದೇನು ಸೋಜಿಗ ಎಂದು ಆಲೋಚಿಸುತ್ತಾ ಇರುವಾಗ ನಾರಾಯಣ ರೆಡ್ಡಿ ಎನ್ನುವ ಆತನ ಕತ್ತಿನ ಮೇಲೆ ಕೈಯಿಂದ ಫಳ್ ಎಂದು ಒಡೆದಂತಾಯಿತು. ಒಡೆದ ಶಬ್ದ ಎಲ್ಲರಿಗು ಕೇಳಿಸಿತು. ಏಟುತಿಂದ ನಾರಾಯಣರೆಡ್ಡಿ ಅಬ್ಬಾ ಎಂದು ಜೋರಾಗಿ ಅರಚಿದನು. ಯಾರು ಒಡೆದಿರುವುದೆಂದು ಅರ್ಥವಾಗಲಿಲ್ಲ. ಎಲ್ಲರಿಗು ಭಯವಾಯಿತು. ಅಲ್ಲಿಂದ ಎಲ್ಲರೂ ಊರೊಳಗೆ ಹೋದರು. ಆ ದಿನದಿಂದ ಯಾರು ಆ ತೋಟದಕಡೆಗೆ ಹೋಗಲಿಲ್ಲ. ತೋಟದಲ್ಲಿ ಗಿಡಗಳು ಮಾತ್ರ ಪ್ರತಿದಿನ ಸ್ವಲ್ಪ ಕಿತ್ತು ಬಿದ್ದಿರುತ್ತಿದ್ದವು. ಆ ವಿಧವಾಗಿ ತೋಟದಲ್ಲಿನ ಗಿಡಗಳೆಲ್ಲ ಖಾಲಿಯಾಗಿವೆ. ಎರಡು ಮೆಣಸಿನಕಾಯಿಗಳು, ಅವು ಸಹ ಅನ್ನದೊಂದಿಗೆ ತಿನ್ನಲು ಕಿತ್ತುಕೊಂಡರೆ ಸಾಧುವನ್ನು ಅಷ್ಟೊಂದು ಥಳಿಸಿ, ಕೊನೆಗೆ ಏನು ಮಾಡಲಾಗದೆ ತೋಟದ ಮಾಲೀಕ ತನ್ನ ಎಲ್ಲ ತೋಟವನ್ನು ಕಳೆದುಕೊಂಡನು.

ಇಟಿಕಾಲ ಗ್ರಾಮದ ವ್ಯಕ್ತಿ ಟೆಲಿಫೋನ್ ಡಿಪಾರ್ಟಮೆಂಟ್‌ನಲ್ಲಿ ತಾಡಿಪತ್ರಿಯಲ್ಲಿ ಉದ್ಯೋಗಿಯಾಗಿದ್ದ ನಾರಾಯಣ ರೆಡ್ಡಿಯಿಂದ ಈ ಸಂಘಟನೆಯ ವಿಷಯವೆಲ್ಲಾ ನನಗೆ ತಿಳಿಯಿತು. ನನಗೆ ತಿಳಿಸಿದ ನಾರಾಯಣರೆಡ್ಡಿ

ಘಟನೆ ನಡೆದ ಆ ತೋಟಕ್ಕೆ ಎರಡು ದಿನಗಳು ಕಾವಲಿಗಾಗಿ ಹೋದ ವ್ಯಕ್ತಿ! ಅಲ್ಲಿ ನಡೆದದ್ದನ್ನೆಲ್ಲಾ ಕಣ್ಣಾರೆ ನೋಡಿದ ವ್ಯಕ್ತಿ! ಅಷ್ಟೇ ಅಲ್ಲದೆ ಕೊನೆಯಲ್ಲಿ ಕತ್ತಿನ ಮೇಲೆ ಒಡೆಸಿಕೊಂಡ ವ್ಯಕ್ತಿ ಸಹ ಈತನೆ! 1988ನೇ ವರ್ಷ ನನಗೆ ಈ ಸಂಘಟನೆಯ ಸಮಾಚಾರ ಹೇಳಿದನು. ಅಲ್ಲಿಗೆ ಸುಮಾರು 20 ವರ್ಷಗಳ ಕೆಳಗೆ ನಡೆದಿದೆ ಎಂದು ಹೇಳಿದನು. ಆ ಲೆಕ್ಕ ಪ್ರಕಾರ 1968ನೇ ವರ್ಷದಲ್ಲಿ ನಡೆದಿರಬಹುದು. ಅದರ ಪ್ರಕಾರ ಇಲ್ಲಿಗೆ 42 ವರ್ಷಗಳ ಕೆಳಗೆ ನಡೆದಂತೆ ಅರ್ಥವಾಗುತ್ತಿದೆ. ಈ ಸಂಘಟನೆಯಲ್ಲಿ ಸ್ಥೂಲ ಶರೀರ ಎನ್ನುವ ಮಾತಾಗಲಿ, ಸೂಕ್ಷ್ಮವು ಎನ್ನುವ ಮಾತಾಗಲಿ ಎಲ್ಲಿಯು ಇಲ್ಲ. ಅಲ್ಲಿ ನಡೆದ ವಿಷಯವನ್ನೆಲ್ಲವನ್ನು ನೋಡಿದರೆ ಎಷ್ಟೋ ಪ್ರಶ್ನೆಗಳು ಬರುತ್ತಿವೆ. ಸೂಕ್ಷ್ಮಗಳನ್ನು ಕುರಿತು ಚೆನ್ನಾಗಿ ತಿಳಿದವರು ಎಷ್ಟೋ ಚೆನ್ನಾಗಿ ಯೋಚಿಸಿದರಾಗಲಿ, ಆ ಪ್ರಶ್ನೆಗಳಿಗೆ ಉತ್ತರಗಳು ದೊರಕುವುದಿಲ್ಲ. ಆಗಿರುವಾಗ ಸೂಕ್ಷ್ಮಗಳನ್ನು ಕುರಿತಾಗಲಿ, ಅವುಗಳ ಜೀವನವನ್ನು ಕುರಿತಾಗಲಿ, ಅವುಗಳಲ್ಲಿನ ತರಗತಿಗಳನ್ನು, ಹುದ್ದೆಗಳನ್ನು ಕುರಿತಾಗಲಿ ತಿಳಿಯದವರಿಗೆ ಒಂದು ಪ್ರಶ್ನೆಗು ಸಹ ಉತ್ತರ ದೊರಕುವುದಿಲ್ಲ. ಇಲ್ಲಿ ಕೆಲವರಿಗೆ ಕೆಲವು ಪ್ರಶ್ನೆಗಳಿಗೆ ಉತ್ತರಗಳು ದೊರಕುವುದಿಲ್ಲ. ಇಲ್ಲಿ ಕೆಲವರಿಗೆ ಕೆಲವು ಪ್ರಶ್ನೆಗಳಿಗೆ ಉತ್ತರಗಳು ದೊರಕಿದರೂ, ಸೂಕ್ಷ್ಮಗಳನ್ನು ಕುರಿತು ತಿಳಿದವರಿಗು ಸಹ ಉತ್ತರ ಸಿಗದ ಪ್ರಶ್ನೆ ಒಂದಿದೆ. ಅದೇನೆಂದರೆ! ಕಾಣಿಸದ ಸೂಕ್ಷ್ಮವು ಕಾಣಿಸುವ ಸ್ಥೂಲವನ್ನು ಕದಲಿಸುತ್ತದೆಯೆ? ಇತ್ತ ಆಸ್ತಿಕವಾದಿಗಳಿಗು ಅತ್ತ ನಾಸ್ತಿಕವಾದಿಗಳಿಗು ಮತ್ತು ಹೇತುವಾದಿಗಳಿಗು ದೊರಕದ ಉತ್ತರ ವಾಗಿರುವುದರಿಂದ, ಎಲ್ಲರೂ ಇದನ್ನು ಒಟ್ಟಿನಲ್ಲಿ ಅಸತ್ಯವೆಂದು ಹೇಳುತ್ತಿದ್ದಾರೆ. ತಿಳಿಯದೆ ಅವರು ಅಸತ್ಯವೆಂದರೂ, ಅದು ನಡೆದ ವಾಸ್ತವ ಸಂಘಟನೆಯಾಗಿರು ವುದರಿಂದ, ನಾವು ಎಲ್ಲರಹಾಗೆ ಅಸತ್ಯವೆನ್ನುವುದಕ್ಕೆ ಅವಕಾಶವಿಲ್ಲ. ಅಷ್ಟೇ ಅಲ್ಲದೆ ಇಂತಹ ವಿಧಕ್ಕೆ ಸೇರಿದ ಸಮಾಚಾರ ಮತ್ತೊಂದು ಇದೆ. ನಾವು ನಿವಾಸವಿದ್ದ ತಾಡಿಪತ್ರಿಯಲ್ಲಿಯೆ ನಡೆದ ಈ ಸಂಘಟನೆಯಲ್ಲಿ ಸಹ ಕಾಣಿಸದ ಸೂಕ್ಷ್ಮವು, ಕಾಣಿಸುವ ಸ್ಥೂಲವನ್ನು ಕದಲಿಸುವುದು, ಪಕ್ಕಕ್ಕೆ ಎಳೆದಿರುವುದು ನಡೆದಿದೆ. ಕಾಣಿಸದ ಸೂಕ್ಷ್ಮವು ಕಾಣಿಸುವ ಮೆಣಸಿನಕಾಯಿ ತೋಟವನ್ನು

ಕಿತ್ತ ವಿಧಾನಕ್ಕೆ ಬಲವನ್ನು ಕೈಗೂಡಿಸುವ ತಾಡಿಪತ್ರಿಯಲ್ಲಿ ನಡೆದಿದ್ದನ್ನು ವಿವರಿಸುತ್ತೇವೆ ನೋಡಿರಿ.

ಇಲ್ಲಿಗೆ ಸುಮಾರು 50 ವರ್ಷಗಳ ಪೂರ್ವದಲ್ಲಿ ತಾಡಿಪತ್ರಿಯಲ್ಲಿ ಒಂದು ಬ್ರಾಹ್ಮಣ ಕುಟುಂಬ ಸಾಲಗಳ ಪಾಲಾಗಿ ಹೋಗಿ, ತಾವು ನಿವಾಸವಿದ್ದ ಮನೆಯನ್ನು ಮಾರಿದರು. ಆ ಮನೆಯನ್ನು ಕೊಂಡವರು ಮುಸ್ಲಿಮ್‌ರು. ಮನೆಯನ್ನು ಮಾರಿದ ನಂತರ ಬ್ರಾಹ್ಮಣ ಕುಟುಂಬವು, ಆ ಮನೆಯನ್ನು ಖಾಲಿ ಮಾಡಿ ಹೊರಟು ಹೋಗಿದೆ. ಅವರು ಹೊರಟುಹೋದ ನಂತರ ಒಂದು ಸಂವತ್ಸರದವರೆಗು ಆ ಮನೆ ಖಾಲಿಯಾಗಿಯೇ ಇತ್ತು. ಬಾಡಿಗೆಗೆ ಕೊಡುತ್ತೇವೆಂದು ಹೇಳಿದರೂ ಯಾರು ಆ ಮನೆಗೆ ಬರಲಿಲ್ಲ. ಕೊಂಡವರು ಸಹ ಆ ಮನೆಯೊಳಗೆ ಸೆರಲಿಲ್ಲ. ವರ್ಷ ನೋಡಿದರೂ ಆ ಮನೆಗೆ ಬಾಡಿಗೆಗೆ ಯಾರೂ ಬರಲಿಲ್ಲ. ಕೊನೆಗೆ ಆ ಮನೆಯನ್ನು ಕೊಂಡ ಮುಸ್ಲಿಮ್ ಕುಟುಂಬ ಖಾಲಿ ಮನೆಯೊಳಗೆ ಸೇರಿತು. ಇದೆಲ್ಲಾ ಹೊರಗೆ ತಿಳಿದ ವಿಷಯ. ಇನ್ನು ಹೊರಗಡೆ ತಿಳಿಯದ ವಿಷಯವು ಸಹ ಸ್ವಲ್ಪ ಇದೆ. ಅದೇನೆಂದರೆ! ಆ ಮನೆಯಲ್ಲಿ ಬ್ರಾಹ್ಮಣ ಕುಟುಂಬ ನಿವಾಸ ಮಾಡುತ್ತಿದ್ದಾಗ, ಆ ಕುಟುಂಬಕ್ಕೆ ಸೇರಿದ ಒಬ್ಬ ಬ್ರಾಹ್ಮಣ ಸ್ತ್ರೀ ಅರ್ಧ ಆಯಸ್ಸು ಕಳೆದಿರುವುದಾಗಿ ಅಕಾಲ ಮೃತ್ಯುವನ್ನು ಹೊಂದಿದ್ದಳು. ಅಕಾಲ ಮೃತ್ಯುವನ್ನು ಹೊಂದಿದ ಆಕೆಗೆ, ಸ್ಥೂಲಶರೀರ ಹೋಗಿ ಸೂಕ್ಷ್ಮ ಶರೀರ ಉಳಿದಿತ್ತು. ಆ ಸೂಕ್ಷ್ಮ ಶರೀರದಿಂದಲೆ ಉಳಿದ ಅರ್ಧ ಆಯಸ್ಸು ಕಳೆಯುವವರೆಗು ಜೀವಿಸಿ ಇರಬೇಕು. ಹಾಗೆ ಜೀವಿಸುತ್ತಿದ್ದ ಆಕೆ ಕಾಣಿಸದೆ ಆ ಮನೆಯಲ್ಲಿಯೆ ನಿವಾಸವಿದ್ದಾಳೆ. ಅವರು ಮನೆ ಮಾರುವದಕ್ಕಿಂತ ಮೊದಲೆ ಏಳೆಂಟು ವರ್ಷಗಳಿಂದ, ಸತ್ತುಹೋದ ಬ್ರಾಹ್ಮಣ ಸ್ತ್ರೀ ಸೂಕ್ಷ್ಮ ಶರೀರದಿಂದ ಅಲ್ಲಿಯೆ ಇದ್ದಾಳೆ. ಬ್ರಾಹ್ಮಣರು ತಮ್ಮ ಮನೆಯನ್ನು ಮಾರಿ, ಮನೆಯನ್ನು ಬಿಟ್ಟು ಹೋದರು ಸತ್ತುಹೋದ ಬ್ರಾಹ್ಮಣ ಸ್ತ್ರೀ ಮಾತ್ರ ಮನೆ ಬಿಟ್ಟು ಹೋಗಲಿಲ್ಲ. ಮನೆಯನ್ನು ಮಾರಿದವರು ಆ ಮನೆಯನ್ನು ಅವರೆ ಕಟ್ಟಿಸಿ ಕೊಂಡಿದ್ದರು. ಆ ಮನೆಯಲ್ಲಿ ಸುಮಾರು ನಲವತ್ತು ಸಂವತ್ಸರಗಳು

ಸಂಸಾರ ಮಾಡಿದ್ದರು. ಸತ್ತುಹೋದ ಆಕೆಯು ಸಹ ಚಿಕ್ಕ ವಯಸ್ಸಿನಿಂದ ಆ ಮನೆಯಲ್ಲಿಯೆ ಇದ್ದು, ಆ ಮನೆಯ ಮೇಲೆ ಚೆನ್ನಾಗಿ ಮಮಕಾರ ಬೆಳೆಸಿಕೊಂಡಿರುವುದರಿಂದ ತಮ್ಮವರೆಲ್ಲ ಮನೆಯನ್ನು ಬಿಟ್ಟು ಹೋದರೂ, ತಾನು ಮಾತ್ರ ಈ ಮನೆ ನನ್ನದೆಯೆನ್ನುವ ಉದ್ದೇಶದಿಂದ ಆ ಮನೆಯಲ್ಲಿಯೆ ಇದ್ದಳು. ತಮ್ಮವರು ಪಕ್ಕದ ಬೀದಿಯಲ್ಲಿ ನಿವಾಸವಿದ್ದರೂ ಅಲ್ಲಿಗೆ ಹೋಗಿ ಇರುತ್ತಿರಲಿಲ್ಲ. ಯಾವಾಗಲಾದರು ತಮ್ಮವರನ್ನು ನೋಡುವುದಕ್ಕೆ ಪಕ್ಕದ ಬೀದಿಯೊಳಗೆ ಹೋದರೂ ಸ್ವಲ್ಪಹೊತ್ತಿಗೆ ಮತ್ತೆ ಬಂದು ಮನೆಯಲ್ಲಿಯೆ ಇರುತ್ತಿದ್ದಳು.

ತಮ್ಮವರು ಹೋದ ನಂತರ ಮನೆ ಖಾಲಿಯಾಗಿ ಒಂದು ವರ್ಷ ಇದೆ ಅಲ್ಲವೆ! ಆಗ ಆ ಬ್ರಾಹ್ಮಣ ಸ್ತ್ರೀಗೆ ಎಂತಹ ಕಷ್ಟವಿಲ್ಲದೆ ಒಬ್ಬಳೆ ಆ ಮನೆಯಲ್ಲಿ ಇರುತ್ತಿದ್ದಳು. ಮನೆಯನ್ನು ಕೊಂಡ ಮುಸ್ಲಿಮ್ ಕುಟುಂಬ, ಆ ಮನೆಯೊಳಗೆ ಬಂದ ನಂತರ ಆಕೆಗೆ ಬಹಳ ಕಷ್ಟವಾಗಿರುತ್ತಿತ್ತು. ಶುಚಿ, ಶುಭ್ರತೆಯಿಂದ ಇದ್ದು ಮಾಂಸವನ್ನು ನೋಡಿದರೇನೆ ಸರಿಹೋಗದ ಆಕೆಗೆ, ಆ ಮನೆಯಲ್ಲಿ ಮುಸ್ಲಿಮ್‌ರು ಮಾಂಸವನ್ನು ತಿನ್ನುವುದೂ, ಶುಚಿ, ಶುಭ್ರತೆಯಿಂದ ಇಲ್ಲದಿರುವುದನ್ನು ನೋಡಿ ಅಸಹ್ಯ ಪಟ್ಟುಕೊಳ್ಳುತ್ತಿದ್ದಳು. ಆಮನೆಯಲ್ಲಿ ಸೇರಿಕೊಂಡವರನ್ನು ಓಡಿಸಬೇಕೆಂದುಕೊಳ್ಳುತ್ತಿದ್ದಳು. ಆ ಮನೆಯಲ್ಲಿದ್ದ ಮುಸ್ಲಿಮ್‌ರನ್ನು ನೋಡಿದರೆ ಆಕೆಗೆ ಕೋಪ ಬರುತ್ತಿತ್ತು. ಆದರೂ ಅವರನ್ನು ಏನು ಮಾಡದೆ, ಖಾಲಿಯಾಗಿರುವ ಒಂದು ರೂಮಿನಲ್ಲಿದ್ದು ಕಾಲಕಳೆಯುತ್ತಿದ್ದಳು. ಅಮಾವಾಸ್ಯೆ, ಹುಣ್ಣಿಮೆ ದಿನಗಳಲ್ಲಿ ಸೂಕ್ಷ್ಮ ಶರೀರದಿಂದಿರುವವರಿಗೆ ಬಲ ಹೆಚ್ಚಾಗಿರುತ್ತದೆ, ಆ ದಿನಗಳು ಸೂಕ್ಷ್ಮಗಳಿಗೆ ಅನುಕೂಲವಾದ ದಿನಗಳು. ಆದ್ದರಿಂದ ಅಮಾವಾಸ್ಯೆ, ಹುಣ್ಣಿಮೆ ದಿನಗಳಲ್ಲಿ ರಾತ್ರಿಹೊತ್ತು ಎಲ್ಲರು ಮಲಗಿಕೊಂಡ ನಂತರ ತನ್ನ ರೂಮಿನಿಂದ ಹೊರಗೆ ಬಂದು, ಮಲಗಿರುವ ಚಿಕ್ಕ ಮಕ್ಕಳನ್ನು ಮಾತ್ರ ಮುಟ್ಟಿಕೊಂಡು, ಮಲಗಿದ್ದ ಜಾಗದಲ್ಲಿ ಅಲ್ಲದೆ ಸ್ವಲ್ಪ ದೂರದಲ್ಲಿ ತೆಗೆದುಕೊಂಡು ಹೋಗಿ ಇರಿಸುತ್ತಿದ್ದಳು. ಬ್ರಾಹ್ಮಣ ಸ್ತ್ರೀಗೆ ಚಿಕ್ಕ ಮಕ್ಕಳ ಮೇಲೆ

ಹೆಚ್ಚಿನ ಪ್ರೀತಿ. ಆದ್ದರಿಂದ ಮಕ್ಕಳನ್ನು ಮಾತ್ರ ಮುಟ್ಟಿಕೊಳ್ಳುತ್ತಿದಳು, ಆದರೆ ದೊಡ್ಡವರನ್ನು ಮುಟ್ಟುತ್ತಿರಲಿಲ್ಲ. ಆಕೆ ಸಾಯುವ ಮೊದಲಿನಿಂದಲು ಮೃದು ಸ್ವಭಾವವಿರುವ ಮನುಷ್ಯಳು. ಆದ್ದರಿಂದ ಆ ಮನೆಯವರಿಗೆ ಯಾವ ಹಾನಿಯು ಮಾಡುತ್ತಿರಲಿಲ್ಲ.

ಅಮಾವಾಸ್ಯೆ ದಿನವಾಗಲಿ, ಹುಣ್ಣಿಮೆ ದಿನವಾಗಲಿ, ರಾತ್ರಿ ಹೊತ್ತು ಚಿಕ್ಕಮಕ್ಕಳನ್ನು ಮಲಗಿಕೊಂಡ ಜಾಗದಲ್ಲಿ ಬಿಡದೆ, ಜಾಗಗಳನ್ನು ಬದಲಾಯಿಸಿ ಮಲಗಿಸುತ್ತಿದ್ದಳು. ಬೆಳಗಾದ ನಂತರ ದೊಡ್ಡವರು ತಮ್ಮ ಮಕ್ಕಳನ್ನು ನೋಡಿ ನನ್ನ ಹತ್ತಿರ ಮಲಗಿಕೊಂಡವನು ಅಲ್ಲಿಗೆ ಹೇಗೆ ಹೋಗಿದ್ದಾನೆ? ಎಂದು ಅಂದುಕೊಳ್ಳುತ್ತಿದ್ದರು. ಹಾಗೆ ಪ್ರತಿದಿನ ನಡೆಯುತ್ತಿರಲಿಲ್ಲ, ಹದಿನೈದು ದಿನಗಳಿಗೊಮ್ಮೆ ನಡೆಯುವುದರಿಂದ ಮಕ್ಕಳು ನಿದ್ರೆಯಲ್ಲಿ ಉರುಳುತ್ತಾ ಹೋಗಿದ್ದಾರೇನೊ ಎಂದು ಅಂದುಕೊಳ್ಳುತ್ತಿದ್ದರು. ಅವರು ಹಾಗೆ ಮಲಗುವ ಜಾಗ ಬದಲಾಗುವುದರ ಮೇಲೆ ದೊಡ್ಡದಾಗಿ ಅನುಮಾನ ಬರಲಿಲ್ಲ. ಆ ಮನೆಯಲ್ಲಿ ಇಬ್ಬರು ಮಕ್ಕಳು ಮಾತ್ರ ಇರುತ್ತಿದ್ದರು. ಅದರಲ್ಲಿ ಒಬ್ಬರಿಗೆ ಮೂರು ವರ್ಷಗಳ ವಯಸ್ಸು, ಮತ್ತೊಬ್ಬರಿಗೆ ಐದು ವರ್ಷಗಳ ವಯಸ್ಸು ಇತ್ತು, ಹಾಲ್ ಮಧ್ಯೆದಲ್ಲಿ ದೊಡ್ಡವರಪಕ್ಕದಲ್ಲಿ ಮಲಗಿದ್ದ ಮಕ್ಕಳು, ಹಾಲ್ ಕೊನೆಯಲ್ಲಿ ಇರುವುದರಿಂದ ದೊಡ್ಡವರಿಗೆ ಅನುಮಾನವೆ ಬರಲಿಲ್ಲ. ಅದೂ ನಿತ್ಯವು ನಡೆಯುತ್ತಿದ್ದಿದ್ದರೆ ಸ್ವಲ್ಪ ಅನುಮಾನ ಬರುತ್ತಿತ್ತು. ಯಾವಾಗಲೊ ಹದಿನೈದು ದಿನಗಳಿಗೊಮ್ಮೆ ಆಗುವುದರಿಂದ ಆ ವಿಷಯ ನೆನಪಿಗೆ ಬರಲಿಲ್ಲ. ಹೀಗೆ ಸುಮಾರು ಆರು ಅಥವಾ ಏಳು ತಿಂಗಳುಗಳು ಕಳೆದಿವೆ. ಜನವರಿ ತಿಂಗಳು ಕಳೆಯುತ್ತಿದ್ದ ಕಾಲದಲ್ಲಿ ಚಳಿ ಹೆಚ್ಚಾಗಿರುತ್ತಿತ್ತು. ಆ ತಿಂಗಳಲ್ಲಿ ಹುಣ್ಣಿಮೆ ದಿನದಂದು ಸ್ವಲ್ಪ ವಿಚಿತ್ರ ನಡೆಯಿತು, ಅದೇನೆಂದರೆ!

ಹಾಲ್‌ನಲ್ಲಿ ಮಲಗಿಕೊಂಡ ಮೂರು ವರ್ಷಗಳ ಹುಡುಗನನ್ನು ತೆಗೆದುಕೊಂಡು ಹೋಗಿ, ಅಡುಗೆ ರೂಮಿನಲ್ಲಿ ಒಲೆಯ ಪಕ್ಕದಲ್ಲಿ ಮಲಗಿಸಿದ್ದಳು. ಹಾಲ್‌ನಲ್ಲಿ ಚಳಿ ಹೆಚ್ಚಾಗಿದೆ, ಒಲೆಯ ಬಿಸಿಗೆ ಅಡುಗೆರೂಮಿನಲ್ಲಿ ಚಳಿ ಕಡಿಮೆ

ಇರುವುದರಿಂದ. ಹುಡುಗನನ್ನು ಒಲೆಯ ಹತ್ತಿರ ಮಲಗಿಸಿದ್ದಳು. ಆ ದಿನ ಬೆಳಗಾದ ನಂತರ, ಆ ಮನೆಯವರು ನೋಡಿಕೊಂಡು ಮೂರು ಸಂವತ್ಸರಗಳ ಹುಡುಗನು ಒಂಟಿಯಾಗಿ, ಅಡುಗೆ ರೂಮಿನೊಳಗೆ ಏಕೆ ಹೋಗಿದ್ದಾನೆ? ಅಲ್ಲಿಯೆ ಏಕೆ ಮಲಗಿದ್ದಾನೆ? ಎಂದು ಅನುಮಾನ ಬಂದಿತು. ಅಂದಿನಿಂದ ನಿಘಾಇಟ್ಟು ಗಮನಿಸತೊಡಗಿದರು. ಪ್ರತಿ ಹುಣ್ಣಿಮೆ, ಅಮಾವಾಸ್ಯಗೆ ಹಾಗೆ ನಡೆಯುತ್ತದೆಂದು ಸ್ವಲ್ಪ ಅರ್ಥವಾಯಿತು. ಆ ವಿಷಯ ಅವರಿಗೆ ಅರ್ಥವಾಗದೆ ಯಾರಿಗಾದರೂ ತಿಳಿದವರನ್ನು ಕೇಳಬೇಕೆಂದುಕೊಂಡರು. ಆ ವಿಷಯವನ್ನು ಕುರಿತು ಭೂತವೈದ್ಯರ ಬಳಿಗೆ ಹೋಗಿ ಕೇಳಿದರು. ಆ ಭೂತ ವೈದ್ಯರಿಗೆ ಏನು ಅರ್ಥವಾಗದೆ, ಕೊನೆಗೆ ಒಂದು ತಾಯತವನ್ನು ಕೊಟ್ಟು ಮನೆಯ ಬಾಗಲಿಗೆ ಕಟ್ಟಿಕೊಳ್ಳಿರೆಂದು ಹೇಳಿದರು. ಅವರು ಹಾಗೆ ಮಾಡಿದರು. ಅವರು ಹಾಗೆ ತಾಯತವನ್ನು ತೆಗೆದುಕೊಂಡು ಬಂದು ಬಾಗಿಲಹತ್ತಿರ ಕಟ್ಟಿರುವುದರಿಂದ ಆ ಬ್ರಾಹ್ಮಣ ಸ್ತ್ರೀಗೆ ಕೋಪ ಬಂದಿತು. ನನ್ನ ಮನೆಗೆ ತಾಯತಗಳನ್ನು ಕಟ್ಟುತ್ತೀರಾ? ಎಂದು ಕೋಪಿಸಿಕೊಂಡ ಆಕೆ, ಆ ಮನೆಯಿಂದ ಅವರನ್ನು ಬೇಗ ಹೊರಡಿಸಬೇಕೆಂದುಕೊಂಡಳು. ಆಗಿನಿಂದ ಪ್ರತಿರಾತ್ರಿ ಎಲ್ಲರೂ ಚೆನ್ನಾಗಿ ನಿದ್ರೆಹೋದ ಸಮಯದಲ್ಲಿ, ಮನೆಯಲ್ಲಿನ ಪಾತ್ರೆಗಳನ್ನು ಕೆಳಗೆ ಬೀಳಿಸುತ್ತಿದ್ದಳು. ಹಾಗೆ ಪಾತ್ರೆ ಬೀಳುವುದರಿಂದ ಬರುವ ಶಬ್ದಕ್ಕೆ ಅವರು ಎದ್ದು ನೋಡುತ್ತಿದ್ದರು. ಅಡುಗೆರೂಮಿನೊಳಗಿನ ಪಾತ್ರೆ ಹಾಲ್‌ನಲ್ಲಿ ಅವರು ಮಲಗಿರುವ ಜಾಗಕ್ಕೆ ಹೇಗೆ ಬಂದಿತು? ಅಲ್ಲಿಗೆ ಎಲ್ಲಿಂದ ಬಂದು ಬಿದ್ದಿದೆ? ಅರ್ಥವಾಗದೆ ಇದೇನೊ ದೆವ್ವಗಳ ಕೆಲಸವೆಂದು ಅಂದುಕೊಂಡರು. ಪ್ರತಿದಿನ ರಾತ್ರಿಹೊತ್ತು ಏನೋ ಒಂದು ಶಬ್ದ ಬರುತ್ತಿತ್ತು. ಅಷ್ಟೇ ಅಲ್ಲದೆ ಅಮಾವಾಸ್ಯೆ ಹುಣ್ಣಿಮೆ ದಿನಗಳಲ್ಲಿ ಮಕ್ಕಳ ಜಾಗ ಬದಲಾವಣೆ ಆಗುತ್ತಿತ್ತು.

ಆ ಮನೆಯಲ್ಲಿ ಮುಸ್ಲಿಮ್ ಕುಟುಂಬದಲ್ಲಿ ಒಬ್ಬ ವೃದ್ದಳು ಇರುತ್ತಿದ್ದಳು. ಆಕೆ ಒಳ್ಳೆಯ ಧೈರ್ಯವಿರುವ ಮನುಷ್ಯಳು, ದೆವ್ವಗಳನ್ನು ಕುರಿತು ಹೇಳಿದರೂ ಭಯಪಡುತ್ತಿರಲಿಲ್ಲ. ಒಂದು ಅಮಾವಾಸ್ಯೆಯ ದಿನ, ಎಲ್ಲರೂ ಮಲಗಿಕೊಂಡು

ನಿದ್ರೆಹೋದರು ಆ ಮುದುಕಿ ಮಲಗಲಿಲ್ಲ, ನಿದ್ರೆಹೋಗಲಿಲ್ಲ. ಆ ದಿನ ರಾತ್ರಿ ಏನು ನಡೆಯುತ್ತದೊ ನೋಡಬೇಕೆಂದುಕೊಂಡಳು. ಹಾಗೆ ಎಚ್ಚರವಾಗಿದ್ದ ಆಕೆಗೆ, ಅರ್ಧರಾತ್ರಿನಂತರ ಸ್ವಲ್ಪಸ್ವಲ್ಪ ನಿದ್ರೆ ಬರುವ ಸಮಯದಲ್ಲಿ ಐದು ವರ್ಷಗಳ ಹುಡುಗನು ಸ್ವಲ್ಪ ಕದಲಿದಂತೆ ಕಾಣಿಸಿತು. ತಕ್ಷಣವೆ ಬರುವ ನಿದ್ರೆಯಿಂದ ಎಚ್ಚರಗೊಂಡು, ನಿಘಾದಿಂದ ಆ ಹುಡುಗನ ಕಡೆಗೆ ನೋಡಿದಳು. ಆಗ ಹುಡುಗನ ಕಾಲುಗಳನ್ನು ಹಿಡಿದುಕೊಂಡು ಯಾರೋ ಎಳೆದಂತೆ ಜರುಗುತ್ತಾ ಹೋಗುವುದನ್ನು ನೋಡಿದಳು. ಆ ವೃದ್ಧಳು ನೋಡುತ್ತಿದ್ದಂತೆ, ಆ ಹುಡುಗನು ಮೂರು ಅಡಿಗಳ ದೂರದಲ್ಲಿದ್ದನು. ತಕ್ಷಣವೆ ವೃದ್ಧಳು ಹುಡುಗನು ಜರುಗಿಹೋಗದಂತೆ ಅವನ ಕೈಗಳನ್ನು ಹಿಡಿದುಕೊಂಡಳು. ಆದರೂ ಹುಡುಗನು ಅರ್ಧಅಡಿ ಯಾರೊ ಬಲವಾಗಿ ಎಳೆದಂತೆ ಜರುಗಿದ್ದನು. ಹಾಗೆ ಜರುಗಿದ್ದ ಹುಡುಗನನ್ನು ವೃದ್ಧಳು ಹಿಂದಕ್ಕೆ ಎಳೆದುಕೊಂಡಳು. ಯಾರೊ ಕಾಣಿಸದಂತೆ ಎಳೆಯುತ್ತಿದ್ದಾರೆಂದು ಆ ಮುದುಕಿಗೆ ಅರ್ಥವಾಯಿತು. ತಕ್ಷಣವೆ ಜೋರಾಗಿ ಅರಚಿಕೊಂಡು ಪಕ್ಕದವರನ್ನು ಎಚ್ಚರಿಸಿದಳು. ಎಲ್ಲರೂ ನಿದ್ರೆಯಿಂದ ಎದ್ದು, ಏನು ನಡೆದಿದೆಯೆಂದು ಕೇಳಿದರು. ಆಗ ಆ ವೃದ್ಧಳು ಹುಡುಗನು ಜರುಗುತ್ತಾ ಹೋಗುವುದನ್ನು ನೋಡಿದೆನೆಂದು ಹುಡುಗನನ್ನು ಹಿಡಿದುಕೊಂಡೆನೆಂದು, ಆದರೂ ಯಾರೊ ಎಳೆದಂತಾಯಿತೆಂದು ವಿಷಯವೆಲ್ಲ ಹೇಳಿದಳು. ಆ ಮಾತುಗಳು ಕೇಳಿದ ಎಲ್ಲರು ಭಯಪಟ್ಟರು. ಇದಕ್ಕಿಂತ ಮೊದಲು ಸಹ ಮಕ್ಕಳು ಪಕ್ಕದರೂಮಿನಲ್ಲಿ ಮಲಗಿರುವುದನ್ನು, ರಾತ್ರಿಹೊತ್ತು ಪಾತ್ರೆಗಳು ಬೀಳುವುದು ಎಲ್ಲ ಯಾವುದೊ ದೆವ್ವ ಮಾಡುವ ಕೆಲಸವೆಂದು ಅವರಿಗೆ ಚೆನ್ನಾಗಿ ಅರ್ಥವಾಯಿತು. ಆ ಸಂಘಟನೆಯಿಂದ ಅವರು ಮನೆ ಬಿಟ್ಟು ಹೋಗಬೇಕೆಂದುಕೊಂಡರು. ಹತ್ತು ದಿನಗಳ ಒಳಗೆ ಮನೆ ಬಿಟ್ಟು ಹೋದರು. ಆ ಮುಸ್ಲಿಮ್ ಕುಟುಂಬ ತನ್ನ ಮನೆಯನ್ನು ಬಿಟ್ಟು ಹೋಗುವುದರಿಂದ ಅಲ್ಲಿದ್ದ ಬ್ರಾಹ್ಮಣ ಸ್ತ್ರೀಗೆ ಸಂತೋಷವಾಯಿತು.

ಆಗಿನಿಂದ ಸುಮಾರು ವರ್ಷದವರೆಗು ಆ ಮನೆಯಲ್ಲಿ ಯಾರು ಸೇರಲಿಲ್ಲ. ಸಂಸಾರದಿಂದ ಇರುವವರು ಆ ಮನೆಯಲ್ಲಿ ಇರಬೇಕೆಂದರೆ ಭಯಪಟ್ಟು ಯಾರು ಬರಲಿಲ್ಲ. ಕೊನೆಗೆ ಆ ಮನೆಯ ಯಜಮಾನರಾದ ಮುಸ್ಲಿಮ್‌ರು ಹಗಲು ಮಾತ್ರವಿದ್ದು, ರಾತ್ರಿಹೊತ್ತು ಬಾಗಿಲುಗಳು ಮುಚ್ಚಿಕೊಂಡು ಹೋಗುವಂತೆ ಒಂದು ಹೋಟಲ್‌ನ್ನು ಆ ಮನೆಯಲ್ಲಿ ಇಡಬೇಕೆಂದುಕೊಂಡರು. ಆ ಮನೆ ರಸ್ತೆಯ ಪಕ್ಕದಲ್ಲಿ ಇರುವುದರಿಂದ ಹೋಟಲ್‌ಗೆ ಅನುಕೂಲ ವಾಗಿರುತ್ತದೆ. ಅದೂ ಹಗಲು ಹೊತ್ತಿನಲ್ಲಿ ಮಾತ್ರ ಎಂದು ಧೈರ್ಯವಾಗಿ, ಆ ಮುಸ್ಲಿಮ್ ಕುಟುಂಬದವರು ಹೋಟಲ್‌ನ್ನು ಪ್ರಾರಂಭಿಸಿದರು. ಮನೆಯ ಮುಂದೆ ಬಯಲಿನಲ್ಲಿ ಸೀಟುಗಳ ಷೆಡ್ಡುಹಾಕಿ, ಅದರಲ್ಲಿ ಕುರ್ಚಿಗಳು, ಬೆಂಚುಗಳು ಇಟ್ಟು ಒಳಗಿನ ಮನೆಯನ್ನು ಅಡುಗೆಗೆ, ತರಕಾರಿಗಳು ಮೊದಲಾದ ವಸ್ತುಗಳನ್ನು ಇಟ್ಟುಕೊಳ್ಳುವುದಕ್ಕೆ ಬಳಸಿಕೊಳ್ಳಲು ನಿರ್ಣಯಿಸಿಕೊಂಡರು. ಅವರು ಶಾಖಾಹಾರ ಹೋಟಲ್ ಅಲ್ಲದೆ ಮಾಂಸಾಹಾರ ಮಿಲಿಟರಿ ಹೋಟಲ್ ಇಟ್ಟಿದರು, 'ಮದಾರ್ ಹೋಟಲ್' ಎನ್ನುವ ಹೆಸರಿನಿಂದ ಪ್ರಾರಂಭಿಸಿ ಪ್ರತಿ ದಿನ ಆ ಮನೆಯಲ್ಲಿ ಮಾಂಸವನ್ನು ತಂದಿಡುವುದು, ಮಾಂಸಹಾರದ ಅಡುಗೆಗಳನ್ನು ಮಾಡುವುದರಿಂದ, ಆ ಮನೆಯಲ್ಲಿದ್ದ ಬ್ರಾಹ್ಮಣ ಸ್ತ್ರೀಗೆ ದಿನದಿನವು ಗಂಡಾಂತರವಾಗಿದೆ. ಅವೆಲ್ಲವನ್ನು ನೋಡಲಾರದೆ ಆಕೆ ಅಲ್ಲಿಂದ ಬಿಟ್ಟುಹೋದಳು. ಇಂದಿಗೂ ಆ ಮನೆಯ ಹತ್ತಿರವೆ ಮದಾರ್ ಹೋಟಲ್ ಇದೆಯೆಂದು ಕೆಲವರು ಹೇಳುತ್ತಿದ್ದಾರೆ. ಈಗ ಹೇಳಿರುವುದೆಲ್ಲಾ ರಾಮ್‌ಗೋಪಾಲ್‌ವರ್ಮ ಸಿನಿಮಾ ಕಥೆಯಲ್ಲ, ನಿಜವಾಗಿ ಗತಕಾಲದಲ್ಲಿ ನಡೆದ ವಿಷಯ.

ಇದರಲ್ಲಿ ಗಮನಿಸಬೇಕಾದ ವಿಷಯವೇನೆಂದರೆ, ಸೂಕ್ಷ್ಮವಾಗಿ ಕಾಣಿಸದಂತೆ ಇದ್ದ ಬ್ರಾಹ್ಮಣ ಸ್ತ್ರೀ, ಸ್ಥೂಲವಾಗಿ ಕಾಣಿಸುವ ಹುಡುಗನನ್ನು ಎಳೆದುಕೊಂಡು ಹೋಗಿರುವುದು ನಡೆದಿದೆ. ಇದೇ ರೀತಿ ಮೊದಲು ಹೇಳಿದ ಇಟಿಕಾಲ ತೋಟದ ಸಮಾಚಾರದಲ್ಲಿಯು ಸಹ ಕಾಣಿಸದ ಸೂಕ್ಷ್ಮವು ಕಾಣಿಸುವ

ಮೆಣಸಿನಕಾಯಿಗಿಡಗಳನ್ನು ಕಿತ್ತುಹಾಕಿದೆ. ಈ ಎರಡು ಸಂಘಟನೆಗಳನ್ನು ಅನುಸರಿಸಿ ನೋಡಿದರೆ ಸೂಕ್ಷ್ಮಗಳು, ಸ್ಥೂಲಗಳನ್ನು ಸಹ ಕದಲಿಸುತ್ತವೆಂದು, ಅಷ್ಟೇ ಅಲ್ಲದೆ ಏನಾದರೂ ಮಾಡುತ್ತವೆಂದು ಅರ್ಥವಾಯಿತು. ಒಂದು ರೈಲ್ವೆಸ್ಟೇಷನ್‌ನಲ್ಲಿ ನಿಂತಿದ್ದ ರೈಲು ಇಂಜನ್‌ನಲ್ಲಿ ಡ್ರೈವರ್ ಇಲ್ಲದೆ ಇಳಿದು ಹೋದಾಗ ಡ್ರೈವರ್ ಇಲ್ಲದಂತೆ ರೈಲು ಅರವತ್ತು ಕಿಲೋಮೀಟರುಗಳ ವೇಗದಿಂದ ಮುಂದಿನ ಸ್ಟೇಷನ್‌ಗೆ ಹೋಗಿರುವುದು ನಡೆದಂತೆ ನ್ಯೂಸ್ ಪೇಪರ್‌ನಲ್ಲಿ ನೋಡಿದೆನು. ಹಾಗೆ ರೈಲು ನಡೆದಿರುವುದಕ್ಕೆ ಕಾರಣ ಸೂಕ್ಷ್ಮದ ಕೆಲಸವೇ ಎಂದು ಅರ್ಥವಾಯಿತು. ಇವುಗಳೆಲ್ಲ ಆಧಾರದಿಂದ ಒಂದು ಸೂಕ್ಷ್ಮವು ಮತ್ತೊಂದು ಸ್ಥೂಲವನ್ನು ಏನಾದರು ಮಾಡಬಲ್ಲದು. ಆದ್ದರಿಂದ ಸೂಕ್ಷ್ಮವು ಶರೀರದೊಳಗೆ ಸೇರಬೇಕಾದ ಕೆಲಸವಿಲ್ಲದೆ, ಹೊರಗಿನಿಂದ ಸಹ ಏನಾದರು ಮಾಡಬಹುದೆಂದು ಅರ್ಥವಾಗಿದೆ. ಹಾಗೆಂದು ಪ್ರತಿ ಸೂಕ್ಷ್ಮವು ಹಾಗೆ ಮಾಡುವುದಕ್ಕೆ ಅವಕಾಶವಿಲ್ಲ. ಏಕೆಂದರೆ ಜಾತಕಚಕ್ರದಲ್ಲಿ ಬುಧಗ್ರಹದವೊಂದರ ಬಲ ಸಂಪೂರ್ಣವಾಗಿ ಇರುವ ಸೂಕ್ಷ್ಮಗಳಿಗೆ ಮಾತ್ರ ಹಾಗೆ ಮಾಡುವುದಕ್ಕೆ ಶಕ್ತಿಯಿರುತ್ತದೆ. ಅಕಾಲಮೃತ್ಯುವನ್ನು ಹೊಂದಿದವರು, ಸೂಕ್ಷ್ಮ ಶರೀರದಿಂದ ಸ್ವಲ್ಪಕಾಲ ಅವರ ಆಯಸ್ಸು ಮುಗಿದುಹೋಗುವವರೆಗು ಜೀವಿಸಬೇಕಾಗಿರುತ್ತದೆ. ಮರಣಾನಂತರ ಜನ್ಮಕ್ಕೆ ಹೋಗದೆ ಜೀವಿಸುವ ಜೀವನಕಾಲ, ಕೆಲವರಿಗೆ ಸುಖವಾಗಿ ಕಳೆದು ಹೋಗುವುದು, ಕೆಲವರಿಗೆ ಕಷ್ಟವಾಗಿ ಕಳೆದುಹೋಗುವುದು ನಡೆಯುತ್ತಿದೆ. ಮನುಷ್ಯ ಶರೀರದಿಂದ ಜೀವಿಸುವಾಗಲೆ ಅಲ್ಲದೆ, ಶರೀರ ಇಲ್ಲದೆ ಜೀವಿಸುವಾಗಲು ಸಹ ಕಷ್ಟ ಸುಖಗಳು ಇವೆಯೆಂದು, ಪಾಪಪುಣ್ಯಗಳು ಜಾರಿಗೆ ಬರುವುದು, ಸಂಪಾದಿಸಿಕೊಳ್ಳುವುದು ಎರಡೂ ಇವೆಯೆಂದು ತಿಳಿಯುತ್ತಿದೆ. ಮರಣಾನಂತರ ಜೀವನಕ್ಕು ಸಹ ಬುಧಗ್ರಹ ಬಲ ಮತ್ತು ಇತರೆ ಗ್ರಹಗಳ ಬಲವು ಸಹ ಅಗತ್ಯ. ಹಾಗೆ ದ್ವಾದಶ ಗ್ರಹಗಳ ಬಲಾಬಲಗಳನ್ನು ಅನುಸರಿಸಿ, ದೆವ್ವಗಳ ಭವಿಷ್ಯತ್ತು, ವರ್ತಮಾನ ಇರುತ್ತದೆ. ಆದ್ದರಿಂದ ದೆವ್ವಗಳು ಇಲ್ಲ ಎನ್ನದಂತೆ, ಆ ಸ್ಥಾನದ ಜೀವನಗಳನ್ನು ಕುರಿತು ತಿಳಿದುಕೊಂಡು, ಅಂತಹ

ಜೀವನ ಬಂದರೆ, ಅದಕ್ಕೆ ಸಂಬಂಧಿಸಿದ ಪಾಪಪುಣ್ಯಗಳನ್ನು, ಸುಖಃ ದುಃಖ ಗಳನ್ನು ತಿಳಿದು ಬದುಕುವುದಕ್ಕೆ ಪ್ರಯತ್ನಿಸಬೇಕು.

ಭೌತಿಕಶಾಸ್ತ್ರ ಎಂದರೆ ಏನೊ ನನಗಿಂತ ಸೈನ್ಸ್ ಓದಿದವರಿಗೆ, ಭೌತಿಕಶಾಸ್ತ್ರಜ್ಞರಿಗೆ, ಡಾಕ್ಟರುವೃತ್ತಿ ಕಲಿತವರಿಗೆ ಚೆನ್ನಾಗಿ ತಿಳಿದಿರುತ್ತದೆ. ಶರೀರದಲ್ಲಿ ನಡೆಯುವ ಪ್ರತಿ ಚಿಕ್ಕ ವ್ಯತ್ಯಾಸವನ್ನು ಭೌತಿಕಶಾಸ್ತ್ರವು ತಿಳಿಸುತ್ತಿದೆ. ಶರೀರದಲ್ಲಿನ ಅಣುಅಣುವಿನವೊಂದು ವಿಷಯವನ್ನು ಸಂಪೂರ್ಣವಾಗಿ ವಿವರಿಸುವುದು ಭೌತಿಕಶಾಸ್ತ್ರ. ಅದನ್ನು ಓದಿದವರಿಗೆ ಶರೀರವನ್ನು ಕುರಿತ ಸಂಪೂರ್ಣ ಜ್ಞಾನವಿರುತ್ತದೆ. ಶರೀರದಲ್ಲಿನ ಕೋಟಿ ಧಾತುಗಳಲ್ಲಿ ಪ್ರತಿ ಧಾತುವನ್ನು ಕುರಿತು ವಿವರಿಸಿ ಹೇಳುವ ಜ್ಞಾನವನ್ನು ಕೆಲವರು ಹೇತುವಾದಿಗಳು ಹೊಂದಿದ್ದಾರೆ. ಅಷ್ಟೆಲ್ಲಾ ತಿಳಿದ ಅವರು, ಭೌತಿಕ ಶರೀರದಲ್ಲಿ ತಮಗೆ ತಿಳಿಯದಿರುವುದು ಇಲ್ಲವೆಂದು ಹೇಳುತ್ತಿರುತ್ತಾರೆ. ಆದರೆ ನಾನೇನನ್ನುತ್ತಿದ್ದೇನೆಂದರೆ! ಪ್ರತಿ ಪ್ರಶ್ನೆಗು ಉತ್ತರವಿದ್ದಾಗಲೆ ಅವನನ್ನು ಸಂಪೂರ್ಣವಾಗಿ ತಿಳಿದವನೆಂದು ಹೇಳಬಹುದು. ಯಾರ ಹತ್ತಿರ ಪ್ರಶ್ನೆಗೆ ಉತ್ತರ ಇಲ್ಲವೊ ಅವನನ್ನು ತಿಳಿಯದವನೆಂದೆ ಹೇಳಬಹುದು. ಈ ಸೂತ್ರಗಳು ಯಾವ ಶಾಸ್ತ್ರಕ್ಕಾದರು ಅನ್ವಯಿಸುತ್ತವೆ. ಭೌತಿಕಶಾಸ್ತ್ರವನ್ನು ತಿಳಿದ ಒಬ್ಬ ಶಾಸ್ತ್ರಜ್ಞನಿಗೆ ಶರೀರದಲ್ಲಿನ ಒಂದು ಪ್ರಶ್ನೆಗೆ ಉತ್ತರ ತಿಳಿಯದಿರುವಾಗ ಆತನನ್ನು ಶಾಸ್ತ್ರಜ್ಞ ಎನ್ನುವುದಕ್ಕೆ ಅರ್ಹನಲ್ಲ. ಹಾಗೆ ಒಬ್ಬ ಮೆಡಿಕಲ್ ಪ್ರೊಫೆಸರ್‌ಗೆ ಒಂದು ರೋಗವನ್ನು ಕುರಿತಾದ ಪ್ರಶ್ನೆಗೆ ಉತ್ತರ ತಿಳಿಯದಿರುವಾಗ ಆತನನ್ನು ಪ್ರೊಫೆಸರ್ ಎನ್ನಬಾರದು. ಹಾಗೆ ಒಂದು ರೋಗವನ್ನು ಕುರಿತು ತಿಳಿಯದಿರುವಾಗ, ಆತನನ್ನು ಡಾಕ್ಟರೆಂದು ಕರೆಯಬಾರದು. ಆದರೂ ಒಬ್ಬ ಶಾಸ್ತ್ರಜ್ಞ ಎಂದು ಹೆಸರು ಇಟ್ಟುಕೊಂಡವನಿಗೆ ಆ ಶಾಸ್ತ್ರವನ್ನು ಕುರಿತು ಪೂರ್ತಿ ಅವಗಾಹನೆ ಇಲ್ಲ ಎನ್ನುವುದಕ್ಕೆ ಎಷ್ಟೋ ನಿದರ್ಶನಗಳು ಇವೆ. ಶಾಸ್ತ್ರ ಎಂದರೆ ಶಾಸನಗಳಿಂದ ಕೂಡಿಕೊಂಡಿರುವುದೆಂದು ಅರ್ಥ. ಉದಾಹರಣೆಗೆ ನೂರು ಶಾಸನಗಳು ಒಂದು ಶಾಸ್ತ್ರದಲ್ಲಿ ಇವೆಯೆಂದುಕೊಳ್ಳೋಣ. ಅದರಲ್ಲಿ ಐವತ್ತು ಶಾಸನಗಳು ತಿಳಿದವನನ್ನು, ಎಪ್ಪತ್ತು ಶಾಸನಗಳು ತಿಳಿದವನನ್ನು

ಸಂಪೂರ್ಣ ಶಾಸ್ತ್ರಜ್ಞ ಎಂದು ಹೇಳಬಾರದು. ಆದರೆ ಈ ಕಾಲದಲ್ಲಿ ಯಾವ ಶಾಸ್ತ್ರದಲ್ಲಾದರೂ ಸಂಪೂರ್ಣವಾಗಿ ತಿಳಿದವರು ಇಲ್ಲ ಎನ್ನುವುದಕ್ಕೆ ನಿದರ್ಶನಗಳಿವೆ. ಅವು ಹೇಗಿವೆಯೊ ವಿವರಿಸಿಕೊಂಡು ನೋಡೋಣ. ನಡೆದ ಸಂಘಟನೆಗಳಲ್ಲಿನ ಆಧಾರಗಳನ್ನು ತಿಳಿದುಕೊಳ್ಳೋಣ.

ಅನಂತಪುರ ಶ್ರೀಕೃಷ್ಣದೇವರಾಯ ಯೂನಿವರ್ಸಿಟಿಯಲ್ಲಿ ಕೆಲಸ ಮಾಡುವ ಒಬ್ಬ ಪ್ರೊಫೆಸರ್‌ಗೆ ಕೆಲವು ದಿನಗಳಿಂದ, ಆತನ ಶರೀರದಲ್ಲಿ ಒಂದು ನೋವು ಬರುತ್ತಿತ್ತು. ಅದು ಬಲಗಡೆ ಉಸಿರಾಟ ಚೀಲದ ಕೆಳಗಿನ ಭಾಗದ ಪಕ್ಕದ ಮೂಳೆಗಳಲ್ಲಿ ನೋವು ಬರುತ್ತಿತ್ತು. ಆ ನೋವು ಯಾವಾಗಲು ಇರದೆ, ಆಗಾಗ ತಿಂಗಳಿಗೊಂದುಬಾರಿ, ಒಂದೂವರೆ ತಿಂಗಳಿಗೊಂದುಬಾರಿ ಬರುತ್ತಿತ್ತು. ಬಂದಾಗ ಅರ್ಧಗಂಟೆ, ಗಂಟೆಕಾಲ ಇದ್ದು ಹೋಗುತ್ತಿತ್ತು, ಆ ನೋವು ಬಂದಾಗ ವಿಪರೀತವಾಗಿ ಬಾಧೆ ಇರುತ್ತಿತ್ತು. ಆ ನೋವನ್ನು ಇಲ್ಲದಂತೆ ಮಾಡಿಕೊಳ್ಳುವುದಕ್ಕೆ ಡಾಕ್ಟರುಗಳ ಬಳಿ ತೋರಿಸಿಕೊಂಡು ಟ್ರೀಟ್‌ಮೆಂಟ್ ತೆಗೆದುಕೊಂಡಿರುವುದು ನಡೆದಿದೆ. ಆದರೂ ಆ ನೋವು ಆಗಾಗ ಬರುತ್ತಲೆ ಇರುತ್ತಿತ್ತು. ಒಂದು ದಿನ ಆ ಪ್ರೊಫೆಸರ್ ತನ್ನ ನೋವನ್ನು ಕುರಿತು ಹೇಳಿದನು. ವರ್ಷದಿಂದ ಔಷಧಗಳನ್ನು ತೆಗೆದುಕೊಂಡರೂ, ಗುಣವಾಗಲಿಲ್ಲವೆಂದು ಹೇಳಿದನು. ನೋವು ಬಂದಾಗ ಔಷಧವನ್ನು ಕುಡಿದರೂ ನೋವು ಕಡಿಮೆ ಆಗಲಿಲ್ಲವೆಂದು ಹೇಳಿದನು. ಆತನು ಹೇಳಿದ್ದನ್ನೆಲ್ಲಾ ಕೇಳಿದ ನಾನು, ಆತನನ್ನು ನನಗೆ ಎದುರಾಗಿ ಒಂದು ಗಜ ದೂರದಲ್ಲಿ ಕುಳಿತುಕೊಳ್ಳಲು ಹೇಳಿದೆನು. ಆತನು ನನ್ನ ಮುಂದೆ ಕುಳಿತುಕೊಂಡ ನಂತರ ಈಗ ಏನಾದರೂ ನೋವಿದೆಯಾ ಎಂದು ಕೇಳಿದೆನು. ಈಗ ಇಲ್ಲ ಎಂದನು. ಆದರೆ ಈಗ ಬರುತ್ತದೆ ನೋಡು ಎಂದು ನಾನು ಆತನಿಗೆ ಹೇಳಿ ನಂತರ ಹೀಗೆ ಹೇಳಿದೆನು. "ನನಗೆ ಎದುರುಗಡೆ ಕುಳಿತಿರುವ ಮನುಷ್ಯನಲ್ಲಿ ಆಗಾಗ ಪಕ್ಕೆಯಲ್ಲಿ ಬರುವ ನೋವು ಈಗಲೆ ಬರಬೇಕು". ಆ ಮಾತು ಪೂರ್ತಿಮುಗಿದ ತಕ್ಷಣವೆ ಅರ್ಧ ನಿಮಿಷದಲ್ಲಿಯೆ ಆತನಿಗೆ ಪಕ್ಕೆಯಲ್ಲಿ ನೋವು ಬಂದಿತು. "ನೋವು ಬಂದಿದೆ, ಬಹಳ ವಿಪರೀತವಾಗಿ ನೋವಿದೆ" ಎಂದು

ಪ್ರೊಫೆಸರ್ ಹೇಳಿದನು. ಆತನ ಶರೀರದಲ್ಲಿ ಯಾವಾಗಲೊ ತನಗಿಷ್ಟಬಂದಾಗ ಬರುವ ನೋವು ಕರೆದ ತಕ್ಷಣವೆ ಬಂದಿತು. ಬಂದ ಕೂಡಲೇ ಆತನು ಸಹ ಹೇಳಿದನು. ಎದುರುಗಡೆ ಆತನು ಎಷ್ಟು ನೋವುಪಡುತ್ತಿದ್ದಾನೆಂದು ನನಗೂ ತಿಳಿಯುತ್ತಿದೆ. ಅದು ವಿಪರೀತವಾದ ನೋವೆಂದೇ ಅರ್ಥವಾಯಿತು. ಆಗ ಎರಡನೆಬಾರಿ ಹೀಗೆ ಹೇಳಿದೆನು. "ಈತನ ಶರೀರದಲ್ಲಿರುವ ನೋವಿಗೆ ನಾನು ಹೇಳುತ್ತಿದ್ದೇನೆ, ಈತನ ಶರೀರದಲ್ಲಿ ನೋವು ಇಲ್ಲದೆ ಹೊರಗೆ ಹೋಗಬೇಕು" ಎಂದು ಹೇಳುತ್ತಿದ್ದಹಾಗೆ ಒಂದು ನಿಮಿಷದಲ್ಲಿಯೆ ಆತನ ನೋವು ಕಾಣಿಸದಂತೆ ಹೋಯಿತು. ಆಗ ಆ ಪ್ರೊಫೆಸರ್ ಹೀಗೆ ಹೇಳಿದನು. "ನೀವು ಹೊರಗೆ ಹೋಗೆಂದು ಹೇಳುತ್ತಿದ್ದಂತೆ ಒಳಗಿರುವ ನೋವನ್ನು ಕೊಕ್ಕೆಹಾಕಿ ಒಳಗಿನಿಂದ ಎಳೆದಂತಾಯಿತು. ಬಲವಂತವಾಗಿ ಎಳೆದಾಗ ಬರುವಂತಹ ನೋವು ಬಂದಂತಾಯಿತು. ಯಾವಾಗಲೊ ಬರುವ ನೋವು ಕರೆಯುತ್ತಿದ್ದಹಾಗೆ ಬಂದಿರುವುದು, ಹೋಗೆಂದು ಹೇಳುತ್ತಿದ್ದಹಾಗೆ ಹೋಗಿರುವುದು ಬಹಳ ವಿಚಿತ್ರವಾಗಿದೆ. ಇಂತಹ ಅನುಭವ ನಾನು ಎಲ್ಲಿಯು ನೋಡಲಿಲ್ಲ. ಹೊಟ್ಟೆ ಒಳಗೆ ಕೊಕ್ಕೆಹಾಕಿ ಎಳೆದಂತಾಯಿತು. ನೋವು ಹೊರಗೆ ಬಂದಿರುವ ಅನುಭೂತಿ ಹೊಂದಿದ ತಕ್ಷಣವೆ ಪಕ್ಕೆ ಹೊಟ್ಟೆಯಲ್ಲಿ ಸ್ವಲ್ಪವಾದರೂ ನೋವು ಇಲ್ಲದಂತೆ ಹೋಯಿತು. ಔಷಧ ಕೊಡದೆ, ಮಂತ್ರ ಹೇಳದೆ, ಕೇವಲ ಬಾಯಿ ಮಾತಿನಿಂದ ನೋವನ್ನು ಇಲ್ಲದಂತೆ ಮಾಡಿರುವುದು ಅದನ್ನು ಶಾಸಿಸಿದಂತಾಗಿದೆ".

ಆತನ ಮಾತುಗಳನ್ನು ಕೇಳಿದ ನಾನು ಆತನಿಗೆ ಹೀಗೆ ಹೇಳಿದೆನು. ಒಂದು ರೋಗವನ್ನು ಕಳೆಯುವುದಕ್ಕೆ ಮೂರು ವಿಧಗಳ ಪದ್ಧತಿಗಳಿವೆ. ಅವುಗಳಲ್ಲಿ ಒಂದು ಪದ್ಧತಿಯಲ್ಲಿ ಔಷಧಗಳನ್ನು ಬಳಸುವುದರಿಂದ ರೋಗವನ್ನು ಇಲ್ಲದಂತೆ ಮಾಡಬಹುದು. ಎರಡನೆ ಪದ್ಧತಿಯಲ್ಲಿ ಮಂತ್ರಗಳಿಂದ ರೋಗವನ್ನು ಇಲ್ಲದಂತೆ ಮಾಡಬಹುದು. ಮೂರನೆ ಪದ್ಧತಿಯಲ್ಲಿ ಔಷಧಗಳಾಗಲಿ, ಮಂತ್ರಗಳಾಗಲಿ ಇರುವುದಿಲ್ಲ. ಈ ಪದ್ಧತಿಯಲ್ಲಿ ಕೇವಲ ಅಧಿಕಾರ ಪೂರ್ವಕವಾಗಿ ಹೇಳುವುದರಿಂದ ರೋಗವನ್ನು ಇಲ್ಲದಂತೆ ಮಾಡಬಹುದು. ಈ ಪದ್ಧತಿಯಲ್ಲಿಯೇ ಪೋತುಲೂರು ವೀರಬ್ರಹ್ಮಯ್ಯನವರು, ಯೇಸುಪ್ರಭು, ಶ್ರೀಕೃಷ್ಣನು

ಮೊದಲಾದವರು ರೋಗಗಳನ್ನು ಶಾಸಿಸಿದಹಾಗೆ ತಿಳಿಯುತ್ತಿದೆ. ಇವುಗಳಲ್ಲಿ ಮೊದಲನೆಯದಾದ ಔಷಧಗಳು ಬಳಸುವುದು ಎನ್ನುವ ವೈದ್ಯವನ್ನು ಓದಿ ಕಲಿತುಕೊಳ್ಳುತ್ತಾರೆ. ಎರಡನೆ ವೈದ್ಯವಾದ ಮಂತ್ರಗಳನ್ನು ಸಾಧನೆ ಮಾಡಿ ಕಲಿತುಕೊಳ್ಳಬಹುದು. ಇನ್ನು ಮೂರನೆಯದಾದ ವೈದ್ಯವನ್ನು ಜ್ಞಾನಶ್ರದ್ಧೆಯಿಂದ ಸಾಧಿಸಬಹುದು. ಈ ಕಾಲದಲ್ಲಿ ಮೊದಲನೆ ವಿಧದ ವೈದ್ಯ ಎಲ್ಲಿ ನೋಡಿದರೂ ಇದೆ. ಎರಡನೆ ವಿಧದ ವೈದ್ಯ ಬಹಳ ಅಪರೂಪವಾಗಿ ಕೆಲವು ಪ್ರಾಂತಗಳಲ್ಲಿ ಮಾತ್ರ ಕಾಣಿಸಬಹುದು. ಇನ್ನು ಮೂರನೆ ವಿಧವಾದ ಜ್ಞಾನಶಕ್ತಿಯಿಂದ ಶಾಸಿಸುವ ವೈದ್ಯವು, ಭೂಮಿಮೇಲೆ ಅಪರೂಪವಾಗಿಯು ಸಹ ಎಲ್ಲಿಯು ಕಾಣಿಸುವುದಿಲ್ಲ.

ಭೂಮಿಮೇಲೆ ಎಷ್ಟೋ ವಿಧಗಳ ರೋಗಗಳು ಇವೆ. ಕೆಲವು ವಿಧಗಳ ರೋಗಗಳು, ಮೊದಲ ವೈದ್ಯದ ಔಷಧಗಳಿಂದ ಕಾಣಿಸದಂತೆ ಹೋಗುತ್ತವೆ. ಇನ್ನು ಕೆಲವು ರೋಗಗಳು ಮೊದಲ ವೈದ್ಯವಾದ ಔಷಧಗಳಿಂದ ಹೋಗುವುದಿಲ್ಲ. ಅವುಗಳಿಗೆ ಎರಡನೆ ವಿಧವಾದ ಮಂತ್ರಗಳ ವೈದ್ಯ ಅಗತ್ಯ. ಆ ರೋಗಗಳು ಮಂತ್ರ ವೈದ್ಯದಿಂದಲೆ ಹೋಗುತ್ತವೆ. ಇನ್ನು ಮೊದಲ ವೈದ್ಯಕ್ಕಾಗಲಿ, ಎರಡನೆ ವೈದ್ಯಕ್ಕಾಗಲಿ ಬಗ್ಗದ ರೋಗಗಳಿವೆ. ಅವುಗಳನ್ನು ತಪ್ಪದೆ ಅನುಭವಿಸಬೇಕಾದ್ದೇ. ಎರಡು ವಿಧಗಳ ವೈದ್ಯಕ್ಕೆ ಗುಣವಾಗದ ರೋಗಗಳು ಮೂರನೆ ವೈದ್ಯಕ್ಕೆ ಹೋಗುತ್ತವೆ. ಮೂರನೆ ವೈದ್ಯ ಮಾಡುವವರು ಯಾರೂ ಇಲ್ಲ. ಒಂದು ವೇಳೆ ಎಲ್ಲಾದರೂ ಇದ್ದರೂ, ಅವರು ಇತರರಿಗೆ ವೈದ್ಯ ಮಾಡುವ ಉದ್ದೇಶ ಅವರಿಗಿರುವುದಿಲ್ಲ. ಅಂತಹವರಿಗೆ ಜ್ಞಾನ ಪ್ರಚಾರವೇ ಮುಖ್ಯ ಉದ್ದೇಶವಾಗಿರುತ್ತದೆ. ಜ್ಞಾನ ಪ್ರಚಾರದಲ್ಲಿ ಅವಶ್ಯಕತೆ ಇರುವಾಗ ಮಾತ್ರವೆ ಜ್ಞಾನಶಕ್ತಿಯ ವೊಂದು ಸಾಮರ್ಥ್ಯವನ್ನು ತಿಳಿಸುವ ನಿಮಿತ್ತ, ಎಲ್ಲಾದರು ಅಪರೂಪವಾಗಿ ಅವರ ವೈದ್ಯ ಸಂಭವಿಸಬಹುದು. ಈ ವಿಧವಾಗಿ ಮೂರು ವೈದ್ಯಗಳು ಭೂಮಿ ಮೇಲೆ ಇವೆ.

ಈಗ ನಾನು ಮಾಡಿರುವುದು ಯಾವ ವಿಧದ ವೈದ್ಯವೊ ನಿನಗೆ ಅರ್ಥವಾಗಿರುತ್ತದೆ. ಒಬ್ಬ ಮನುಷ್ಯನಿಗೆ ಯಾವ ವಿಧದ ವೈದ್ಯವು ಅವಶ್ಯಕತೆಯೊ,

ಮೊದಲ ಎರಡು ವಿಧಗಳ ವೈದ್ಯರಿಗೆ ತಿಳಿಯದು. ಆದ್ದರಿಂದ ಮಂತ್ರಗಳಿಂದ ಹೋಗುವ ರೋಗಗಳಿಗೆ ಕೆಲವರು ವೈದ್ಯರು ಔಷಧಗಳನ್ನು ಬಳಸುತ್ತಾರೆ. ಹಾಗೆ ಎಷ್ಟುಕಾಲ ವೈದ್ಯ ಮಾಡಿದರೂ ಆ ರೋಗ ಹೋಗುವುದಿಲ್ಲ. ಹಾಗೆ ಔಷಧಗಳಿಂದ ಹೋಗುವ ರೋಗಗಳನ್ನು ತಿಳಿಯದೆ ಕೆಲವರು ಮಾಂತ್ರಿಕರು ಮಂತ್ರ ವೈದ್ಯವನ್ನು ಮಾಡುತ್ತಿರುತ್ತಾರೆ. ಹಾಗೆ ಎಷ್ಟು ಕಾಲ ಮಂತ್ರವೈದ್ಯವನ್ನು ಮಾಡಿದರೂ ಅವನ ರೋಗ ಹೋಗುವುದಿಲ್ಲ. ಈ ವಿಧವಾಗಿ ಔಷಧಗಳ ವೈದ್ಯರು, ಮಂತ್ರಗಳ ವೈದ್ಯರು ಇಬ್ಬರು ಯಾವ ರೋಗಕ್ಕೆ ಯಾವ ವೈದ್ಯ ಅವಶ್ಯವೊ ತಿಳಿಯದೆ ತಪ್ಪು ಮಾಡುತ್ತಿದ್ದಾರೆ. ವೈದ್ಯರ ತಪ್ಪಿಗೆ ರೋಗಿಗಳು ನಷ್ಟ ಹೋಗುತ್ತಾರೆ. ಇಲ್ಲಿಯವರೆಗು ನಿನಗಿದ್ದ ರೋಗಕ್ಕೆ ಮೊದಲ ಎರಡು ವೈದ್ಯಗಳು ಕೆಲಸಕ್ಕೆ ಬರುವುದಿಲ್ಲ. ಆದ್ದರಿಂದ ನೀನು ಎಷ್ಟು ಔಷಧಗಳನ್ನು ಬಳಸಿದರೂ, ನಿನಗಿದ್ದ ನೋವು ಸ್ವಲ್ಪವಾದರೂ ಹೋಗಲಿಲ್ಲ. ಈಗಿನ ಕಾಲದಲ್ಲಿ ಮಂತ್ರವೈದ್ಯರು ಅಪರೂಪವಾಗಿದ್ದಾರೆ. ಆದ್ದರಿಂದ ಅವರ ಬಳಿಗೆ ರೋಗಿಗಳು ಹೋಗುವುದು ಸಹ ಕಡಿಮೆ. ಅಲ್ಲೋಪತಿ ಔಷಧಗಳು ಬಳಸುವ ವೈದ್ಯರು ಎಲ್ಲಿ ನೋಡಿದರೂ ಇದ್ದಾರೆ. ಅವರ ಬಳಿಯಲ್ಲಿಯೇ ಹೆಚ್ಚಿನ ಜನ ರೋಗಿಗಳು ರೋಗಗಳು ಹೋಗುವ ವೈದ್ಯ ವಿಧಾನ ತಿಳಿಯದೆ ನಷ್ಟ ಹೋಗುತ್ತಿದ್ದಾರೆ. ಔಷಧಗಳ ವೈದ್ಯವನ್ನು ತಿಳಿದ ಡಾಕ್ಟರುಗಳ ಬಳಿ ರೋಗಿಗಳು ಹೇಗೆ ನಷ್ಟ ಹೋಗುತ್ತಿದ್ದಾರೊ, ರೋಗ ಗುಣವಾಗದೆ ಹೇಗೆ ನೋವುಪಡುತ್ತಿದ್ದಾರೊ ಮತ್ತು ಡಾಕ್ಟರುಗಳು ರೋಗವನ್ನು ಗುರುತಿಸದೆ ಹೇಗೆ ಮೋಸಹೋಗುತ್ತಿದ್ದಾರೊ, ವಿವರವಾಗಿ ಅರ್ಥವಾಗುವುದಕ್ಕೆ ಮತ್ತೊಂದು ಸಂಘಟನೆಯನ್ನು ತಿಳಿಸುತ್ತೇವೆ ನೋಡಿ.

ತಾಡಿಪತ್ರಿ ಹೋಬಳಿ ಚಿನ್ನಪೊಡಮಲ ಗ್ರಾಮದಲ್ಲಿ ನಿವಾಸವಿರುವ ಕ್ಷೌರಿಕ ವೆಂಕಟೇಶನಿಗೆ, ಅನಂತಪುರ ಪ್ರೊಫೆಸರ್‌ಗೆ ಬಂದಹಾಗೆ ಪಕ್ಕೆ ನೋವು ಬಂದಿದೆ. ಆತನು ಆ ನೋವಿಗೆ ಸಹಿಸಿಕೊಳ್ಳಲಾಗದೇ ಹೋಗಿದ್ದಾನೆ. ಪ್ರೊಫೆಸರ್‌ಗೆ ಅರ್ಧಗಂಟೆ ಕಾಲ ನೋವು ಇದ್ದು ಹೋಗುತ್ತಿತ್ತು. ಆದರೆ ವೆಂಕಟೇಶನಿಗೆ

ಹಾಗೆ ಹೋಗದೆ ಏಕಧಾಟಿಯಾಗಿ ಹಾಗೇ ಇದೆ. ವೆಂಕಟೇಶ ಅನಂತಪುರದಲ್ಲಿನ ಡಾಕ್ಟರುಗಳ ಬಳಿ ಹೋಗಿ ತೋರಿಸಿಕೊಂಡಿದ್ದಾನೆ. ಅವರು ಎಲ್ಲಾ ಟೆಸ್ಟುಗಳು ಮಾಡಿ, ಇದು ಇಂತದ್ದೆ ರೋಗವೆಂದು ನಿರ್ಧಾರ ಮಾಡಲಾಗದೆ ಹೋದರು. ಆತನನ್ನು ಇಬ್ಬರು, ಮೂವರು ಸೀನಿಯರ್ ಡಾಕ್ಟರುಗಳು ನೋಡಿ ಔಷಧಗಳನ್ನು ಬಳಸಿದರೂ ಆತನ ನೋವು ಕಡಿಮೆಯಾಗಲಿಲ್ಲ. ಬೆಳಗ್ಗೆ ಬಂದ ನೋವು ಸಾಯಂಕಾಲದ ವರೆಗು ಹೋಗಲಿಲ್ಲ. ಅವರು ಔಷಧಗಳನ್ನು ಕೊಟ್ಟು ಇಷ್ಟೊತ್ತಿಗೆ ನೋವು ಹೋಗಿರುತ್ತದಲ್ಲ ಎಂದು ಕೇಳಿದರು. ಇಲ್ಲ ಹೋಗಿಲ್ಲ ಹಾಗೇ ಇದೆ ಎಂದು ರೋಗಿ ಹೇಳಿದರೆ ಡಾಕ್ಟರುಗಳು ಆತನ ಮಾತು ನಂಬಲಿಲ್ಲ. ಅಷ್ಟರೊಳಗೆ ನೋವು ಇದ್ದ ಪಕ್ಕದ ಚರ್ಮದ ಮೇಲೆ ರೂಪಾಯಿಅಗಲದಷ್ಟು ಬೊಬ್ಬೆಗಳು ಹುಟ್ಟಿವೆ. ಅವುಗಳನ್ನು ನೋಡಿದ ಡಾಕ್ಟರುಗಳು ರೋಗಿಗೆ ನೋವು ಕಡಿಮೆಯಾಗಿಲ್ಲವೆಂದು ತಿಳಿದುಕೊಂಡರು. ಆ ನೋವು ಏಕೆ ಬಂದಿದೆಯೊ, ಚರ್ಮದ ಮೇಲೆ ಬೊಬ್ಬೆಗಳು ಏಕೆ ಬಂದಿವೆಯೊ ಡಾಕ್ಟರುಗಳಿಗೆ ಅರ್ಥವಾಗಲಿಲ್ಲ. ವೆಂಕಟೇಶ ನೋವನ್ನು ಸಹಿಸಲಾಗದೆ ಆ ನೋವಿನಿಂದಲೆ ಸಾಯುತ್ತೇನೆಂದು ಅಂದುಕೊಂಡನು. ಡಾಕ್ಟರುಗಳು ಎಮ್.ಆರ್.ಐ ಸ್ಕ್ಯಾನಿಂಗ್ ಮಾಡುತ್ತೇವೆ ಐದು ಸಾವಿರ ಖರ್ಚಾಗುತ್ತದೆಂದು ಹೇಳಿದರು. ಪೇಷೆಂಟ್ ಹತ್ತಿರವಿರುವ ಐದು ಸಾವಿರ ಅಷ್ಟೊತ್ತಿಗೆ ಮುಗಿದುಹೋಗಿವೆ. ಇನ್ನು ಹಣ ಇಲ್ಲ. ಆದ್ದರಿಂದ ನಾಳೆ ಹಣ ತೆಗೆದುಕೊಂಡು ಬರುತ್ತೇವೆಂದು ಹೇಳಿ ಮನೆಗೆ ಬಂದರು. ರಾತ್ರಿಯೆಲ್ಲಾ ನೋವನ್ನು ಅನುಭವಿಸಿದ ವೆಂಕಟೇಶ ಕೃಷ್ಣಮಂದಿರಕ್ಕೆ ಬಂದು ಅಲ್ಲಿದ್ದ ನನ್ನೊಂದಿಗೆ ವಿಷಯವನ್ನು ಹೇಳಿಕೊಂಡನು. ಇನ್ನು ಹಣ ಖರ್ಚು ಮಾಡುವುದು ಆತನ ಶಕ್ತಿಗೆ ಮೀರಿದ ಕೆಲಸ. ಆತನು ಮೊದಲಿನಿಂದ ಪರಿಚಯವಿದ್ದ ಮನುಷ್ಯ, ನನ್ನ ಬಳಿ ವಿನಯ, ವಿಧೇಯತೆಗಳಿಂದ ನಡೆದುಕೊಳ್ಳುವ ಮನುಷ್ಯನಾದ್ದರಿಂದ ಆತನ ರೋಗ ಏನೆಂದು ತಿಳಿಯುವುದಕ್ಕೆ ನೋವಿರುವ ಜಾಗವನ್ನು ತೋರಿಸೆಂದು ಹೇಳಿದಾಗ ಆತನು ತೋರಿಸಿದನು. ಚರ್ಮದ ಮೇಲೆ ಬೊಬ್ಬೆಗಳು ಸಹ ಬಂದಿರುವುದನ್ನು ಗಮನಿಸಿದೆನು. ನಂತರ ಇದು ಔಷಧಗಳಿಂದಲೊ, ಮಂತ್ರಗಳಿಂದಲೊ ಹೋಗುವ ರೋಗವಲ್ಲವೆಂದು

ತಿಳಿಯಿತು. ಆಗ ಕೈಗೋಲನ್ನು ತೆಗೆದುಕೊಂಡು ನೋವಿರುವ ಜಾಗದಲ್ಲಿಟ್ಟು ಆತನಿಗಿರುವ ನೋವನ್ನು ಕುರಿತು ಕೇಳಿದೆನು ಕೋಲನ್ನು ಇಟ್ಟಿದ ತಕ್ಷಣವೆ ಕಡಿಮೆಯಾಗಿದೆಯೆಂದು ಹೇಳಿದನು. ಆತನು ನನ್ನ ಬಳಿಗೆ ಬಂದಾಗ ನಡೆಯಲಾರದ ಸ್ಥಿತಿಯಲ್ಲಿ ಕಷ್ಟವಾಗಿ ನಡೆಯುತ್ತಾ ಬಂದಿದ್ದನು. ಆತನು ನೋವಿಲ್ಲವೆಂದು ಹೇಳಿದ ನಂತರ ಸ್ವಲ್ಪ ನಡೆಯಬೇಕೆಂದು ಹೇಳಿದೆನು. ಆತನು ಸುಲಭವಾಗಿ ನಡೆದಾಡಿದನು. ಪಕ್ಕದಲ್ಲೆ ಇದ್ದ ನಾಲ್ಕು ಮೆಟ್ಟಲುಗಳನ್ನು ಹತ್ತಿ ಕೆಳಗೆ ದೂಕೆಂದೆನು. ಹಾಗೆ ಎರಡು ಬಾರಿ ದುಮುಕಿದನು ಆಗ ಸ್ವಲ್ಪ ನೋವು ಬಂದಂತೆ ಹೇಳಿದನು. ನಂತರ ಕೈ ಕೋಲನ್ನು ನೋವು ಇರುವ ಜಾಗದಲ್ಲಿಟ್ಟು ಕೇಳಿದಾಗ, ನೋವು ಇಲ್ಲವೆಂದು ಹೇಳಿದನು. ನಂತರ ಮೇಲಕ್ಕೆ ಹತ್ತಿ ದುಮುಕಿದರೂ ನೋವು ಬರಲಿಲ್ಲ. ಅಲ್ಲಿಗೆ ಆ ನೋವು ಹೋಗಿದೆ. ಮೂರನೆ ವಿಧದ ವೈದ್ಯವು ಆತನಿಗೆ ನಡೆಯಿತು. ಈ ವೈದ್ಯವಿಲ್ಲದೆ ಮೊದಲ ಎರಡು ವಿಧಗಳ ವೈದ್ಯಗಳು ಆ ನೋವನ್ನು ಹೋಗಲಾಡಿಸುವುದಿಲ್ಲ.

ಅನಂತಪುರದಲ್ಲಿನ ಒಬ್ಬ ಡಾಕ್ಟರ್‌ಗೆ, ಆ ನೋವು ಅರ್ಥವಾಗದೆ ಆತನಿಗಿಂತ ಸೀನಿಯರ್ ಬಳಿಗೆ ಕಳುಹಿಸಿದನು. ಆತನು ಔಷಧಗಳನ್ನು ಕೊಟ್ಟರೂ ಕಡಿಮೆಯಾಗದಿರುವುದಕ್ಕೆ ಇನ್ನೊಬ್ಬ ಡಾಕ್ಟರನ್ನು ಸಹ ಸಲಹೆ ಕೇಳಿ ವೈದ್ಯ ಮಾಡಿದರೂ ನೋವು ಹೋಗಲಿಲ್ಲ. ಇದನ್ನು ಅನುಸರಿಸಿ ನೋಡಿದಾಗ ಅವರಿಗೆ ಆ ರೋಗದವೊಂದು ಕಾರಣವೆ ತಿಳಿಯಲಿಲ್ಲವೆಂದು ತಿಳಿಯುತ್ತಿದೆ. ನಂತರ ಸ್ವಲ್ಪ ಅವಗಾಹನೆಯಿಂದ ಔಷಧಗಳನ್ನು ಕೊಟ್ಟರೂ ಅವು ಕೆಲಸ ಮಾಡಲಿಲ್ಲ. ಆಗಲಾದರು ಆ ರೋಗಕ್ಕೆ ತಮ್ಮ ವೈದ್ಯ ವಿಧಾನ ಸರಿಹೋಗುವುದಿಲ್ಲವೆಂದು ಅವರಿಗೆ ಅರ್ಥವಾಗಲಿಲ್ಲ. ಒಂದು ವೇಳೆ ನಮ್ಮ ಔಷಧಗಳು ಕೆಲಸ ಮಾಡಲಿಲ್ಲವೆಂದು ತಿಳಿದರೂ, ಇನ್ನೂ ದೊಡ್ಡ ಡಾಕ್ಟರುಗಳ ಬಳಿಗೆ, ದೊಡ್ಡ ಆಸ್ಪತ್ರೆಗೆ ಹೋಗೆನ್ನುವರು. ಆದರೆ ಈ ವೈದ್ಯವಿಧಾನ ಸರಿಹೋಗುವುದಿಲ್ಲ, ಮತ್ತೊಂದು ವೈದ್ಯ ವಿಧಾನವಾದ ಮಂತ್ರವೈದ್ಯವನ್ನು ಮಾಡಿಸೆಂದು ಹೇಳುವುದಿಲ್ಲ. ಯಾರಾದರು ರೋಗಿ, ಔಷಧಗಳು ಕೆಲಸ ಮಾಡಲಿಲ್ಲವೆಂದು ಮಂತ್ರಗಳನ್ನಾಶ್ರಯಿ

ಸಿದರೆ, ಅವನನ್ನು ತಿಳಿವಳಿಕೆ ಇಲ್ಲದವನಂತೆ ಜಮುಕಟ್ಟಿ ಹೀನವಾಗಿ ಮಾತನಾಡುತ್ತಾರೆ. ವೈದ್ಯ ವಿಧಾನ ಬದಲಾಯಿಸುವುದು ಒಳ್ಳೆಯದೆಂದು ಯಾವ ಡಾಕ್ಟರುಗಳು ಅಂದುಕೊಳ್ಳುವುದಿಲ್ಲ.

ಇಲ್ಲಿ ಎಲ್ಲರಿಗು ಒಂದು ಪ್ರಶ್ನೆ ಬರಬಹುದು. ಅದು ಏನೆಂದರೆ! ಈ ಗ್ರಂಥದಲ್ಲಿ ನೀವು ಹೇಳಬೇಕಾಗಿರುವುದು ದೆವ್ವಗಳನ್ನು ಕುರಿತ ಸಂಘಟನೆಗಳು ಅಲ್ಲವೆ! ಈಗ ಹೇಳಿದ ಪ್ರೊಫೆಸರ್ ವಿಷಯದಲ್ಲಾಗಲಿ, ವೆಂಕಟೇಶ್ ವಿಷಯದಲ್ಲಾಗಲಿ, ರೋಗವನ್ನು, ವೈದ್ಯವನ್ನು ಕುರಿತು ಹೇಳಿದ್ದೀರ ಆದರೆ ಸೂಕ್ಷ್ಮಗಳನ್ನು ಕುರಿತು ಏನು ಹೇಳಲಿಲ್ಲವಲ್ಲ! ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಈ ವಿಷಯಗಳಲ್ಲಿ ವೈದ್ಯರು, ವೈದ್ಯ ವಿಧಾನಗಳನ್ನು ಕುರಿತು ಹೇಳಿದ್ದೇನೆ. ಆದರೆ ರೋಗಗಳನ್ನು ಕುರಿತು ಹೇಳಬೇಕಾಗಿರುವುದು ಇನ್ನೂ ಇದೆ. ಈಗ ಹೇಳುವ ಸಮಾಚಾರದಲ್ಲಿ, ನೀವು ಕೇಳಿರುವುದಕ್ಕೆ ಉತ್ತರ ಸಿಗುತ್ತದೆಂದು ತಿಳಿಸುತ್ತಿದ್ದೇವೆ. ರೋಗಗಳು ಹೋದ ಜನ್ಮದಲ್ಲಿ ಮಾಡಿಕೊಂಡ ಪಾಪದ ಫಲಗಳೆಂದು ಮುಖ್ಯವಾಗಿ ತಿಳಿಯಬೇಕು. ಒಬ್ಬ ಮನುಷ್ಯ ಮಾಡಿದ ಕಾರ್ಯದಲ್ಲಿ ಕಾಣಿಸದಂತೆ ಬರುವ ಫಲ ಪಾಪವಾಗಬಹುದು, ಪುಣ್ಯವು ಆಗಬಹುದು. ಈಗ ಮಾಡಿರುವುದು ಕೆಟ್ಟ ಕಾರ್ಯವಾದರೆ ಅದರ ಫಲ ಪಾಪಬರುವುದು. ಆ ಪಾಪವನ್ನು ನಂತರ ಜನ್ಮದಲ್ಲಿ ಅನುಭವಿಸಬೇಕೆನ್ನುವುದು ದೈವಧರ್ಮ. ಒಬ್ಬ ಮನುಷ್ಯ ಇತರೆ ಮನುಷ್ಯರ ಬಗ್ಗೆಯಾಗಲಿ ಇತರೆ ಜೀವರಾಶಿಗಳ ಬಗ್ಗೆಯಾಗಲಿ ಮಾಡಿದ ಪಾಪ ಒಂದು ವಿಧವಾದರೆ, ಒಬ್ಬ ಮನುಷ್ಯ ದೇವತೆಗಳ ಬಗ್ಗೆ ಮಾಡಿದ ಪಾಪ ಮತ್ತೊಂದು ವಿಧವಾಗಿ ಇದೆ. ಹಾಗೆ ಒಬ್ಬ ಮನುಷ್ಯ ದೈವಜ್ಞಾನಕ್ಕೆ ವಿರುದ್ಧವಾಗಿ ಮಾಡಿದ ಕಾರ್ಯಗಳಲ್ಲಿ ಬರುವ ಪಾಪ ಇನ್ನೊಂದು ವಿಧವಾಗಿ ಇದೆ. ಅದೇ ವಿಧವಾಗಿ ಒಬ್ಬ ಮನುಷ್ಯ ದೈವದ ಬಗ್ಗೆ ಮಾಡಿದ ಪಾಪ ಮತ್ತೊಂದು ವಿಧವಾಗಿ ಇದೆ. ಈ ವಿಧವಾಗಿ ಮನುಷ್ಯ ಸಂಪಾದಿಸಿಕೊಳ್ಳುವ ಪಾಪಗಳನ್ನು ವಿಭಜಿಸಬಹುದು. ಈ ವಿಧವಾಗಿ ನಾಲ್ಕು ವಿಧಗಳಲ್ಲಿ ವಿಭಜಿಸಲ್ಪಟ್ಟ ಪಾಪ, ಮರುಜನ್ಮದಲ್ಲಿ ಹೇಗೆ ಜಾರಿಗೆ ಬರುತ್ತದೊ ತಿಳಿದುಕೊಳ್ಳೋಣ.

ಮನುಷ್ಯರ ಬಗ್ಗೆಯಾಗಲಿ ಇತರೆ ಜೀವರಾಶಿಗಳ ಬಗ್ಗೆಯಾಗಲಿ ಮಾಡಿದ ಪಾಪದಲ್ಲಿ, ನಾಲ್ಕುಪಟ್ಟು ರೋಗಗಳ ರೂಪದಲ್ಲಿ ಅನುಭವಿಸುವುದಕ್ಕೆ ನಿರ್ಣಯಿಸಿರುತ್ತದೆ. ಹಾಗೆ ದೇವತೆಗಳ ಬಗ್ಗೆ ಮಾಡಿದ ಪಾಪದಲ್ಲಿ ಅರ್ಧ ರೋಗಗಳ ರೂಪದಲ್ಲಿ ಬರುವುದು. ದೈವಜ್ಞಾನದ ಬಗ್ಗೆ ಮಾಡಿದ ಪಾಪವು ಮೂರು ಪಟ್ಟು ರೋಗಗಳ ರೂಪದಲ್ಲಿ ಅನುಭವಿಸಬೇಕಾಗಿ ಬರುತ್ತದೆ. ಇನ್ನು ದೈವದ ಕಡೆ ಮಾಡಿದ ಪಾಪ ಪೂರ್ತಿಯಾಗಿ ರೋಗಗಳ ರೂಪದಲ್ಲಿಯೇ ಅನುಭವಿಸಬೇಕು. ಹೀಗೆ ಪಾಪದ ಫಲಗಳನ್ನು ಕೆಲವು ರೋಗಗಳ ರೂಪದಲ್ಲಿಯೆ ಅನುಭವಿಸಬೇಕಾಗಿದೆಯೆಂದು ಅರ್ಥವಾಯಿತು. ರೋಗ ಯಾವ ರೂಪದಲ್ಲಿದ್ದರೂ ಅದನ್ನು ಸಹ ಒಂದು ಜೀವರಾಶಿಯಂತೆ ಹೇಳಬಹುದು. ಈ ಮಾತನ್ನು ಗತದಲ್ಲಿ ಬಹಳ ಸಂದರ್ಭಗಳಲ್ಲಿ ಉಪನ್ಯಾಸಗಳಲ್ಲಿ "ರೋಗ ಒಂದು ಭೂತ" ಎಂದು ಸಹ ಹೇಳಿದ್ದೇವೆ. ರೋಗ ಸೂಕ್ಷ್ಮವಾಗಿಯೂ ಮತ್ತು ಸ್ಥೂಲವಾಗಿಯೂ ಇರುವ ಜೀವರಾಶಿಯೇ ಎಂದು ಹೇಳಬಹುದು. ಒಂದು ರೋಗ ಶರೀರದಲ್ಲಿ ಸೇರಿದೆ ಎಂದರೆ ಆತನಲ್ಲಿ ಒಂದು ಸೂಕ್ಷ್ಮವು ಪ್ರವೇಶಿಸಿದಂತೆ. ಆದ್ದರಿಂದ ರೋಗ ಬಂದ ಮನುಷ್ಯನನ್ನು, ದೆವ್ವ ಇಡಿದ ಮನುಷ್ಯನೊಂದಿಗೆ ಸಮಾನವಾಗಿ ಹೇಳಬೇಕಾಗುತ್ತದೆ. ಇದನ್ನು ಅನುಸರಿಸಿ ನೋಡಿದಾಗ ರೋಗ ಬಂದಿದೆಯೆಂದರೆ ದೆವ್ವ ಬಂದಿದೆಯೆಂದು ಅರ್ಥ. ರೋಗ ಹೋಗಿದೆಯೆಂದರೆ ದೆವ್ವ ಹೋಗಿದೆಯೆಂದು ಅರ್ಥ. ಮನುಷ್ಯರ ಬಗ್ಗೆ ಮಾಡಿದ ಪಾಪದಿಂದ ಬರುವ ರೋಗಗಳು ಅಥವಾ ಜೀವಿಗಳನ್ನು (ದೆವ್ವಗಳನ್ನು) ಔಷಧಗಳಿಂದ ಹೋಗಲಾಡಿಸಬಹುದು. ಹಾಗೇ ದೇವತೆಗಳ ಬಗ್ಗೆ ಮಾಡಿದ ಪಾಪದಿಂದ ಬರುವ ರೋಗಗಳನ್ನು ಅಥವಾ ಜೀವಿಗಳನ್ನು ಅಥವಾ ದೆವ್ವಗಳನ್ನು ಮಂತ್ರಗಳಿಂದಲೆ ಹೋಗಲಾಡಿಸಬಹುದು. ದೈವಜ್ಞಾನ ಬಗ್ಗೆ ಸಂಪಾಧಿಸಿಕೊಂಡ ಪಾಪದಿಂದ ಬರುವ ರೋಗಗಳನ್ನು, ದೈವಜ್ಞಾನ ಶಕ್ತಿಯಿಂದಲೆ ಇಲ್ಲದಂತೆ ಮಾಡಬಹುದು. ಆದರೆ ಇದು ಅಪರೂಪವಾದ ಕೆಲಸವೆಂದು ಮೊದಲೆ ಹೇಳಿದ್ದೇವೆ. ಕೊನೆಯದಾಗಿ ಹೇಳುವುದು ದೈವದ ಬಗ್ಗೆ ಯಾರಾದರೂ ಪಾಪ ಮಾಡಿದರೆ ಆ ಪಾಪದಿಂದ ಬರುವ ರೋಗಗಳಿಂದ ಯಾರೂ ತಪ್ಪಿಸಿಕೊಳ್ಳಲಾ

ರರು. ಅದೇ ಕ್ಷಮಿಸಲಾಗದ, ಕ್ಷಮಿಸಲ್ಪಡದ ಪಾಪ. ಆದ್ದರಿಂದ ಅದನ್ನು ಜ್ಞಾನಿಗಳು, ಯೋಗಿಗಳು ಸಹಿತ ತಪ್ಪಿಸಲಾರರು. ಅದು ಬಿಡದ ದೆವ್ವವಾಗಿ ಬಾಧಿಸುತ್ತದೆ.

'ರೋಗ ಒಂದು ಭೂತ' ಎನ್ನುವ ಮಾತು ನಿಮಗೆ ಅರ್ಥವಾಗುವುದಕ್ಕೆ ಒಂದು ಯಥಾರ್ಥವಾದ ಸಂಘಟನೆಯನ್ನು ವಿವರಿಸುತ್ತೇನೆ ನೋಡಿರಿ. ತಾಡಿಪತ್ರಿ ಪಟ್ಟಣದಲ್ಲಿ ನನಗೆ ಪರಿಚಯವಿದ್ದ ವ್ಯಕ್ತಿ, ನನ್ನ ಬಳಿಗೆ ಆಗಾಗ ಬರುವ ವ್ಯಕ್ತಿ ಕುಲ್ಲೂರು ಶ್ರೀರಾಮುಲು ಅನ್ನುವಾತನು ಇದ್ದನು. ಬಹುಶ ಆತನಿಗೆ ಮೂವರು ತಮ್ಮಂದಿರು ಅಂದುಕೊಳ್ಳುತ್ತೇನೆ. ಅವರಲ್ಲಿ ಒಬ್ಬರ ಹೆಸರು ವಿಶ್ವಮೂರ್ತಿ. ಕಲ್ಲೂರು ಶ್ರೀರಾಮುಲು ಸ್ವಲ್ಪ ಬಿಡುವಿನ ಸಮಯದಲ್ಲಿ ನನ್ನ ಬಳಿಗೆ ಬಂದು, ಜ್ಞಾನ ವಿಷಯಗಳನ್ನು ಕೇಳಿ ತಿಳಿದುಕೊಂಡು ಹೋಗುತ್ತಿದ್ದನು. ದೈವಜ್ಞಾನವನ್ನು ತಿಳಿದುಕೊಳ್ಳುವುದರಲ್ಲಿ ಆಸಕ್ತಿ ಇರುವುದರಿಂದ, ಆತನ ಮೇಲೆ ನನಗೆ ಸ್ವಲ್ಪ ಅಭಿಮಾನವಿತ್ತು. ಶ್ರೀರಾಮುಲು ಒಂದು ದಿನ ನನ್ನ ಬಳಿಗೆ ಬಂದು ಬಾಧೆಪಡುತ್ತಾ ಕುಳಿತುಕೊಂಡನು. ಆತನನ್ನು ನೋಡಿದ ನನಗೆ ಆತನು ಮಾನಸಿಕವಾಗಿ ವ್ಯಥೆಪಡುತ್ತಿದ್ದಾನೆಂದು ಅರ್ಥವಾಯಿತು. ಆಗ ಆತನನ್ನು ಏಕೆ ಹೀಗಿದ್ದೀಯೆಂದು ನಾನು ಕೇಳಿದಾಗ, ಆಗ ಆತನು ಬಾಧೆಪಡುತ್ತಾ ತನ್ನ ತಮ್ಮ ಲಕ್ಷ್ಮಣಮೂರ್ತಿ ವಿಷಯವನ್ನು ಹೇಳಿದನು. ನನ್ನ ತಮ್ಮನಿಗೆ ಕೆಲವು ದಿನಗಳಿಂದ ಆರೋಗ್ಯ ಸರಿಯಾಗಿಲ್ಲ. ನಿನ್ನೆಯ ದಿನ ಅನಂತಪುರಕ್ಕೆ ಹೋಗಿ ದೊಡ್ಡ ಡಾಕ್ಟರುಗಳ ಬಳಿ ತೋರಿಸಿದೆವು. ಅವರು ಎಲ್ಲ ಪರೀಕ್ಷೆಗಳು ಮಾಡಿ ನೋಡಿದ ನಂತರ ಆತನ ಗುಂಡಿಗೆ ಬಾವುಬಂದಿದೆ (ಹಾರ್ಟ ಎನ್‌ಲಾರ್ಜ್ ಆಗಿದೆ) ಅದನ್ನು ಅನುಸರಿಸಿ ನೋಡಿದರೆ ಆತನು ಐದಾರು ಗಂಟೆಗಳು ಮಾತ್ರವೆ ಬದುಕುತ್ತಾನೆ. ಚಿಕಿತ್ಸೆ ಮಾಡಿದರೂ ಈತನು ಬದುಕುವುದಿಲ್ಲ. ಮನೆಗೆ ತೆಗೆದುಕೊಂಡು ಹೋಗಲು ಹೇಳಿದ್ದಾರೆ. ಈ ವಿಷಯ ನನಗೆ, ನಮ್ಮ ಅಮ್ಮ, ಅಪ್ಪನಿಗೆ ಮಾತ್ರ ಗೊತ್ತು, ನನ್ನ ತಮ್ಮನಿಗೆ ತಿಳಿದಿಲ್ಲ. ಗಂಟೆ ಕೆಳಗೆ ಅನಂತಪುರ ದಿಂದ ಬಂದು, ಆತನನ್ನು ಮನೆಗೆ ಬಿಟ್ಟು, ಅಮ್ಮ ಅಪ್ಪ ಬಾಧೆಬೀಳುತ್ತಿರುವುದನ್ನು ನೋಡಲಾಗದೆ ಇಲ್ಲಿಗೆ ಬಂದೆನು ಎಂದು ಹೇಳಿದನು.

ಆತನ ಮಾತುಗಳನ್ನು ಕೇಳಿದ ನಂತರ ಆತನನ್ನು ನೋಡಿ ನನಗು ಸಹ ದಯಾಗುಣ ಸ್ವಲ್ಪ ಕೆಲಸಮಾಡಿತೆಂದುಕೊಳ್ಳುತ್ತೇನೆ. ಆಗ ಶ್ರೀರಾಮುಲುನನ್ನು ನೋಡಿ ಮೊದಲು ನೀನು ಹೋಗಿ ನಿನ್ನ ತಮ್ಮನನ್ನು ನನ್ನ ಬಳಿಗೆ ಕರೆದುಕೊಂಡು ಬಾ ಎಂದು ಹೇಳಿದೆನು. ನನ್ನ ಮಾತು ಕೇಳುತ್ತಿದ್ದಹಾಗೆ ಆತನು ಎದ್ದು ಹೋದನು. ಗಂಟೆಯ ನಂತರ ಆತನ ತಮ್ಮನನ್ನು ಕರೆದುಕೊಂಡು ಬಂದನು. ಆತನನ್ನು ನೋಡುತ್ತಿದ್ದರೆ ಈತನು ಗಂಟೆಕಾಲ ಸಹ ಬದುಕುವುದಿಲ್ಲ ಅನ್ನುವ ವಿಧದಲ್ಲಿ ಇದ್ದಾನೆ. ಶರೀರವೆಲ್ಲಾ ನೀರು ತುಂಬಿ ಉಬಿಕಿದೆ. ಆತನನ್ನು ನನ್ನ ಮುಂದೆ ಕೂರಿಸಿಕೊಂಡು, ಒಂದು ನಿಮಿಷ ಆತನ ಗುಂಡಿಗೆ ಕಡೆಗೆ ನೋಡಿ ಇನ್ನು ಸಾಕು ಪಕ್ಕದಲ್ಲಿ ಕುಳಿತುಕೊಳ್ಳಲು ಹೇಳಿದೆನು. ಅವರು ಹಾಗೆಯೇ ಮಾಡಿದರು. ಆಗ ಶ್ರೀರಾಮುಲರೊಂದಿಗೆ "ನಿನ್ನ ತಮ್ಮನಿಗೆ ಈಗ ಅರ್ಧ ಗುಣವಾಗಿ ಹೋಗಿದೆ. ಮನೆಗೆ ತೆಗೆದುಕೊಂಡು ಹೋಗಿರಿ, ಮನೆಗೆ ಹೋದ ನಂತರ ಉಳಿದ ಅರ್ಧ ಗುಣವಾಗುತ್ತದೆಂದು" ಹೇಳಿ ಕಳುಹಿಸಿದೆನು. ನಾನು ಹಾಗೆ ಹೇಳಿರುವುದನ್ನು ಶ್ರೀರಾಮುಲು ಕೇಳಿದ್ದಾನೆ ಆದರೆ, ನನ್ನ ಮಾತು ನಿಜವೆಂಬ ನಂಬಿಕೆ ಆತನಲ್ಲಿ ಇರಲಿಲ್ಲ. ಒಂದು ನಿಮಿಷ ನೋಡಿ ಅರ್ಧ ಗುಣವಾಗಿದೆ ಎಂದಾಗಲೆ ಯಾವ ಚಿಕಿತ್ಸೆ ಮಾಡಲಿಲ್ಲ, ಹೇಗೆ ಗುಣವಾಗುತ್ತದೆ, ಎನ್ನುವ ಪ್ರಶ್ನೆ ಶ್ರೀರಾಮುಲುಗೆ ಬಂದಿತು. ಒಳಗೆ ಆತನ ತಲೆಯಲ್ಲಿ ಪ್ರಶ್ನೆ ಬಂದರೂ ಹೊರಗಡೆ ಏನೂ ಕಾಣಿಸದಂತೆ ಆತನ ತಮ್ಮನನ್ನು ಮನೆಗೆ ತೆಗೆದುಕೊಂಡು ಹೋದನು. ಆ ದಿನವೆಲ್ಲಾ ಕಳೆದುಹೋಗಿದೆ. ಎರಡನೆ ದಿನವು ಸಹ ಕಳೆದಿದೆ. ಮೂರನೆ ದಿನ ಪ್ರಾರಂಭವಾಯಿತು. ಆಗ ಶ್ರೀರಾಮುಲುಗೆ ಹೀಗೆ ಅನ್ನಿಸಿತು. ಅನಂತಪುರದಲ್ಲಿ ಡಾಕ್ಟರುಗಳು ಐದಾರು ಗಂಟೆಗಳಿಗಿಂತ ಹೆಚ್ಚು ಬದುಕುವುದಿಲ್ಲವೆಂದು ಹೇಳಿದ್ದರಲ್ಲಾ! ಇಷ್ಟೊತ್ತಿಗೆ ಸುಮಾರು ಅರವತ್ತು ಗಂಟೆಗಳು ಕಳೆದಿವೆಯಲ್ಲ! ಅವರು ಹೇಳಿದಂತೆ ಏನೂ ಆಗಲಿಲ್ಲ. ಯಾವುದಕ್ಕಾದರು ಒಳ್ಳೆಯದೆಂದು, ಒಂದು ಬಾರಿ ಅನಂತಪುರಕ್ಕೆ ತೆಗೆದುಕೊಂಡು ಹೋಗಿ ತೋರಿಸಿಕೊಂಡು ಬರೋಣವೆಂದು ಅಂದುಕೊಂಡನು. ತಕ್ಷಣವೆ ಅನಂತಪುರಕ್ಕೆ ಕಾರಿನಲ್ಲಿ ಹೊರಟು ಹೋದರು. ಅಲ್ಲಿ ಡಾಕ್ಟರುಗಳಿಗೆ ಲಕ್ಷ್ಮಣಮೂರ್ತಿಯನ್ನು

ತೋರಿಸಿದರು. ಡಾಕ್ಟರುಗಳು ಎಲ್ಲಾ ಸ್ಕ್ಯಾನಿಂಗ್ ಮಾಡಿ, ಈತನ ಗುಂಡಿಗೆ ಸಾಧಾರಣ ಸ್ಥಿತಿಗೆ ಬಂದಿದೆ ಪ್ರಾಣಾಪಾಯ ಏನೂ ಇಲ್ಲವೆಂದು ಹೇಳಿದರು. ಆಗ ಶ್ರೀರಾಮುಲು ನೀವು ಐದಾರು ಗಂಟೆಗಳಿಗಿಂತ ಹೆಚ್ಚುಕಾಲ ಬದುಕುವುದಿಲ್ಲ ವೆಂದು ಹೇಳಿದ್ದೀರಲ್ಲ! ಎಂದು ಡಾಕ್ಟರುಗಳನ್ನು ಕೇಳಿದನು. ಡಾಕ್ಟರುಗಳು ಅದಕ್ಕೆ ಉತ್ತರವಾಗಿ ನಿಜವೆ ಆಗಿನ ಪರಿಸ್ಥಿತಿ ಆಗಿತ್ತು. ಈಗ ನೋಡಿದರೆ ನಮಗೆ ಆಶ್ಚರ್ಯವಾಗಿದೆ. ಆಗ ಚಿಕಿತ್ಸೆ ಮಾಡಿದರೂ ಬದುಕುವುದಿಲ್ಲವೆಂದು ನಾವೇ ಹೇಳಿದ್ದೆವು. ಆದರೆ ಚಿಕಿತ್ಸೆ ಮಾಡದಿದ್ದರೂ ಹೇಗೆ ಗುಣವಾಗಿದೆಯೋ ನಮಗೂ ಅರ್ಥವಾಗಲಿಲ್ಲ ಎಂದರು. ಆಗ ಶ್ರೀರಾಮುಲುಗೆ ನಮ್ಮ ಮಾತುಗಳು ಜ್ಞಾಪಕಕ್ಕೆ ಬಂದವು. ನಾನು ಒಂದು ನಿಮಿಷ ನೋಡಿರುವುದರಿಂದಲೆ ಆತನಿಗೆ ಗುಣವಾಗಿದೆಯೆನ್ನುವ ಗಟ್ಟಿ ವಿಶ್ವಾಸ ಆಗ ಬಂದಿದೆ.

ಎರಡನೆಯ ದಿನ ನನ್ನ ಬಳಿಗೆ ಶ್ರೀರಾಮುಲು ಬಂದು ನಡೆದ ವಿಷಯವನ್ನೆಲ್ಲಾ ಹೇಳಿದನು. ತಾನು ಮೊದಲು ನನ್ನ ಮಾತನ್ನು ನಂಬದ ವಿಷಯವನ್ನು ಸಹ ಹೇಳಿದನು. ಲಕ್ಷ್ಮಣ ಮೂರ್ತಿ ಪ್ರಾಣಾಪಾಯದಿಂದ ಹೊರಬೀಳುವುದಕ್ಕೆ ನೀವೆ ಕಾರಣವೆಂದು ಕೃತಜ್ಞತೆ ಸಹ ಹೇಳಿದನು. ನಂತರ ಲಕ್ಷ್ಮಣ ಮೂರ್ತಿಗೆ ಉಬ್ಬಸರೋಗ, ಶರೀರವೆಲ್ಲಾ ನೀರು ಸೇರಿರುವ ವಿಷಯ ಬಹಳ ಕಾಲದಿಂದ ಇದೆಯೆಂದು ಹೇಳಿದನು. ಅದಕ್ಕೆ ಡಾಕ್ಟರುಗಳ ಬಳಿ ಔಷಧಗಳನ್ನು ತೆಗೆದುಕೊಳ್ಳಲು ಸಲಹೆ ಹೇಳಿ ಕಳುಹಿಸಿದೆನು. ನಾನು ಹೇಳಿದಂತೆ ಔಷಧಗಳನ್ನು ಬಳಸಿರುವುದರಿಂದ ಆ ಎರಡು ರೋಗಗಳು ಕೆಲವು ದಿನಗಳು ಕಡಿಮೆಯಾಗುತ್ತಿದ್ದವು, ನಂತರ  ಕೆಲವು ದಿನಗಳು ಹೆಚ್ಚಾಗುತ್ತಿದ್ದವು. ಡಾಕ್ಟರು ಮನೆಗೆ ಬಂದು ಒಂದು ಬಾರಿ ಲಾಸಿಕ್ಸ್ ಇಂಜಕ್ಷನ್ ಕೊಟ್ಟರೆ ಒಂದು ದಿನ ಮೂತ್ರವು ಬರುತ್ತಿತ್ತು. ಹಾಗೆ ಉಬ್ಬಸ (ಅಸ್ತಮಾ) ರೋಗಕ್ಕೆ ಔಷಧಕೊಟ್ಟರೆ, ಆ ದಿನ ಮಾತ್ರ ಚೆನ್ನಾಗಿರುತ್ತಿತ್ತು. ಹಾಗೆ ಆರು ತಿಂಗಳುಗಳಿಂದ ಇದ್ದ ರೋಗಗಳು ತೀವ್ರಸ್ಥಾನಕ್ಕೆ ಸೇರಿಕೊಂಡಿವೆ. ಲಾಸಿಕ್ಸ್ ಇಂಜಕ್ಷನ್ ಕೊಟ್ಟರೆ ಒಂದು ಬಾರಿ ಮೂತ್ರ ಬರುತ್ತದೆ, ಆಸ್ತಮಾಗೆ ಔಷಧ ಕೊಟ್ಟರೆ ಒಂದು ಗಂಟೆ ಮಾತ್ರ

ಚೆನ್ನಾಗಿರುತ್ತದೆ. ಆ ಎರಡು ರೋಗಗಳಿಂದಲೆ ಆತನು ಸಾಯುವಂತೆ ಇದ್ದಾನೆಂದು ವೈದ್ಯರು ಹೇಳಿದರು. ಆಗ ಶ್ರೀರಾಮುಲು ಬಂದು ಒಂದುಸಾರಿ ತನ್ನ ತಮ್ಮನನ್ನು ನೋಡಿರೆಂದು ಪ್ರಾರ್ಥೇಯಪಟ್ಟನು. ಆತನ ಬಾಧೆಯನ್ನು ನೋಡಲಾರದೆ ಸರಿ ಆತನನ್ನು ಕರೆದುಕೊಂಡು ಬರುವುದಕ್ಕೆ ಹೇಳಿದೆನು.

ಆ ದಿನ ಸಾಯಂಕಾಲ ಲಕ್ಷ್ಮಣ ಮೂರ್ತಿಯನ್ನು ನನ್ನ ಬಳಿಗೆ ತೆಗೆದುಕೊಂಡು ಬಂದರು. ಆತನ ಶರೀರವೆಲ್ಲಾ ನೀರು ತುಂಬಿಕೊಂಡು ಇದೆ. ಉಬ್ಬಸ ಸ್ವಲ್ಪ ಕಾಣಿಸುತ್ತಿದೆ. ಅವರು ಹೇಳಿದಷ್ಟು ಹೆಚ್ಚಾಗಿ ಕಾಣಿಸಲಿಲ್ಲ. ಆತನಿಗೆ ಕುಳಿತುಕೊಳ್ಳುವ ತಾಳ್ಮೆಯು ಸಹ ಇಲ್ಲ. ಒಬ್ಬ ಮನುಷ್ಯ ಹಿಂದೆ ಹಿಡ್ಕೊಂಡು ಕೂರಿಸಿಕೊಂಡಿದ್ದಾನೆ. ಆತನನ್ನು ಅದೇ ವಿಧದಲ್ಲಿ ನನ್ನ ಮುಂದೆ ಕೂರಿಸಿದ್ದಾರೆ. ಆಗ ನಾನು ಹೀಗೆ ಹೇಳಿದೆನು. "ಈತನ ಶರೀರದಲ್ಲಿನ ಗಾಳಿಯಿಂದ ಏರ್ಪಟ್ಟ ಉಬ್ಬಸ ರೋಗ ಎಷ್ಟಿದೆಯೊ ಅಷ್ಟು ಹೊರಗೆ ಕಾಣಿಸಬೇಕೆಂದು ಎದುರುಗಡೆ ಯಿರುವ ನಾನು ಹೇಳುತ್ತಿದ್ದೇನೆ" ಎನ್ನುತ್ತಿದ್ದಹಾಗೆ ಒಳಗಿನಿಂದ ಉಬ್ಬಸ ತೀವ್ರಮಟ್ಟದಲ್ಲಿ ಹೊರಗೆ ಬಂದಿತು. ಆಗ ಲಕ್ಷ್ಮಣಮೂರ್ತಿ ವಿಶೇಷವಾಗಿ ಶ್ವಾಸವನ್ನು ಎಳೆದುಕೊಳ್ಳುವುದು ಬಿಡುವುದು ಮಾಡುತ್ತಿದ್ದಾನೆ. ಶ್ವಾಸ ಬಾಯಿಯಲ್ಲಿಯು, ಮೂಗಿನಲ್ಲಿಯು ಹಿಡಿಸಿದಷ್ಟು ತೀವ್ರವಾಗಿ ಹೊರಗೆ ಬರುತ್ತಾ ಇದೆ. ಹಾಗೆ ಅಷ್ಟೇ ತೀವ್ರತೆಯಿಂದ ಒಳಗೆ ಹೋಗುತ್ತಾ ಇದೆ. ಪಕ್ಕದಲ್ಲಿ ನೋಡುವವರಿಗೆ ಆತನು ಉಸಿರಾಟದ ಚೀಲಗಳು ಒಡೆದುಕೊಂಡು ಸಾಯುತ್ತಾನೇನೊ ಎಂದು ಅನಿಸುತ್ತಿದೆ. ಆಗ ನಾನು ತೀವ್ರತೆ ಕಡಿಮೆಯಾಗಿ ಸಾಧಾರಣ ಸ್ಥಿತಿಗೆ ಬರಲು ಹೇಳುತ್ತಿದ್ದಹಾಗೆ ಆತನಿಗೆ ಶ್ವಾಸ ಸಾಧಾರಣವಾಗಿ ಆಡಲು ಪ್ರಾರಂಭಿಸಿತು. ಅಲ್ಲಿ ಪ್ರತ್ಯಕ್ಷವಾಗಿ ನೋಡುವವರಿಗೆ ಅದೊಂದು ಸೋಜಿಗ ಅನಿಸಿತು.

ರೋಗ ಒಂದು ಭೂತ (ಜೀವಿ) ಎನ್ನುವ ನನ್ನ ಸೂತ್ರದ ಪ್ರಕಾರ ಶರೀರದಲ್ಲಿರುವ ನೀರು, ಗಾಳಿ, ಎನ್ನುವ ಭೂತಗಳನ್ನು ಆತನನ್ನು ಕುರಿತು ಕೇಳಬೇಕೆಂದುಕೊಂಡೆನು. ಆಗ ಹೀಗೆ ಕೇಳಿದೆನು. ಈತನ ಶರೀರದೊಳಗಿರುವ

ಗಾಳಿ, ನೀರು ಎನ್ನುವ ನಿಮ್ಮನ್ನು ಕೇಳುತ್ತಿದ್ದೇನೆ. ಈತನನ್ನು ಏಕೆ ಅಷ್ಟು ತೀವ್ರತೆಯಿಂದ ಬಾಧಿಸುತ್ತಿದ್ದೀರ ಕಾರಣ ಏನು? ಎಂದು ನನ್ನಿಂದ ಮಾತು ಬರುತ್ತಿದ್ದಹಾಗೆ ಮೊದಲು ಉಬ್ಬಸ ಸ್ವಲ್ಪಮಟ್ಟಿಗೆ ಬೆಳೆದು, ನಾನು ಗಾಳಿ ಮಾತನಾಡುತ್ತಿದ್ದೇನೆಂದು ಹೇಳಲಾರಂಭಿಸಿತು.

**ಗಾಳಿ :–** ಈತನು ಮಹಾಪಾಪವನ್ನು ಸಂಪಾದಿಸಿಕೊಂಡಿದ್ದಾನೆ. ಗತ ಜನ್ಮದಲ್ಲಿ ಮನುಷ್ಯರನ್ನು ತನ್ನ ಅಧಿಕಾರದಿಂದ ಬಹಳ ಕಷ್ಟಗಳ ಪಾಲು ಮಾಡಿದ್ದಾನೆ.

**ನಾನು :–** ಈತನಿಗೆ ಯಾವ ಅಧಿಕಾರವಿತ್ತು? ಏನು ಮಾಡಿದ್ದಾನೆ.

**ಗಾಳಿ :–** ಪೋಲೀಸ್ ಉದ್ಯೋಗ, ಯಸ್.ಐ ನಿಂದ ಡಿ.ಯಸ್.ಪಿ ವರೆಗು ಉದ್ಯೋಗವನ್ನು ಮಾಡಿದ್ದಾನೆ. ತಾನು ಸಹ ಒಬ್ಬ ಮನುಷ್ಯ ಎನ್ನುವ ಮಾತನ್ನು ಮರೆತುಹೋಗಿ ತನ್ನ ಅಧಿಕಾರದಿಂದ ಎಷ್ಟೋ ಜನರನ್ನು ನೇರಸ್ಥರು ಅಲ್ಲದವರನ್ನು ಸಹ ಕಷ್ಟಗಳ ಪಾಲು ಮಾಡಿದ್ದಾನೆ. ಕೆಲವರನ್ನು ಸುಟ್ಟು ಸಾಯಿಸಿದ್ದಾನೆ. ತನಗೆ ತಿಳಿದ ರೇಣುಕಾ ಎಲ್ಲಮ್ಮನನ್ನು ಹೊರತುಪಡಿಸಿ ಉಳಿದ ದೇವತೆಗಳನ್ನು ಲೆಕ್ಕಮಾಡದೆ, ಬೆಲೆ ಕೊಡದೆ ಮಾತನಾಡಿರುವುದರಿಂದ ದೊಡ್ಡ ಪಾಪವನ್ನು ಸಂಪಾದಿಸಿಕೊಂಡಿದ್ದಾನೆ. ಹೋದ ಜನ್ಮದಲ್ಲಿ ಎರಿಕಲ (ಕಣಿ ಹೇಳುವವರ) ಕುಟುಂಬದಲ್ಲಿ ಹುಟ್ಟಿದ ಈತನು, ತನಗಿಂತ ದೊಡ್ಡ ಕುಲಸ್ಥರನ್ನು ಅಸೂಯೆದಿಂದ ಅದೇ ಕೆಲಸವಾಗಿ ಹೆಚ್ಚಾಗಿ ಹಿಂಸಿಸುತ್ತಿದ್ದನು. ಹೇಳುವುದಕ್ಕೆ ಒಂದಲ್ಲ ಎಷ್ಟೋ ಪಾಪಗಳು ಮಾಡಿಕೊಂಡಿದ್ದಾನೆ. ಅದರಿಂದಲೆ ಈ ಉಬ್ಬಸ ರೋಗವನ್ನು ಅನುಭವಿಸುತ್ತಿದ್ದಾನೆ. ನನ್ನಿಂದ ಚಿಕ್ಕ ಚಿಕ್ಕ ಪಾಪಗಳೆ ಐದು ವರ್ಷಗಳಿಂದ ಜಾರಿಗೆಯಾಗುತ್ತಿವೆ.

**ನಾನು :–** ನೀನು ಅಡಗಿಕೊಂಡು, ನೀರನ್ನು ಮಾತನಾಡಲು ತಿಳಿಸು.

(ನಿಮಿಷದ ನಂತರ ಗಾಳಿ ಮಾತನಾಡದಂತೆ ಲಕ್ಷ್ಮಣ ಮೂರ್ತಿಯಿಂದ ನೀರು ಮಾತನಾಡಲು ಪ್ರಾರಂಭಿಸಿತು.)

**ನೀರು :–** ನೀವು ಈತನನ್ನು ಏನು ಮಾಡಬೇಕೆಂದುಕೊಂಡಿದ್ದೀರ.

**ನಾನು :–** ನಾನು ಏನು ಅಂದುಕೊಂಡಿಲ್ಲ. ಈ ಬಾಧೆಗೆ ಕಾರಣವನ್ನು ನಿಮ್ಮಿಂದ ತಿಳಿದುಕೊಳ್ಳಬೇಕೆಂದುಕೊಂಡಿದ್ದೇನೆ. ಗಾಳಿ ತಾನು ಮಾಡಬೇಕಾಗಿರುವುದನ್ನು ತಿಳಿಸಿದೆ. ಈತನು ಮಾಡಿದ ಚಿಲ್ಲರೆ ಪಾಪಗಳ ಖಾತೆ ಎಷ್ಟೋ ಇದೆಯೆಂದು ಹೇಳಿತು. ನೀನು ಈತನ ಶರೀರದಲ್ಲಿ ಯಾವ ಪಾಪ ಪರಿಹಾರ ನಿಮಿತ್ತವಾಗಿದ್ದೀಯ. ನೀವು ಹೇಳಿದ ನಂತರ ನನ್ನ ನಿರ್ಣಯವಿರುತ್ತದೆ.

**ನೀರು :–** ಗಾಳಿ! ನಿಮಗೆ ಹೇಳಿರುವುದು ಮನುಷ್ಯರಿಂದ ಬಂದಿರುವ ಪಾಪ, ದೇವತೆಗಳಿಂದ ಬಂದಿರುವ ಪಾಪವನ್ನು ಜಾರಿಗೆ ಮಾಡುವಂತೆ ತಿಳಿಸಿದೆ. ಅದಕ್ಕಿಂತ ದೊಡ್ಡದಾದ ಒಬ್ಬ ಜ್ಞಾನಿಯನ್ನು ನಿಂದಿಸಿದ ಪಾಪವನ್ನು, ಸುಮಾರು ಹತ್ತು ಸಂವತ್ಸರಗಳಿಂದ ಅನುಭವಿಸುತ್ತಿದ್ದಾನೆ. ಎದುರಿಗಿರುವ ಮನುಷ್ಯ ದೈವಜ್ಞಾನವನ್ನು ಬೋಧಿಸುವ ಬೋಧಕನೆಂದು ತಿಳಿದು, ಆತನನ್ನು ನಾನಾವಿಧಗಳಲ್ಲಿ ಹೀನವಾಗಿ ಮಾತನಾಡಿ, ಕೊನೆಗೆ ಆತನ ಮೇಲೆ ಕೈಮಾಡಿಕೊಂಡಿದ್ದಾನೆ. ಆ ದಿನ ನಾನು ಪೋಲೀಸ್ ಇನ್‌ಸ್ಪೆಕ್ಟರ್ ಎಂದು ಗರ್ವದಿಂದ ಈತನು ಮಾಡಿಕೊಂಡ ಪಾಪವನ್ನು ಈಗ ನಾನು ಜಾರಿಗೆ ಮಾಡುತ್ತಿದ್ದೇನೆ. ಎಷ್ಟು ಹಣ ಖರ್ಚು ಇಟ್ಟು, ಎಷ್ಟು ಔಷಧಗಳನ್ನು ಬಳಸಿದರೂ, ಸ್ವಲ್ಪವಾದರೂ ವಾಸಿಯಾಗದ ರೋಗದಂತೆ ಶರೀರದಲ್ಲಿ ಅನುಭವಿಸುತ್ತಿದ್ದಾನೆ. ಈಗ ನಿಮ್ಮ ಬಳಿಗೆ ಬಂದು ಸ್ವಲ್ಪ ರಕ್ಷಣೆ ಪಡೆದು ಆರು ತಿಂಗಳಿಂದ ಬದುಕಿದ್ದಾನೆ. ಈ ಪಾಪವು ಈ ಜನ್ಮಕ್ಕೆ ಅಲ್ಲದೆ ಮುಂದಿನ ಜನ್ಮಕ್ಕೂ ಸಹ ಇದೆ. ಬರುವ ಜನ್ಮದಲ್ಲಿ ಕಾಲುಗಳು, ಕೈಗಳು ಚಿಕ್ಕಂದಿನಿಂದ ಇಲ್ಲದಂತೆ ಹೋಗುವುದೇ ಅಲ್ಲದೆ, ಮಾನಸಿಕವಾಗಿ ಸಹ ಬೆಳವಣಿಗೆ ಇಲ್ಲದಂತೆ ಹೋಗಿ ಸುಮಾರು ಇಪ್ಪತ್ತು ಸಂವತ್ಸರಗಳು ಬದುಕಬೇಕಾಗುತ್ತದೆ.

**ನಾನು :–** ಈಗ ಈತನ ಚರಿತ್ರೆ ನನಗೆ ಅರ್ಥವಾಗಿದೆ. ನನ್ನಿಂದ ಈತನ ಆಯುವು ಆರು ತಿಂಗಳು ಸರಿ ಹೋಗಿದ್ದರೆ, ಲೆಕ್ಕ ಪ್ರಕಾರ ನಂತರದ ಜನ್ಮದಲ್ಲಿ

ಈ ಆರು ತಿಂಗಳು ಕಡಿಮೆಯಾಗುತ್ತದೆ. ಇವರು ನನ್ನ ಬಳಿಗೆ ಬಂದಿದ್ದಾರೆ. ನೀವು ಸಹ ನನ್ನ ಬಳಿಗೆ ಬಂದಿದ್ದೀರ. ಆದ್ದರಿಂದ ನಾನು ಇಬ್ಬರಿಗು ನ್ಯಾಯವಾಗಿ ಪರಿಷ್ಕಾರವನ್ನು ಹೇಳುತ್ತೇನೆ. ಅದರ ಪ್ರಕಾರ ನಡೆದುಕೊಳ್ಳಿರಿ.

**ನೀರು :–** ನಿಮ್ಮ ಮಾತನ್ನು ನಾವು ಗೌರವಿಸುತ್ತೇವೆ ಹೇಳಿರಿ.

(ಆಗ ಅಲ್ಲಿ ಇರುವವರನ್ನೆಲ್ಲ ಹೊರಗೆ ಕಳುಹಿಸಿ ನಾವು ಏನು ಹೇಳಿರುವುದು ಇತರರಿಗೆ ತಿಳಿಯದಂತೆ ಮಾಡಿದೆನು.)

ಎಲ್ಲರೂ ಹೊರಗೆ ಹೋದ ನಂತರ ಗಾಳಿ, ನೀರು ಎನ್ನುವ ಭೂತಗಳಿಗೆ (ರೋಗಗಳಿಗೆ) ನಾನು ಒಂದು ಉಪಾಯನ್ನು ಹೇಳಿದೆನು. ಮನುಷ್ಯರಲ್ಲಿ ಜ್ಞಾನ ಅಭಿವೃದ್ಧಿ ಆಗುವುದಕ್ಕೆ, ಜ್ಞಾನಕ್ಕೆ ಬೆಲೆಯನ್ನು ಹೆಚ್ಚಿಸುವುದಕ್ಕೆ ಉಪಾಯವನ್ನು ಆ ಭೂತಗಳಿಗೆ ಹೇಳಬೇಕಾಗಿ ಬಂದಿದೆ. ನನ್ನ ಮಾತನ್ನು ಆಚರಿಸುತ್ತೇವೆಂದು ಎರಡು ಭೂತಗಳು ಹೇಳಿದ ನಂತರ, ನಾನು ಅವರೊಂದಿಗೆ ಲಕ್ಷ್ಮಣಮೂರ್ತಿಗೆ ಹದಿನೈದು ದಿನಗಳು ಯಾವ ನೋವಿಲ್ಲದ ಹಾಗೆ ಇರುವಂತೆ ಮಾಡಬೇಕೆಂದು ಹೇಳಿದೆನು. ಅಷ್ಟೇ ಅಲ್ಲದೆ ಹತ್ತು ದಿನಗಳಿಗೆ ಲಕ್ಷ್ಮಣಮೂರ್ತಿಯನ್ನು ಮತ್ತೆ ನನ್ನ ಬಳಿಗೆ ಬರಲು ಹೇಳುತ್ತೇನೆ. ಅಷ್ಟೊತ್ತಿಗೆ ಶರೀರದಲ್ಲಿ ನೀರು, ಗಾಳಿ ಎಷ್ಟು ಮಾತ್ರವು ನನಗೆ ಕಾಣಿಸಬಾರದೆಂದು, ನಂತರ ಐದು ದಿನಗಳಿಗೆ ನೀವು ಪಾಪಪರಿಪಾಲನೆಯನ್ನು ಪ್ರಾರಂಭ ಮಾಡಿಕೊಳ್ಳಬಹುದೆಂದು, ಇಪ್ಪತ್ತು ದಿನಗಳಿಗೆ ಆತನನ್ನು ಮರುಜನ್ಮಕ್ಕೆ ಕಳುಹಿಸುವಂತೆ, ಆ ಸಮಯಕ್ಕೆ ಎರಡು ದಿನಗಳ ಮೊದಲೇ ನಾನು ಮದ್ರಾಸ್‌ಗೆ (ಚೆನ್ನೈ) ಹೋಗುತ್ತೇನೆಂದು ಹೇಳಿದೆನು. ಆ ಮಾತಿಗೆ ಅವರು, ನೀವು ಹೇಳಿದಹಾಗೆ ಮಾಡುತ್ತೇವೆಂದು ಹೇಳಿ ನನ್ನ ಬಳಿ ಅನುಮತಿ ತೆಗೆದುಕೊಂಡರು. ನಂತರ ಹೊರಗಿದ್ದ ಶ್ರೀರಾಮುಲುನನ್ನು ಕರೆದು, ಲಕ್ಷ್ಮಣಮೂರ್ತಿಯನ್ನು ಮನೆಗೆ ತೆಗೆದುಕೊಂಡು ಹೋಗಲು ಹೇಳಿದೆನು. ಮತ್ತು ಈ ರೋಗವನ್ನು ಹೋಗುವಂತೆ ಮಾಡಿದ್ದೇನೆ. ಹತ್ತು ದಿನಗಳ ನಂತರ ಈತನನ್ನು ನನ್ನ ಬಳಿಗೆ ತೆಗೆದುಕೊಂಡು ಬಂದು ತೋರಿಸಿಕೊಂಡು ಹೋಗಲು

ಹೇಳಿದೆನು. ಹಾಗೆ ಆಗಲೆಂದು ಅವರು ಹೋದರು. ನಂತರ ಹತ್ತು ದಿನಗಳಿಗೆ ಬಂದರು. ಹತ್ತು ದಿನಗಳ ಕೆಳಗೆ ನಾನು ಲಕ್ಷ್ಮಣಮೂರ್ತಿಯನ್ನು ನೋಡಿದಾಗ, ಮನುಷ್ಯ ಬೆಳ್ಳಗೆ, ದಪ್ಪವಾಗಿ, ಶರೀರವೆಲ್ಲಾ ನೀರು ತುಂಬಿಕೊಂಡಿದ್ದನು. ಈಗ ನೋಡಿದರೆ ಮನುಷ್ಯ ತೆಳ್ಳಗಾಗಿ ಗುರುತಿಸಲಾಗದ ವಿಧದಲ್ಲಿ ಬದಲಾಗಿದ್ದಾನೆ. ಅಷ್ಟೇ ಅಲ್ಲದೆ ಬೆಳ್ಳಗಿದ್ದ ಶರೀರಛಾಯೆ ಕಪ್ಪಾಗಿ ಬದಲಾಗಿದೆ. ಶರೀರದಲ್ಲಿ ನೀರು ಸ್ವಲ್ಪವಾದರೂ ಕಾಣಿಸಲಿಲ್ಲ. ಹಾಗೆ ಉಬ್ಬಸವು ಸಹ ಏನೂ ಇಲ್ಲ. ಲಕ್ಷ್ಮಣಮೂರ್ತಿ ಪೂರ್ತಿ ಆರೋಗ್ಯವಾಗಿ ಇದ್ದಾನೆಂದು, ಆತನ ಅಣ್ಣ ಶ್ರಿರಾಮುಲು ಸಂತೋಷವನ್ನು ವ್ಯಕ್ತಪಡಿಸುತ್ತಾ ಹೇಳಿದನು.

ಆಗ ಶ್ರೀರಾಮುಲುರವರಿಗೆ ನಾನು ಕೆಲವು ಮಾತುಗಳನ್ನು ಹೇಳಿದೆನು. ಆರು ತಿಂಗಳುಗಳ ಕೆಳಗೆ, ನಿನ್ನ ತಮ್ಮ ಪ್ರಾಣಾಪಾಯಸ್ಥಿತಿಯಲ್ಲಿ ಇದ್ದಾನೆಂದು ಹೇಳಿದ್ದೆ. ಯಾರ ವಿಷಯದಲ್ಲಿಯು ತಲೆ ಹಾಕದ ನಾನು ಆ ದಿನ ನಿಮಿಷದಲ್ಲಿಯೆ ಗುಣಪಡಿಸಿ ಕಳುಹಿಸಿದೆನು. ಇದು ನಡೆಯದ ಮೊದಲಿನಿಂದಲು ನೀನು ನನ್ನ ಬಳಿಗೆ ಬರುತ್ತಿದ್ದೀಯ. ನೀನು ಬಂದರೂ ನಿನಗೆ ಜ್ಞಾನದ ಮೇಲೆ ಶ್ರದ್ಧೆ ಬರಲಿಲ್ಲ. ನಿನ್ನ ತಮ್ಮನನ್ನು ನೋಡಿ ಕಳುಹಿಸಿದರೆ, ಜ್ಞಾನಕ್ಕೆ ಇಷ್ಟು ಶಕ್ತಿ ಇದೆ ಎಂದು ತಿಳಿದುಕೊಂಡು, ನೀವು ಜ್ಞಾನಮಾರ್ಗದಲ್ಲಿ ಪ್ರಯಾಣಿಸುತ್ತೀರೆಂದು ಅಂದುಕೊಂಡಿದ್ದೇನೆ. ನಂತರ ನೀವು ಜ್ಞಾನವನ್ನು ಸ್ವೀಕರಿಸಲಿಲ್ಲ. ಮತ್ತೆ ಹತ್ತುದಿನಗಳ ಕೆಳಗೆ ಮತ್ತೊಂದು ರೋಗವಿದೆಯೆಂದು ಬಂದಿದ್ದೀರ. ಆಗಲು ಸಹ ನಿಮಗೆ ಗುಣವಾಗುವಂತೆ ಹೇಳಿ ಕಳುಹಿಸಿದೆನು. ಈಗ ಶರೀರದಲ್ಲಿ ನೀರಾಗಲಿ, ಉಸಿರಾಟದ ಚೀಲಗಳಲ್ಲಿ ಗಾಳಿಯ ಉಧೃತವಾಗಲಿ ಇಲ್ಲ. ಇದನ್ನು ಅನುಸರಿಸಿ ನೋಡಿದರೆ, ನನ್ನ ಬಳಿಗೆ ಬಂದಿರುವುದಕ್ಕೆ ಕೆಲವು ವರ್ಷ (ಸಂವತ್ಸರ)ಗಳಿಂದ ಆರೋಗ್ಯ ಸರಿಯಿಲ್ಲದವನಿಗೆ ಸರಿಯಾಗಿದೆ. ಇಲ್ಲಿಯವರೆಗು ನಿಮಗೆ ಪೂರ್ತಿ ಗುಣವಾಗುವವರೆಗು ನೋಡಿದ್ದೇನೆ. ಈಗಿನಿಂದ ಯಾವ ರೋಗ ಬಂದರೂ ನೀವು ನನ್ನ ಹತ್ತಿರಕ್ಕೆ ಬರಬೇಡಿ. ವೈದ್ಯ ಮಾಡುವುದು ನಮ್ಮ ಉದ್ದೇಶವಲ್ಲ, ನಮ್ಮ ಕೆಲಸ ಅಲ್ಲ. ನಮ್ಮ ಧ್ಯಾಸವೆಲ್ಲಾ ಜ್ಞಾನ ಅನ್ವೇಷಣೆಯಲ್ಲಿ

ಇರಿಸಬೇಕೆಂದುಕೊಂಡಿದ್ದೇವೆ. ಆದ್ದರಿಂದ ನಮ್ಮ ದಾರಿ ಬೇರೆ. ಈ ವೈದ್ಯದ ಕೆಲಸಬೇರೆ. ನನ್ನ ಹತ್ತಿರ ಮಂತ್ರವಿಲ್ಲ, ಮಾಯೆ ಇಲ್ಲ. ಕೇವಲ ದೈವಜ್ಞಾನದಿಂದಲೆ ನಿಮಗೆ ಗುಣಪಡಿಸಿದ್ದೇನೆ. ಈಗಿನಿಂದ ನೀವು ಸಹ ದೈವಜ್ಞಾನದ ಮೇಲೆ ಧ್ಯಾಸ ಇಟ್ಟಿಕೊಳ್ಳಿ. ಅದರಿಂದಲೆ ರೋಗಗಳು ಬಂದರೂ ಹೋಗುತ್ತದೆ. ಅಂತಹ ಧ್ಯಾಸವಿಲ್ಲದೆ ಹೋದರೆ ನಿಮಗೆ ಕಷ್ಟ. ಈ ರೋಗಗಳು ಔಷಧಗಳಿಂದಲೆ ಹೋಗುತ್ತವೆಂದು ಅಂದುಕೊಳ್ಳಬೇಡಿ ಎಂದು ಹೇಳಿಕಳುಹಿಸಿದೆನು. ಅಷ್ಟಾಗಿ ಹೇಳಿದರೂ ದೈವಜ್ಞಾನದ ಮೇಲೆ ಶ್ರದ್ಧೆಇಲ್ಲ. ಇರುವ ಶ್ರದ್ಧೆಯೆಲ್ಲಾ ಹಣ ಸಂಪಾದನೆಯ ಮೇಲೆ ಇಟ್ಟಿದ್ದಾರೆ.

ಇಲ್ಲಿಂದ ಹೋದ ಐದು ದಿನಗಳಿಗೆ ಲಕ್ಷ್ಮಣಮೂರ್ತಿಗೆ ಮತ್ತೆ ಉಬ್ಬಸ, ಶರೀರದಲ್ಲಿ ನೀರು ಸೇರುವುದು ಪ್ರಾರಂಭವಾಯಿತು. ನಂತರ ಐದು ದಿನಗಳಿಗೆ ಆ ಎರಡು ರೋಗಗಳು ಹೆಚ್ಚಾಗಿರುವುದರಿಂದ ಲಕ್ಷ್ಮಣಮೂರ್ತಿ ಸತ್ತುಹೋದನು. ಆ ದಿನ ನಾನು ಮದ್ರಾಸಿನಲ್ಲಿ ಇದ್ದೆನು. ನಾನು ಆತನು ಹೋದ ಎರಡು ದಿನಗಳಿಗೆ ಬಂದೆನು. ಆಗ ಶ್ರೀರಾಮುಲು ಬಂದು ನಡೆದ ವಿಷಯವನ್ನು ಹೇಳಿ ಹೋದನು. ನಂತರ ಲಕ್ಷ್ಮಣಮೂರ್ತಿಗೆ ದಿವಸಗಳು ಮಾಡಿದಾಗ ಆತನವೊಂದು ನೆನಪಿಗಾಗಿ ಕೊಳವೆ ಹಾಕಿಸಿದ ಬಕೆಟ್‌ನಂತಹ ಸ್ಟೀಲ್ ಪಾತ್ರೆಯನ್ನು ಶ್ರೀರಾಮುಲು ತಂದುಕೊಟ್ಟನು. ಆ ಪಾತ್ರೆಮೇಲೆ ಲಕ್ಷ್ಮಣಮೂರ್ತಿ ಎಂದು ಬರೆದ ಅಕ್ಷರಗಳಿವೆ. ಆ ಪಾತ್ರೆ ನಮ್ಮ ಹತ್ತಿರ ಇಂದಿಗೂ ಇದೆ. ಪ್ರಾಣಾಪಾಯ ಸ್ಥಿತಿಯಿಂದ ತಪ್ಪಿಸಿ, ಆರೋಗ್ಯವನ್ನು ಗುಣವಾಗುವಂತೆ ಮಾಡಿದರೂ, ದೈವಜ್ಞಾನಕ್ಕೆ ಒಂದು ರೂಪಾಯಿ ಸಹ ವಿನಿಯೋಗಿಸಲಿಲ್ಲ. ಡಾಕ್ಟರುಗಳ ಔಷಧಗಳಿಗೆ ಸಾವಿರ, ಲಕ್ಷಗಳು ಖರ್ಚುಮಾಡಿದವರು ದೇವರ ಜ್ಞಾನಕ್ಕೆ ಒಂದು ರೂಪಾಯಿಯನ್ನು ಸಹ ವಿನಿಯೋಗಿಸಿಲ್ಲವೆಂದರೆ, ಅವರ ಬಳಿ ಜ್ಞಾನಕ್ಕೆ ಎಷ್ಟು ಬೆಲೆ ಇದೆಯೆಂದು ಅರ್ಥವಾಗುತ್ತಿದೆ. ಆದ್ದರಿಂದ ಕೊನೆಯಲ್ಲಿ ದೇವರು, ನೀವು ನಮ್ಮ ಹತ್ತಿರಕ್ಕೆ ಬರಬೇಡಿರಿ ಎಂದು ಹೇಳಿ ಕಳುಹಿಸಿದನು. ಆತನು ಸತ್ತುಹೋದ ನಂತರ ಅವರು ಜ್ಞಾಪಕಾರ್ಥವಾಗಿ ಕೊಟ್ಟ ಪಾತ್ರೆ ಈ

ದಿನ ಕೊಂಡರೂ ನೂರು ರೂಪಾಯಿಗಳ ಖರೀದಿ ಸಹ ಇಲ್ಲ. ಮೂವತ್ತು ಮೂರು ವರ್ಷಗಳ ಕೆಳಗೆ ಅದರ ಬೆಲೆ ಎಷ್ಟಿರುತ್ತದೊ, ನಿಮಗೇ ಅರ್ಥವಾಗುತ್ತದೆ. ಅವರ ಗುಣಗಳ ಪ್ರಭಾವವನ್ನು ಬಿಟ್ಟುಹಾಕಿ ಇಲ್ಲಿ ಮುಖ್ಯವಾಗಿ ಹೇಳಬೇಕಾಗಿರುವುದು ಏನೆಂದರೆ!

ಪ್ರೊಫೆಸರ್‌ಗೆ, ವೆಂಕಟೇಶ್‌ಗೆ ಬಂದಿರುವ ನೋವು ರೋಗವೆ ಆದರೂ ಅದನ್ನು ಸಹ ಒಂದು ಭೂತವಾಗಿ ಲೆಕ್ಕಿಸಿ ಶಾಸಿಸಿ ಹೇಳಿ ಕಳುಹಿಸಿದೆವು. ಶರೀರದಲ್ಲಿ ಪ್ರವೇಶಿಸುವ ಸೂಕ್ಷ್ಮ ಶರೀರಗ(ದೆವ್ವಗ)ಳಿಂದ ಬರುವ ಅನಾರೋಗ್ಯಗಳೆ ಅಲ್ಲದೆ, ಶರೀರದಲ್ಲಿ ಬರುವ ಕೆಲವು ರೋಗಗಳು ಸಹ ದೆವ್ವಗಳಲ್ಲದಂತಹ, ಭೂತಗಳಿಂದ ಬರುವವೆಂದು ಹೇಳಬಹುದು. ದೆವ್ವಗಳು, ಭೂತಗಳು ಎನ್ನುವ ಮಾತನ್ನು ಇಲ್ಲಿ ಸ್ವಲ್ಪ ಜಾಗ್ರತೆಯಿಂದ ಅರ್ಥಮಾಡಿಕೊಳ್ಳಬೇಕಾದ ವಿಧಾನವಿದೆ. ಒಬ್ಬ ಮನುಷ್ಯ ಅರ್ಧಾಯಸ್ಸಿನಿಂದ ಅಕಾಲ ಮರಣವನ್ನು ಹೊಂದಿದರೆ ದೆವ್ವವಾಗಿ (ಸೂಕ್ಷ್ಮ ಶರೀರವಾಗಿ) ಅದೇ ಜನ್ಮದಲ್ಲಿಯೇ ಪ್ರಾರಬ್ಧಕರ್ಮಮುಗಿದು ಹೋಗುವವರೆಗು ಇರುವನೆಂದು ಹೇಳಿದ್ದೇವೆ. ಅಂತಹ ದೆವ್ವಗಳು ಮನುಷ್ಯರವು ಆಗಬಹುದು, ಇತರೆ ಜೀವರಾಶಿಗಳವು ಆಗಬಹುದು. ಅಂತವುಗಳೆಲ್ಲ ಜೀವರಾಶಿಗಳೊಳಗೆ ಲೆಕ್ಕಿಸಲ್ಪಡುತ್ತದೆ. ಜೀವಿಯು ಅಂದಾಗ ಭೂತ ಎಂದು ಸಹ ಅರ್ಥವಿದೆ. ಅಕಾಲ ಮರಣ ಹೊಂದಿದ ನಂತರ ಸಹ ಇರುವುದು ಜೀವವೆ ಆದರೂ ಗುರುತಿಗಾಗಿ ದೆವ್ವ ಎನ್ನುತ್ತಿದ್ದೇವೆ. ಇಂತಹ ದೆವ್ವಗಳೆಲ್ಲವನ್ನು ಒಂದು ವಿಧದ ಭೂತಗಳೆಂದು ಹೇಳಬಹುದು. ಹಾಗೆ ಎರಡನೆ ವಿಧದ ಭೂತಗಳು ಸಹ ಭೂಮಿ ಮೇಲೆ ಇವೆ. ಅವುಗಳನ್ನು ವಿವರಿಸಿಕೊಂಡು ನೋಡಿದರು ಈ ವಿಧವಾಗಿ ತಿಳಿಯಬಹುದು.

ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಅನ್ನುವವುಗಳನ್ನು ಪಂಚ ಭೂತಗಳು ಎನ್ನುತ್ತೇವೆ. ಅಷ್ಟೇ ಅಲ್ಲದೆ ವಿಶೇಷವಾಗಿ ಅವುಗಳನ್ನು ಪಂಚಮಹಾಭೂತಗಳೆಂದು ಸಹ ಎನ್ನುತ್ತೇವೆ. ಮಹಾ ಭೂತಗಳೆಂದರೆ! ಬಹಳ ದೊಡ್ಡವೆಂದು ಅವುಗಳ ಬಲವನ್ನು ಊಹೆ ಮಾಡಲಾರೆವೆಂದು ಹೇಳಬಹುದು.

ಈ ಐದು ಮಹಾಭೂತಗಳು ಹೊರಗಿನ ಪ್ರಪಂಚವಾಗಿ ಕಾಣಿಸುತ್ತಿವೆ. ಹೊರಗಿನ ಪ್ರಪಂಚದಲ್ಲಿ ಐದು ಮಹಾಭೂತಗಳಿದ್ದರೆ, ಶರೀರವೆನ್ನುವುದರಲ್ಲಿ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಹೆಸರುಗಳಿರುವ ಸ್ವಲ್ಪ ಭೂತಗಳು ಸಹ ಇವೆ. ಪ್ರಪಂಚದೊಳಗಿನವು ಪಂಚ ಮಹಾಭೂತಗಳೆಂದು, ಶರೀರದೊಳಗಿನವು ಪಂಚ ಸ್ವಲ್ಪ ಭೂತಗಳೆಂದು ಎರಡು ವಿಧಗಳಲ್ಲಿ ಹೇಳಬಹುದು. ಮೊದಲನೆ ವಿಧದ ಭೂತಗಳಾದ ದೆವ್ವಗಳು, ಇನ್ನೊಂದು ಶರೀರದಲ್ಲಿ ವ್ಯಾಧಿಗಳ ರೂಪದಲ್ಲಿ ಬಾಧಿಸುವಹಾಗೆ, ಎರಡನೆ ವಿಧದ ಭೂತಗಳಾದ ಪಂಚ ಸ್ವಲ್ಪ ಭೂತಗಳು ತಾವಿರುವ ಶರೀರದಲ್ಲಿಯೇ ವ್ಯಾಧಿಗಳ ರೂಪದಲ್ಲಿ ಬಾಧಿಸುವವು. ಸುಲಭವಾಗಿ ಅರ್ಥವಾಗುವುದಕ್ಕೆ ಎರಡು ವಿಧಗಳ ಭೂತಗಳಲ್ಲಿ ಒಂದು ವಿಧ ಹೊರಗೆ, ಮತ್ತೊಂದು ವಿಧ ಒಳಗೆ ಇವೆಯೆಂದು ಹೇಳಬಹುದು. ಸ್ವಲ್ಪ ಭೂತಗಳು ದೆವ್ವಗಳ ಹಾಗೆ ರೋಗರೂಪದಲ್ಲಿ ಇದ್ದರೂ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಸ್ವಲ್ಪ ಭೂತಗಳು ದೆವ್ವಗಳಿಗಿಂತ ಪ್ರತ್ಯೇಕವಾಗಿ ಇರುವವೆಂದು ಹೇಳಬಹುದು.

ಶರೀರದಲ್ಲಿ ರೋಗರೂಪದಲ್ಲಿ ಬಾಧಿಸುವ ಮೊದಲ ವಿಧದ ದೆವ್ವಗಳು, ನಾವು ಹೇಳಿದರೆ ನಮ್ಮ ಮಾತಿಗೆ ಗೌರವಕೊಟ್ಟು ಶರೀರದಲ್ಲಿ ನೋವು ಕೊಡದಂತೆ ಹೋಗುತ್ತಿವೆ. ಹಾಗೆ ಶರೀರದಲ್ಲಿ ರೋಗರೂಪದಲ್ಲಿ ಬಾಧಿಸುವ ಎರಡನೆ ವಿಧದ ಸ್ವಲ್ಪಭೂತಗಳು ಸಹ, ನಾವು ಹೇಳಿದರೆ ನಮ್ಮ ಮಾತನ್ನು ಗೌರವಿಸಿ ನೋವು ಕೊಡದಂತೆ ಹೋಗುತ್ತವೆ. ಅನಂತಪುರದಲ್ಲಿನ ಪ್ರೊಫೆಸರ್‌ಗೆ, ಚಿನ್ನಪೊಡಮಲದಲ್ಲಿನ ವೆಂಕಟೇಶ್‌ಗೆ, ತಾಡಿಪತ್ರಿಯಲ್ಲಿನ ಲಕ್ಷ್ಮಣಮೂರ್ತಿಗೆ ಎರಡನೆ ವಿಧದ ಸ್ವಲ್ಪ ಭೂತಗಳಿಂದಲೆ ರೋಗದ ಬಾಧೆಗಳು ಬಂದಿವೆಯೆಂದು, ನಾವು ಹೇಳಿದರೆ ಅವರೊಳಗಿನ ಭೂತಗಳು ನಮ್ಮ ಮಾತುಕೇಳಿ ಅವಿತು ಕೊಂಡಿರುವುದರಿಂದ ನೋವುಗಳು ಇಲ್ಲದಂತೆ ಹೋಗಿವೆಯೆಂದು ತಿಳಿಯುತ್ತಿದೆ. ಒಬ್ಬ ಮನುಷ್ಯ ಮಾಡಿಕೊಂಡ ಪ್ರಾರಬ್ಧಕರ್ಮವನ್ನು ರೋಗದರೂಪದಲ್ಲಿ ಶರೀರದಲ್ಲಿ ಅನುಭವಿಸುವಾಗ, ಶರೀರದಲ್ಲಿ ಒಂದನೇ ವಿಧಗಳಾದ ದೆವ್ವಗಳಾದರು

ಬಾಧಿಸಬಹುದು, ಅಥವಾ ಎರಡನೆ ವಿಧಗಳಾದ ಸ್ವಲ್ಪಭೂತಗಳಾದರು ಬಾಧಿಸಬಹುದು. ನಮ್ಮ ಜೀವನದಲ್ಲಿ ನಾವು ಎಷ್ಟೋ ಶ್ರಮಿಸಿ, ಎಷ್ಟೋ ಶ್ರದ್ಧತೆಯಿಂದ ಜ್ಞಾನ ಸಮುಪಾರ್ಜನೆ ಮಾಡುವುದರಿಂದ ಶರೀರದಲ್ಲಿನ ಕರ್ಮಗಳು, ರೋಗಗಳು, ದೆವ್ವಗಳು, ಸ್ವಲ್ಪ ಭೂತಗಳು ಹೇಗಿವೆಯೆಂದು ತಿಳಿದುಕೊಂಡೆವು. ಕೆಲವರಿಗೆ ಬಂದಿರುವ ರೋಗಗಳನ್ನು ಜ್ಞಾನ ಶಕ್ತಿಯಿಂದ ನಿವಾರಿಸಿದರೆ, ನಿವಾರಿಸಿದವನು ಜ್ಞಾನಿಯೆಂದಾಗಲಿ, ನಿವಾರಣೆ ದೊಡ್ಡಕಾರ್ಯವೆಂದಾಗಲಿ ಗುರುತಿಸದೆ ಜ್ಞಾನವನ್ನು ಮಂತ್ರವೆಂದು, ಜ್ಞಾನಿಯನ್ನು ಮಂತ್ರಗಾರನೆಂದು ಹೇಳುವವರಿದ್ದಾರೆ. ತಮ್ಮ ರೋಗಗಳ ನಿವಾರಣೆಗೆ ಎಷ್ಟೋ ಸಾವಿರ, ಲಕ್ಷಗಳು ಖರ್ಚುಮಾಡಿ ಎಲ್ಲಿಯೂ ಗುಣವಾಗದೆ ಹೋದರೆ, ನಮ್ಮ ಬಳಿಗೆ ಬಂದು ಪ್ರಾರ್ಥೇಯಪಟ್ಟು ನಿವಾರಣೆ ಮಾಡಿಕೊಂಡು, ನಮಗೆ ಮಾಂತ್ರಿಕನೆಂದು ಬಿರುದು ಕೊಟ್ಟು ಹೋದವರು ಸಹ ಇದ್ದಾರೆ. ಅಂತಹ ಒಂದು ಸಂಘಟನೆಯನ್ನು ವಿವರಿಸುತ್ತೇನೆ ನೋಡಿರಿ. ಇದು 1980 ನೇ ವರ್ಷದಲ್ಲಿ ನಡೆದಂತೆ ನನಗೆ ಜ್ಞಾಪಕವಿದೆ.

ಪುಲಿವೆಂದುಲ ಹತ್ತಿರ ಪಾರ್ನಪಲ್ಲಿ ಗ್ರಾಮವಿದೆ. ಆ ಊರಿನವರು ಅನಂತಪುರದಲ್ಲಿ ನಿವಾಸವಿದ್ದಾರೆ. ಪಾರ್ನಹಳ್ಳಿಯಲ್ಲಿ ನನಗೆ ಬಂಧುಗಳು ಇದ್ದಾರೆ. ನನಗೆ ಬಂಧುಗಳಾದವರು ನನ್ನನ್ನು ಕುರಿತು ಹೇಳಿರುವುದರಿಂದ ಅನಂತಪುರದಲ್ಲಿ ನಿವಾಸವಿರುವವರು, ಅವರ ಅನಾರೋಗ್ಯವನ್ನು ಕುರಿತು ಕೇಳುವುದಕ್ಕೆ ತಾಡಿಪತ್ರಿಯಲ್ಲಿನ ನನ್ನ ಹತ್ತಿರಕ್ಕೆ ಬಂದರು. ಬಂದವರು ಮೂವರು. ಹೆಂಡತಿ, ಗಂಡ, ಒಬ್ಬದೊಡ್ಡ ವಯಸ್ಕಳು. ಗಂಡನಿಗೆ ನಲವತ್ತು ವರ್ಷಗಳ ವಯಸ್ಸು ಇದೆ. ಹೆಂಡತಿಗೆ ಮೂವತ್ತೈದು ವರ್ಷಗಳ ವಯಸ್ಸು ಇದೆ. ನಂತರ ಅರವತ್ತು ವರ್ಷ ವಯಸ್ಸಿರುವ ಆಕೆಯೊಬ್ಬಳು ಇದ್ದಾರೆ. ದೊಡ್ಡ ವಯಸ್ಸಿರುವ ಆಕೆ ಬಂದಿರುವ ವ್ಯಕ್ತಿಗೆ ತಾಯಿ ಆಗುತ್ತಾಳೆ. ಬಂದವರು "ನಮ್ಮದು ಪಾರ್ನಹಳ್ಳಿ, ಪ್ರಸ್ತುತವಾಗಿ ಅನಂತಪುರದಲ್ಲಿ ಇದ್ದೇವೆ. ಪಾರ್ನಹಳ್ಳಿಯಲ್ಲಿ ಯಾರೊ ವ್ಯಕ್ತಿ ಹೇಳಿರುವುದರಿಂದ ಬಂದಿದ್ದೇವೆ." ಎಂದು ಹೇಳಿದರು. ಹೇಳಿ ಕಳುಹಿಸಿದ

ವ್ಯಕ್ತಿ ನನಗೆ ಬಂಧುವಾಗಿರುವುದರಿಂದ, ನಮ್ಮವರು ಬಂದವರಿಗೆ ಮರ್ಯಾದೆ ಮಾಡಿ ಕೂರಿಸಿದ್ದಾರೆ. ನಂತರ ಮೇಲಿನ ಅಂತಸ್ತಿನಲ್ಲಿರುವ ನನಗೆ ವಿಷಯ ತಿಳಿಸಿದರು. ನಾನು ಅವಕಾಶ ನೋಡಿಕೊಂಡು ಅವರನ್ನು ಮೇಲಕ್ಕೆ ಬರಲು ಹೇಳಿದೆವು. ಅವರು ಮೂವರು ಬಂದು ಕುಳಿತುಕೊಂಡರು. ಗಂಡ ಹೆಂಡತಿಯನ್ನು ಕುರಿತು ಹೇಳಿದನು. ಆಕೆಗೆ ಸುಮಾರು ಒಂದು ವರ್ಷದಿಂದ ಬಲಗಾಲಲ್ಲಿ ವಿಪರೀತವಾಗಿ ನೋವು ಇದೆಯೆಂದು, ಕಾಲಿಗೆ ನೀರು ತಗುಲಿದರೆ ಚೇಳು ಕಚ್ಚಿದಾಗ ಇರುವ ನೋವಿಗಿಂತ ಹೆಚ್ಚಾಗಿ ನೋವಾಗುತ್ತದೆಂದು, ಕಾಲು ನಡೆಯುವುದಕ್ಕೆ ಬಹಳ ಕಷ್ಟವಾಗುತ್ತದೆಂದು ಹೇಳಿದರು. ಆಗ ನಾನು ಕೇಳುವುದು ನಡೆಯಿತು.

**ನಾನು** :– ಪ್ರತಿ ದಿನ ನೋವು ಬರುತ್ತದಾ? ಇಲ್ಲವೆ ಆಗಾಗ ಬರುತ್ತದಾ?

**ಆತನು** :– ಅದು ಹೋದರೆ ತಾನೆ ಬರೋದು. ಸಂವತ್ಸರದಿಂದ ಹೇಗಿದೆಯೊ ಹಾಗೆ ಇದೆ. ಒಂದು ದಿನವು ಸಹ ಹೋಗಿದೆಯೆಂದು ಹೇಳುವುದಕ್ಕೆ ಇಲ್ಲ.

**ನಾನು** :– ಹಾಗಿರುವಾಗ ಎಲ್ಲಿಯೂ ವೈದ್ಯವನ್ನು ಮಾಡಿಸಲಿಲ್ವಾ?

**ಆತನು** :– ಮಾಡಿಸಿದ್ದೇವೆ. ಬೆಂಗಳೂರಿನಲ್ಲಿ ಸ್ಪೆಷಲಿಸ್ಟ್ ಹತ್ತಿರ ತೋರಿಸಿದ್ದೇವೆ. ಮೂರು ಲಕ್ಷಗಿಂತ ಹೆಚ್ಚಾಗಿ ಹಣ ಖರ್ಚಾಗಿದೆ. ಆದರೂ ಏನು ಸರಿಹೋಗಲಿಲ್ಲ.

**ನಾನು :–** ಈಗ ಔಷಧಗಳನ್ನು ಬಳಸುತ್ತಿದ್ದೀರಾ?

ಆತನು :– ಪ್ರತಿ ದಿನ ಬಳಸಬೇಕಾದ್ದೆ! ಹೊತ್ತಿಗೆ 40 ರೂಪಾಯಿಗಳ ಔಷಧಗಳು ಬಳಸಬೇಕಾದ್ದೇ. ಔಷಧಗಳನ್ನು ಬಳಸಿದರೆ ಎರಡು ಮೂರು ಗಂಟೆಗಳು ನೋವು ಕಾಣಿಸದು. ನಂತರ ನೋವು ಶುರುವಾಗುತ್ತದೆ. ಮೂರು ಹೊತ್ತು ಔಷಧಗಳು ಬಳಸಿದರೆ ಹಗಲೆಲ್ಲಾ ಸ್ವಲ್ಪ ಚೆನ್ನಾಗಿರುತ್ತದೆ. ರಾತ್ರಿ ಹೊತ್ತು ನಿದ್ರೆ ಹೋದರೆ ಪರವಾಗಿಲ್ಲ. ನಿದ್ರೆ ಬಾರದಿದ್ದರೆ ಸಹಿಸಿಕೊಳ್ಳಲಾರದಷ್ಟು ನೋವು ಇರುತ್ತದೆ. ಆ ನೋವನ್ನು ನೋಡಲಾರದೆ ಉಯ್ಯಾಲೆ ಕಟ್ಟಿ ತೂಗುತ್ತಾ ಇದ್ದರೆ

ಸ್ವಲ್ಪ ಮೇಲು, ಇಲ್ಲದೆ ಹೋದರೆ ಒಂದು ರಾತ್ರಿ ಕಳೆಯುವುದಕ್ಕೆ ಬಹಳ ಕಷ್ಟವಾಗುತ್ತದೆ.

**ನಾನು :–** ಔಷಧಗಳು ಬಳಸಿದರೆ ಹಗಲು ನೋವು ಕಾಣಿಸುವುದಿಲ್ಲ ಎಂದು ಹೇಳಿದ್ದೀರಲ್ಲ! ಆಗಿರುವಾಗ ರಾತ್ರಿ ಹೊತ್ತು ಸಹ ಔಷಧಗಳು ಹಾಕಿಕೊಳ್ಳಬಹುದಲ್ಲ!

**ಆತನು :–** ಒಂದು ದಿನದಲ್ಲಿ ಮೂರು ಬಾರಿಗಿಂತ ಹೆಚ್ಚು ಬಳಸಬಾರದೆಂದು ಡಾಕ್ಟರು ಹೇಳಿದ್ದಾನೆ.

**ನಾನು :–** ರಾತ್ರಿಹೊತ್ತು ನೋವು ಹೆಚ್ಚಾಗಿ ನಿದ್ರೆಬಾರದಂತೆ ಇರುತ್ತದೆಂದು ಡಾಕ್ಟರಿಗೆ ನೀವು ಹೇಳಲಿಲ್ಲವಾ!

**ಆತನು :–** ಹೇಳಿದ್ದೇವೆ. ಹಗಲು ಎರಡು ಹೊತ್ತು ಹಾಕಿಕೊಂಡು, ಒಂದು ಡೋಸ್ ರಾತ್ರಿ ಹೊತ್ತು ಹಾಕಿಕೊಳ್ಳಲು ಹೇಳಿದ್ದಾನೆ. ಆದರೆ ಹಗಲೆ ನೋವು ಸಹಿಸಿಕೊಳ್ಳದೆ ಮೂರು ಬಾರಿ ಹಾಕಿಕೊಳ್ಳುತ್ತಿದ್ದೇವೆ.

**ನಾನು :–** ನೋವು ಬರುವುದಕ್ಕೆ ಕಾರಣವೇನೆಂದು ಡಾಕ್ಟರುಗಳು ಹೇಳಿದ್ದಾರೆ?

**ಆತನು :–** ಇಲ್ಲಿ ಯಾರೂ ಹೇಳಲಾಗದೆ, ಬೆಂಗಳೂರಿಗೆ ಬರೆದು ಕೊಟ್ಟಿದ್ದಾರೆ. ಅಲ್ಲಿಗೆ ಹೋಗಿ ಎಲ್ಲ ಪರೀಕ್ಷೆಗಳು ಮಾಡಿಸಿದ್ದೇವೆ. ಕೊನೆಗೆ ಕಾಲಿನ ನರಗಳಲ್ಲಿ ಲೋಪವಿರುವುದರಿಂದ ಹಾಗೆ ನೋವು ಬಂದಿದೆಯೆಂದು ನರಗಳ ಸ್ಪೆಷಲಿಷ್ಟು ಹೇಳಿದನು.

**ನಾನು :–** ಕಾಲಿನ ಮೇಲೆ ನೀರು ತಗುಲಿದರೆ, ಚೇಳು ಕಡಿದ ನೋವಿಗಿಂತ ಹೆಚ್ಚಾಗುತ್ತದೆಂದು ಹೇಳಿದ್ದೀರ. ಸ್ನಾನ ಮಾಡಬೇಕೆಂದರೆ ಹೇಗೆ?

**ಆತನು :–** ಕುರ್ಚಿಯಲ್ಲಿ ಕುಳಿತುಕೊಂಡು ಮತ್ತೊಂದು ಕುರ್ಚಿಯ ಮೇಲೆ ಕಾಲು ಇಟ್ಟು ಅದರ ಮೇಲೆ ನೀರು ಬೀಳದಂತೆ ಬಟ್ಟೆ ಹೊದಿಸಿ ಮೊದಲು ಮೈಯೆಲ್ಲಾ ಸ್ನಾನ ಮಾಡಿದ ನಂತರ ಕಾಲನ್ನು ಮಾತ್ರ ಒದ್ದೆ ಬಟ್ಟೆಯಿಂದ ಒರೆಸುತ್ತಿದ್ದೇವೆ. ನಮ್ಮ ಮನೆಯಲ್ಲಿ ಕೆಲಸ ಮಾಡುವ ಹೆಂಗಸರು ಇಬ್ಬರು

ಇದ್ದಾರೆ. ಆದ್ದರಿಂದ ಎಲ್ಲರೂ ಸೇರಿ ಜಾಗ್ರತೆಯಿಂದ ಸ್ನಾನ ಮಾಡಿಸುತ್ತಾರೆ. ಈಗ ಇಲ್ಲಿಗೆ ಬಂದಿದ್ದೇವೆ. ನೀರು ತಗುಲಿದರೆ ಕಷ್ಟ ಆದ್ದರಿಂದ ಕಾಲು ತೊಳೆದುಕೊಳ್ಳಲಿಲ್ಲ.

**ನಾನು :–** ಮೊದಲು ನೋವು ಬಂದಾಗ ಹೇಗೆ ಪ್ರಾರಂಭವಾಗಿದೆಯೊ ಹೇಳುತ್ತೀರಾ?

**ಆಕೆ :–** ಒಂದು ದಿನ ನಿದ್ರೆಯಿಂದ ಏಳುತ್ತಲೆ ಕೆಳಗಿನ ಪಾದದ ಮೇಲೆ ಐದು ನಿಮಿಷಗಳಿಗೆ ಒಂದು ಬಾರಿ ಸೂಜಿಗಳಿಂದ ಚುಚ್ಚಿದಂತೆ ಆಗುತ್ತಿತ್ತು. ಹಾಗೆ ಆ ದಿನ ಬೆಳಗ್ಗೆ 9 ಗಂಟೆಗಳ ವರೆಗು ಹಾಗೆ ಇತ್ತು. ನಂತರ ಆ ದಿನವೆಲ್ಲಾ ಏನು ಇಲ್ಲ. ಮರುದಿನ ನಿದ್ರೆಯಿಂದ ಏಳುತ್ತಿದ್ದ ಹಾಗೆ ಮೊದಲ ದಿನ ಇದ್ದಂತೆ ಸೂಜಿಗಳಿಂದ ಚುಚ್ಚಿದಂತೆ ತಿಳಿಯುತ್ತಿತ್ತು. ಆ ದಿನ ಸಾಯಂಕಾಲ ಮೂರುಗಂಟೆಗಳವರೆಗು ಹಾಗೆ ಇದೆ. ಮೂರನೆ ದಿನವು ಸಹ ಬೆಳಗ್ಗೆಯಿಂದ ಹಾಗೆ ಇದೆ. ಆ ದಿನ ರಾತ್ರಿ 9 ಗಂಟೆಗಳವರೆಗು ಹೋಗಲಿಲ್ಲ. ಇನ್ನು ನಾಲ್ಕನೆ ದಿನದಿಂದ ಕಾಲಿನಲ್ಲಿ ನೋವು ಪ್ರಾರಂಭವಾಯಿತು. ಆಗಿನಿಂದ ಇಲ್ಲಿಯವರೆಗು ಹಾಗೇ ಇದೆ.

**ನಾನು :–** ಔಷಧಗಳಿಂದ ಬಾಧೆ ಹೋಗದಿರುವಾಗ ಯಾರಾದರು ಮಂತ್ರಗಾರರಿದ್ದರೆ ಅವರ ಬಳಿ ತೋರಿಸಬಾರದಾ?

**ಆತನು :–** ಬಹಳ ಜನರಹತ್ತಿರ ತೋರಿಸಿದ್ದೇವೆ. ಆ ಪೀಡೆ, ಈ ಪೀಡೆ ಎಂದು ಹೇಳಿ ಹಣವನ್ನು ತೆಗೆದುಕೊಂಡು ಸ್ವಲ್ಪ ಜನ ಇಳೆ ತೆಗೆದಿದ್ದಾರೆ. ಸ್ವಲ್ಪ ಜನ ಮಂತ್ರಿಸಿದ್ದಾರೆ, ಸ್ವಲ್ಪಜನ ತಾಯತ ಕಟ್ಟಿದ್ದಾರೆ. ಹಣ ಹೋಗಿವೆಯಾಗಲಿ, ರೋಗ ಹೋಗಲಿಲ್ಲ.

**ನಾನು :–** ವರ್ಷದಿಂದ ನೋವು ಇದೆ ಎನ್ನುತ್ತಿದ್ದೀರಲ್ಲ! ನೋವಿರುವ ಬಲಗಾಲಿಗೆ, ನೋವಿಲ್ಲದ ಎಡಗಾಲಿಗೆ, ಸೈಜಿನಲ್ಲಿ (ಗಾತ್ರದಲ್ಲಿ) ಏನಾದರೂ ವ್ಯತ್ಯಾಸ ಬಂದಿದೆಯಾ?

**ಆತನು :-** ಏನು ವ್ಯತ್ಯಾಸ ಬರಲಿಲ್ಲ, ಮೊದಲು ಹೇಗಿತ್ತೊ ಹಾಗೆ ಈಗಲೂ ಇದೆ.

**ನಾನು :-** ಸರಿ ಅದು ಯಾವ ರೋಗವಾದರೂ ಆಗಲಿ ಕಡಿಮೆಯಾಗುವಂತೆ ನೋಡೋಣ. ಹೀಗೆ ರೋಗಗಳಿಗೆ ವೈದ್ಯ ಮಾಡುವುದು ನಾನು ಬಿಟ್ಟಿದ್ದೇನೆ. ನೀವು ಸರಿ ಕುಲಸ್ಥರು ಮತ್ತು ನಮ್ಮ ಬಂಧುಗಳು ಕಳುಹಿಸಿರುವುದರಿಂದ ಬಂದಿದ್ದೀರ ಆದ್ದರಿಂದ ನೋಡುತ್ತಿದ್ದೇನೆ.

(ಎಂದು ಹೇಳಿದ ನಂತರ ರೋಗವಿರುವ ಆಕೆಯನ್ನು ನಾನು ಮುಟ್ಟಿಕೊಳ್ಳದೆ ಆಕೆಗೆ ಗುಣಪಡಿಸಬೇಕೆಂದರೆ ಆಗುವುದಿಲ್ಲ. ಆಕೆಗೆ ನೋವು ಎಲ್ಲಿದೆಯೊ ಅಲ್ಲೆಲ್ಲಾ ಬೆರಳಿನಿಂದ ಮುಟ್ಟಿಕೊಳ್ಳಬೇಕಾಗಿದೆ. ನನಗೆ ಆಕೆಯನ್ನು ಮುಟ್ಟಿಕೊಳ್ಳುವುದು ಇಷ್ಟವಿಲ್ಲದೆ ನನ್ನ ಹೆಂಡತಿ ಮಲ್ಲೇಶ್ವರಿಯನ್ನು, ನಾನು ಹೇಳಿದಂತೆ ಮುಟ್ಟುತ್ತಾ ಇರು ಎಂದು ಹೇಳಿದೆನು. ನಂತರ ಆಕೆಯನ್ನು ನಿಂತುಕೊಳ್ಳಲು ಹೇಳಿ ನೋವು ಎಲ್ಲಿಂದ ಇದೆಯೊ ಹೇಳೆಂದು ಕೇಳಿದೆವು. ಆಗ ಆಕೆ ಬಲಗಾಲು ಮೇಲಿನ ಭಾಗ ಸೊಂಟದಿಂದ ಇದೆಯೆಂದು ಹೇಳಿದಳು. ಆಗ ತೋರುಬೆರಳನ್ನು ಆಕೆ ಹೇಳಿದ ಜಾಗದಲ್ಲಿ ಸೊಂಟದ ಹತ್ತಿರ ಇಡು ಎಂದು ನನ್ನ ಹೆಂಡತಿಗೆ ಹೇಳಿದಾಗ, ನನ್ನ ಹೆಂಡತಿ ಹಾಗೇ ತನ್ನ ತೋರುಬೆರಳಿನಿಂದ ಆಕೆ ಹೇಳಿದ ಜಾಗವನ್ನು ತಾಕಿದಳು. ಹಾಗೆ ಆ ಬೆರಳನ್ನು ಸ್ವಲ್ಪ ಸ್ವಲ್ಪ ನಿಧಾನವಾಗಿ ಕೆಳಗೆ ಸರಿಸುತ್ತಾ ಬಾ ಎಂದು ಹೇಳಿದೆನು. ನನ್ನ ಹೆಂಡತಿ ಮಲ್ಲೇಶ್ವರಿ ಆ ವಿಧವಾಗಿಯೆ ಸ್ವಲ್ಪ ಸರಿಸುತ್ತಾ ಬಂದಳು. ಬೆರಳು ಇಟ್ಟಿದಾಗಿನಿಂದ ಮಲ್ಲೇಶ್ವರಿ ಸರಿಸುತ್ತಿರುವಾಗ ನೋವು ಹೇಗಿದೆಯೊ ಹೇಳೆಂದು ಆಕೆಯನ್ನು ಕೇಳಿದೆನು. ಆಗ ಆಕೆ ನೋವನ್ನು ಗಮನಿಸುತ್ತಾ ಬೆರಳು ಕೆಳಗೆ ಸರಿಸುತ್ತಿರುವಾಗ ಬೆರಳಿನ ಕೆಳಗೆ ನೋವು ಬರುತ್ತಾ ಇದೆಯೆಂದು, ಬೆರಳಿನ ಮೇಲಿನ ಭಾಗದಲ್ಲಿ ನೋವು ಕಾಣಿಸಲಿಲ್ಲವೆಂದು ಹೇಳಿದಳು. ಮಲ್ಲೇಶ್ವರಿ ಬೆರಳನ್ನು ಸರಿಸುತ್ತಾ ಇರುವಾಗ, ನೋವು ಬೆರಳಿನ ಜೊತೆ ಇಳಿಯುತ್ತಾ ಬಂದಿದೆ. ಹಾಗೆ ಸ್ವಲ್ಪ ಸ್ವಲ್ಪವಾಗಿ ನಾನು ಹೇಳಿದಂತೆ ಮಲ್ಲೇಶ್ವರಿ ಬೆರಳನ್ನು

ಕೆಳಗೆ ಸರಿಸುತ್ತಾ ಮೊಣಕಾಲಿನವರೆಗು ತಂದಳು. ತನ್ನ ನೋವು ಕಾಲಿನ ಮೇಲ್ಭಾಗ ಸೊಂಟದವರೆಗು ಇದೆಯೆಂದು ಹೇಳಿದ ಆಕೆ, ಬೆರಳು ಇರುವಜಾಗದಿಂದ ಕೆಳಗೆ ನೋವು ಇದೆಯಾಗಲಿ ಮೊಣಕಾಲಿನ ಮೇಲೆ ಎಲ್ಲಿಯೂ ನೋವು ಇಲ್ಲ ಎಂದು ಹೇಳಿದಳು. ಮಲ್ಲೇಶ್ವರಿಯನ್ನು ಹಾಗೆ ಕೆಳಗಿನ ಪಾದದವರೆಗು ಸರಿಸುತ್ತಾ ಬಾ ಎಂದು ನಾನು ಹೇಳಿದೆನು. ಮಲ್ಲೇಶ್ವರಿ ಹಾಗೇ ಮಾಡಿದಳು. ಆಕೆ ಕಾಲಿನೊಳಗಿನ ನೋವು ಸಹ, ಸರಿಸುವ ಬೆರಳಿನಜೊತೆಗೆ ಕೆಳಗಿನ ಪಾದದವರೆಗು ಬಂದಿತು. ಪಾದದ ಮೇಲೆ ಕಾಲಿನಲ್ಲಿ ಎಲ್ಲಿಯು, ಸ್ವಲ್ಪವಾದರು ನೋವು ಇಲ್ಲದಂತೆ ಹೋಗಿದೆ. ಅದೇ ವಿಷಯವನ್ನೇ ಆಕೆಯು ಸಹ ಹೇಳಿದಳು. ಕೊನೆಗೆ ಮಲ್ಲೇಶ್ವರಿ ಬೆರಳನ್ನು ಪೂರ್ತಿ ಕೆಳಗೆ ಬರುವಂತೆ ಮಾಡಿ, ಪಾದ ಮುಗಿದು ಹೋದ ನಂತರ ಭೂಮಿಗೆ ತಾಕಿಸಲು ಹೇಳಿದೆನು. ನಾನು ಹೇಳಿದಹಾಗೆ ಮಾಡಿದಳು. ಆಕೆ ಶರೀರದಲ್ಲಿ ಕಾಲಿನೊಳಗಿನ ನೋವು ಸಹ ಭೂಮಿಯೊಳಗೆ ಇಳಿದು ಹೋಗಿದೆ, ಕಾಲಿನಲ್ಲಿ ಸ್ವಲ್ಪವಾದರು ನೋವು ಇಲ್ಲದಂತೆ ಹೋಗಿದೆ. ತನಗೆ ಕಾಲಿನಲ್ಲಿ ಸ್ವಲ್ಪವಾದರು ನೋವು ಇಲ್ಲದಂತೆ ಹೋಗಿದೆಯೆಂದು ಆಕೆ ಸಹ ಹೇಳಿದಳು. ಇದೆಲ್ಲಾ ಆಕೆಯ ಗಂಡನ ಮುಂದೆ, ಅತ್ತೆಯ ಮುಂದೆ ನಡೆಯಿತು. ಮೇಲಿನಿಂದ ಕೆಳಗಿನವರೆಗು ಬೆರಳನ್ನು ಸರಿಸುತ್ತಾ ನೋವನ್ನು ಕೆಳಗೆ ತರುವ ಪ್ರಕ್ರಿಯೆ ಕನಿಷ್ಟ ಐದು ಇಲ್ಲವೆ ಆರು ನಿಮಿಷಗಳ ಕಾಲ ನಡೆದಿರುತ್ತದೆ. ವರ್ಷದಿಂದ ಇದ್ದ ನೋವು ಐದಾರು ನಿಮಿಷಗಳಲ್ಲಿ ಇಲ್ಲದಂತೆ ಹೋಗಿದೆಯೆಂದರೆ ಆಕೆಯ ಗಂಡ, ಅತ್ತೆ ಇಬ್ಬರೂ ನಂಬಲಾರದೆ ಹೋದರು. ಅವರಿಗೆ ನಂಬಿಕೆ ಬರುವಂತೆ ನೀರನ್ನು ತರಿಸಿ ನನ್ನ ಮುಂದೆಯೇ ಕಾಲಿನ ಮೇಲೆ ಹಾಕಿ ತೋರಿಸಿದೆನು. ನೀರು ಕಾಲಿಗೆ ತಗುಲಿದರೆ ಚೇಳು ಕಚ್ಚಿದಷ್ಟು ನೋವು ಆಗುತ್ತಿತ್ತು. ಆದರೆ ಆಗ ಯಾವ ನೋವು ಬರಲಿಲ್ಲ.

ಅವರಿಗೆ ಕೆಲವು ಮಾತುಗಳನ್ನು ಹೇಳಬೇಕೆಂದು ಈ ರೀತಿ ಹೇಳಿದೆನು. "ನೀವು ಇಲ್ಲಿಯವರೆಗು ಪ್ರತಿ ದಿನ ಬಳಸುತ್ತಿದ್ದ ಔಷಧಗಳನ್ನು ಬಳಸ ಬೇಕಾದ

ಕೆಲಸವಿಲ್ಲ. ಈಗಿನಿಂದ ನೋವು ಬರುವುದಿಲ್ಲ. ನಾನು ಇದ್ದೇನೆ ಆದ್ದರಿಂದ ನಿಮಗೆ ನೋಡಿದೆನು ಸರಿಹೋಯಿತು. ನಾನು ಇಲ್ಲದೆ ಹೋಗಿದ್ದರೆ, ನಿನಗೆ ಈ ವೈದ್ಯವನ್ನು ಮಾಡುವವರೇ ಇರುತ್ತಿರಲಿಲ್ಲವಲ್ಲ! ಆದ್ದರಿಂದ ಮುಖ್ಯವಾಗಿ ನಾನು ನಿಮಗೆ ಹೇಳುವುದೇನೆಂದರೆ ನಾನು ನಿಮ್ಮ ಮುಂದೆಯೇ ವೈದ್ಯವೇನು ಮಾಡಿರುವೆನೆಂದು ನೀವು ಪ್ರತ್ಯಕ್ಷವಾಗಿ ನೋಡಿದ್ದೀರಲ್ಲವೆ! ನಾನು ಯಾವ ಔಷಧವನ್ನಾಗಲಿ, ಯಾವ ಮಂತ್ರವನ್ನಾಗಲಿ ಬಳಸಲಿಲ್ಲ. ಕೇವಲ ಬೆರಳಿನ ಸ್ಪರ್ಶದಿಂದಲೆ ನೋವನ್ನು ಹೋಗುವಂತೆ ಮಾಡಿದ್ದೇನೆ. ಅದಕ್ಕೆ ಕಾರಣ ಕೇವಲ ದೈವಜ್ಞಾನ ಮಾತ್ರ. ನಾನು ಜ್ಞಾನವನ್ನು ತಿಳಿದುಕೊಂಡಿದ್ದೇನೆ ಆದ್ದರಿಂದ ನನಗೆ ಆ ರೋಗಗಳು ಹೇಳಿದ ಮಾತು ಕೇಳುತ್ತವೆ. ಅದೇ ವಿಧವಾಗಿ ನೀವೂ ಸಹ ಜ್ಞಾನ ತಿಳಿದುಕೊಂಡರೆ ನನಗಿರುವಂತೆ ನಿಮಗು ಸಹ ಜ್ಞಾನ ಶಕ್ತಿಯಿರುತ್ತದೆ. ಆಗಿರುವಾಗ ನಿಮ್ಮ ಹತ್ತಿರಕ್ಕೆ ಇಂತಹ ರೋಗಗಳು ಬರುವುದೇ ಇಲ್ಲ. ಯಾರಿಗಾದರು ರೋಗಗಳಿದ್ದು ಬಾಧೆಬೀಳುತ್ತಿದ್ದರೆ ನಾನು ನಿಮಗೆ ಗುಣಪಡಿಸಿದಂತೆ ನೀವು ಸಹ ಅವರಿಗೆ ಗುಣಪಡಿಸಬಹುದು. ಆದ್ದರಿಂದ ನೀವು ದೈವಜ್ಞಾನವನ್ನು ತಿಳಿದುಕೊಳ್ಳಿ. ನಮಗೆ ಹೇಗೆ ಜ್ಞಾನ ತಿಳಿಯುತ್ತದೆಂದು ಅಂದುಕೊಳ್ಳುವ ಕೆಲಸವಿಲ್ಲ. ನಾವು ಜ್ಞಾನವನ್ನು ತಿಳಿಸುವ ನಿಮಿತ್ತವಾಗಿ **ಪ್ರಬೋಧ, ದೇವಾಲಯ ರಹಸ್ಯಗಳು, ಜನನ ಮರಣಸಿದ್ಧಾಂತ** ಅನ್ನುವ ಮೂರು ಗ್ರಂಥಗಳನ್ನು ಬರೆದಿಟ್ಟಿದ್ದೇವೆ. ಆ ಮೂರು ಗ್ರಂಥಗಳ ಬೆಲೆ ಕೇವಲ 40/– ರೂಪಾಯಿಗಳು ಮಾತ್ರ. ನೀವು 40 ರೂಪಾಯಿಗಳು ಕೊಟ್ಟು ಗ್ರಂಥಗಳನ್ನು ತೆಗೆದುಕೊಂಡು ಹೋಗಿ ಮನೆಯಲ್ಲಿಯೇ ಜ್ಞಾನವನ್ನು ತಿಳಿದುಕೊಳ್ಳಿ ಎಂದು ಜ್ಞಾನವನ್ನು ಕುರಿತು, ಜ್ಞಾನದವೊಂದು ದೊಡ್ಡತನವನ್ನು ಕುರಿತು ಹೇಳಿದೆನು.

ನಾನು ಹೇಳಿರುವುದಕ್ಕೆ ಅವರು ನಂತರ ಬಂದು ಪುಸ್ತಕಗಳನ್ನು ತೆಗೆದುಕೊಳ್ಳುತ್ತೇವೆಂದು ಹೇಳಿ ಹೋದರು. ವಾರದ ದಿನಗಳವರೆಗು ಅವರು ಬರಲಿಲ್ಲ. ಗೋನುಗುಂಟ್ಲ ವೆಂಕಟನಾರಾಯಣ ಅನಂತಪುರದಲ್ಲಿಯೇ ನಿವಾಸಮಾಡುತ್ತಿದ್ದನು. (ಪ್ರಸ್ತುತವಾಗಿ ಈಗ ಆತನು ಸನ್ಯಾಸತ್ವ ತೆಗೆದುಕೊಂಡು

ಜಿಹ್ವಾನಂದ ಸ್ವಾಮಿಯಾಗಿ ಇದ್ದಾನೆ). ವೆಂಕಟನಾರಾಯಣ ತನ್ನ ಸ್ನೇಹಿತನ ಮನೆಗೆ ಹೋಗಿದ್ದಾನೆ. ಆ ಸ್ನೇಹಿತನ ಮನೆಯ ಪಕ್ಕದಲ್ಲಿಯೆ ನನ್ನ ಹತ್ತಿರಕ್ಕೆ ಬಂದು ನೋವನ್ನು ಗುಣಪಡಿಸಿಕೊಂಡು ಹೋದವರಿದ್ದಾರಂತೆ. ಪಕ್ಕದ ಮನೆ ಆಕೆಗೆ ತಾಡಿಪತ್ರಿ ಸ್ವಾಮಿಹತ್ತಿರಕ್ಕೆ ಹೋಗಿದ್ದರೆ ನೋವು ಹೋಗಿದೆಯೆಂದು ವೆಂಕಟನಾರಾಯಣನಿಗೆ ಆತನ ಸ್ನೇಹಿತನು ಹೇಳಿದ್ದನು. ವೆಂಕಟನಾರಾಯಣ ನನ್ನ ಹತ್ತಿರಕ್ಕೆ ವಾರಕ್ಕೆ ಒಂದು ಸಾರಿ ಬಂದು ಜ್ಞಾನವನ್ನು ತಿಳಿದುಕೊಳ್ಳುವವನು. ಆದ್ದರಿಂದ ವೆಂಕಟನಾರಾಯಣ ಪಕ್ಕದ ಮನೆಯವರ ಹತ್ತಿರಕ್ಕೆ ಹೋಗಿ ಮಾತನಾಡಿ, ನೋವು ಪೂರ್ತಿಯಾಗಿ ಹೋಗಿದೆಯಾ ಎಂದು ಕೇಳಿದನು. ಅದಕ್ಕೆ ಆಕೆ ಪೂರ್ತಿಯಾಗಿ ಹೋಗಿದೆ, ಯಾರಿಂದಲೂ ಆಗದ ಅದನ್ನು ಆತನು ಹೋಗಲಾಡಿಸಿದನು ಎಂದು ಹೇಳಿದಳು. ಅಷ್ಟರಲ್ಲಿಯೇ ಅಕೆಯ ಅತ್ತೆ ನೋವೇನೊ ಇಲ್ಲದಂತೆ ಮಾಡಿದ್ದಾನೆ, ಆದರೇ ಆತನು ಹಣ ಕೇಳುತ್ತಾನೆ ಎಂದು ಅಂದಳು. ಅಷ್ಟೇ ಅಲ್ಲದೆ ಆತನದ್ದು ಏನು ಖರ್ಚಾಗಲಿಲ್ಲ, ನಮ್ಮನ್ನು 40 ರೂಪಾಯಿಗಳು ಕೇಳಿದನು. ಎರಡು ನಿಮಿಷಗಳು ಮಂತ್ರಿಸಿ, ಹಣ ಕೇಳಿದರೆ ಏನು ಚೆನ್ನಾಗಿರುತ್ತದೆ? ಎಂದು ಸಹ ಮಾತನಾಡಿದ್ದಾಳೆ. ಆ ಮಾತುಗಳನ್ನು ಕೇಳಿದ ವೆಂಕಟನಾರಾಯಣನಿಗೆ ಏನು ಅರ್ಥವಾಗಲಿಲ್ಲ. ಇಲ್ಲಿ ಏನು ನಡೆದಿದೆಯೆನ್ನುವುದು ಆತನಿಗೆ ತಿಳಿದಿಲ್ಲ. ಆದ್ದರಿಂದ ಆತನು ಅವರೊಂದಿಗೆ ಏನು ಮಾತನಾಡದಂತೆ, ಮೌನವಾಗಿ ಬಂದನು. ತಕ್ಷಣವೆ ತಾಡಪತ್ರಿಗೆ ಬಂದು, ನಡೆದ ವಿಷಯವನ್ನೆಲ್ಲಾ ನನ್ನ ಹೆಂಡತಿಯಿಂದ ತಿಳಿದುಕೊಂಡಿದ್ದಾನೆ. ನಂತರ ನನ್ನ ಹತ್ತಿರಕ್ಕೆ ಬಂದು ಅನಂತಪುರದಲ್ಲಿ ಅವರು ಅಂದಿರುವ ಮಾತುಗಳನ್ನು ನನಗೆ ಹೇಳಿದನು. ಆ ಮಾತುಗಳಿಗೆ ನನಗೆ ಕೋಪಬಂದಿತು.

ಆಗ ವೆಂಕಟನಾರಾಯಣನ ಹತ್ತಿರ ಹೀಗೆ ಹೇಳಿದೆನು. "ಅವರು ವಿಪರೀತವಾಗಿ ಬಾಧೆಬೀಳುತ್ತಾ ನನ್ನ ಬಳಿಗೆ ಬಂದರು. ಅವರು ಯಾರೋ ನನಗೆ ತಿಳಿಯದು. ಪಾರ್ನಹಳ್ಳಿಯಿಂದ ಹೇಳಿ ಕಳುಹಿಸಿದ್ದಾರೆಂದು ಮತ್ತು ಕುಲಸ್ಥರೆಂದು ಅವರು ಬರುತ್ತಿದ್ದಹಾಗೆ ಕಾಫಿ ಕೊಟ್ಟು ಮರ್ಯಾದೆ ಮಾಡಿದೆವು.

ನಂತರ ಮಧ್ಯಾಹ್ನ ಊಟದ ಸಮಯಕ್ಕೆ ಮೂವರಿಗು ಅನ್ನವನ್ನು ಸಹ ಇಟ್ಟಿದ್ದೇವೆ. ಪೈಸೆಯು ಸಹ ಖರ್ಚಾಗದಂತೆ ಎಷ್ಟೋ ಕಾಲದಿಂದ ಇದ್ದ ಬಾಧೆಯನ್ನು ಐದು ನಿಮಿಷಗಳಲ್ಲಿ ಇಲ್ಲದಂತೆ ಮಾಡಿದ್ದೇನೆ. ನನ್ನ ಬಳಿಗೆ ಬರುವುದಕ್ಕಿಂತ ಮೊದಲು ಒಂದು ದಿನಕ್ಕೆ ನೂರು ರೂಪಾಯಿಗಳ ಔಷಧಗಳನ್ನು ತಿನ್ನುತ್ತಿದ್ದೇವೆಂದು ಅವರೆ ಹೇಳಿದ್ದಾರೆ. ಅಷ್ಟೇ ಅಲ್ಲದೆ ಡಾಕ್ಟರುಗಳ ಹತ್ತಿರ ಲಕ್ಷಗಟ್ಟಲೆ ಹಣ ಹೋಗಿವೆಯೆಂದು ಅವರೆ ಹೇಳಿದರು. ಅಷ್ಟು ದೊಡ್ಡ ರೋಗವನ್ನು ನಾನು ಸುಲಭವಾಗಿ ಗುಣಪಡಿಸಿ, ಜ್ಞಾನವನ್ನು ತಿಳಿದುಕೊಳ್ಳಿ, ಇಂತಹ ರೋಗಗಳು ಬರುವುದಿಲ್ಲವೆಂದು ಹೇಳಿದೆನು. ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ನಮ್ಮ ಬಳಿ ಇರುವ 40 ರೂಪಾಯಿಗಳ ಪುಸ್ತಕಗಳನ್ನು ಕೊಂಡುಕೊಳ್ಳಿರೆಂದು ಹೇಳಿದೆವು. 40 ರೂಪಾಯಿಗಳು ಕೊಟ್ಟು, ಪುಸ್ತಕಗಳನ್ನು ತೆಗೆದುಕೊಂಡು ಓದಿಕೊಂಡರೆ ಅವರಿಗೆ ಒಳ್ಳೆಯದೆಂದು ಹೇಳಿದ್ದೇನಾಗಲಿ, ಉಚಿತವಾಗಿ 40 ರೂಪಾಯಿಗಳು ಕೊಡಬೇಕೆಂದು ನಾನು ಕೇಳಲಿಲ್ವೆ! ಒಂದು ವೇಳೆ 40 ರೂಪಾಯಿಗಳು ಉಚಿತವಾಗಿ ಕೇಳಿದ್ದರೂ, ನನ್ನದು ನ್ಯಾಯವೇ ಆಗುತ್ತದೆ. ಅವರು ಬಂದಿರುವ ದಿನ ಮೂವರಿಗು ಕೊಟ್ಟಕಾಫಿ, ಇಟ್ಟ ಊಟವನ್ನು ಲೆಕ್ಕಹಾಕಿದರೆ 40 ರೂಪಾಯಿಗಳಿಗಿಂತ ಹೆಚ್ಚಾಗಿಯೆ ಆಗುತ್ತದೆ. ಸ್ವಲ್ಪವಾದರೂ ವಿಚಕ್ಷಣಾ ಜ್ಞಾನ ಇಲ್ಲದೆ ಮಾತನಾಡುವವರನ್ನು ಹತ್ತಿರಕ್ಕು ಸಹ ಬರಮಾಡಿಕೊಳ್ಳುವುದು ತಪ್ಪು, ಅವರಿಗೆ ವೈದ್ಯ ಮಾಡುವುದು ತಪ್ಪೆ. ನಾನು ಜ್ಞಾನವನ್ನು ತಿಳಿದುಕೊಳ್ಳಲು ಹೇಳಿದರೆ ಹಣ ಕೇಳಿದ್ದಾರೆಂದು ಹೇಳಿರುವುದು ಅವರು ಮಾಡಿದ ದೊಡ್ಡ ತಪ್ಪು ಎಂದು ಕೋಪದಿಂದ ಹೇಳಿದೆನು.

ಭೂತ ಗ್ರಹಿಸಕೊಳ್ಳುವ ಶಕ್ತಿಯಿರುವ ಗ್ರಹವಾದ್ದರಿಂದ ನಾನು ಕೋಪಗೊಂಡು ಅರಚಿದ್ದನ್ನು, ಅವರು ಮಾತನಾಡಿರುವುದು ದೊಡ್ಡ ತಪ್ಪು ಎಂದು ಹೇಳಿರುವುದು ರೋಗ ಭೂತ ಗ್ರಹಿಸಿಕೊಂಡಿತು. ಆ ಭೂತಕ್ಕೂ ಸಹ ಕೋಪಬಂದಿತೊ ಏನೊ, ಅಲ್ಲಿಯವರೆಗು ನನ್ನ ರೂಮಿನಲ್ಲಿಯೇ ಬೆರಳನ್ನು ಭೂಮಿಗೆ ತಾಕಿಸಿದ ಜಾಗದಲ್ಲಿಯೇ ಇದ್ದ ಭೂತ ತಕ್ಷಣವೇ ಅನಂತಪುರಕ್ಕೆ

ಹೋಗಿ ಆಕೆಯ ಕಾಲಿನಲ್ಲಿ ಸೇರಿಕೊಂಡು ಮೊದಲಿನಂತೆಯೆ ಬಾಧಿಸುವುದನ್ನು ಪ್ರಾರಂಭಿಸಿತು. ಆಗ ಒಬ್ಬ ಗುಮಾಸ್ತ ಜ್ಞಾಪಕಬಂದಂತೆ ನಾನು ಜ್ಞಾಪಕ ಬಂದಿದ್ದೇನೆ. ಅಲ್ಲಿಗೆ ಹೋದರೆ ಗುಣಪಡಿಸುತ್ತಾನೆಂಬ ಧೈರ್ಯದಿಂದ ಬಂದರು. ಈ ಬಾರಿ ಬಂದರೂ, ಅವರಿಗೆ ಯಾವ ಮರ್ಯಾದೆ ಮಾಡಲಿಲ್ಲ. ಕಾಫಿ ಸಹ ಕೊಡಲಿಲ್ಲ. ಊಟದ ಸಮಯಕ್ಕೆ ಊಟವನ್ನು ಸಹ ಇಡಲಿಲ್ಲ. ಬೆಳಗ್ಗೆ 9 ಗಂಟೆಗಳಿಂದ ಸಾಯಂಕಾಲ 4 ಗಂಟೆಗಳವರೆಗು ಕೆಳಗೆ ಕುಳಿತುಕೊಂಡರು ನಾನು ಮೇಲಕ್ಕೆ ಕರೆಯಲಿಲ್ಲ. ನನ್ನ ಹೆಂಡತಿಯನ್ನು ಕೇಳಿದರೆ ಆತನು ಬೇರೆ ಕೆಲಸದ ಮೇಲೆ ಇದ್ದಾನೆಂದು ಹೇಳಿದಳು. ಮೇಲಕ್ಕೆ ಹೋಗಿ ಕೇಳಿ ಬರುತ್ತೇವೆಂದು ಕೇಳಿದರು, ಹಾಗೆ ಅನುಮತಿ ಇಲ್ಲದೆ ಹೋಗಬಾರದೆಂದು ಹೇಳಿದ್ದಾರೆ. ಅವರು ಬರುತ್ತಲೆ ನಾವೇ ಮಾತನಾಡಿಸಿ, ಮರ್ಯಾದೆ ಕೊಟ್ಟು ಅವರ ಕೆಲಸ ಮಾಡಿ ಕಳುಹಿಸುತ್ತಾರೆಂದು ಅಂದುಕೊಂಡಿದ್ದರೊ ಏನೊ ಆದರೆ ಅವರು ಅಂದುಕೊಂಡಿರುವುದೆಲ್ಲಾ ಮೇಲೆಕೆಳಗಾಗಿದೆ. ಕೊನೆಗೆ ಮಾಡುವುದೇನಿಲ್ಲವೆಂದು ಹಿಂತಿರುಗಿ ಹೋದರು. ನಂತರ ಬಹಳ ಜನರೊಂದಿಗೆ ಹಾಗೆ ಮಾತನಾಡಿರು ವುದು ನಮ್ಮದು ತಪ್ಪು ಎಂದು ಹೇಳಿಕೊಂಡರೂ, ನಾವು ಅವರ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ಲಕ್ಷ್ಮಣ ಮೂರ್ತಿಯದು, ಅನಂತಪುರ ರೋಗಿಯದು ನನಗೆ ಒಳ್ಳೆಯ ಗುಣಪಾಠವಾಯಿತು. ಆಗಿನಿಂದ ಯಾರಿಗು ವೈದ್ಯ ಮಾಡಬಾರದೆಂದುಕೊಂಡೆನು. ನಾನು ಅಲ್ಲಿಯವರೆಗು ಮಾಡಿರುವುದು ಪರಿಶೋಧನೆ ನಿಮಿತ್ತ. ನನಗೆ ಎಲ್ಲ ವಿಷಯಗಳು ತಿಳಿದುಹೋಗಿರುವುದರಿಂದ, ಆ ವೈದ್ಯಕ್ಕೆ ದೂರವಾಗಬೇಕೆಂದುಕೊಂಡೆನು. ಮೇಲಿನ ಸಂಘಟನೆಯಲ್ಲಿ ಕಾಲಿನಲ್ಲಿ ನೋವನ್ನು ಕುರಿತು ಕೆಲವರಿಗೆ ಅದು ದೆವ್ವವೊ ಅಥವಾ ರೋಗವೊ ಎಂದು ಅನುಮಾನ ಇರಬಹುದು. ಅದಕ್ಕೆ ನನ್ನ ಉತ್ತರ ಅದು ಮೊದಲ ವಿಧದ ದೆವ್ವವಲ್ಲ. ಎರಡನೇ ವಿಧವಾದ ಭೂತವೆಂದು ಹೇಳಬಹುದು. ಅನುಭವಿಸುವ ಪಾಪಗಳಲ್ಲಿ ಮೂರನೇ ವಿಧವಾದ ಕರ್ಮ ಎಂದು ಹೇಳಬಹುದು. ಆದ್ದರಿಂದ ಅದು ಔಷಧಗಳಿಗು, ಮಂತ್ರಗಳಿಗು ಬಗ್ಗಲಿಲ್ಲ. ಒಬ್ಬ ಜ್ಞಾನಿಗಳ ಮಾತಿನಿಂದಲೇ ಶರಣಾಗುವ ಜ್ಞಾನಕ್ಕೆ ಸಂಬಂಧಿಸಿದ ಕರ್ಮವೆಂದು ಅರ್ಥವಾಗುತ್ತಿದೆ. ನನ್ನ

ಮಾತಿಗೆ ಬೆಲೆಕೊಟ್ಟು, ಕಾಲಿನಿಂದ ಇಳಿದುಬಂದು, ನನ್ನ ಸನ್ನಿಧಿಯಲ್ಲಿಯೇ ಇದ್ದ ರೋಗ ಭೂತ ನನಗೆ ಬಂದಿರುವ ಕೋಪವನ್ನು ಗ್ರಹಿಸಿ, ಮತ್ತೆ ಅವರಲ್ಲಿಯೇ ಸೇರಿ ತನ್ನ ಕೆಲಸವನ್ನು ತಾನು ಮಾಡಿದಂತೆ, ಈ ಸಂಘಟನೆಯಲ್ಲಿ ನಿರೂಪಣೆಗೆ ಬಂದಿದೆ. ಭೂತಗಳು ಗ್ರಹಿಸಿಕೊಳ್ಳುವ ಸ್ವಭಾವವಿರುವವೆಂದು, ಅವು ಅಂದುಕೊಂಡರೆ ಮತ್ತೆ ಶಿಕ್ಷೆಯನ್ನು ಜಾರಿ ಮಾಡುತ್ತವೆಂದು ತಿಳಿಯುವುದಕ್ಕೆ, ನಿದರ್ಶನವಾಗಿ ಮತ್ತೊಂದು ಘಟನೆಯನ್ನು ವಿವರಿಸುತ್ತೇನೆ ನೋಡಿರಿ. ಈಗ ಹೇಳುತ್ತಿರುವುದು ಮೊದಲನೆ ವಿಧದ ಭೂತಕ್ಕೆ ಸಂಬಂಧಿಸಿರುವುದೆಂದು ಅರ್ಥವಾಗುತ್ತದೆ.

ತಾಡಿಪತ್ರಿ ಬಳಿ ಚಿಂತಲಪಲ್ಲಿ ಎನ್ನುವ ಚಿಕ್ಕ ಹಳ್ಳಿ ಇದೆ. ಆ ಊರಿನಲ್ಲಿ ಒಬ್ಬ ದೊಡ್ಡ ರೈತ. ಆತನ ಹೆಸರು ಸರಿಯಾಗಿ ನೆನಪಿಲ್ಲ. ಬಹುಶ ನಾರಾಯಣರೆಡ್ಡಿ ಅಂದುಕೊಳ್ಳುತ್ತೇನೆ. ಆತನನ್ನು ಒಂದು ಸಾಧಾರಣ ದೆವ್ವ ಇಡಿದು ಪೀಡಿಸುತ್ತಿತ್ತು. ಆ ದೆವ್ವದ ಚರಿತ್ರೆ ನೋಡಿದರೆ ಹೀಗಿದೆ, ನಾಗೇಂದ್ರ ಎಂಬ ಯುವಕನು ಹೊಸದಾಗಿ ಮದುವೆ ಮಾಡಿಕೊಂಡಿದ್ದನು. ಆತನದು ಸಹ ಚಿಂತಲಹಳ್ಳಿ ಗ್ರಾಮವೆ. ಮದುವೆಯಾದಾಗಿನಿಂದ, ಇತ್ತ ಹೆಂಡತಿಗೆ ಅತ್ತ ಅಮ್ಮನಿಗೆ ಒಬ್ಬರಿಗೊಬ್ಬರು ಸರಿಹೋಗದೆ ಜಗಳವಾಡುತ್ತಿದ್ದರು. ಅತ್ತೆ ಸೊಸೆ ಪ್ರತಿ ಚಿಕ್ಕ ವಿಷಯಕ್ಕೆ ಒಡೆದಾಡುತ್ತಿದ್ದರು. ಇದು ನಾಗೇಂದ್ರನಿಗೆ ಬಹಳ ಕಷ್ಟವಾಗಿತ್ತು. ಇತ್ತ ಹೆಂಡತಿಗೆ ಅತ್ತ ತಾಯಿಗೆ ಹೇಳಲಾಗದೆ ಮಧ್ಯದಲ್ಲಿ ಬಾಧೆಪಡುತ್ತಿದ್ದನು. ಆರ್ಥಿಕ ನೆರವು ಇಲ್ಲದ ಕುಟುಂಬ, ಆದ್ದರಿಂದ ಎಲ್ಲಿಗಾದರೂ ಹೋಗಿ ಬದುಕುವುದಕ್ಕು ಸಹ ಅವಕಾಶವಿಲ್ಲ. ಅಂತಹ ಸ್ಥಿತಿಯಲ್ಲಿ ಹಾಗೆ ಕಾಲ ಕಳೆಯುತ್ತಿರುವಾಗ ಅತ್ತೆ ಸೊಸೆ ಇಬ್ಬರು ವಾದಿಮಾಡಿಕೊಂಡು, ಹೆಂಡತಿ ನಾಗೇಂದ್ರನಿಗೆ ನಾನು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆಂದು ಹೇಳಿದಳು. ಹೆಂಡತಿ ಹೇಳಿದ ಹಾಗೆ ನಾಗೇಂದ್ರನ ಅಮ್ಮ ಸಹ ಸತ್ತುಹೋಗುತ್ತೇನೆಂದು ಹೆದರಿಸಿದ್ದಾಳೆ. ಇಬ್ಬರು ಹಾಗೆ ಹೇಳಿರುವುದರಿಂದ ಏನು ತೋಚದೆ, ಅವರಿಗೆ ಏನು ಹೇಳಲಾಗದೆ, ನಾಗೇಂದ್ರ ತಾನೆ ಸಾಯಬೇಕೆಂದುಕೊಂಡನು. ಪೈರಿಗೆ ಹೊಡೆಯುವ ಕ್ರಿಮಿನಾಶಕ

ಔಷಧವನ್ನು ತೆಗೆದುಕೊಂಡು ಹೊಲದೊಳಗೆ ಹೋಗಿ ಸೇವಿಸಿದ್ದಾನೆ. ಆ ಸಮಯದಲ್ಲಿ ಸುತ್ತಮುತ್ತ ಹೊಲಗಳಲ್ಲಿ ಯಾರೂ ಇಲ್ಲ, ಆದ್ದರಿಂದ ವಿಷ ಸೇವಿಸಿದ ನಾಗೇಂದ್ರ ಕೆಳಗೆ ಬಿದ್ದು ಒರಳಾಡುತ್ತಿದ್ದರೂ ಯಾರೂ ನೋಡಲಿಲ್ಲ. ಕೊನೆಗೆ ಆತನು ಸತ್ತುಹೋದನು. ಅದು ನಾಗೇಂದ್ರನಿಗೆ ಅಕಾಲಮೃತ್ಯುವು ಆಗಿದೆ. ಆದ್ದರಿಂದ ಆತನು ಸಾಧಾರಣ ದೆವ್ವವಾಗಿ ಉಳಿದುಹೋದನು.

ನಾಗೇಂದ್ರ ಸತ್ತುಹೋಗಿ ಸುಮಾರು ಆರು ತಿಂಗಳುಗಳಾಗಿವೆ. ಒಂದು ದಿನ ನಾರಾಯಣರೆಡ್ಡಿ ನಾಗೇಂದ್ರ ಸತ್ತುಹೋದ ಹೊಲದ ಬೊದುವಿನ ಮೇಲೆ ಹೋಗುತ್ತಿರುವುದರಿಂದ ನಾಗೇಂದ್ರ ನೋಡಿದನು. ಆತನು ಆ ಊರಿನಲ್ಲಿ ಧನಿಕನು, ಆದ್ದರಿಂದ ಆತನೊಳಗೆ ಸೇರಿಕೊಂಡರೆ ಸ್ವಲ್ಪ ಸುಖವನ್ನು ಅನುಭವಿಸಬಹುದು ಎಂದು ಅಂದುಕೊಂಡನು. ಆಗ ನಾಗೇಂದ್ರ, ನಾರಾಯಣರೆಡ್ಡಿ ಜೊತೆಗೆ ನಡೆಯುತ್ತಾ ಸಮಯ ನೋಡಿ ನಾರಾಯಣರೆಡ್ಡಿ ಯನ್ನು ಕೆಳಗೆ ಬೀಳುವಂತೆ ನೂಕಿದನು. ಆತನು ಕೆಳಗೆ ಬಿದ್ದು ಮೇಲಕ್ಕೆ ಏಳುವುದರೊಳಗೆ ಆತನ ಶರೀರದೊಳಗೆ ಪ್ರವೇಶಿಸಿದನು. ನಾಗೇಂದ್ರ, ನಾರಾಯಣರೆಡ್ಡಿ ಶರೀರದೊಳಗೆ ಇರುವುದರಿಂದ, ನಾಗೇಂದ್ರ ವಿಷ ಸೇವಿಸಿದಾಗ ಹೊಟ್ಟೆಯಲ್ಲಿ ಬಾಧೆ ಹೇಗಿರುತ್ತಿತ್ತೋ ಹಾಗೆಯೇ ನಾರಾಯಣರೆಡ್ಡಿಗೆ ಬಾಧೆ ಕಾಣಿಸುತ್ತಿತ್ತು. ಆಗಿನಿಂದ ನಾರಾಯಣ ರೆಡ್ಡಿ ಬಹಳ ಜನ ಡಾಕ್ಟರುಗಳ ಬಳಿ ತೋರಿಸಿಕೊಂಡು ಅದು ಗುಣವಾಗದೆ ಹೋಗಿರುವುದರಿಂದ, ಇತರರ ಸಲಹೆಯಿಂದ ಮಾಂತ್ರಿಕರನ್ನು ಆಶ್ರಯಿಸಿ ವೈದ್ಯವನ್ನು ಮಾಡಿಸಿಕೊಂಡನು. ನಾರಾಯಣರೆಡ್ಡಿ ಶರೀರದೊಳಗಿರುವುದು ನಾಗೇಂದ್ರ ಎಂದು ತಿಳಿದಿದೆ. ಆದರೆ ಅದಕ್ಕೆ ಸರಿಯಾದ ಮಾಂತ್ರಿಕನು ಯಾರೂ ದೊರಕಲಿಲ್ಲವೇನೊ, ನಾರಾಯಣರೆಡ್ಡಿಗೆ ಹೊಟ್ಟೆಯಲ್ಲಿನ ಬಾಧೆ ಕಡಿಮೆಯಾಗಲಿಲ್ಲ. ನಾರಾಯಣ ರೆಡ್ಡಿಗೆ ಪರಿಚಯವಿದ್ದ ನಾರಾಯಣ ಎಂಬ ವ್ಯಕ್ತಿ ನನಗೂ ಸಹ ಸ್ವಲ್ಪ ಪರಿಚಯವೆ. ನಾನು ಯಾವುದೊ ಕೆಲಸದ ಮೇಲೆ ಬಜಾರಿಗೆ ಹೋದಾಗ, ಆ ವ್ಯಕ್ತಿ ನನ್ನೊಂದಿಗೆ ಕಲಿತು ನಾರಾಯಣರೆಡ್ಡಿ ವಿಷಯ, ನಾಗೇಂದ್ರ ವಿಷಯ ಎರಡೂ ಹೇಳಿದನು.

ಪಕ್ಕದಲ್ಲೆ ಇದ್ದ ಲಾಡ್ಜಿನಲ್ಲಿ ನಾರಾಯಣ ರೆಡ್ಡಿಗೆ ಮಾಂತ್ರಿಕರು ವೈದ್ಯ ಮಾಡುತ್ತಿದ್ದಾರೆ. ನಾವು ಅಲ್ಲಿಗೆ ಹೋಗಿ ನೋಡಿ ಬರೋಣ ಎಂದು ನನ್ನನ್ನು ಕರೆದನು. ನಾನು ಯಾವಾಗಲೂ ಮಾಂತ್ರಿಕರು ಮಾಡುವ ವೈದ್ಯವನ್ನು ನೋಡಿಲ್ಲ, ಆದ್ದರಿಂದ ಬರುತ್ತೇನೆ ಹೋಗೋಣ ಎಂದು ಆತನೊಂದಿಗೆ ಸೇರಿ ಲಾಡ್ಜಿನೊಳಗೆ ಹೋದೆವು. ಆಗ ಸಮಯ ಹಗಲು ಹನ್ನೊಂದು ಗಂಟೆಗಳಾಗಿವೆ. ನಾರಾಯಣರೆಡ್ಡಿ ಸುತ್ತ ನಾಲ್ವರು ಮಾಂತ್ರಿಕರು ಕುಳಿತುಕೊಂಡು ಮಂತ್ರಿಸುತ್ತಿದ್ದಾರೆ. ನಾಗೇಂದ್ರ ದೆವ್ವ ಹೊರಗೆ ಬಂದು ಮಾತನಾಡಲಿಲ್ಲ. ನಾರಾಯಣರೆಡ್ಡಿ ಮಾತ್ರ ಹೊಟ್ಟೆಯಲ್ಲಿ ಬಾಧೆಯಾಗಿ ಇದೆಯೆಂದು ಹೇಳುತ್ತಿದ್ದಾನೆ. ನಾವು ಒಂದು ಗಂಟೆವರೆಗು ಅಲ್ಲಿಯೇ ಇದ್ದು ನೋಡಿದೆವು. ದೆವ್ವ ಹೊರಗೆ ಬರುವುದಾಗಲಿ, ನಾರಾಯಣರೆಡ್ಡಿ ಹೊಟ್ಟೆಯಲ್ಲಿ ಬಾಧೆ ಕಡಿಮೆಯಾಗುವುದಾಗಲಿ ನಡೆಯಲಿಲ್ಲ. ಮಧ್ಯಾಹ್ನ ಊಟದ ಸಮಯವಾದ್ದರಿಂದ ನಾನು ಮನೆಗೆ ಬಂದೆನು.

ಸಾಯಂಕಾಲ ನಾಲ್ಕು ಗಂಟೆಗಳ ಸಮಯದಲ್ಲಿ ನನ್ನನ್ನು ಲಾಡ್ಜಿನೊಳಗೆ ಕರೆದುಕೊಂಡು ಹೋದ ನಾರಾಯಣ ಅನ್ನುವ ವ್ಯಕ್ತಿ ನನ್ನ ಹತ್ತಿರಕ್ಕೆ ಬಂದನು. ಏನು ಬಂದಿದ್ದೀಯ? ಎಂದು ನಾನು ನಾರಾಯಣನನ್ನು ಕೇಳಿದಾಗ, ನಾರಾಯಣ ಹೀಗೆ ಹೇಳಿದನು. "ನಾರಾಯಣ ರೆಡ್ಡಿ ಒಂಟಿಯಾಗಿ ಇರುವಾಗ ಲಾಡ್ಜಿನಲ್ಲಿ ನೇಣು ಹಾಕಿಕೊಂಡಿದ್ದಾನಂತೆ ಅಷ್ಟರಲ್ಲಿಯೆ ಆತನ ಅಳಿಯ ಅಲ್ಲಿಗೆ ಹೋಗಿರುವುದರಿಂದ ಆತನು ಬದುಕಿದ್ದಾನೆ. ನಾವು ಬಂದ ನಂತರ ಮೂರು ಗಂಟೆಗಳ ಸಮಯದಲ್ಲಿ ಇದು ನಡೆದಿದೆ. ನನಗೆ ವಿಷಯ ತಿಳಿದು ನಾನು ಹೋಗಿಬಂದೆನು. ಆ ಬಾಧೆಗೆ ಸಹಿಸಿಕೊಳ್ಳಲಾಗದೆ ನೇಣು ಹಾಕಿಕೊಂಡಿದ್ದಾನೆ. ನೀವು ನೋಡದಿದ್ದರೆ ಬಾಧೆಗೆ ಸಹಿಸಿಕೊಳ್ಳದೆ ಸಾಯುತ್ತಾನೆ. ಏನು ಅಂದುಕೊಳ್ಳದೆ ನನ್ನನ್ನು ನೋಡಿಯಾದರು ಇದು ಒಂದು ನೋಡಬೇಕೆಂದು ಕೇಳಿದನು. ನಾರಾಯಣನ ಮಾತುಗಳು ಕೇಳಿದ ನಂತರ ನನಗು ಸಹ ನೋಡಬೇಕೆಂದೆನಿಸಿತು. ಆಗ ನಾರಾಯಣನೊಂದಿಗೆ "ನೀನು ಕೇಳುವುದರಿಂದ ಇದು ಒಂದು ನೋಡುತ್ತೇನೆ. ನಾನು ಯಾರನ್ನು ಹಣ ಕೇಳುವುದಿಲ್ಲವಲ್ಲ! ನೀನೆ ಅವರನ್ನು

ಹಣ ಕೇಳಿ ನೂರುರೂಪಾಯಿಗಳನ್ನಾದರು ಕೊಡಿಸಬೇಕಾಗುತ್ತದೆ" ಎಂದು ಹೇಳಿದೆನು. ನನ್ನ ಮಾತು ಕೇಳಿದ ನಾರಾಯಣ ತಕ್ಷಣವೆ ಹೋಗಿ ಜಟಕಾಬಂಡಿಯಲ್ಲಿ ನಾರಾಯಣರೆಡ್ಡಿಯನ್ನು ತೆಗೆದುಕೊಂಡು ಬಂದನು. ನಾರಾಯಣರೆಡ್ಡಿಯೊಂದಿಗೆ, ಆತನ ಅಳಿಯ ಮಾತ್ರ ಬಂದಿದ್ದಾನೆ. ಆಗ ಸಮಯ ಆರು ಗಂಟೆಗಳಾಗುತ್ತಿದೆ.

ನಾನು ಸ್ನಾನ ಮಾಡಿಬಂದು ನನ್ನ ರೂಮಿನಲ್ಲಿ ಕುಳಿತುಕೊಂಡು ಆತನನ್ನು ನನ್ನ ಬಳಿಗೆ ಕರೆದುಕೊಂಡು ಬರಲು ಹೇಳಿದೆನು. ಹಾಗೆ ಆತನನ್ನು ನನ್ನ ಮುಂದೆ ಕೂರಿಸಿದರು. ಆತನಲ್ಲಿ ಸಾಧಾರಣ ದೆವ್ವವಿದೆಯೆಂದು ತಿಳಿದಿರುವುದರಿಂದ ಆತನನ್ನು ನಾನೇನು ಕೇಳದೆ ಪ್ರಸ್ತುತ ಆತನ ಬಾಧೆ ಹೋಗುವಂತೆ ಮಾಡಬೇಕೆಂದು ಯೋಚಿಸಿ ಆ ಸಮಯಕ್ಕೆ ತಕ್ಕಹಾಗೆ ಇಂಗನ್ನು ಬೆಳ್ಳುಳ್ಳಿ ರಸದೊಂದಿಗೆ ಬೆರೆಸಿ ಮಾಡಿದ ಗಂಧವನ್ನು ನಾರಾಯಣರೆಡ್ಡಿ ಕಣ್ಣುಗಳಲ್ಲಿ ಸ್ವಲ್ಪ ಇಟ್ಟೆನು. ಆ ರಸವನ್ನು ಕಣ್ಣುಗಳಲ್ಲಿ ಇಟ್ಟಾಗ ಒಂದುಸಾರಿ ಕರೆಂಟ್ ಷಾಕ್ ಹೊಡೆದಂತಾಯಿತು. ಆ ಏಟಿನಿಂದ ಒಳಗಿರುವ ನಾಗೇಂದ್ರ ದೆವ್ವ ಭಯಪಟ್ಟು ಶರೀರವನ್ನು ಬಿಟ್ಟು ಹೋಯಿತು. ನಾರಾಯಣ ರೆಡ್ಡಿಗೆ ರಸದ ಉರಿ ಇಲ್ಲದಂತೆ ಕಣ್ಣುಗಳನ್ನು ತೊಳೆದುಕೊಳ್ಳಲು ಹೇಳಿದೆವು. ಆತನು ಕಣ್ಣುಗಳನ್ನು ಶುಭ್ರವಾಗಿ ತೊಳೆದುಕೊಂಡ ನಂತರ ನಿನಗೆ ಈಗ ಏನಾದರು ಬಾಧೆ ಇದೆಯಾ ಎಂದು ಕೇಳಿದೆವು. ಏನು ಇಲ್ಲ ಎಂದು ಆತನು ಹುಷಾರಾಗಿ ಮಾತನಾಡಿದನು. ಆತನಿಗೆ ಒಂದೇ ಬಾರಿಗೆ ಹಾಗೆ ಚೆನ್ನಾಗಾಗಿರುವುದು ಅಲ್ಲಿದ್ದ ಆತನ ಅಳಿಯನಿಗೆ, ನಾರಾಯಣನಿಗೆ ಸಂತೋಷವಾಯಿತು. ಆಗ ಅವರೊಂದಿಗೆ ನಾನು ಹೀಗೆ ಹೇಳಿದೆನು. ಈಗ ಪ್ರಸ್ತುತವಾಗಿ ಆ ಬಾಧೆಯನ್ನು ಇಲ್ಲದಂತೆ ಮಾಡಿದ್ದೇನೆ, ಆದರೆ ನಂತರ ಯಾವಾಗಲಾದರು ಬರಬಹುದು. ಅದು ಶಾಶ್ವತವಾಗಿ ಹೋಗಬೇಕೆಂದರೆ ಮತ್ತೊಂದು ಬಾರಿ ಇಲ್ಲಿಗೆ ಬಂದು ತೋರಿಸಿಕೊಳ್ಳಬೇ ಕಾಗಿರುತ್ತದೆ ಎಂದು ಹೇಳಿ ಕಳುಹಿಸಿದೆನು. ನಾನು ನನ್ನ ಜ್ಞಾನ ಶಕ್ತಿಯನ್ನು ಉಪಯೋಗಿಸದೆ ಸಾಧಾರಣವಾಗಿ ವೈದ್ಯ ಮಾಡಬೇಕೆಂದುಕೊಂಡೆನು. ಆದ್ದರಿಂದ

ಆ ದೆವ್ವವನ್ನು ಹೊರಗೆ ಕರೆದು ಹಾಗೆ ಬರಬೇಡವೆಂದು ಹೇಳಿ ಕಳುಹಿಸದೆ ಹೊಸ ವಿಧಾನವನ್ನು ಅನುಸರಿಸಿ ಕಣ್ಣುಗಳೊಳಗೆ ಇಂಗುವಿನ ರಸವನ್ನು ಹಾಕಲಾಯಿತು. ನಾನು ಮಾಡಿದ ಪ್ರಯೋಗಕ್ಕೆ ಪ್ರಸ್ತುತಕ್ಕೆ ನಾಗೇಂದ್ರ ಹೊರಗೆ ಹೋದನು, ನಾರಾಯಣರೆಡ್ಡಿ ಬಾಧೆಯಿಂದ ಹೊರಬಿದ್ದನು.

ನಾರಾಯಣರೆಡ್ಡಿಯೊಂದಿಗೆ ಸಹ ನಾರಾಯಣ ಕೂಡ ಅವರ ಮನೆಗೆ ಹೋಗಿ ಬಿಟ್ಟು ಬಂದನು. ಹಾಗೆ ಹೋದಾಗಲೆ ಹೀಗೆ ಹೇಳಿದನು "ಸ್ವಾಮಿ ಏನು ಕೇಳುವುದಿಲ್ಲ, ಆತನಿಗೆ ಕೇಳುವ ಅಭ್ಯಾಸವಿಲ್ಲ. ನೀನು ನೂರು ರೂಪಾಯಿಗಳು ತೆಗೆದುಕೊಂಡು ಬಂದು, ಆತನಿಗೆ ತಾಂಬೂಲದಲ್ಲಿಟ್ಟು ಕೊಟ್ಟು, ನಂತರ ಎಂದಿಗೂ ಆ ದೆವ್ವ ಬಾರದಂತೆ, ಆ ಬಾಧೆ ಬಾರದಂತೆ ಆತನೊಂದಿಗೆ ಗಟ್ಟಿ ಭದ್ರತೆ ಮಾಡಿಸಿಕೊ" ನಾರಾಯಣ ಮಾತುಗಳನ್ನು ಕೇಳಿದ ಅಳಿಯ ನಾಳೆಯೇ ಕಳುಹಿಸುತ್ತೇನೆಂದು ಹೇಳಿ ನಾರಾಯಣನ ಮುಂದೆಯೇ ನಾರಾಯಣ ರೆಡ್ಡಿಗೆ ಐದು ನೂರು ಹಣಕೊಟ್ಟು, ನಾಳೆ ಹೋಗಿ ನೂರು ರೂಪಾಯಿಗಳನ್ನು ಆತನಿಗೆ ಕೊಟ್ಟು ತೋರಿಸಿಕೊ ಎಂದು ಹೇಳಿದನು. ಸರಿ ಎಂದು ಹೇಳಿದ ನಾರಾಯಣರೆಡ್ಡಿ ಎರಡನೇ ದಿನ ನನ್ನ ಬಳಿಗೆ ಬಂದನು. ಆ ರಾತ್ರಿ ಸಹ ನನ್ನ ಮನೆಯಬಳಿಯೆ ಮಲಗಿಕೊಂಡಿದ್ದನು. ನಮ್ಮ ಮನೆಗೆ ಬಂದವರಿಗೆ ಅನ್ನ ನೀಡುವ ಅಭ್ಯಾಸ ನಮಗಿರುವುದರಿಂದ ನಾರಾಯಣರೆಡ್ಡಿ ಮೂರು ದಿನಗಳು ನನ್ನ ಬಳಿಯೇ ಠಿಕಾನಿ ಹಾಕಿದನು. ಆತನು ಮಾತ್ರ ನೂರು ರೂಪಾಯಿಗಳ ಹಣವನ್ನು ಕೊಡಲಿಲ್ಲ. ಎರಡು ದಿನಗಳ ನಂತರ ನಾರಾಯಣ ಬಂದು, ಸ್ವಾಮಿಗೆ ಹಣ ಕೊಟ್ಟಿದ್ದೀಯ ಎಂದು ಕೇಳಿದನು. ಕೊಡಲಿಲ್ಲ ಬರುವಾಗ ಬಜಾರಿನಲ್ಲಿ ಖರ್ಚಾದವು. ನಂತರ ಕೊಡುತ್ತೇನೇಳು ಅಂದನು. ಆ ಮಾತಿಗೆ ನಾರಾಯಣ ಚೆನ್ನಾಗಿ ಆತನ ಮೇಲೆ ಕೋಪಿಸಿಕೊಂಡು, ನಾನು ಬೇಡಿಕೊಂಡರೆ ನಿನ್ನನ್ನು ನೋಡಿದ್ದಾನೆ. ನಿನಗೆ ಅಷ್ಟು ಬಾಧೆಯನ್ನು ಕ್ಷಣಗಳಲ್ಲಿ ಇಲ್ಲದಂತೆ ಮಾಡಿದರೆ ಮೊದಲು ಇಲ್ಲಿ ಕೊಡದೆ ಬಜಾರಿನಲ್ಲಿ ಖರ್ಚಾಗಿವೆ ಎಂದು ಹೇಳುವುದು ಒಳ್ಳೆಯದಾ ಎಂದು ಕೇಳಿದನು. ಅದಕ್ಕೆ ನಾರಾಯಣರೆಡ್ಡಿ ಅಂದಿರುವ

ಮಾತುಗಳು ವಿಚಿತ್ರವನ್ನು ವಿಸ್ಮಯವನ್ನುಂಟು ಮಾಡುತ್ತವೆ. "ಬಾಧೆ ಇರುವಾಗ ಸಾವಿರ ರೂಪಾಯಿಗಳನ್ನು ಕೇಳಿದರೂ ಆ ಸಮಯದಲ್ಲಾದರೆ ಕೊಡುತ್ತೇವೆ. ಬಾಧೆ ಇಲ್ಲದಿರುವಾಗ ಕೇಳಿದರೆ ಹೇಗೆ ಕೊಡುವ ಬುದ್ಧಿ ಆಗುತ್ತದೆ. ಯಾವಾಗಲಾದರು ಬಾಧೆ ಇರುವಾಗಲೆ ಕೇಳಬೇಕೆಂದು ನೀನು ಸ್ವಾಮಿಗೆ ಹೇಳು" ಎಂದನು. ಆ ಮಾತುಗಳಿಗೆ ನಾರಾಯಣನಿಗೆ ಏನು ಅರ್ಥವಾಗದೆ ಬಾಧೆ ಬೀಳುತ್ತಾ ನನ್ನ ಬಳಿಗೆ ಬಂದು "ನೀವು ಯಾರಿಗು ನೋಡುವುದಿಲ್ಲ ಎಂದು ಮೊದಲು ಹೇಳಿರುವುದೆ ಸರಿಯಾದದ್ದು. ನಾರಾಯಣ ರೆಡ್ಡಿಗೆ ನಾನು ನೂರು ರೂಪಾಯಿಗಳು ಕೊಡಲು ಹೇಳಿದರೆ, ಆತನು ಹೀಗೆ ಎನ್ನುತ್ತಿದ್ದಾನೆ. "ಅದಕ್ಕೆ ನಾನು ನಕ್ಕು" ನೀನು ಒಬ್ಬನನ್ನೇ ನೋಡಿದ್ದೀಯ, ನಾನು ಬಹಳ ಜನರನ್ನು ನೋಡಿದ್ದೇನೆ. ಆದ್ದರಿಂದ ಕಠಿಣವಾಗಿ ನೋಡುವುದಿಲ್ಲವೆಂದು ಹೇಳಿದ್ದೇನೆ. ನಾನು ಯಾರನ್ನು ಹಣ ಕೇಳಲಿಲ್ಲ, ಹಣ ತೆಗೆದುಕೊಂಡಿಲ್ಲವೆಂದು ನನ್ನನ್ನು ತಿಳಿವಳಿಕೆ ಇಲ್ಲದವನಂತೆ ಲೆಕ್ಕಹಾಕಿಕೊಳ್ಳುತ್ತಾರೆ. ನಾನು ನಿನಗೆ ಕೇಳೆಂದು ಹೇಳಿರುವುದು ಅವರಿಗೆ ಇಟ್ಟ ಅನ್ನದ ಖರ್ಚಿಗೆಯಾಗಲಿ ನಾನು ಮಾಡಿದ ಕೆಲಸಕ್ಕೆ ಅಲ್ಲತಾನೆ! ನೀನೆ ಆತನನ್ನು ಇಲ್ಲಿಂದ ಕಳುಹಿಸು" ಎಂದು ಹೇಳಿದೆನು. ನಾರಾಯಣ, ನಾರಾಯಣ ರೆಡ್ಡಿಯನ್ನು ಕರೆದುಕೊಂಡು ಹೋಗಿ ಮನೆಗೆ ಕಳುಹಿಸಿದನು.

ಆತನು ಮನೆಗೆ ಹೋದ ವಾರದ ದಿನಗಳಿಗೆ ನಾಗೇಂದ್ರ ನಾರಾಯಣರೆಡ್ಡಿಯಲ್ಲಿ ಸೇರಿಕೊಂಡನು. ವಿಷವನ್ನು ಕುಡಿದವನಿಗೆ ಇರುವಂತಹ ಬಾಧೆ ಮತ್ತೆ ನಾರಾಯಣರೆಡ್ಡಿಗೆ ಬಂದಿತು. ಆ ವಿಷಯವನ್ನು ತಿಳಿದುಕೊಂಡ ನಾರಾಯಣರೆಡ್ಡಿಯ ಅಳಿಯ ನಾರಾಯಣನೊಂದಿಗೆ ಮಾತನಾಡಿದನು. ನಾರಾಯಣ ಮಾತನಾಡುತ್ತ "ಹಣಕೊಟ್ಟು ನಿಮ್ಮ ಮಾವ ಎರಡನೆ ಬಾರಿ ತೋರಿಸಿಕೊಳ್ಳಬೇಕು. ಆದರೆ ನನಗೆ ಬಾಧೆ ಹೋಗಿದೆಯಲ್ಲ ಹಣ ಕೊಡುವುದಕ್ಕೆ ಬುದ್ಧಿ ಹುಟ್ಟಲಿಲ್ಲ ಅನ್ನುತ್ತಾನೆ. ಸ್ವಾಮಿ ಇದು ತಾತ್ಕಾಲಿಕವೆ, ಎರಡನೆ ಬಾರಿ ಬಂದು ತೋರಿಸಿಕೊಳ್ಳಬೇಕು ಎಂದು ಹೇಳಿದ್ದಾನಲ್ಲ! ರೋಗವಿರುವಾಗ

ಸಾವಿರಗಟ್ಟಲೆ ಹಣ ಕಳೆದುಕೊಂಡು ಗುಣವಾಗುವ ಜಾಗದಲ್ಲಿ ನೂರು ರೂಪಾಯಿಗಳು ಸಹ ಕೊಡದೆ ಹೋದರೆ ಹೇಗೆ? ನೂರು ರೂಪಾಯಿಗಳು ಸಹ ಆತನು ಕೇಳಲಿಲ್ಲ. ನಾನು ಕೊಡುತ್ತೇನೆಂದು ಹೇಳಿದ್ದೇನೆ. ನಾವು ಹೋದಾಗ ಸಮಯಕ್ಕೆ ಅನ್ನ ಇಡುತ್ತಿದ್ದಾರಲ್ಲ! ನಾವು ಕೊಡುವ ಹಣ ನಾವು ತಿಂದ ಅನ್ನಕ್ಕು ಸರಿ ಹೋಗದು. ಈತನು ಹೋಗಿ ಎರಡು ದಿನಗಳಿಂದ ಅಲ್ಲಿಯೇ ಕುಳಿತುಕೊಂಡಿದ್ದಾನೆ. ಅಲ್ಲಿದ್ದರೆ ಬಾಧೆ ಬರುವುದಿಲ್ಲ ಎಂದುಕೊಂಡಿದ್ದಾನೆ. ಆಗಿರುವುದು ಅವರಿಗೆ ಖರ್ಚು ಅಲ್ಲವೆ? ಎಂದು ನಾನೇ ಮನೆಗೆ ಕಳುಹಿಸಿದೆನು. ಸ್ವಾಮಿ ಮೊದಲಿಗೆ ಇವೆಲ್ಲ ನೋಡುವುದಿಲ್ಲ, ನಾನು ಜ್ಞಾನವನ್ನು ಹೇಳುವ ಕೆಲಸ ಮಾಡುತ್ತೇನೆ, ಇದು ಮಾಡುವುದಿಲ್ಲ ಎಂದಿದ್ದನು. ಬಲವಂತಮಾಡಿ ನಾನೇ ಒಪ್ಪಿಸಿಕೊಂಡು ಬಂದು ಕರೆದುಕೊಂಡು ಹೋಗಿದ್ದೆನು. ಈಗ ಅಲ್ಲಿ ನನಗು ಸಹ ಮರ್ಯಾದೆ ಇಲ್ಲ" ಅಂದನು.

ನಾರಾಯಣನ ಮಾತುಗಳು ಕೇಳಿದ ಅಳಿಯ ಮಾವನನ್ನು ಅರಚಿದನು "ನಾನು ಐದುನೂರು ಕೊಟ್ಟಿದ್ದೇನಲ್ಲ! ನೂರು ರೂಪಾಯಿಗಳು ಕೊಡುವುದಕ್ಕೇನು? ನೀನೇನಾದರು ಸುಮ್ಮನೆ ಕೊಡುತ್ತೀಯಾ? ಅಷ್ಟು ದೊಡ್ಡ ಬಾಧೆಯನ್ನು ಇಲ್ಲದಂತೆ ಮಾಡಿದ್ದಾನಲ್ಲ! ನೀನು ಮಾಡಿದ ಕೆಲಸಕ್ಕೆ ನಮಗೆ ಮರ್ಯಾದೆ ಇಲ್ಲದಂತೆ ಹೋಗಿದೆ." ಎಂದು ನಾರಾಯಣನನ್ನು ಒಪ್ಪಿಸಿ ನಾರಾಯಣನನ್ನು, ಮಾವನನ್ನು ಕರೆದುಕೊಂಡು ನನ್ನ ಹತ್ತಿರಕ್ಕೆ ಬಂದನು. ನಾನು ಅವರನ್ನು ನೋಡಿ ಏನು ಬಂದಿದ್ದೀರೆಂದು ಕೇಳಿದೆನು. ಹೊಟ್ಟೆಯಲ್ಲಿ ನೋವು ನಾರಾಯಣರೆಡ್ಡಿಗೆ ಮತ್ತೆ ಬಂದಿದೆಯೆಂದು ಹೇಳಿದರು. ನಾರಾಯಣರೆಡ್ಡಿ ಅಳಿಯ ನಮ್ಮ ಮಾವನದೇ ತಪ್ಪು, ಹಣ ನಾನು ಕೊಡುತ್ತಿದ್ದೇನೆ ಏನೊ ಒಂದು ಮಾಡಿರೆಂದು ಐದುನೂರುಗಳನ್ನು ಕೊಡಲುಬಂದನು. ಅದಕ್ಕೆ ನಾನು ನಿರಾಕರಿಸಿ, ಹಣ ತೆಗೆದುಕೊಳ್ಳದೆ ಈ ವಿಧವಾಗಿ ಹೇಳಿದೆನು. "ಎರಡನೇ ಬಾರಿ ಬಂದು ತೋರಿಸಿಕೊ ಎಂದು ಹೇಳಿದ್ದೆನು. ಅದು ಏಳು ದಿನಗಳ ಒಳಗೆ ಎರಡನೆ ಬಾರಿ ತೋರಿಸಿಕೊಳ್ಳಬೇಕಾಗಿರುತ್ತದೆ. ಈಗ ಏಳು ದಿನಗಳು ಮುಗಿದುಹೋಗಿವೆ.

ಮೊನ್ನೆ ಬಂದು ನನ್ನ ಬಳಿ ಎರಡು ದಿನಗಳಿದ್ದಾನೆ. ನಾನು ಎರಡನೆಬಾರಿ ತೋರಿಸಿಕೊಳ್ಳಬೇಕೆಂದು ಜ್ಞಾಪಕ ಮಾಡಿದರೂ ನನಗೆ ಚೆನ್ನಾಗಿದೆಯಲ್ಲ, ಹೋಗಿದೆಯಲ್ಲ ಎಂದು ಬದುಲು ಹೇಳಿದನು. ಕಾಲ ಮೀರಿ ಹೋಗಿ ದೆಯಾದ್ದರಿಂದ, ನಾನು ಏನು ಮಾಡುವುದಕ್ಕೆ ಆಗುವುದಿಲ್ಲ ಎಂದೆನು. ನನ್ನ ಮಾತುಗಳನ್ನು ಕೇಳಿದ ಅಳಿಯ ಏನು ಮಾಡಬೇಕೊ ಅರ್ಥವಾಗದೆ ನೀವೇ ಏನಾದರು ಉಪಾಯ ಹೇಳಿರಿ ಎಂದು ಕೇಳಿದನು. ಅದಕ್ಕೆ ನಾನು ಎಲ್ಲಾದರೂ ದೇವತೆಗಳ ಹತ್ತಿರಕ್ಕೆ ಹೋಗಿ ತೋರಿಸಿಕೊಳ್ಳಿ, ಮಾಂತ್ರಿಕರ ಬಳಿ ಹೋಗುವು ದಿಲ್ಲವೆಂದು ತಿಳಿದಿದೆ. ಆದ್ದರಿಂದ ನಿಮಗೆ ದೇವತೆಗಳೆ ದಿಕ್ಕು ಕಸಾಪುರದ ಆಂಜನೇಯಸ್ವಾಮಿ ಹತ್ತಿರಕ್ಕಾಗಲಿ, ಗಂಡಿ ಆಂಜನೇಯಸ್ವಾಮಿ ಹತ್ತಿರಕ್ಕಾಗಲಿ ಇಲ್ಲವೆ ಇನ್ನೂ ಎಲ್ಲಾದರೂ ಯಾರಾದರೂ ದೇವತೆಗಳಿದ್ದರೆ ಅವರ ಬಳಿಗೆ ಹೋಗಿ ತೋರಿಸಿಕೊಳ್ಳಿರೆಂದು ಸಲಹೆ ಹೇಳಿದೆನು. ಮಾಡುವುದು ಏನು ಇಲ್ಲವೆಂದುಕೊಂಡು ಎಲ್ಲಿಗೆ ಹೋಗಬೇಕೆಂದು ಆಲೋಚನೆ ಮಾಡಿಕೊಳ್ಳುತ್ತಾ ನನ್ನ ಬಳಿಯಿಂದ ಹೋದರು.

ನನ್ನ ಬಳಿಯಿಂದ ಹೋದ ನಾರಾಯಣರೆಡ್ಡಿ, ಆತನ ಅಳಿಯ ನಾನು ಹೇಳಿದಂತೆ ಮಾಂತ್ರಿಕರ ಬಳಿಗೆ ಹೋಗದೆ ದೊಡ್ಡಮ್ಮ ಎನ್ನುವ ದೇವತೆ ಬಳಿಗೆ ಹೋಗಿದ್ದಾರೆ. ಅಲ್ಲೆಲ್ಲಾ ಮಾತನಾಡಿಕೊಂಡು ಮತ್ತೆ ನನ್ನ ಬಳಿಗೆ ಬಂದು ನಾನು ಹೇಳಿದ ನಂತರವೆ ಹೋಗಬೇಕೆಂದುಕೊಂಡರು. ನಾರಾಯಣರೆಡ್ಡಿ ಅಳಿಯ, ನಾರಾಯಣ ಇಬ್ಬರು ನನ್ನ ಬಳಿಗೆ ಬಂದು ಹತ್ತಿರದ ಹಳ್ಳಿಯಲ್ಲಿ ದೊಡ್ಡಮ್ಮ ದೇವತೆ ಇದೆ. ಆಕೆ ದಿನ ಬಿಟ್ಟು ದಿನ ಸೂಕ್ಷ್ಮ ಬಂದು ಮಾತನಾಡುತ್ತಾಳಂತೆ. ಅಲ್ಲಿಗೆ ಹೋದರೆ ಈ ಬಾಧೆ ಸಹ ಹೋಗುತ್ತದಂತೆ. ನೀವು ಹೋಗೆಂದರೆ ಹೋಗುತ್ತೇವೆ ಎಂದು ಬಂದು ಕೇಳಿದರು. ನಾನು ಹೋಗಲು ಹೇಳಿದೆನು. ನಾನು ಹೇಳಿದ ನಂತರ ಅವರು ಇನ್ನು ಸ್ವಲ್ಪ ಸಮಾಚಾರವನ್ನು ಹೇಳಿದರು. ಅದೇನೆಂದರೆ! ದೊಡ್ಡಮ್ಮ ಹತ್ತಿರ ಎರಡು ವಿಧಗಳ ಪೂಜೆಗಳಿರುತ್ತವೆ. ಒಂದು ದೊಡ್ಡ ಪೂಜೆ, ಎರಡನೆಯದು ಚಿಕ್ಕ

ಪೂಜೆ. ದೊಡ್ಡ ಪೂಜೆಗೆ ಎರಡು ನೂರು ರೂಪಾಯಿಗಳು ಹಣ ಕಟ್ಟಿ ಹೆಸರು ಬರೆಸಿಕೊಳ್ಳಬೇಕು. ಚಿಕ್ಕಪೂಜೆಗೆ ನೂರು ರೂಪಾಯಿಗಳು ಕಟ್ಟಬೇಕಾಗಿರುತ್ತದೆ. ಹಾಗೆ ಹಣ ಕಟ್ಟಿ ಹೆಸರು ಬರೆಸಿಕೊಂಡವರಿಗೆ, ಒಂದು ತೆಂಗಿನಕಾಯಿ ಕೊಟ್ಟು ಕಳುಹಿಸುತ್ತಾರೆ. ಆ ತೆಂಗಿನಕಾಯಿಯನ್ನು ರಾತ್ರಿ ಹೊತ್ತು ಮಲಗುವ ಸಮಯದಲ್ಲಿ ತಲೆಪಕ್ಕದಲ್ಲಿ ಇಟ್ಟುಕೊಂಡು ಮಲಗಿಕೊಂಡು, ಎರಡನೇ ದಿನ ಸಾಯಂಕಾಲ ಆರು ಗಂಟೆಗಳಿಗೆ ಅಲ್ಲಿಗೆ ಹೋದರೆ, ಆಗ ದೇವತೆ ನಮ್ಮನ್ನು ಕುರಿತು ಹೇಳುತ್ತಾಳಂತೆ. ದೊಡ್ಡ ಪೂಜೆಗೆ ಎರಡು ನೂರು ಹಣ ಕಟ್ಟಿದರೆ ದೊಡ್ಡಮ್ಮ ಇರುವ ರೂಮಿನೊಳಗೆ ಕಳುಹಿಸುತ್ತಾರಂತೆ, ಚಿಕ್ಕ ಪೂಜೆಗೆ ಹಣ ಕಟ್ಟಿದರೆ ದೊಡ್ಡಮ್ಮ ಇರುವ ರೂಮಿನೊಳಗೆ ಕಳುಹಿಸುವುದಿಲ್ಲವಂತೆ. ಪಕ್ಕದ ರೂಮಿನೊಳಗಿಂದ ಮಾತನಾಡಿಸುತ್ತಾರಂತೆ ಎಂದು ಎಲ್ಲಾ ವಿವರವಾಗಿ ಹೇಳಿ ನನ್ನನ್ನು ಸಲಹೆ ಕೇಳಿದರು. ನಾನು ಅದಕ್ಕೆ ಅಲ್ಲಿಗೆ ಹೋಗಿ ತೋರಿಸಿಕೊಳ್ಳಿರೆಂದು ಸಲಹೆ ಕೊಡುತ್ತಿದ್ದೇನೆ. ಆದರೇ ನೀವು ದೊಡ್ಡ ಪೂಜೆಗೆ ಹೋಗುತ್ತೀರೊ, ಚಿಕ್ಕ ಪೂಜೆಗೆ ಹೋಗುತ್ತೀರೊ ಅದು ನಿಮ್ಮ ಇಷ್ಟದ ಮೇಲೆ ಆಧಾರಪಟ್ಟಿರುತ್ತದೆ ಎಂದು ಹೇಳಿದೆನು. ಅದಕ್ಕೆ ಅವರು ದೊಡ್ಡ ಪೂಜೆಗೆ ಹೋಗುವಂತೆ ಹೆಸರು ಬರೆಸಿಕೊಳ್ಳುತ್ತೇವೆಂದು ಹೇಳಿ ಹೋದರು.

ನಾನಿದ್ದ ಜಾಗಕ್ಕೆ ನಾಲ್ಕು ಕಿಲೋಮೀಟರುಗಳ ದೂರದಲ್ಲಿದ್ದ ಹಳ್ಳಿಯಲ್ಲಿ ದೊಡ್ಡಮ್ಮ ಸೂಕ್ಷ್ಮವು ಬರುವವರ ಹತ್ತಿರಕ್ಕೆ ಹೋಗಿ ಮಾತನಾಡಿ ತಮ್ಮ ವಿಷಯುವೆಲ್ಲಾ ಹೇಳಿ ಎರಡು ನೂರು ಹಣಕೊಟ್ಟು ದೊಡ್ಡಪೂಜೆಗೆ ಬರೆಯಿಸಿಕೊಂಡರು. ನಾರಾಯಣರೆಡ್ಡಿ ದೆವ್ವದಿಂದ ಬಾಧೆಪಡುತ್ತಿದ್ದಾನೆ. ಅದರ ನಿವಾರಣೆಗೆ ನಿಮ್ಮ ಹತ್ತಿರಕ್ಕೆ ಪೂಜೆಗೆ ಬರುತ್ತಿದ್ದೇವೆಂದು ಹೇಳಿದಾಗ, ಅವರು ನಾರಾಯಣರೆಡ್ಡಿಗೆ ಒಬ್ಬ ಮನುಷ್ಯ ಜೊತೆಗೆ ಬರಲು ಹೇಳಿದರು. ಜೊತೆಗೆ ಬರುವ ಮನುಷ್ಯ, ದೆವ್ವ ಬಂದರೂ ಭಯಪಡದವರು ಬಂದರೆ ಒಳ್ಳೆಯದು ಎಂದು ಹೇಳಿದರು. ದೆವ್ವ ಎಂದರೆ ಎಲ್ಲರಿಗು ಭಯವೆ, ಆದ್ದರಿಂದ ನಾರಾಯಣರೆಡ್ಡಿ ಜೊತೆಗೆ ಯಾರು ಹೋಗಬೇಕೆನ್ನುವುದು ಸಮಸ್ಯೆ ಆಗಿದೆ.

ಆ ವಿಷಯುವನ್ನು ಕೊನೆಗೆ ನನ್ನ ಬಳಿಗೆ ತಂದರು. ಅಷ್ಟೇ ಅಲ್ಲದೆ ನಾರಾಯಣರೆಡ್ಡಿಯನ್ನು ನನ್ನ ಮನೆಯಲ್ಲಿಯೆ ದೊಡ್ಡಮ್ಮನ ಪೂಜೆ ಆಗುವವರೆಗು ಎರಡು ದಿನಗಳು ಇರಿಸುತ್ತೇವೆಂದು ಕೇಳಿದರು. ಆತನು ನನ್ನ ಬಳಿಇದ್ದರೆ ಹೊಟ್ಟೆಯಲ್ಲಿ ಬಾಧೆ ಹೆಚ್ಚಾಗದಂತೆ ಇರುತ್ತದೆಂದು ಕೇಳಿರುವುದರಿಂದ ಸರಿ ಎಂದು ಒಪ್ಪಿಕೊಂಡೆನು. ನನಗೆ ಚಿಕ್ಕಂದಿನಿಂದ ಪರಿಶೋಧನಾದೃಷ್ಠಿ ಹೆಚ್ಚಾಗಿ ಇರುವುದರಿಂದ ದೊಡ್ಡಮ್ಮನ ಹತ್ತಿರ ಏನು ನಡೆಯುತ್ತದೆ? ದೊಡ್ಡಮ್ಮ ನಿಜವಾಗಿ ಸೂಕ್ಷ್ಮ ಬರುತ್ತದಾ ಇಲ್ಲವೆ ಮನುಷ್ಯರೆ ದೊಡ್ಡಮ್ಮ ಹೆಸರಿನಿಂದ ನಾಟಕವಾಡುತ್ತಿದ್ದಾರಾ? ನಿಜವಾಗಿ ದೊಡ್ಡಮ್ಮ ಸೂಕ್ಷ್ಮ ಬಂದರೆ ಈತನ ಬಾಧೆಯನ್ನು ಹೇಗೆ ಗುಣಪಡಿಸುತ್ತಾಳೆ? ದೊಡ್ಡಮ್ಮನಿಗೆ ಚಿಕ್ಕಪೂಜೆ, ದೊಡ್ಡ ಪೂಜೆಗಳೇನು? ಸೂಕ್ಷ್ಮವು ಬಂದಿರುವ ದೊಡ್ಡಮ್ಮ ಎದುರಿಗೆ ಇರದೆ, ಪಕ್ಕದ ರೂಮಿನಲ್ಲಿ ಏಕೆ ಇರುತ್ತದೆ? ಹಾಗೆ ಎಷ್ಟೋ ಪ್ರಶ್ನೆಗಳ ಉತ್ತರಕ್ಕಾಗಿ ನಾರಾಯಣರೆಡ್ಡಿ ಜೊತೆಗೆ ನಾನೇ ಸ್ವತಃವಾಗಿ ಹೋದರೆ ಚೆನ್ನಾಗಿರುತ್ತದೆಂದು ಕೊಂಡು ನಾರಾಯಣರೆಡ್ಡಿ ಜೊತೆಗೆ ನಾನೇ ಹೋಗುತ್ತೇನೆಂದು ಅವರಿಗೆ ಹೇಳಿದೆನು. ಅದಕ್ಕೆ ಅವರು ಸಂತೋಷಪಟ್ಟು ನಾರಾಯಣರೆಡ್ಡಿಯನ್ನು ನನ್ನ ಬಳಿಯೆ ಬಿಟ್ಟು ಆತನ ಅಳಿಯ, ನಾರಾಯಣ ಇಬ್ಬರೂ ಹೋದರು.

ನಾರಾಯಣರೆಡ್ಡಿ ದೊಡ್ಡಮ್ಮ ದೇವತೆ ಹತ್ತಿರ ಹೆಸರು ಬರೆಸಿಕೊಂಡಾಗ, ಅವರು ಕೊಟ್ಟ ತೆಂಗಿನ ಕಾಯಿಯನ್ನು, ತಲೆಪಕ್ಕದಲ್ಲಿ ಇಟ್ಟುಕೊಂಡು ರಾತ್ರಿಗೆ ಮಲಗಿಕೊಂಡನು. ಬೆಳಗಾದ ನಂತರ ತೆಂಗಿನಕಾಯನ್ನು ಕೆಳಗಿಡದೆ, ಒಂದು ಚೀಲದಲ್ಲಿ ಹಾಕಿ ಗೋಡೆಗೆ ತಗಲಾಕಿ ಸಾಯಂಕಾಲ ಐದುಗಂಟೆಗಳಿಗೆ ತೆಂಗಿನಕಾಯಿ ಚೀಲವನ್ನು ತೆಗೆದುಕೊಂಡು ಹೊರಟು, ಆರು ಗಂಟೆಗಳಿಗಿಂತ ಮೊದಲೆ ಅಲ್ಲಿಗೆ ಹೋದೆವು. ನಾವು ಹೋಗಿ ಮೊದಲೆ ಅವರ ಬಳಿ ಬರೆಯಿಸಿಕೊಂಡ ಚೀಟಿಯನ್ನು ತೋರಿಸಿದರೆ, ಆಗ ಅವರು ನಮ್ಮ ಹತ್ತಿರವಿದ್ದ ತೆಂಗಿನಕಾಯಿಯನ್ನು ತೆಗೆದುಕೊಂಡು, ನಮ್ಮ ಮುಂದೆಯೇ ಅದರ ಸಿಪ್ಪೆಯನ್ನು ಕಿತ್ತು, ನಮ್ಮ ಹತ್ತಿರ ಇಟ್ಟುಕೊಳ್ಳಿರೆಂದು ಒಳಗೆ ಪೂಜೆಗೆ ಹೋದಾಗ ತೆಂಗಿನ

ಕಾಯಿಯನ್ನು ತೆಗೆದುಕೊಂಡು ಹೋಗಬೇಕೆಂದು ಹೇಳಿದರು. ಆರು ಗಂಟೆಗಳಿಗೆ ಪೂಜೆ ಪ್ರಾರಂಭವಾಯಿತು. ಆಗ ನಾರಾಯಣರೆಡ್ಡಿಯನ್ನು, ಆತನಿಗೆ ಜೊತೆಯಾಗಿದ್ದ ನನ್ನನ್ನು ಒಬ್ಬ ಮನುಷ್ಯ ಬಂದು ಒಳಗೆ ಕರೆದುಕೊಂಡು ಹೋದನು. ಆತನ ಹಿಂದೆ ನಾವು ಇಬ್ಬರು ಮೂರು ರೂಮುಗಳನ್ನು ದಾಟಿ ನಾಲ್ಕನೇ ರೂಮಿನೊಳಗೆ ಹೋದೆವು. ಒಳಗೆ ಕರೆದುಕೊಂಡು ಹೋದ ವ್ಯಕ್ತಿ, ನಮ್ಮನ್ನು ನಾಲ್ಕನೇ ರೂಮಿನೊಳಗೆ ಕೂರಿಸಿದನು. ಐದನೇ ರೂಮಿನಲ್ಲಿ ದೊಡ್ಡಮ್ಮ ದೇವತೆ ಹೆಂಗಸಿನ ಶರೀರದೊಳಗೆ ಸೂಕ್ಷ್ಮವು ಬಂದಿದೆ. ಐದನೇ ರೂಮಿಗೆ ಮಧ್ಯೆದಲ್ಲಿ ಬಾಗಿಲು ಇದೆ. ಬಾಗಿಲಿಗೆ ಬಲಗಡೆ ದೊಡ್ಡಮ್ಮ ಇದ್ದಂತೆ ನಮಗೆ ಅರ್ಥವಾಯಿತು. ನಮ್ಮನ್ನು ಒಳಗೆ ಕರೆದುಕೊಂಡು ಹೋದ ವ್ಯಕ್ತಿ ಐದನೇ ರೂಮಿನೊಳಗೆ ಹೋಗಿ, ನಮಗೆ ಕಾಣಿಸುವಂತೆ ಬಲಗಡೆ ತಿರುಗಿ ನಿಂತುಕೊಂಡು "ಅಮ್ಮನವರೊಂದಿಗೆ ತಾಯಿ! ನಾರಾಯಣರೆಡ್ಡಿ ಅನ್ನುವವರು ಪೂಜೆಗೆ ಬಂದಿದ್ದಾನೆ, ಆತನಿಗೆ ದೆವ್ವದ ಬಾಧೆ ಇದೆಯಂತೆ" ಎಂದು ಹೇಳಿದನು. ಆ ಮಾತು ಅಂದ ತಕ್ಷಣವೇ ಮತ್ತೆ ಹೊರಗೆ ಬಂದನು. ಆತನು ಬಂದ ನಂತರ ನಾರಾಯಣರೆಡ್ಡಿಗೆ ತೆಂಗಿನಕಾಯನ್ನು ತೆಗೆದುಕೊಂಡು ಒಳಗೆ ಹೋಗಿ ಅಮ್ಮನವರಿಗೆ ಕೊಟ್ಟು ಬಂದುಬಿಡು ಎಂದು ಹೇಳಿದನು. ನಾರಾಯಣರೆಡ್ಡಿ ಹಾಗೆಯೆ ತೆಂಗಿನಕಾಯನ್ನು ತೆಗೆದುಕೊಂಡು ಒಳಗೆ ಹೋಗಿ ಬಲಗಡೆ ಇರುವ ಅಮ್ಮನವರಿಗೆ ಕೊಟ್ಟನು. ಹೊರಗಿನಿಂದ ನೋಡಿದರೆ ನಾರಾಯಣರೆಡ್ಡಿ ಅಮ್ಮನವರಿಗೆ ತೆಂಗಿನಕಾಯಿಯನ್ನು ಕೊಟ್ಟಿರುವುದು ಕಾಣಿಸುವುದಿಲ್ಲ. ಆತನು ಸ್ವಲ್ಪ ಬಲಗಡೆಗೆ ಹೋಗಿ ಕೊಟ್ಟಿರುವುದರಿಂದ, ಕೊಟ್ಟಿರುವ ಆತನು ಕಾಣಿಸುವುದಿಲ್ಲ. ತೆಗೆದುಕೊಂಡ ಅಮ್ಮನವರು ಕಾಣಿಸುವುದಿಲ್ಲ.

ಒಳಗೆ ಹೋದ ನಾರಾಯಣರೆಡ್ಡಿ ತೆಂಗಿನಕಾಯಿಯನ್ನು ದೊಡ್ಡಮ್ಮನಿಗೆ ಕೊಟ್ಟ ತಕ್ಷಣವೆ, ದೊಡ್ಡಮ್ಮ ಹೊರಗೆ ಹೋಗು ಎಂದು ಗದರಿಸಿ ಹೇಳಿದಳು. ಹಾಗೆ ಜೋರಾಗಿ ಅರಚಿ ಹೇಳಿರುವುದು ನಾಲ್ಕನೇ ರೂಮಿನೊಳಗಿರುವ ನನಗೆ ಕೇಳಿಸಿತು. ನಾರಾಯಣರೆಡ್ಡಿ ಹೊರಗೆ ಬಂದು ನಾವಿರುವ ಜಾಗದಲ್ಲಿ

ಕುಳಿತುಕೊಂಡನು. ಆತನು ಕುಳಿತುಕೊಂಡ ತಕ್ಷಣವೇ ಒಳಗೆ ಅಮ್ಮನವರ ರೂಮಿನಲ್ಲಿ ತೆಂಗಿನ ಕಾಯನ್ನು ಒಡೆದ ಶಬ್ದ ಕೇಳಿಸಿತು. ಆಗ ನಮ್ಮೊಂದಿಗೆ ನಾಲ್ಕನೆ ರೂಮಿನಲ್ಲಿಯೆ ಇದ್ದ ವ್ಯಕ್ತಿ ನಾರಾಯಣ ರೆಡ್ಡಿಯೊಂದಿಗೆ "ಒಳಗೆ ಹೋಗಿ ಅಮ್ಮನವರು ಒಡೆದ ತೆಂಗಿನಕಾಯನ್ನು ಪಾತ್ರೆಯಲ್ಲಿ ಹಾಕಿರುತ್ತಾಳೆ. ಆ ಪಾತ್ರೆಯನ್ನು ತಂದುಕೊ ಹೋಗು" ಎಂದು ಹೇಳಿದನು. ನಾರಾಯಣರೆಡ್ಡಿ ಮೂಗಿನಿಂದ ಮುಲುಗುತ್ತಾ ನಿಧಾನವಾಗಿ ಹೋಗಿ ಅಲ್ಲಿ ತೆಂಗಿನಕಾಯಿ ಚಿಪ್ಪುಗಳಿದ್ದ ಪಾತ್ರೆಯನ್ನು ತಂದನು. ಆ ಪಾತ್ರೆಯೊಳಗೆ ನೋಡುತ್ತಲೇ ನನಗೆ ಆಶ್ಚರ್ಯವಾಯಿತು. ಆ ಬಟ್ಟಲಿನಲ್ಲಿ ತೆಂಗಿನ ಚಿಪ್ಪುಗಳೊಂದಿಗೆ ಒಂದು ಉಸಿರಾಟದಚೀಲ, ಅದರೊಂದಿಗೆ ರಕ್ತ ಸೇರಿಸಿ ಕೆಂಪು ಬಣ್ಣದಲ್ಲಿರುವ ನೀಚು ನೀರು, ಆ ನೀರಿನಲ್ಲಿ ಅರ್ಧ ಇಂಚು ಉದ್ದವಿರುವ ಅಲೆದಾಡುತ್ತಿರುವ ಎರಡು ಬಾಲವಿರುವ ಬಿಳಿಯಾದ ಹುಳಗಳು ಇವೆ. ಮಾಂಸದ ಮಾರ್ಕೆಟ್‌ನಲ್ಲಿ ನೋಡಿದ ಕುರಿಗಳ ಉಸಿರಾಟದ ಚೀಲದಂತೆ, ಆ ಪಾತ್ರೆಯಲ್ಲಿರುವ ಉಸಿರಾಟದ ಚೀಲ ಕಾಣಿಸುತ್ತದೆ. ಡ್ರೈನೇಜ್ ಕಾಲುವೆಯಲ್ಲಿ ಕಾಣಿಸುವ ಬಾಲದ ಹುಳಗಳು ಆ ಬಟ್ಟಲಿನಲ್ಲಿವೆಯೆಂದು ನನಗೆ ಅರ್ಥವಾಯಿತು. ಆಗ ಒಳಗಿರುವ ಅಮ್ಮನವರು, ನಾಲ್ಕನೆ ರೂಮಿನಲ್ಲಿದ್ದ ನಮಗೆ ಕೇಳಿಸುವಂತೆ ಭೀಕರವಾಗಿ ಅರಚುತ್ತಾ, ಏನೊ ಬಾಲಾ? ಬಟ್ಟಲಿನಲ್ಲಿ ನನಗೆ ಕಾಣಿಸುವುದು ನಿನ್ನ ಉಸಿರಾಟದ ಚೀಲ ಅದು ರಂಧ್ರಗಳು ಬಿದ್ದಿದೆ ಕಾಣಿಸುತ್ತದಾ ಇಲ್ಲವಾ? ಎಂದು ಕೇಳಿದಳು. ಇಲ್ಲಿ ಪಕ್ಕದಲ್ಲೇ ಇದ್ದ ವ್ಯಕ್ತಿ ಒಂದು ಅಡಿ ಉದ್ದವಿರುವ ಕಡ್ಡಿಯನ್ನು ತೆಗೆದುಕೊಂಡು ಆ ಕಡ್ಡಿಯಿಂದ ಪಾತ್ರೆಯಲ್ಲಿದ್ದ ಉಸಿರಾಟದ ಚೀಲವನ್ನು ಕದಲಿಸಿ ತೋರಿಸುತ್ತಾ, ಇಗೋ ಇಲ್ಲಿ ರಂಧ್ರಗಳು ಬಿದ್ದಿವೆ ನೋಡು ಎಂದು ನಾರಾಯಣರೆಡ್ಡಿಗೆ ತೋರಿಸುತ್ತಿದ್ದಾನೆ. ಅಷ್ಟರಲ್ಲಿ "ಪಾತ್ರೆಯಲ್ಲಿ ಹುಳಗಳು ಸಹ ಇವೆ ಕಾಣಿಸಿವೆಯಾ ಬಾಲಾ" ಎಂದು ಅಮ್ಮನವರು ಕೇಳಿದಳು. ಪಕ್ಕದಲ್ಲಿದ್ದ ವ್ಯಕ್ತಿ, ಇಗೋ ಇವು ಹುಳಗಳು ನೋಡು ಎನ್ನುತ್ತಿದ್ದಾನೆ, ಅಲ್ಲಿ ಒಳಗಿನಿಂದ ಅಮ್ಮನವರು "ನಿನಗೆ ಉಸಿರಾಟದ ಚೀಲಗಳು ಕೆಟ್ಟುಹೋಗಿವೆ ಅವು ಹುಳ ಹಿಡಿದಿವೆ. ಕೆಟ್ಟು ಹೋದ

ಉಸಿರಾಟದ ಚೀಲವನ್ನು, ಹುಳಗಳನ್ನು ಈಗ ತೆಗೆದುಹಾಕಿದ್ದೇನೆ. ನಿನಗೆ ಇನ್ನು ಲೋಪವಿದೆ, ನೀನು ಮತ್ತೆ ನನ್ನ ಹತ್ತಿರಕ್ಕೆ ಬಂದರೆ ಆಗ ಹೇಳುತ್ತೇನೆ" ಅಂದಳು.

ಆಗ ನಮ್ಮ ಹತ್ತಿರವಿದ್ದ ವ್ಯಕ್ತಿ ನಮ್ಮಕಡೆಗೆ ನೋಡಿ "ನೀವು ಇನ್ನೊಂದು ತೆಂಗಿನಕಾಯನ್ನು ತೆಗೆದುಕೊಂಡು ಹೋಗಿ. ಈ ದಿನ ರಾತ್ರಿಗೆ ತಲೆಕೆಳಗೆ ಇಟ್ಟುಕೊಂಡು ನಿದ್ರೆಹೋಗಿ, ನಾಡಿದ್ದು ಸಾಯಂಕಾಲ ಬನ್ನಿ. ಆಗ ನಿಮಗಿರುವ ಲೋಪವೇನಿದೆಯೊ ತೆಂಗಿನಕಾಯಲ್ಲಿ ಬರುತ್ತದೆ. ಈಗಲು ಸಹ ನೀವು ತಂದುಕೊಂಡ ತೆಂಗಿನಕಾಯನ್ನು, ಅಮ್ಮನವರು ಒಡೆಸಿದಾಗ ಕಾಯಿಂದ ಬಿದ್ದ ವಸ್ತುಗಳನ್ನು ನೋಡಿದ್ದೇವಲ್ಲ! ಈ ದಿನ ತೆಂಗಿನಕಾಯಲ್ಲಿ ಕೆಟ್ಟುಹೋದ ಉಸಿರಾಟದ ಚೀಲ ಬಂದಿದೆ ತಾನೆ! ನಾಳೆ ನಿನ್ನ ಶರೀರದಲ್ಲಿ ಏನಾದರೂ ಅನಾರೋಗ್ಯವಾಗಲಿ, ಅನಾರೋಗ್ಯಕ್ಕೆ ಕಾರಣವಾಗಿರುವುದಾಗಲಿ ಇದ್ದರೆ ಅದು ಬರುತ್ತದೆ" ಎಂದು ಹೇಳಿ ಐದುರೂಪಾಯಿಗಳು ತೆಗೆದುಕೊಂಡು ತೆಂಗಿನಕಾಯನ್ನು ಕೊಟ್ಟು ಕಳುಹಿಸಿದನು. ಆ ತತಂಗವೆಲ್ಲ ನೋಡಿದ ನಾನು, ವೇಗವಾಗಿ ಯಾವ ನಿರ್ಣಯಕ್ಕೆ ಬಾರದೆ ಹೇತುಬದ್ಧತೆಯಿಂದ ಯೋಚಿಸುವುದನ್ನು ಪ್ರಾರಂಭಿಸಿದೆನು. ಇದಕ್ಕಿಂತ ಮೊದಲು ನನ್ನಲ್ಲಿರುವ ಪ್ರಶ್ನೆಗಳಿಗೆ ಮತ್ತೆಕೆಲವು ಪ್ರಶ್ನೆಗಳು ಜೊತೆಯಾದವು. ಅವು ತೆಂಗಿನಕಾಯಲ್ಲಿ ವಸ್ತುಗಳು ಬರುವುದು ಸಾಧ್ಯವೇ? ನೋಡಿದ ಉಸಿರಾಟದ ಚೀಲ ಮನುಷ್ಯನದಾ, ಪ್ರಾಣಿಯದಾ? ಅಷ್ಟು ದಪ್ಪ ಡ್ರೈನೇಜ್ ಹುಳಗಳು ಉಸಿರಾಟದ ಚೀಲಗಳಲ್ಲಿ ಇರುತ್ತವೆಯಾ? ಹೀಗೆ ಅನೇಕ ಪ್ರಶ್ನೆಗಳು ಪ್ರಾರಂಭವಾದವು.

ಮೊದಲನೆಯ ದಿನ ದೊಡ್ಡಮ್ಮ ದೇವತೆ ಹತ್ತಿರ ನಡೆದ ಸಂಘಟನೆಗಳನ್ನು ಚೆನ್ನಾಗಿ ವಿಶ್ಲೇಷಿಸಿಕೊಂಡು, ಅವುಗಳಿಗೆ ಅನುಬಂಧವಾಗಿ ಎರಡನೆ ದಿನ ಏನಾದರು ಆಧಾರ ದೊರಕುತ್ತದೇನೊ ನೋಡಬೇಕೆಂದುಕೊಂಡೆನು. ಮೂರನೇ ದಿನ ಸಾಯಂಕಾಲ ದೊಡ್ಡಮ್ಮನ ಹತ್ತಿರಕ್ಕೆ ಹೋದೆವು. ಆ ದಿನವು ಸಹ ದೊಡ್ಡ ಪೂಜೆ ಬರೆಸಿಕೊಂಡಿದ್ದರಿಂದ, ನಾವು ಎಲ್ಲರಿಗಿಂತ ಮೊದಲು ಒಳಗೆ ಹೋದೆವು. ಮೊದಲ ದಿನದ ಹಾಗೆ ತೆಂಗಿನ ಕಾಯನ್ನು ಹಿಡಿದುಕೊಂಡು

ಕುಳಿತುಕೊಳ್ಳುವುದು, ಒಳಗೆ ಹೋಗಿ ಅಮ್ಮನವರಿಗೆ ಕೊಡುವುದು, ಕೊಟ್ಟ ನಂತರ ಮತ್ತೆ ಬಂದು ಕುಳಿತುಕೊಳ್ಳುವುದು ನಡೆಯಿತು. ಒಳಗೆ ದೊಡ್ಡಮ್ಮ ತೆಂಗಿನಕಾಯಿ ಒಡೆದ ಶಬ್ದ ಕೇಳಿಸಿತು. ನಾರಾಯಣರೆಡ್ಡಿ ಹೋಗಿ ಪಾತ್ರೆಯನ್ನು ತಂದುಕೊಳ್ಳುವುದು ನಡೆಯಿತು. ಪಾತ್ರೆಯಲ್ಲಿ ನೋಡಿದರೆ ತೆಂಗಿನ ಚಿಪ್ಪುಗಳೊಂದಿಗೆ ಮಾರು ಉದ್ದದ ಕುರಿಗಳಹೊಟ್ಟೆಯಲ್ಲಿದ್ದ ಕರಳು ಕಾಣಿಸಿತು. ಅದು ನಾಲ್ಕು ಇಂಚುಗಳಿಗೆ ಒಂದು ಜಾಗದಲ್ಲಿ ಗಂಟುಬಿದ್ದಿದೆ. ಒಳಗಿನಿಂದ ಅಮ್ಮನವರು "ಏನೊ ಬಾಲಾ ಪಾತ್ರೆಯಲ್ಲಿ ಕರಳು ಕಾಣಿಸುತ್ತಿದೆಯಾ?" ಎಂದು ಕೇಳಿದಳು. ಪಕ್ಕದಲ್ಲಿರುವ ವ್ಯಕ್ತಿ ಕಡ್ಡಿಯಿಂದ ಪಾತ್ರೆಯಲ್ಲಿನ ಕರಳನ್ನು ಎತ್ತಿ ತೋರಿಸುತ್ತಾ "ಕಾಣಿಸಿದೆಯೆಂದು ಹೇಳು" ಅಂದನು. ಆಗ ನಾರಾಯಣರೆಡ್ಡಿ "ಕಾಣಿಸುತ್ತಾ ಇದೆ ತಾಯಿ" ಅಂದನು. ಮತ್ತೆ ಅಮ್ಮನವರು ಒಳಗಿನಿಂದ "ನಿನ್ನ ಕರಳು ಗಂಟು ಬಿದ್ದಿದೆ ಕಾಣಿಸುತ್ತಿದೆಯಾ" ಅಂದಳು. ಇಲ್ಲಿ ತೋರಿಸುವವನು "ಕರಳು ಎಷ್ಟು ಗಂಟು ಬಿದ್ದಿದೆಯೊ ನೋಡು" ಎಂದು ಎತ್ತಿ ತೋರಿಸಿದನು. ನಾರಾಯಣರೆಡ್ಡಿ "ಕಾಣಿಸುತ್ತಾ ಇದೆ ತಾಯಿ" ಅಂದನು. ಆಗ ದೊಡ್ಡಮ್ಮ "ನಿನ್ನ ಹೊಟ್ಟೆಯಲ್ಲಿ ಗಂಟು ಬಿದ್ದ ಕರಳನ್ನು ಕತ್ತರಿಸಿ ತೆಗೆದುಹಾಕಿದ್ದೇನೆ. ಈಗಿನಿಂದ ಹೊಟ್ಟೆಯಲ್ಲಿ ಬಾಧೆ ಸ್ವಲ್ಪ ಸ್ವಲ್ಪವಾಗಿ ಕಡಿಮೆಯಾಗುತ್ತಾ ಹೋಗುತ್ತದೆ. ಇಷ್ಟಕ್ಕೆ ಮುಗಿಯಲಿಲ್ಲ, ನಿನಗೆ ಇನ್ನೂ ಏಕೆ ಚೆನ್ನಾಗಿಲ್ಲವೊ ತಿಳಿಯುತ್ತದೆ. ನೀನು ಮತ್ತೆ ಒಂದು ಬಾರಿ ಬಂದು ಹೋಗು" ಎಂದು ಹೇಳಿದಳು. ಪಕ್ಕದಲ್ಲಿದ್ದ ವ್ಯಕ್ತಿ "ನೀವು ಅಮ್ಮನವರು ಹೇಳಿದಂತೆ ನಾಳಿದ್ದು ಬನ್ನಿ ಇನ್ನೂ ಏನಾದರು ಇದ್ದರೆ ತೆಂಗಿನಕಾಯಲ್ಲಿ ತೆಗೆದು ಹಾಕುತ್ತಾಳೆ" ಎಂದನು. ಅದಕ್ಕೆ ನಾರಾಯಣರೆಡ್ಡಿ ಸರಿ ಎಂದು ತಲೆ ಅಲ್ಲಾಡಿಸಿದನು. ಆಗಲು ಸಹ ಎರಡು ನೂರು ಹಣ ಕಟ್ಟಿ ದೊಡ್ಡ ಪೂಜೆಗೆ ಚೀಟಿ ತೆಗೆದುಕೊಂಡು, ತೆಂಗಿನ ಕಾಯನ್ನು ಸಹ ತೆಗೆದುಕೊಂಡು ಬಂದನು.

ಎರಡನೇ ಬಾರಿ ಒಂದು ಮೊಳದಷ್ಟು ಕರಳು ಕಾಣಿಸಿರುವುದು, ಕರಳು ಗಂಟು ಬಿದ್ದಿರುವುದನ್ನು ನೋಡಿದ ನಂತರ, ನನಗೆ ಮತ್ತೆ ಕೆಲವು ಪ್ರಶ್ನೆಗಳು

ಹುಟ್ಟಿಬಂದವು. ಮೊದಲನೆಯ ದಿನ, ಎರಡನೇ ದಿನ ಕಾಣಿಸಿದ ದೃಶ್ಯಗಳನ್ನು ಕುರಿತು ಯೋಚಿಸಿ ತಕ್ಷಣವೆ ಯಾವ ನಿರ್ಣಯವನ್ನು ತೆಗೆದುಕೊಳ್ಳದೆ, ಮೂರನೇ ದಿನವೂ ಸಹ ನೋಡಬೇಕೆಂದುಕೊಂಡೆನು. ಮೂರನೇ ದಿನವು ಸಹ ಬಂದಿತು. ಆ ದಿನವು ತೆಂಗಿನಕಾಯನ್ನು ತೆಗೆದುಕೊಂಡು ಹೋದೆವು. ಸಾಯಂಕಾಲ ಆರುಗಂಟೆಗಳಿಗೆ ಪೂಜೆ ಪ್ರಾರಂಭವಾಯಿತು. ನಾವು ನಾಲ್ಕನೆ ರೂಮಿನಲ್ಲಿ ಕುಳಿತಿದ್ದೆವು. ನಾರಾಯಣರೆಡ್ಡಿ ತೆಂಗಿನಕಾಯನ್ನು ಒಳಗೆ ಕೊಟ್ಟುಬಂದನು. ನಾರಾಯಣರೆಡ್ಡಿ ಕುಳಿತುಕೊಳ್ಳುವ ಮೊದಲೆ ತೆಂಗಿನಕಾಯನ್ನು ಒಡೆದ ಶಬ್ದ ಕೇಳಿಸಿತು. ನಾರಾಯಣ ರೆಡ್ಡಿಗೆ ತಾಳ್ಮೆ ಇಲ್ಲದಿದ್ದರೂ ಹೋಗಿ ಪಾತ್ರೆಯನ್ನು ತಂದುಕೊಂಡನು. ಈ ಸಾರಿ ಪಾತ್ರೆಯಲ್ಲಿ ತೆಂಗಿನ ಚಿಪ್ಪುಗಳೊಂದಿಗೆ ಕೂದಲುಗಳಿಂದ ಎಣೆದ ಚಿಕ್ಕ ಹಗ್ಗ, ಆ ಹಗ್ಗಕ್ಕೆ ಮೂರು ಒಣಗಿಹೋದ ನಿಂಬೆಕಾಯಿಗಳನ್ನು ಕಟ್ಟಲಾಗಿದೆ. ಆ ನಿಂಬೆ ಕಾಯಿಗಳಿಗೆ ಚಿಕ್ಕ ಮೊಳೆಗಳನ್ನು ಹೊಡೆಯಲಾಗಿದೆ. ಆ ಹಗ್ಗಕ್ಕೆ ಕೊನೆಯಲ್ಲಿ ಮೂರು ಇಂಚುಗಳ ಉದ್ದವಿರುವ ಗೊಂಬೆ ಕಟ್ಟಲಾಗಿದೆ. ಆ ಗೊಂಬೆ ಕಪ್ಪು ಬಟ್ಟೆಯಿಂದ ಮಾಡಿರುವುದೇ ಅಲ್ಲದೆ, ಅದರ ಹೊಟ್ಟೆಯಲ್ಲಿ ಒಂದು ಮೊಳೆ ಹೊಡೆಯಲಾಗಿದೆ. ಈಗ ನಾನು ಹೇಳಿರುವವೆಲ್ಲವನ್ನು ಕಾಣಿಸುತ್ತಿವೆಯಾ ಎಂದು ಒಳಗಿನಿಂದ ಅಮ್ಮನವರು ಕೇಳುತ್ತಿರುವಾಗ, ನಮ್ಮ ಬಳಿಯಿದ್ದ ವ್ಯಕ್ತಿ ಕಡ್ಡಿಯಿಂದ ಎಲ್ಲವನ್ನು ತೋರಿಸುತ್ತಿದ್ದಾನೆ. ತೋರಿಸುವುದು ಮುಗಿದನಂತರ ಒಳಗಿನಿಂದ ದೊಡ್ಡಮ್ಮ "ಬಾಲಾ ನಿನಗೆ ಸರಿಹೋಗದವರು ನೀನು ಸತ್ತುಹೋಗಬೇಕೆಂದು, ಮಂತ್ರಗಳಿಂದ ಮಾಟಮಾಡಿಸಿದ್ದಾರೆ ನೋಡಿದೆಯಾ! ನಿನ್ನ ಹೆಸರಿನ ಮೇಲೆ ನಿಂಬೆ ಕಾಯಿಗಳಿಗೆ ಮೊಳೆಗಳು ಹೊಡೆದಿದ್ದಾರೆ, ನಿನ್ನ ಗೊಂಬೆಯನ್ನು ಮಾಡಿ ಹೊಟ್ಟೆಯಲ್ಲಿ ಮೊಳೆಗಳು ಹೊಡೆದಿದ್ದಾರೆ. ಆದ್ದರಿಂದ ನಿನಗೆ ಅರೋಗ್ಯ ಚೆನ್ನಾಗಿಲ್ಲದೆ ಹೋಗಿದೆ. ನೀನಂದುಕೊಂಡಂತೆ ನಿನಗೆ ದೆವ್ವವಿಲ್ಲ ಭೂತವೂ ಇಲ್ಲ. ಈಗ ಇವೆಲ್ಲ ತೆಗೆದುಹಾಕಿದ್ದೇನಲ್ಲ! ಇನ್ನು ಏನು ಇಲ್ಲ. ಈಗಿನಿಂದ ನಿನ್ನ ಆರೋಗ್ಯ ಸ್ವಲ್ಪ ಸ್ವಲ್ಪವಾಗಿ ಚೆನ್ನಾಗಾಗುತ್ತದೆ. ಪೂರ್ತಿ ಗುಣವಾಗುವುದಕ್ಕೆ ನಲವತ್ತು ದಿನಗಳು ಬೇಕಾಗುತ್ತದೆ. ನೀನು ನಲವತ್ತು ದಿನಗಳು ಸುಮ್ಮನಿರದೆ ನಾನು ಹೇಳಿದಂತೆ

ಮಾಡಿಕೊ. ಹಾಗೆ ಮಾಡಿಕೊಳ್ಳದೆ ಹೋದರೆ ಇನ್ನೂ ಏನಾದರೂ ಹೊಸದಾಗಿ ಅನಾರೋಗ್ಯ ಬರಬಹುದು. ಆದ್ದರಿಂದ ನಾನು ಹೇಳುವುದನ್ನೆಲ್ಲಾ ಬರೆದುಕೊಂಡು ಹೋಗಿ, ಹಾಗೇ ನಡೆದುಕೊ" ಎಂದು ಹೇಳಿದಳು. ಆಗ ಪಕ್ಕದಲ್ಲಿದ್ದ ವ್ಯಕ್ತಿ ಪೆನ್ನು, ಪೇಪರು ಕೊಟ್ಟನು, ನಾನು ಬರೆದುಕೊಳ್ಳುವುದಕ್ಕೆ ಅವರು ಕೊಟ್ಟ ಪೇಪರು ಪೆನ್ನು ತೆಗೆದುಕೊಂಡೆನು.

ದೊಡ್ಡಮ್ಮನವರು ಒಳಗಿನಿಂದ ಹೇಳುತ್ತಿದ್ದರೆ ನಾನು ಬರೆಯುತ್ತಿದ್ದೇನೆ. ಆಕೆ ಹೇಳಿರುವುದೇನೆಂದರೆ! ನಲವತ್ತು ದಿನಗಳು ಶಿವಾಲಯಕ್ಕೆ ಹೋಗಿ ಲಿಂಗಕ್ಕೆ ಹನ್ನೊಂದು ಪ್ರದಕ್ಷಿಣೆಗಳು ಮಾಡಬೇಕು. ಶಿವಾಲಯಕ್ಕೆ ಹೋಗುವ ಮೊದಲೆ ರಾತ್ರಿಗೆ ರಾಗಿಬಿಂದಿಗೆಯಲ್ಲಿ ನೀರು ಇಟ್ಟುಕೊಂಡು, ಬೆಳಗ್ಗೆ ಸ್ನಾನ ಮಾಡಿ ನಂತರ ಶಿವಾಲಯಕ್ಕೆ ಹೋಗಬೇಕು. ಹಾಗೆ ನಲವತ್ತು ದಿನಗಳು ಸಾಯಂಕಾಲ ಬೇವಿನ ಎಲೆ ಹಾಕಿದ ನೀರಿನಿಂದ ಸ್ನಾನಮಾಡಿ, ಆಂಜನೇಯನ ಗುಡಿಗೆ ಹೋಗಿ ಪ್ರದಕ್ಷಿಣೆ ಮಾಡಿ ಬರಬೇಕು. ನಲವತ್ತು ದಿನಗಳು ಮಾಂಸವನ್ನು ತಿನ್ನಬಾರದು. ಆ ನಲವತ್ತು ದಿನಗಳಲ್ಲಿ ವಾರಕ್ಕೊಂದು ಸಾರಿ ಕಡಲೆಕಾಳು ನೆನೆಸಿಟ್ಟ ನೀರು ಕುಡಿದು ಆ ಕಡಲೆಕಾಳನ್ನು ಬೇಯಿಸಿಕೊಂಡು ಗುಗ್ಗರಿ ತಿನ್ನಬೇಕು. ಬೆಳಗ್ಗೆ, ಸಾಯಂಕಾಲ ಕಾಫಿಯಾಗಲಿ, ಟೀಯಾಗಲಿ ಕುಡಿಯದೆ ಲೋಟಹಾಲು ಕುಡಿಯಬೇಕು. ರಾತ್ರಿಹೊತ್ತು ಆಂಜನೇಯಸ್ವಾಮಿ ಫೋಟವನ್ನು ತಲೆಕೆಳಗೆ ಇಟ್ಟುಕೊಂಡು ಮಲಗಬೇಕು. ಇವೆಲ್ಲ ಕ್ರಮ ತಪ್ಪದಂತೆ ಮಾಡಬೇಕು ಎಂದು ಹೇಳಿದಳು. ಅಮ್ಮನವರು ಹೇಳಿರುವವನ್ನೆಲ್ಲ ಬರೆದುಕೊಂಡ ನಾನು "ಇನ್ನು ಪೂಜೆಗೆ ಬರಬೇಕಾದ ಕೆಲಸವಿಲ್ಲತಾನೆ" ಎಂದು ನಮ್ಮ ಪಕ್ಕದಲ್ಲಿದ್ದ ವ್ಯಕ್ತಿಯನ್ನು ಕೇಳಿದೆನು. ಆತನು "ಅಮ್ಮನವರು ಹೇಳಿದ್ದಾಳೆ. ಎಲ್ಲ ತೆಗೆದುಹಾಕಿದ್ದೇನೆಂದು ಇನ್ನು ಅಗತ್ಯವಿಲ್ಲ." ಅಂದನು. ಆಗ ನಾನು "ಮೂರು ದಿನಗಳಿಂದ ನಾನೂ ಬಂದಿದ್ದೇನೆ. ನನಗೆ ಅಮ್ಮನವರ ದರ್ಶನ ಸಿಗಲಿಲ್ಲ, ಮೇಲಾಗಿ ನಾನು ಯಾರಿಗಾದರು ಹೇಳುವುದಕ್ಕೆ ಅಮ್ಮನವರ ಮಹಿಮೆಯು ಸಹ ತಿಳಿದಿಲ್ಲ. ನೀನು ಇಲ್ಲಿ ಮುಖ್ಯವಾದ ಮನುಷ್ಯನಂತೆ ಇದ್ದೀಯಲ್ಲ! ನೀನು ನನಗೆ

ದೊಡ್ಡಮ್ಮನವರ ದರ್ಶನವನ್ನು ಮಾಡಿಸಬಹುದಲ್ಲವೆ! ಎಂದು ಕೇಳಿದೆನು. ಅದಕ್ಕೆ ಆ ವ್ಯಕ್ತಿ "ತಪ್ಪದೆ ದರ್ಶನ ಮಾಡಿಸುತ್ತೇನೆ" ಎಂದು ನನ್ನ ಕೈ ಹಿಡಿದುಕೊಂಡು ರೂಮಿನೊಳಗೆ ಹೋಗುವ ಮೊದಲೆ "ಅಮ್ಮಾ! ಒಬ್ಬ ಬಾಲಕನು ನಿನ್ನ ದರ್ಶನವನ್ನು ಕೇಳುತ್ತಿದ್ದಾನೆ." ಎಂದು ಹೇಳಿ, ನನ್ನನ್ನು ಒಳಗಡೆ ಕರೆದುಕೊಂಡು ಹೋದನು.

ಒಳಗೆ ಹೋಗಿ ಬಲಗಡೆಗೆ ತಿರುಗಿ ನೋಡಿದೆನು. ನಾಲ್ಕನೆ ರೂಮಿಗಿಂತ ಅಮ್ಮನವರಿದ್ದ ರೂಮು ಎರಡರಷ್ಟು ಅಗಲ ಹೆಚ್ಚಾಗಿ ಇದೆ. ಅಮ್ಮನವರು ಒಬ್ಬ ಹೆಂಗಸಿನಲ್ಲಿ ಸೇರಿದ್ದಾಳೆ. ಆ ಹೆಂಗಸು ಅಂಗಾತ ಮಲಗಿಕೊಂಡು, ಕಾಲುಗಳನ್ನು ಅಗಲವಾಗಿ ಚಾಚಿದ್ದಾಳೆ. ಆಕೆ ಶರೀರದೊಳಗಿನಿಂದ ಚಿಕ್ಕದಾಗಿ ಮುಲ್ಗಿದಂತೆ ಕೇಳಿಸುತ್ತಾ ಇದೆ. ಆಕೆಯ ಸೊಂಟದ ಬಳಿಯಿಂದ ಕೆಳಗಿನ ಕಾಲುಗಳವರೆಗು ಬಲಗಡೆ, ಎಡಗಡೆ ಸ್ವೀಟ್‌ಸ್ಟಾಲ್‌ನಲ್ಲಿ ಇದ್ದಂತೆ ಎಲ್ಲ ಸ್ವೀಟ್‌ಗಳು, ಕಾರಗಳು, ಬೂಂದಿಗಳು ಎಲ್ಲ ಎರಡು ಕಡೆ ಇಡಲಾಗಿದೆ. ಸೊಂಟದ ಮೇಲ್ಭಾಗದಲ್ಲಿ ಎರಡು ಕಡೆಗಳಲ್ಲಿ ಖಾಲಿ ಸ್ಥಳವಿದ್ದು, ಆ ಸ್ಥಳದಲ್ಲಿ ಎರಡು ಕಡೆಗಳಲ್ಲಿ ಎರಡು ಅಡಿಗಳ ಎತ್ತರವಿರುವ ದೀಪಸ್ತಂಭಗಳು ಇವೆ. ನಮ್ಮ ಕಡೆ ಕಾಲುಗಳಿವೆ ತಲೆಕಡೆಗೆ ದೊಡ್ಡ ದಿಂಬಿನ ಮೇಲೆ ತಲೆ ಇಟ್ಟುಕೊಂಡು ಮಲಗಿದ್ದಾಳೆ. ಆಕೆ ಮಲಗಿಕೊಂಡು ನೋಡಿದರೂ, ದಿಂಬಿನ ಮೇಲೆ ತಲೆ ಇರುವುದರಿಂದ ಎದುರಿಗಿರುವ ನಾವು ಚೆನ್ನಾಗಿ ಕಾಣಿಸುತ್ತೇವೆ, ಹಾಗೆ ಮಲಗಿಕೊಂಡ ಆಕೆಗೆ ಎಡಗಡೆಯಲ್ಲಿ ಎರಡೂವರೆ ಅಡಿಗಳ ದೂರದಲ್ಲಿಯೇ, ನಾವು ಬಂದ ಬಾಗಿಲ ಹತ್ತಿರದಿಂದ ಆ ಕೋಣೆ ಉದ್ದಕ್ಕೂ ಕೇವಲ ಮೂರು ಅಡಿಗಳ ಎತ್ತರ, ಅರ್ಧ ಅಡಿ ದಪ್ಪ ಇರುವ ಗೋಡೆ ಇದೆ. ಗೋಡೆ ಪಕ್ಕದಲ್ಲಿ ಎಂಟು ಅಡಿಗಳ ಉದ್ದ, ಎಂಟು ಅಡಿಗಳ ವಿಸ್ತೀರ್ಣವಿರುವ ಕೋಣೆ ಇದೆ. ಅಮ್ಮನವರು ಮಲಗಿಕೊಂಡ ರೂಮಿಗೆ, ಪಕ್ಕದ ರೂಮಿಗೆ ಗಜ ಎತ್ತರವಿರುವ ಗೋಡೆ ಮಾತ್ರ ಇದೆ. ಗೋಡೆ ಪಕ್ಕದ ಕೋಣೆಯಲ್ಲಿ, ಹತ್ತು ಇಲ್ಲವೆ ಹನ್ನೆರಡು ದೊಡ್ಡ ಸೋರೆಗಳು (ಬಾನೆಗಳು) ಇವೆ. ಅವುಗಳ ಮೇಲೆ ಮುಚ್ಚಳಗಳು ಸಹ ಇವೆ. ಆ ಕೋಣೆಯಿಂದ ತಿಳಿದು

ತಿಳಿಯದಂತೆ ಸ್ವಲ್ಪ ಕೊಳೆತ ಮಾಂಸದ ವಾಸನೆ ಬರುತ್ತಾ ಇದೆ. ಆ ಚಿಕ್ಕ ಗೋಡೆಗೆ, ಬಾನೆಗಳಿಗೆ (ದೊಡ್ಡ ಸೋರೆಗಳಿಗೆ) ನಡುವೆ ಎರಡು ಅಡಿಗಳ ಸ್ಥಳವಿದೆ. ಗೋಡೆಗೆ, ಬಾನೆಗಳಿಗೆ ನಡುವೆ ಒಬ್ಬ ಮನುಷ್ಯ ಮಲಗಿಕೊಂಡರೆ ನಾವು ನಿಂತಿರುವ ಜಾಗದಿಂದ ಸ್ವಲ್ಪವಾದರೂ ಕಾಣಿಸುವುದಿಲ್ಲ. ಇದೆಲ್ಲಾ ಯಾರು ಗ್ರಹಿಸಿಕೊಳ್ಳುವುದಕ್ಕೆ ಸ್ವಲ್ಪವಾದರೂ ಅವಕಾಶವಿಲ್ಲ. ಏಕೆಂದರೆ!

ನನ್ನ ಹಾಗೆ ಯಾರಾದರು ಒಳಗಡೆ ಹೋಗಿ ಅಮ್ಮನವರ ಕಡೆ ತಿರುಗಿ ನೋಡಿದರೆ ಅಲ್ಲಿಯವರೆಗು ಮಲಗಿಕೊಂಡಿದ್ದ ಆಕೆ ಇದ್ದಕ್ಕಿದ್ದಂತೆ ಒಂದುಸಾರಿ ಎದ್ದು ಕುಳಿತುಕೊಳ್ಳುತ್ತಾಳೆ. ಆ ದೃಶ್ಯವನ್ನು ನೋಡಿದರೆ, ಯಾರಲ್ಲಾದರು ಸ್ವಲ್ಪ ಭಯ ಏರ್ಪಡುತ್ತದೆ. ಅಷ್ಟೇ ಅಲ್ಲದೆ ಒಳಗೆ ಬಂದ ಮನುಷ್ಯ ಎಷ್ಟು ತಿಳಿವಳಿಕೆಯುಳ್ಳವನಾದರು ಅವನ ತಿಳಿವಳಿಕೆ ಕೆಲಸ ಮಾಡದಂತೆ, ಹೇಗೆ ಮಾಡಬೇಕೊ ಅವರು ಮೊದಲೆ ತಯಾರು ಮಾಡಿಕೊಂಡ ಪಥಕದ ಪ್ರಕಾರ ಹಾಗೆ ಮಾಡುತ್ತಾರೆ. ಹಾಗೆ ಮಾಡುವುದರಲ್ಲಿ ಅವರ ತಿಳಿವಳಿಕೆ ದೊಡ್ಡದೆಂದೆ ಹೇಳಬಹುದು. ನಾನು ಒಳಗೆ ಹೋದ ತಕ್ಷಣವೆ ನನ್ನ ಧ್ಯಾಸವನ್ನು ಪಕ್ಕಕ್ಕೆ ತಿರುಗಿಸುವುದಕ್ಕೆ, ಮಲಗಿದ್ದ ಮನುಷ್ಯಳು ಒಂದೇ ಸಾರಿ ಎದ್ದು ಕುಳಿತುಕೊಂಡಳು. ಬಾ ಮುಂದಕ್ಕೆ ಬಾ ಎಂದು ಗದರಿಸಿ ಹೇಳಿದಳು. ಹಾಗೆ ಗದರಿಸಿ ಹೇಳುವುದರಲ್ಲಿಯೆ ನಮ್ಮಲ್ಲಿರುವ ಯೋಚನೆಗಳೆಲ್ಲ ಗಾಳಿಗೆ ಹೋಗುತ್ತವೆ. ಆಕೆ ಹೇಳಿದಂತೆ ಮುಂದಕ್ಕೆ ಹೋದರೆ ಹಿಂದಕ್ಕೆ ಹೋಗು ಎಂದು ಅರಚುತ್ತಾಳೆ. ನಾನು ಮುಂದಕ್ಕೆ ಹೋದರೆ ನಾನೇನೊ ತಪ್ಪು ಮಾಡಿದಂತೆ ಹಿಂದಕ್ಕೆ ಹೋಗು ಎಂದು ಅರಚಿಹೇಳಿದಳು. ಹಾಗೆ ಅರಚಿದ್ದಕ್ಕೆ ಎರಡು ಅಡಿಗಳ ಹಿಂದಕ್ಕೆ ಬಂದೆನು. ನಾನು ಹಿಂದಕ್ಕೆ ಬರುವಾಗ ನನ್ನ ಜೊತೆಗೆ ಒಳಗೆ ಬಂದ ಮನುಷ್ಯ, ನನ್ನ ಹಿಂಬದಿಯಿಂದ ನನ್ನ ಕೈ ಹಿಡಿದುಕೊಂಡು ಹಿಂದಕ್ಕೆ ಬರುವಂತೆ ಎಳೆದನು. ಆ ಸ್ಥಿತಿಯಲ್ಲಿ ಯಾವನಾದರು ಏನು ತಪ್ಪು ಮಾಡಿದ್ದೇವೊ ಎಂದು ಅವನೊಳಗೆ ಅವನು ಯೋಚಿಸಿಕೊಳ್ಳುತ್ತಾನೆ ಹೊರತು ಹೊರಗೆ ಏನು ನಡೆಯುತ್ತಾ ಇದೆಯೆಂದು ಯೋಚನೆ ಮಾಡಲಾರನು. ಬಂದವನನ್ನು ಹಾಗೆ ಗಡಿಬಿಡಿ

ಮಾಡುವುದೇ ಅವರಿಗೆ ಮುಖ್ಯವಾದ ಕೆಲಸ. ಹಿಂದಕ್ಕೆ ಬಂದ ನನ್ನನ್ನು, ಪಕ್ಕದಲ್ಲಿ ಗೂಡು ಇದೆ ನೋಡು ಎಂದು ಅಮ್ಮನವರು ಗದರಿಸಿ ಹೇಳಿದಳು. ನನ್ನ ಪಕ್ಕದಲ್ಲಿದ್ದ ಮನುಷ್ಯ ಇಗೊ ಗೂಡು ಎಂದು ನನಗೆ ತೋರಿಸಿದನು. ಆ ಗೂಡು ನಾವು ಬಂದ ಬಾಗಿಲಿಗೆ ಎದುರುಗಡೆ ಇದೆ. ನಾನು ಆ ಗೂಡಿನ ಕಡೆ ನೋಡಿ ನೋಡದೇನೆ ಗೂಡಿನಲ್ಲಿ ಚೆಂಬು ಇದೆ ಕಾಣಿಸುತ್ತಿದೆಯಾ ಎಂದು ಅಮ್ಮನವರು ಗದರಿಸಿ ಕೇಳಿದಳು. ಆ ಮಾತಿಗೆ ಕಾಣಿಸಿದೆ ತಾಯಿ ಎಂದು ನಾನು ಹೇಳಬೇಕು. ಮಾತನಾಡದಂತೆ ಮೌನವಾಗಿ ಇರಬಾರದು. ನಾನು ಕಾಣಿಸಿದೆಯೆಂದು ಹೇಳಿದೆನು. ತಕ್ಷಣವೆ ಪಕ್ಕದಲ್ಲೆ ಹತ್ತಿ ಇದೆ ನೋಡು, ಹತ್ತಿಯನ್ನು ತೆಗೆದುಕೊ ಎಂದು ತಕ್ಷಣವೆ ಹೇಳಿದಳು. ನಾನು ಅದೇ ಗೂಡಿನಲ್ಲಿ ಚೆಂಬಿನ ಪಕ್ಕದಲ್ಲಿದ್ದ ಹತ್ತಿಯನ್ನು ತೆಗೆದುಕೊಂಡೆನು. ಚೆಂಬುನೊಳಗಿನ ನೀರಿನಲ್ಲಿ ಹತ್ತಿಯನ್ನು ಮುಳುಗಿಸಿ ನನಗೆ ಕೊಡು ಎಂದು ಅರಚಿದಳು. ನಾನು ಹಾಗೆಯೇ ಚೆಂಬಿನಲ್ಲಿನ ನೀರಿನಲ್ಲಿ ಹತ್ತಿಯನ್ನು ಒದ್ದೆ ಮಾಡಿ ಕುಳಿತಿರುವ ಅಮ್ಮನವರಿಗೆ ಕೊಡುವುದಕ್ಕೆ ಹೋದೆನು. ಕೈಚಾಚಿ ನನ್ನ ಕೈಯಲ್ಲಿನ ಹತ್ತಿಯನ್ನು ತೆಗೆದುಕೊಳ್ಳುತ್ತಲೆ ದೂರವಾಗಿ ನಿಂತುಕೊ ಎಂದು ಗದರಿಸಿದಾಗ ನಾನು ಎರಡು ಮೂರು ಹೆಜ್ಜೆಗಳು ಹಿಂದಕ್ಕೆ ಹಾಕಿ ನಿಂತುಕೊಂಡೆನು. ನನ್ನ ಪಕ್ಕದಲ್ಲಿದ್ದ ಮನುಷ್ಯ ಕೈಗಳು ಕಟ್ಟಿಕೊಂಡು ಬಹಳ ಭಯದಿಂದ ಇರುವಂತೆ ಕಾಣಿಸಿದನು. ಅಷ್ಟರಲ್ಲಿ ನನ್ನ ಕೈಯಿಂದ ಒದ್ದೆಯಾದ ಹತ್ತಿಯನ್ನು ತೆಗೆದುಕೊಂಡ ಅಮ್ಮನವರು, ಹತ್ತಿಯ ಮೇಲ್ಭಾಗವನ್ನು ದೀಪಕ್ಕೆ ಅಂಟಿಸಿದಳು. ದೀಪಕ್ಕೆ ಅಂಟಿಕೊಂಡ ಹತ್ತಿಯ ಮೇಲ್ಭಾಗ ಎಣ್ಣೆಯಿಂದ ಉರಿದಂತೆ ಉರಿಯುತ್ತಿದೆ. ಮೇಲ್ಭಾಗದಲ್ಲಿ ಹತ್ತಿ ಉರಿಯುತ್ತಿದ್ದಾಗ, ಅಮ್ಮನವರು ಕೈಯಿಂದ ಹಿಡಿದುಕೊಂಡಿದ್ದಾಳೆ. ನನ್ನ ಪಕ್ಕದಲ್ಲೆ ಇದ್ದ ಮನುಷ್ಯ, ನೋಡಿದೆಯಾ? ಅಮ್ಮನವರ ಮಹಿಮೆ ಅನ್ನುತ್ತಿದ್ದಾನೆ. ಅಷ್ಟರಲ್ಲಿ ಆ ಹತ್ತಿಯನ್ನು ಪಕ್ಕದಲ್ಲಿ ಕೆಳಗೆ ಇಟ್ಟ ಅಮ್ಮನವರು, ನಿನ್ನ ಹಿಂದೆ ಗೂಡು ಇದೆ ನೋಡು ಅಂದಳು. ಹಿಂತಿರುಗಿ ನೋಡಿದೆನು. ಗೂಡು ಇದೆ . ಅಲ್ಲಿ ಮೊರದಲ್ಲಿ ಮಣ್ಣು ಇದೆ ನೋಡು ಎಂದು ಹೇಳಿದಳು. ಅಲ್ಲಿಗೆ ಹೋಗಿ ನೋಡಿದರೆ ಗೂಡಿನಲ್ಲಿ ಮೊರವಿದೆ, ಆ ಮೊರದಲ್ಲಿ ಮಣ್ಣು ಸಹ ಇದೆ. ಆ ಮಣ್ಣನ್ನು ತೆಗೆದುಕೊಂಡು

ಬಾ ಎಂದು ಹೇಳಿದಳು. ನನ್ನ ಪಕ್ಕದಲ್ಲಿದ್ದ ಮನುಷ್ಯ ಬೊಗಸೆ ತುಂಬಾ ತೆಗೆದುಕೊ ಎಂದು ಮೆಲ್ಲನೆ ಹೇಳಿದನು. ಆತನು ಹೇಳಿದಂತೆ ನಾನು ಎರಡು ಕೈಗಳ ತುಂಬಾ ಮಣ್ಣು ತೆಗೆದುಕೊಂಡೆನು.

ತಕ್ಷಣವೆ ನನ್ನ ಪಕ್ಕದಲ್ಲಿದ್ದ ವ್ಯಕ್ತಿ ಅಮ್ಮನವರಿಗೆ ಕೊಡು ಎಂದು ಹೇಳಿದನು. ನಾನು ಮುಂದಕ್ಕೆ ಹೋದೆನು. ಆಗ ಅಮ್ಮನವರು ಮುಂದಕ್ಕೆ ಕೈಗಳು ಚಾಚಿ ತನ್ನ ಕೈಗಳೊಳಗೆ ಮಣ್ಣನ್ನು ಹಾಕಿಸಿಕೊಂಡು ಹಿಂದಕ್ಕೆ ಹೋಗು ಎಂದು ಹೇಳಿದಳು. ನಾನು ಸ್ವಲ್ಪ ಹಿಂದಕ್ಕೆ ಬಂದು ನಿಂತುಕೊಂಡೆನು. ಅಮ್ಮನವರು ಕಾಲುಗಳನ್ನು ಅಗಲವಾಗಿಟ್ಟುಕೊಂಡಿದ್ದಾಳೆಂದು ಹೇಳಿದ್ದೇನಲ್ಲ! ತನ್ನ ಕೈಗಳಲ್ಲಿನ ಮಣ್ಣನ್ನು ಎರಡು ಹಸ್ತಗಳಿಂದ ಜೋರಾಗಿ ಉಜ್ಜುತ್ತಾ, ಕೆಳಗೆ ತನ್ನ ಸೀರೆಯಲ್ಲಿ ಬೀಳುವಂತೆ ಮಾಡಿದಳು. ಆ ಮಣ್ಣನ್ನು ಗಟ್ಟಿಯಾಗಿ ಉಜ್ಜಿಕೆಳಗೆ ಬಿಡುವುದರಲ್ಲಿ, ಆ ಮಣ್ಣು ಕೆಂಪಗೆ ಬಣ್ಣ ಬದಲಾಗಿ ಬೀಳುತ್ತಿದೆ. ನಾನು ಕೊಟ್ಟಿರುವುದು ಕಪ್ಪು ಮಣ್ಣು, ಆಕೆ ಬೀಳಿಸಿದ್ದು ಕೆಂಪನೆ ಕುಂಕುಮ. ಪಕ್ಕದ ಮನುಷ್ಯ ನೋಡಿದೆಯಾ ಅಮ್ಮನವರ ಮಹಿಮೆ ಅನ್ನುತ್ತಿದ್ದಾನೆ. ಎರಡು ಹಸ್ತಗಳ ನಡುವೆ ಮಣ್ಣನ್ನು ಉಜ್ಜಿದ ಕೈಗಳು ಕೆಂಪಗೆ ಕಾಣಿಸುತ್ತಿವೆ. ಆಕೆಯ ಸೀರೆ ಮೇಲೆ, ಕಾಲುಗಳ ನಡುವೆ ಬಿದ್ದಿರುವುದೆಲ್ಲಾ ಕೆಂಪಗೆ ಕಾಣಿಸುತ್ತಿದೆ. ಆಗ ಅಮ್ಮನವರು ನೋಡಿದೆಯಾ ಬಾಲಾ? ನನ್ನ ಮಹಿಮೆಯನ್ನು ಅಂದಳು. ನೋಡಿದೆನು ಅಮ್ಮಾ ಎಂದು ನಾನು ಹೇಳಿದೆನು. ಆದರೆ ನನ್ನ ಆಶೀರ್ವಾದ ನಿನಗೆ ಯಾವಾಗಲೂ ಇರುತ್ತದೆ. ಇನ್ನು ಹೋಗಿರಿ ಅಂದಳು. ಅಲ್ಲಿಂದ ಬಂದೆವು. ಆಕೆ ಹೇಳಿದ ವಿಷಯಗಳನ್ನು ಬರೆದುಕೊಂಡ ಪೇಪರು ನಾರಾಯಣ ರೆಡ್ಡಿಗೆ ಕೊಟ್ಟು ಆತನನ್ನು ಊರಿಗೆ ಕಳುಹಿಸಿದೆನು.

ನಾನು ಮನೆಗೆ ಬಂದ ನಂತರ ಮೂರು ದಿನಗಳು ನಡೆದ ವಿಷಯಗಳನ್ನೆಲ್ಲ ನೆನಪುಮಾಡಿಕೊಂಡು ನೋಡಿದೆನು. ಹಾಗೆ ಕೊನೆಯಲ್ಲಿ ಅವರು ನನಗೆ ತೋರಿಸಿದ ಮಹಿಮೆಗಳನ್ನು ಸಹ ವಿವರಿಸಿಕೊಂಡು ಯೋಚಿಸಿದೆನು. ಅಸಲಾದ ವಿಷಯುವೆಲ್ಲಾ ಅರ್ಥವಾಯಿತು. ಅಲ್ಲಿ

ನಡೆಯುತ್ತಿರುವ ಅವುಗಳಲ್ಲಿದ್ದ ಸತ್ಯವೇನು ಅನ್ನುವುದು ತಿಳಿದು ಹೋಯಿತು. ನನಗೆ ತಿಳಿದಿರುವುದು ನಿಮಗೆ ವಿವರಿಸಿ ಹೇಳುತ್ತಿದ್ದೇನೆ ನೋಡಿರಿ. ಅವರು ಕೊಡುವ ತೆಂಗಿನಕಾಯಾಗಲಿ, ಮಾರ್ಕೆಟ್‌ನಲ್ಲಿ ಕೊಳ್ಳುವ ತೆಂಗಿನಕಾಯಾಗಲಿ ಎರಡು ಒಂದೆ. ಹಾಗೆ ಕೊಡುವುದರಲ್ಲಿ ಅದು ಒಂದು ವ್ಯಾಪಾರವೆ ಆಗಲಿ, ಅದರಲ್ಲಿ ಯಾವ ಮೋಸವಿಲ್ಲ. ತಲೆಕೆಳಗೆ ಇಟ್ಟುಕೊಂಡು ತೆಗೆದುಕೊಂಡು ಹೋಗುವುದರಿಂದ ಅದರಲ್ಲಿ ತಲೆಕೆಳಗೆ ಇಟ್ಟುಕೊಂಡವನ ಸಮಾಚಾರ ಏನು ಇರುವುದಿಲ್ಲ. ಹಾಗೆ ಇಟ್ಟುಕೊಂಡು ಹೋಗುವುದರಿಂದ ಏನಾದರು ಅದರಲ್ಲಿ ತಿಳಿಯುತ್ತದೇನೊ ಅಂದುಕೊಂಡರೆ ಅದು ಅವರ ಭ್ರಮೆ ಆಗುತ್ತದೆ. ಹಾಗೆ ಮಾಡಿಸುವುದು ನಮಗೆ ನಂಬಿಕೆ ಬರುವುದಕ್ಕೆ ಮಾತ್ರವೆಯೆಂದು ಅರ್ಥವಾಗುತ್ತಿದೆ. ಇನ್ನು ಮುಖ್ಯವಾಗಿ ಗಮನಿಸಬೇಕಾಗಿರುವುದೇನೆಂದರೆ ತೆಂಗಿನಕಾಯನ್ನು ಒಡೆದ ಶಬ್ದ ಮಾತ್ರ ಕೇಳಿಸುತ್ತದೆ. ತೆಂಗಿನಕಾಯನ್ನು ತೆಗೆದುಕೊಂಡು ಹೋದವನು, ಅಲ್ಲಿ ಕೊಟ್ಟು ಬಂದ ನಂತರ ಒಡೆಯುತ್ತಿದ್ದಾರೆ. ಇಲ್ಲಿ ಪ್ರಶ್ನೆ ಏನೆಂದರೆ? ನಮ್ಮ ಮುಂದೆ ಒಡೆಯದೆ ಯಾರು ನೋಡದಂತೆ ಒಡೆಯುವುದು ಏಕೆ? ಅದಕ್ಕೆ ಉತ್ತರವನ್ನು ಹುಡುಕಿದರೆ, ನಾವು ತೆಗೆದಕೊಂಡು ಹೋದ ತೆಂಗಿನಕಾಯನ್ನು ಒಡೆಯುವುದು ವಾಸ್ತವ. ಆದರೆ ಅಮ್ಮನವರು ತೆಂಗಿನಕಾಯನ್ನು ಒಡೆಯಲಿಲ್ಲ, ಕಾಯಿಯನ್ನು ಒಳಗೆ ತೆಗೆದುಕೊಂಡು ಹೋದಾಗ ಕುಳಿತುಕೊಂಡೆ ಇರುತ್ತಾಳೆ. ತೆಂಗಿನಕಾಯನ್ನು ಕೊಡು ಎಂದು, ಕೊಟ್ಟ ತಕ್ಷಣವೆ ಹೋಗು ಎಂದು ಗದರಿಸಿ ಹೇಳಿ ಹೋದವನನ್ನು ಗೊಂದಲಕ್ಕೀಡು ಮಾಡಿ ಕಳುಹಿಸುವುದರಿಂದ ಅವನು ಅಲ್ಲಿ ಪರಿಸ್ಥಿತಿಗಳನ್ನು ಕುರಿತು ಯೋಚಿಸುವ ಅವಕಾಶವೇ ಇರುವುದಿಲ್ಲ. ಕಾಯನ್ನು ಕೊಟ್ಟವನು ಹೊರಗೆ ಬರುತ್ತಿದ್ದಹಾಗೆ, ಆ ತೆಂಗಿನಕಾಯನ್ನು ಎಡಕೈಯಿಂದ ಚಿಕ್ಕ ಗೋಡೆಕಡೆಗೆ ಕೊಡುತ್ತಾಳೆ. ಅದಕ್ಕು ಮೊದಲಿನಿಂದ ಗೋಡೆ ಪಕ್ಕ ಯಾರಿಗು ತಿಳಿಯದಂತೆ ಬಚ್ಚಿಟ್ಟುಕೊಂಡ ಮನುಷ್ಯ, ತೆಂಗಿನಕಾಯನ್ನು ತೆಗೆದುಕೊಂಡು ಒಡೆಸಿ ತೆಂಗಿನ ಚಿಪ್ಪುಗಳನ್ನು ಮೊದಲೆ ತನ್ನ ಬಳಿಯಿರುವ ಪಾತ್ರೆಯೊಳಗೆ ಹಾಕುವನು. ಆ ಬಟ್ಟಲಿನಲ್ಲಿ ಏನುಹಾಕಿಡಬೇಕೊ ಮೊದಲೆ ನಿರ್ಣಯಿಸಿಕೊಂಡು ಚಿಪ್ಪುಗಳಲ್ಲಿ ಹಾಕಿ, ಗೋಡೆ ಪಕ್ಕದಿಂದ ಅಮ್ಮನವರಿಗೆ ಕೊಟ್ಟಾಗ ಅದನ್ನು

ತೆಗೆದುಕೊಂಡು ಅಮ್ಮನವರು, ಬಂದು ತೆಗೆದುಕೊಂಡು ಹೋಗು ಎಂದು ಹೇಳುತ್ತಿದ್ದಹಾಗೆ ಹೊರಗಿನಿಂದ ಹೋಗಿ ರೋಗಿ ತಂದುಕೊಳ್ಳುತ್ತಾನೆ. ಒಳಗೆ ನಡೆಯುವ ತಂತು, ಹೋದ ರೋಗಿಗೆ ತಿಳಿಯುವುದಿಲ್ಲ. ಆದರೆ ರೋಗಿಯನ್ನು ರೂಮಿನವರೆಗು ಕರೆದುಕೊಂಡು ಹೋಗಿ ಎಲ್ಲ ಅರ್ಥವಾಗುವಂತೆ ಹೇಳುವ ವ್ಯಕ್ತಿ ಇದ್ದಾನಲ್ಲ! ಆತನಿಗು, ಅಮ್ಮನವರಿಗು, ಗೋಡೆ ಪಕ್ಕದಲ್ಲಿ ಕಾಣಿಸದಂತೆ ಇರುವ ವ್ಯಕ್ತಿಗೆ ಎಲ್ಲ ಗೊತ್ತಿರುತ್ತದೆ. ಬಂದ ರೋಗಿ ಆರೋಗ್ಯ ಚೆನ್ನಾಗಿಲ್ಲದೆ ಹೋದರೇನೊ ಅಥವಾ ನಡೆಯಲಾಗದೆ ಹೋದರೇನೊ ಆತನ ಹಿಂದೆ ಒಬ್ಬ ಮನುಷ್ಯ ಬರುವುದಕ್ಕೆ ಅವಕಾಶ ಕೊಡುತ್ತಾರೆ. ರೋಗಿ ಚೆನ್ನಾಗಿದ್ದರೆ ಎರಡನೆ ಮನುಷ್ಯನನ್ನು ನಾಲ್ಕನೆ ರೂಮಿನವರೆಗು ಬರಲು ಬಿಡುವುದಿಲ್ಲ. ಬಂದವನು ಚಿಕ್ಕಪೂಜೆಗೊ, ದೊಡ್ಡ ಪೂಜೆಗೊ ಹಣಕಟ್ಟಿ ಬಂದಾಗ ಅವನಿಗೆ ಇರುವ ಸಮಸ್ಯೆಯನ್ನು ಅಲ್ಲಿ ಹಣಕಟ್ಟಿಸಿಕೊಳ್ಳುವವನಿಗೆ ಹೇಳಬೇಕು. ಹಣ ಕಟ್ಟಿಸಿಕೊಳ್ಳುವವನು ನಾಲ್ಕನೆ ರೂಮಿನಲ್ಲಿ ನಮ್ಮ ಪಕ್ಕದಲ್ಲೆ ಇದ್ದು ಪಾತ್ರೆಯಲ್ಲಿದ್ದವುಗಳನ್ನು ವಿವರವಾಗಿ ತೋರಿಸುವವನೆ! ಆತನ ಮುಖಾಂತರ ಅಮ್ಮನವರಿಗೆ, ಒಳಗೆ ಗೊತ್ತಾಗದಂತಿದ್ದು ತೆಂಗಿನಕಾಯಿ ಒಡೆಯುವವನಿಗೆ, ಬಂದಿರುವವನ ವಿಷಯವೆಲ್ಲಾ ತಿಳಿದಿರುತ್ತದೆ. ಆದ್ದರಿಂದ ಬಂದವನಿಗೆ ಸರಿಹೋಗುವಂತೆ ಅವರು ಅಲ್ಲಿ ಮಾಡುವುದು ನಡೆಯುತ್ತಿದೆ.

ಬಂದಿರುವ ರೋಗಿಯ ವಿಷಯವನ್ನೆಲ್ಲಾ ಅವಗಾಹನೆ ಮಾಡಿಕೊಂಡು, ನಾಲ್ಕನೆ ರೂಮಿನಲ್ಲಿದ್ದ ವ್ಯಕ್ತಿ, ಅಮ್ಮನವರು, ತಿಳಿಯದಂತೆ ಮರೆಯಲ್ಲಿ ಇರುವ ಮನುಷ್ಯ ಮೂವರು ಸೇರಿ ಆಡುತ್ತಿದ್ದ ನಾಟಕ ನನಗೆ ಚೆನ್ನಾಗಿ ಅರ್ಥವಾಯಿತು. ನಾಲ್ಕನೆ ರೂಮಿನಲ್ಲಿದ್ದ ವ್ಯಕ್ತಿ ಬಹಳ ತಿಳಿವಳಿಕೆಯಿಂದ ನಡೆದುಕೊಳ್ಳುತ್ತಿರುತ್ತಾನೆ. ತೆಂಗಿನಕಾಯನ್ನು ಕೊಡುತ್ತಿದ್ದಹಾಗೆ ಹೋಗೆಂದು ಅಮ್ಮನವರು ಹೇಳಿದಾಗ, ತಿರುಗಿ ಬಂದ ರೋಗಿಯನ್ನು ಅಮ್ಮನವರು ಕರೆಯುವವರೆಗು ಒಳಗೆ ಹೋಗದಂತೆ ನೋಡಿಕೊಳ್ಳುವನು. ಕಾಯನ್ನು ಕೊಟ್ಟು ಬರುತ್ತಲೆ ಕುಳಿತುಕೊ ಎಂದು ಹೇಳುವನು. ಕುಳಿತುಕೊಂಡು ಅರ್ಧನಿಮಿಷ ಆಗದ ಮೊದಲೆ ಒಳಗೆ

ಕರೆಯುವುದು ನಡೆಯುತ್ತಿದೆ. ಹೋದ ರೋಗಿ ಬಟ್ಟಲನ್ನು ತೆಗೆದುಕೊಂಡು ಹೋಗುವಂತೆ ಒಳಗೆ ಗದರಿಸಿ ಕಳುಹಿಸಿದಾಗ, ಬಂದವನಿಗೆ ಪಾತ್ರೆಯಲ್ಲಿನ ವಸ್ತುಗಳನ್ನು ಅಮ್ಮನವರು ಹೇಳಿದಂತೆ ತೋರಿಸುತ್ತಿರುತ್ತಾನೆ. ರೋಗಿ ತೆಂಗಿನಕಾಯನ್ನು ಕೊಡುವುದಕ್ಕೆ ತೆಗೆದುಕೊಂಡು ಬರುವುದಕ್ಕೆ ಎರಡುಬಾರಿಯೆ ಒಳಗೆ ಹೋಗುವುದು. ಆ ಸಮಯದಲ್ಲಿ ಸಹ ಅಮ್ಮನವರು ಕೂದಲುಗಳನ್ನು ಮುಡಿಬಿಚ್ಚಿಕೊಂಡು ಕಾಲುಗಳು ಚಾಚಿಕೊಂಡು ಕುಳಿತುಕೊಂಡಿರುವುದು, ಹೋದವನನ್ನು ಗದರಿಸಿ ಮಾತನಾಡುವುದರಿಂದ ಅಲ್ಲಿ ಏನು ನಡೆಯುತ್ತಿದೆಯೊ ಯಾವನು ಊಹಿಸಲಾರನು. ಹೊರಗೆ ಬರುತ್ತಿದ್ದಹಾಗೆ ಹೊರಗಿನವನು ಇದುನೋಡು, ಅದುನೋಡು ಎಂದು ಮರೆಸುತ್ತಾನೆ. ಆದ್ದರಿಂದ ಯಾವ ರೋಗಿ ಅದು ಅವರು ಮೂವರು ಆಡುತ್ತಿರುವ ನಾಟಕವೆಂದು ಗುರುತಿಸಲಾರರು. ಮಣ್ಣಿನ ಬಾನಿಗೆಯಲ್ಲಿ ಮೊದಲೆ ತುಂಬಿ ಇಟ್ಟಿರುವುದರಿಂದ ಒಳಗೆ ಸ್ವಲ್ಪ ವಾಸನೆ ಬರುವುದನ್ನು ನಾನು ಗ್ರಹಿಸಿದೆನು.

ಪಕ್ಕದಲ್ಲಿ ಚಿಕ್ಕಗೋಡೆ, ಅದರೊಳಗೆ ಮಣ್ಣಿನ ಬಾನಿಗೆಗಳು, ಅವುಗಳಲ್ಲಿ ಬಂದವರಿಗೆ ಬಟ್ಟಲುಗಳಲ್ಲಿ ತೋರಿಸಬೇಕಾದ ಸಾಮಾಗ್ರಿ. ಆ ಸಾಮಾಗ್ರಿಯೊಳಗಿ ನಿಂದಲೆ ನಮಗೆ ಮೂರು ದಿನಗಳು ಮೂರು ವಿಧಗಳವು ತೋರಿಸಿದರು. ಕೊನೆಯಲ್ಲಿ ತೋರಿಸಿದ ನಿಂಬೆಕಾಯಿಗಳು, ಹಗ್ಗದ ಗೊಂಬೆ, ಅದಕ್ಕಿರುವ ಮೊಳೆಗಳು ಬಹಳ ದಿನಗಳಿಂದ ಇರುವವೆಯೆಂದು ಅವು ಹಳೆಯದಾಗಿದ್ದ ಸ್ಥಿತಿಯನ್ನು ಅನುಸರಿಸಿ ನೋಡುತ್ತಿದ್ದ ಹಾಗೆ ಅರ್ಥವಾಗುತ್ತಿದೆ. ಇಂತವುಗಳನ್ನು ಅವರ ಬಳಿ ಎಷ್ಟು ವಸ್ತುಗಳನ್ನು ಮಣ್ಣಿನ ಬಾನಿಗೆಗಳಲ್ಲಿ ಇಟ್ಟುಕೊಂಡಿದ್ದಾರೊ? ಇನ್ನೂ ಅಮ್ಮನವರ ವಿಷಯಕ್ಕೆ ಬಂದರೆ, ಆಕೆಯಲ್ಲಿ ದೊಡ್ಡಮ್ಮ ಇಲ್ಲ, ಸಣ್ಣಮ್ಮ ಇಲ್ಲ. ಆಕೆಗೆ ಸೂಕ್ಷ್ಮ ಬಂದ ಹಾಗೆ ನಟಿಸುತ್ತಿದ್ದಾಳೆ. ನಾನು ಅಮ್ಮನವರು ಇರುವ ರೂಮಿನೊಳಗೆ ಹೋದಾಗ ಆಕೆ ಅಂಗಾತ ಮಲಗಿಕೊಂಡಿದ್ದಾಳೆ, ಸ್ವಲ್ಪ ಮೂಲಿಗಿದಂತೆ ನಟಿಸಿದ್ದಾಳೆ. ಹಾಗೆ ಮುಲುಗುವುದರಿಂದ ಆಕೆ ಶರೀರದಲ್ಲಿ ದೊಡ್ಡದೇವತೆ ಇದೆಯೆಂದು, ದೇವತೆ ಇರುವುದರಿಂದ ಸಾಧಾರಣ ಮನುಷ್ಯಳಾದ

ಆಕೆ ಶರೀರ ಸುಧಾರಿಸಿಕೊಳ್ಳಲಾಗದೆ ಹೋಗುತ್ತಿದೆಯೆಂದು ತಿಳಿಯುವಂತೆ ನಟಿಸಿದ್ದಾಳೆಂದು ಅರ್ಥವಾಗಿದೆ. ದೇವತೆ ಶರೀರದಲ್ಲಿ ಇದ್ದಂತೆ ನಟಿಸುವುದೆ ಅಲ್ಲದೆ, ಒಳಗೆ ಹೋದ ರೋಗಿಯನ್ನು ಮಾತುಗಳಿಂದಲೆ ಭಯ ಇಡುವುದರಲ್ಲಿ ಒಳ್ಳೆಯ ಅನುಭವವನ್ನು ಹೊಂದಿದ್ದಾಳೆ. ನಾನು ಒಳಗೆ ಹೋದರೆ ನಮ್ಮ ಯೋಚನೆಗಳು ಓಡದಂತೆ, ಅರಚಿ ಭಯವಿಟ್ಟು ಗಾಬರಿ ಹುಟ್ಟಿಸುವರೆಂದು ನಾನು ಮೊದಲೆ ಊಹಿಸಿಕೊಂಡಂತೆ, ನನ್ನನ್ನು ಮುಂದಕ್ಕೆ ಹಿಂದಕ್ಕೆ, ದೂರ, ಅಲ್ಲಿನೋಡು ಎಂದು ಗದರಿಸಿ ನಮ್ಮ ದೃಷ್ಠಿಯನ್ನು ಅವರ ಕೈಗಳಲ್ಲಿ ಇಟ್ಟುಕೊಳ್ಳಬೇಕೆಂದುಕೊಂಡಿದ್ದಾರೆ. ಆದರೆ ಅಮ್ಮನವರ ದರ್ಶನ ಬೇಕೆಂದು ಒಳಗೆ ಹೋದ ನನ್ನನ್ನು ಗಾಬರಿ ಪಡಿಸಿದರೂ, ಅವರು ಆಡಿಸಿದಂತೆ ನಾನು ಆಡಿದರೂ, ಅವರ ದೃಷ್ಠಿಯಲ್ಲಿ ನಾನು ಏನೂ ತಿಳಿಯದವನಂತೆ ಕಾಣಿಸಿದರೂ, ಈತನು ನಮಗಿಂತ ಚೆನ್ನಾಗಿ ನಟಿಸುತ್ತಾನೆಂದು ಅವರಿಗೆ ಗೊತ್ತಿಲ್ಲ. ನಾನು ಒಳಗೆ ಕಳೆದ ಕೆಲವೆ ನಿಮಿಷಗಳಲ್ಲಿ ಅವರು ಆಡಿಸಿದಂತೆ ಆಡುತ್ತಾ ಎಲ್ಲ ಅರ್ಥಮಾಡಿಕೊಂಡೆನು.

ಇಲ್ಲಿ ಕೆಲವರಿಗೆ ಒಂದು ಅನುಮಾನ ಬಂದು ನೀರಿನಿಂದ ದೀಪವನ್ನು ಒತ್ತಿಸಿದ್ದಾಳಲ್ಲ! ಎಂದು, ಮಣ್ಣನ್ನು ಕುಂಕುಮ ಮಾಡಿದ್ದಾಳಲ್ಲ! ಎಂದೂ, ಇವೆಲ್ಲಾ ಮಹಿಮೆಗಳಲ್ಲವೆ? ಸಾಧಾರಣ ಹೆಣ್ಣು ಮಗಳು ಮಾಡುತ್ತಾಳಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗಿದೆ. ನನ್ನ ಹಾಗೆ ಯಾರಿಗಾದರು ಅವರ ಮೇಲೆ ಅನುಮಾನ ಬಂದರೆ, ಅವರಿಗೆ ಆ ಅನುಮಾನ ಇಲ್ಲದಂತೆ ಮಾಡುವುದಕ್ಕೆ ಇಟ್ಟುಕೊಂಡ ಎರಡು ಮಹಿಮೆಗಳು ನನಗೆ ತೋರಿಸಿರುವವು. ಅವು ಮಹಿಮೆಗಳೆ ಆದರೆ ಆ ಮಹಿಮೆಗಳನ್ನು ನೀವೂ ಮಾಡಬಹುದು. ಓದು ಬಾರದವರು ಸಹ ಮಾಡಬಹುದು. ಅದು ಎಲ್ಲರಿಗು ಹೇಗೆ ಸಾಧ್ಯವೊ ವಿವರಿಸುತ್ತೇನೆ ಗಮನಿಸಿರಿ. ಅಲ್ಲಿ ಚೆಂಬಿನಲ್ಲಿ ನೀರನ್ನು ಏಕೆ ಇಟ್ಟಿದ್ದಾರೊ? ಪಕ್ಕದಲ್ಲೆ ಹತ್ತಿಯನ್ನು ಏಕೆ ಇಟ್ಟಿದ್ದಾರೆ? ಈ ಎರಡು ಪ್ರಶ್ನೆಗಳಿಗೆ ಉತ್ತರವನ್ನು ಹುಡುಕಿದರೆ ಅದಕ್ಕೆ ಒಂದೇ ಸಮಾಧಾನ ದೊರಕುತ್ತದೆ. ಮೊದಲೇ ಸಂಸಿದ್ಧವಾಗಿ

ಮಾಡಿ ಇಟ್ಟುಕೊಂಡಿರುವವೆಂದು ಅರ್ಥವಾಗುತ್ತಿದೆ. ಅಲ್ಲಿದ್ದ ಹತ್ತಿಯಲ್ಲಿ ಏನೂ ಇಲ್ಲ. ಅದು ಸಾಧಾರಣ ಹತ್ತಿಯೆ. ಆದರೆ ಚೆಂಬಿನಲ್ಲಿ ನೀರು ಮಾತ್ರ ಮಾಮೂಲು ನೀರಲ್ಲ. ಆ ನೀರಿನಲ್ಲಿ ಭಾಸ್ವರ ಕಣಗಳು ಸೇರಿಕೊಂಡಿವೆ. ಭಾಸ್ವರ ಅನ್ನುವುದು ಒಂದು ಘನಪದಾರ್ಥ. ಭಾಸ್ವರ ಎನ್ನುವ ಪದಾರ್ಥ ನೀರಿನಲ್ಲಿದ್ದಾಗಲೆ ಯಾವ ಬದಲಾವಣೆ ಹೊಂದದೆ ಇರುತ್ತದೆ. ಆದರೆ ಅದನ್ನು ನೀರಿನಿಂದ ಹೊರಗೆ ತೆಗೆದರೆ ಉರಿದು ಹೋಗುತ್ತದೆ. ಈ ವಿಷಯ ಓದಿಕೊಂಡವರಿಗೆಲ್ಲ ಬಹುಶ ತಿಳಿದೇ ಇರುತ್ತದೆ. ಅಲ್ಲಿ ನೀರಿನಲ್ಲಿ ಸ್ವಲ್ಪ ಭಾಸ್ವರವನ್ನು ಬೆರೆಸಿ ಇಟ್ಟಿದ್ದಾರೆ. ಚಿಕ್ಕ ತುಂಡು ಭಾಸ್ವರವು ನೀರಿನಲ್ಲಿ ಇಸುಕಿ ಹಾಕಿದರೆ, ಚಿಕ್ಕ ಚಿಕ್ಕ ತುಂಡುಗಳಾಗಿ ನೀರಿನಲ್ಲಿಯೇ ಇರುತ್ತದೆ. ಹತ್ತಿಯಲ್ಲಿ ನೀರು ಇರುವುದರಿಂದ, ಹತ್ತಿಯಲ್ಲಿ ಅಂಟಿಕೊಂಡು ಬಂದ ಭಾಸ್ವರಕಣಗಳು ಉರಿದುಹೋಗುವುದಿಲ್ಲ. ಆ ಹತ್ತಿಯನ್ನು ದೀಪದಿಂದ ಒತ್ತಿಸಿದರೆ ಭಾಸ್ವರ ಕಣಗಳು ಒತ್ತಿಕೊಂಡು ನೀರು ಇದ್ದರೂ, ಭಾಸ್ವರಕಣಗಳು ಒಂದೊಂದಾಗಿ ಉರಿಯುವುದು ಪ್ರಾರಂಭಿಸುತ್ತವೆ. ನೀರಿನಲ್ಲಿನ ಭಾಸ್ವರಕಣಗಳ ವಿಷಯ ನಮಗೆ ತಿಳಿಯದಿರುವಾಗ ನೀರಿನಲ್ಲಿ ನೆಂದ ಹತ್ತಿ ಉರಿಯುತ್ತಿದೆಯೆಂದು, ಅದು ಎಲ್ಲಿಯೂ ನಡೆಯದ ಕೆಲಸವಾದ್ದರಿಂದ, ಅದನ್ನು ಮಹಿಮೆಯೆಂದು ನಾವು ಅಂದುಕೊಳ್ಳುತ್ತೇವೆ. ಅಲ್ಲಿಯಾವ ಮಹಿಮೆ ಇಲ್ಲದಿದ್ದರು ಪ್ರಜೆಗಳನ್ನು ನಂಬಿಸುವುದಕ್ಕೆ ಮಾಡಿದ ಮೋಸದ ಕೆಲಸವಲ್ಲದೆ ಯಾವ ಮಹಿಮೆ ಇಲ್ಲವೆಂದು ತಿಳಿಯುತ್ತಿದೆ.

ಇನ್ನು ಅವರು ಮಾಡಿದ ಎರಡನೆ ಮಹಿಮೆ, ಮಣ್ಣನ್ನು ಕೆಂಪನೆಯ ಬಂಡಾರದಂತೆ ಬದಲಾಯಿಸಿರುವುದು. ಮೊರದಲ್ಲಿ ಮೊದಲೆ ಮಣ್ಣನ್ನು ಅಲ್ಲಿ ಏಕೆ ಇಟ್ಟುಕೊಂಡಿದ್ದಾರೆ? ಎಂದು ಪ್ರಶ್ನಿಸಿಕೊಂಡರೆ, ಆ ಮಣ್ಣು ಆಗಾಗ ಹೊರಗೆ ದೊರಕುವ ಮಣ್ಣಲ್ಲ. ಅದು ಮೊದಲೇ ತಯಾರು ಮಾಡಿಕೊಂಡ ಮಣ್ಣು ಎಂದು ಉತ್ತರ ತಿಳಿಯುತ್ತದೆ. ಆ ಮಣ್ಣನ್ನು ತಯಾರು ಮಾಡಿ ಇಟ್ಟುಕೊಂಡರೆ, ನೀವಾದರು ಸುಲಭವಾಗಿ ಮಹಿಮೆಯನ್ನು ಮಾಡಬಹುದು. ಸ್ವಲ್ಪ ಕುಂಕುಮವನ್ನು ತೆಗೆದುಕೊಂಡು ಅದನ್ನು ಮಜ್ಜಿಗೆಯಲ್ಲಿ ಬೆರೆಸಿ ಆರಿಸಿಟ್ಟರೆ

ಚಿಕ್ಕ ಚಿಕ್ಕ ಬಿಳಿಯ ತುಂಡುಗಳಂತೆ ತಯಾರಾಗುತ್ತದೆ. ಕೆಂಪನೆಯ ಕುಂಕುಮವನ್ನು ಬಿಳಿಯ ಮಜ್ಜಿಗೆಯಲ್ಲಿ ಸ್ವಲ್ಪ ಬೆರೆಸುವುದರಿಂದ ಬಿಸಿಲಿನಲ್ಲಿ ಆರಿಸಿಟ್ಟಾಗ ಕುಂಕುಮ ಚಿಕ್ಕ ಉಂಡೆಗಳಾಗಿ ತಯಾರಾಗಿ ಉಂಡೆಯ ಮೇಲ್ಭಾಗ ಕೆಂಪಗೆ ಕಾಣಿಸದಂತೆ ಸ್ವಲ್ಪ ಬಿಳಿಯ ಬಣ್ಣಕ್ಕೆ ಕಾಣಿಸುತ್ತದೆ. ಆರಿದ ನಂತರ ಆ ಉಂಡೆಯನ್ನು ಇಸುಕಿದರೆ ಒಳಗೆ ಕೆಂಪನೆಯ ಕುಂಕುಮ ಹೊರಬೀಳುತ್ತದೆ. ಕೆಂಪನೆಯ ಕುಂಕುಮವನ್ನು ಸ್ವಲ್ಪ ಮಜ್ಜಿಗೆಯಲ್ಲಿ ಬೆರೆಸಿದಾಗ ತೇವಕ್ಕೆ, ಕುಂಕುಮ ಗಡ್ಡೆಗಳಾಗಿ ಬದಲಾಗುತ್ತದೆ. ಆರಿಸಿಟ್ಟಾಗ ಮಜ್ಜಿಗೆಯಲ್ಲಿನ ಬಿಳಿತನವು, ಕುಂಕುಮದ ಉಂಡೆಯ ಮೇಲ್ಭಾಗವನ್ನು ಸೇರುತ್ತದೆ. ಒಳಗಿನ ಭಾಗದಲ್ಲಿ ಕುಂಕುಮ ಹಾಗೇ ಇರುತ್ತದೆ. ಕುಂಕುಮದ ಉಂಡೆಗಳಿಗೆ ಕೆಂಪನೆಯ ಬಣ್ಣ ಕಾಣಿಸದಂತೆ ಸ್ವಲ್ಪ ಬಿಳುಪು ಕಾಣಿಸುವುದಕ್ಕೆ, ಕುಂಕುಮಕ್ಕೆ ಮಜ್ಜಿಗೆಯನ್ನು ಬೆರೆಸುತ್ತಾರೆ. ಹಾಗೆ ಬೆರೆಸಿಕೊಂಡು ಕುಂಕುಮದ ಉಂಡೆಗಳನ್ನು ಸ್ವಲ್ಪ ಮಣ್ಣಿನಲ್ಲಿ ಬೆರೆಸಿ ಇಟ್ಟುಕೊಂಡರೆ ಅದು ಮಣ್ಣಿನಲ್ಲಿ ಸೇರಿಹೋಗಿ ಮಣ್ಣಿನ ಮಾದರಿಯಂತೆ ಕಾಣಿಸುತ್ತದೆ. ಆ ಮಣ್ಣನ್ನು ಅಗತ್ಯವಿರುವಾಗ ಬೆರಳುಗಳಿಂದ ಉಜ್ಜುವುದರಿಂದ ಕುಂಕುಮದ ಉಂಡೆಗಳು ಒಡೆದುಹೋಗಿ ಮಣ್ಣಿಗು ಸಹ ಕೆಂಪುತನ ಅಂಟಿಕೊಂಡು ಪುಡಿಯಾಗಿ ಬೀಳುತ್ತದೆ. ಆಗ ಸ್ವಲ್ಪ ಬಣ್ಣ ಕಡಿಮೆ ಇರುವ ಕುಂಕುಮ (ಬಂಡಾರ) ಕಾಣಿಸುತ್ತದೆ. ಹಾಗೆ ಕಾಣಿಸುವುದರಿಂದ, ತಿಳಿಯದವರಿಗೆ ಅದು ಮಹಿಮೆ ಆಗುತ್ತದೆ. ದೊಡ್ಡಮ್ಮ ಗೊಂಬೆಯನ್ನಾಗಲಿ, ಸುಂಕಲಮ್ಮ ಗೊಂಬೆಯನ್ನು ಎತ್ತಿಕೊಂಡವರಾಗಲಿ, ಬಾರಕೋಲು ಭುಜದಮೇಲೆ ಹಾಕಿಕೊಂಡು ಬಜಾರಿನಲ್ಲಿ ಹಣ ಕೇಳಿಕೊಳ್ಳುವವರು ಸಹ, ಕೆಳಗೆ ಮಣ್ಣನ್ನು ತೆಗೆದುಕೊಂಡು ತಮ್ಮ ಕೈಯಲ್ಲಿ ಇಟ್ಟುಕೊಂಡ ಕುಂಕುಮದ ಉಂಡೆಗಳನ್ನು ಇಸುಕಿ ನಮ್ಮ ಕೈಯೊಳಗೆ ಇಡುತ್ತಿರುತ್ತಾರೆ. ಅದನ್ನು ನೋಡಿ ಮಣ್ಣನ್ನು ತೆಗೆದುಕೊಂಡು ಬಂಡಾರ ಇಟ್ಟಿದ್ದಾನೆಂದು ಭ್ರಮಿಸಿದವರು ಅವರಿಗೆ ಹಣಕೊಟ್ಟು ಕಳುಹಿಸುವುದು ಅಲ್ಲಲ್ಲಿ ನಡೆಯುತ್ತಿದೆ. ಅದೇ ಪದ್ಧತಿ ಪ್ರಕಾರ ಮೊದಲೇ ಕುಂಕುಮವನ್ನು ಮಜ್ಜಿಗೆಯಲ್ಲಿ ನೆನೆಸಿ ಆರಿಸಿಟ್ಟುಕೊಂಡ ಜೋಳದ ಕಾಳುಗಳಂತಹ ಉಂಡೆಗಳೊಳಗೆ ಸ್ವಲ್ಪ ಜರಡಿ ಇಡಿದ ಮೆತ್ತನೆಯ ಎರೆ ಮಣ್ಣನ್ನು ಬೆರೆಸಿ ಇಟ್ಟುಕೊಂಡಿದ್ದಾರೆ. ಎರೆ ಮಣ್ಣಿನಿಂದ ಬೆರೆತಿರುವುದರಿಂದ

ಕುಂಕುಮದ ಉಂಡೆಗಳು ಸಹ ಮಣ್ಣಿನ ಮಾದರಿಯಂತೆ ಇವೆ. ಆ ಮಣ್ಣನ್ನೆ ನಾನು ಅಮ್ಮನವರ ಕೈಗಳೊಳಗೆ ಹಾಕಿದೆನು. ಕೈಗಳಲ್ಲಿ ಹಾಕಿದ ತಕ್ಷಣವೆ ನನ್ನನ್ನು ಹಿಂದಕ್ಕೆ ಹೋಗು ಎಂದು ಗದರಿಸಿ, ನಾನು ಹಿಂದಕ್ಕೆ ಹೋಗುತ್ತಿದ್ದ ಹಾಗೆ ಎರಡು ಕೈಗಳ ನಡುವೆ ಗಟ್ಟಿಯಾಗಿ ಮಣ್ಣನ್ನು ತಿಕ್ಕುವುದರಿಂದ ಕೆಳಗೆ ಕೆಂಪನೆಯ ಬಣ್ಣದ ಪುಡಿ ಮಣ್ಣಿನೊಂದಿಗೆ ಸೇರಿ ಬಿದ್ದಿದೆ. ಮಣ್ಣು ಸಹ ಕೆಂಪನೆಯ ಬಣ್ಣದೊಂದಿಗೆ ಬೆರೆತುಹೋಗುವುದರಿಂದ ಕೆಳಗೆ ಬಿದ್ದಿರುವುದೆಲ್ಲಾ ಬಂಡಾರವೆಂದು ಅಂದುಕೊಂಡಿದ್ದೇವೆ. ಅದು ಸ್ವಲ್ಪ ಬಣ್ಣ ಕಡಿಮೆ ಇರುವುದರಿಂದ, ಮೊದಲೆ ಮೊರದಲ್ಲಿ ಮಣ್ಣನ್ನು ರೆಡಿಯಾಗಿ ಇಟ್ಟಿರುವುದರಿಂದ, ಕೊಟ್ಟ ಮಣ್ಣನ್ನು ಅಮ್ಮನವರು ಉಜ್ಜಿ ಬೀಳಿಸುವುದರಿಂದ, ಅದು ಮಹಿಮೆಯಲ್ಲವೆಂದು, ಅದು ಎದುರಿಗಿರುವವರನ್ನು ನಂಬಿಸುವುದಕ್ಕೆ ಮಾಡುವ ಕ್ರಿಯೆ ಎಂದು ಅರ್ಥವಾಯಿತು. ಹೀಗೆ ಅವರು ಮಾಡಿ ತೋರಿಸಿರುವವು ಮಹಿಮೆಗಳಲ್ಲ. ಪ್ರಜೆಗಳಿಗೆ ತಿಳಿಯದ ಕೆಲಸಗಳೆಂದು ತಿಳಿದುಬರುತ್ತಿದೆ.

ರೋಗಿ ತೆಂಗಿನಕಾಯನ್ನು ತೆಗೆದುಕೊಂಡು ಒಳಗೆ ಹೋಗಿ ಕೊಟ್ಟಾಗ, ಆತನ ಮುಂದೆಯೆ ತೆಂಗಿನಕಾಯನ್ನು ಒಡೆದರೆ, ತೆಂಗಿನ ಕಾಯೊಳಗಿನಿಂದ ಬಿದ್ದ ವಸ್ತುಗಳು ರೋಗಿಗೆ ಕಾಣಿಸುತ್ತವಲ್ಲವೆ! ಆಗ ಅವುಗಳನ್ನು ಹೊರಗೆ ತಂದುಕೊಂಡು ಹೊರಗಿರುವ ವ್ಯಕ್ತಿಯೊಂದಿಗೆ ವಿವರವಾಗಿ ಹೇಳಿಸಿಕೊಳ್ಳಬಹುದು. ಹಾಗಲ್ಲದೆ ಒಳಗೆ ಹೋದ ರೋಗಿಯನ್ನು ಹೊರಗೆ ಕಳುಹಿಸಿ, ಆತನಿಗೆ ತಿಳಿಯದಂತೆ, ಆತನು ನೋಡದಂತೆ ತೆಂಗಿನಕಾಯನ್ನು ಒಡೆದು, ನಿನಗಿದ್ದ ರೋಗ ತೆಂಗಿನಕಾಯೊಳಗಿನಿಂದ ಬಿದ್ದಿದೆಯೆಂದು ತೋರಿಸುವುದು, ರೋಗಿಯನ್ನು ಮೋಸ ಮಾಡಿ ನಂಬಿಸಿದಂತೆ ಅಲ್ಲವೆ! ಮೊದಲ ದಿನ ನಾರಾಯಣರೆಡ್ಡಿ ತೆಂಗಿನಕಾಯನ್ನು ಒಳಗೆ ತೆಗೆದುಕೊಂಡು ಹೋಗಿ ಅಮ್ಮನವರಿಗೆ ಕೊಟ್ಟು ಬಂದನು. ನಾರಾಯಣರೆಡ್ಡಿ ಹೊರಗೆ ಬರುತ್ತಿದ್ದಹಾಗೆ, ಅಮ್ಮನವರಂತೆ ಸೂಕ್ಷ್ಮ ಬಂದಂತೆ ನಟಿಸುತ್ತಿದ್ದ ಆಕೆ, ಆ ತೆಂಗಿನಕಾಯನ್ನು ಗೋಡೆ ಪಕ್ಕದಲ್ಲಿದ್ದ ವ್ಯಕ್ತಿಗೆ ಕೊಟ್ಟರೆ ಆತನು ಕಾಯಿಯನ್ನು ಸುಲಭವಾಗಿ ಒಡೆಸುವುದಕ್ಕೆ

ತಯಾರುಮಾಡಿಕೊಂಡ ಕಬ್ಬಿಣದ ರಾಡಿನಿಂದ ಒಡೆದು, ನೀರನ್ನು ಬೇರೆ ಪಾತ್ರೆಯೊಳಗೆ ಇಡಿದಿಟ್ಟು, ನೀರು ಇಲ್ಲದ ಚಿಪ್ಪುಗಳನ್ನು ಪಾತ್ರೆಯೊಳಗೆ ಹಾಕಿ, ಆ ಪಾತ್ರೆಯೊಳಗೆ ಮೊದಲೆ ಅಂದುಕೊಂಡಂತೆ ಏನು ಹಾಕಬೇಕೊ ಅವುಗಳನ್ನೇ ಹಾಕಿ, ಆಕೆಗೆ ಕೊಟ್ಟಾಗ ಆಗ ಅಮ್ಮನವರು ಕರೆದಿದ್ದಾಳೆ. **(ನಾನು ಒಳಗೆ ಹೋದಾಗ ಅಲ್ಲಿ ತೆಂಗಿನಕಾಯಿ ಒಡೆದಂತೆ ಗುರುತು ಏನು ಕಾಣಿಸಲಿಲ್ಲ. ಕಾಯಿ ಒಡೆಸಿದಾಗ ಬಿದ್ದಿರುವ ನೀರಿನ ಗುರುತುಗಳು ಸಹ ಇಲ್ಲ. ಅದನ್ನು ಅನುಸರಿಸಿ ನೋಡಿದಾಗ ಅಲ್ಲಿ ತೆಂಗಿನಕಾಯನ್ನು ಒಡೆದಿಲ್ಲವೆಂದು ಸುಲಭವಾಗಿ ಅರ್ಥವಾಗುತ್ತಿದೆ.)** ಅಮ್ಮನವರು ಕರೆಯುತ್ತಿದ್ದ ಹಾಗೆ, ನಾರಾಯಣರೆಡ್ಡಿ ಹೋಗಿ ತಂದುಕೊಂಡ ಬಟ್ಟಲಿನಲ್ಲಿ ಕಾಣಿಸಿದ ಉಸಿರಾಟದ ಚೀಲ, ಸ್ವಲ್ಪ ಕೆಂಪು ವರ್ಣವಿರುವ ನೀಚು ನೀರು, ಎರಡು ಹುಳಗಳು ಎಲ್ಲ ಬಟ್ಟಲಿನಲ್ಲಿ ಹಾಕಿ ಕಳುಹಿಸಿರುವವೆ. ಆದರೆ ಹೊರಗಿರುವ ವ್ಯಕ್ತಿ, ಅಮ್ಮನವರು ಕಾಯನ್ನು ಒಡೆಸಿದಾಗ ಕಾಯಿಯೊಳಗಿನಿಂದ ಹೊರಬಿದ್ದಿವೆಯೆಂದು ಹೇಳಿ ನಂಬಿಸಿದ್ದಾರೆ. ಒಳಗಿನಿಂದ ಅಮ್ಮನವರು ನಿನಗೆ ಉಸಿರಾಟದ ಚೀಲ ರಂಧ್ರಗಳು ಬಿದ್ದಿದೆ, ಹುಳಗಳು ಇಡಿದಿದೆ ಎಂದು, ಎರಡು ಹುಳಗಳು ತೋರಿಸುವುದು ಬರೀ ಮೋಸವೆಂದು ತಿಳಿಯಿತು. ಉಸಿರಾಟದ ಚೀಲ ರಂಧ್ರಗಳು ಬೀಳುವುದೇನು? ಒಳಗೆ ಅಷ್ಟುದಪ್ಪ ಡ್ರೈನೇಜಿ ಹುಳಗಳು ಇರುತ್ತವೆಯಾ? ಅವೆಲ್ಲವನ್ನು ಈಕೆ ತೆಂಗಿನಕಾಯಿಯೊಳಗೆ ಬರುವಂತೆ ಮಾಡುವುದೇನು? ಇವೆಲ್ಲ ನಂಬುಶಕ್ಯವಲ್ಲದ ಬರೀ ಅಸತ್ಯದ ಮಾತುಗಳು. ನೋವುಗಳ ನಿವಾರಣೆಗೆ ಒಂದು ದೇವತೆ ಹತ್ತಿರಕ್ಕೆ ಹೋಗುತ್ತಿದ್ದೇವೆಂದು ನಂಬಿ ಹೋಗುತ್ತಿರುವವರಿಂದ ದೊಡ್ಡ ಪೂಜೆಗೆ ಎರಡುನೂರು, ಚಿಕ್ಕ ಪೂಜೆಗೆ ನೂರು ರೂಪಾಯಿಗಳು ಕಸಿದುಕೊಳ್ಳುವುದು, ಮೊದಲೆ ನೋವುಗಳಿಂದ ಬಾಧೆಪಡುತ್ತಿದ್ದವರನ್ನು ಇನ್ನೂ ದೋಚಿಕೊಂಡು ಬಾಧೆ ಇಡುವುದು ಅಲ್ಲವೆ? ಹೊಟ್ಟೆಯೊಳಗಿನ ಕರಳು ಗಂಟು ಬಿದ್ದಿದೆಯೆಂದು ಹೇಳುವುದು, ಅದನ್ನು ಕತ್ತರಿಸಿ ತೆಗೆದುಹಾಕಿದ್ದೇನೆಂದು ಹೇಳುವುದು ಮೋಸವಲ್ಲವೆ? ಇರುವ ಸಮಸ್ಯೆಗಳೆಲ್ಲವನ್ನು ಒಂದೇ ದಿನ ಹೇಳದೆ ಮೂರು ದಿನಗಳು ತಿರುಗಿಸಿಕೊಂಡು ಆರುನೂರು ರೂಪಾಯಿಗಳನ್ನು ಕಸಿದು

ಕೊಂಡಿರುವುದು ಮೋಸ ಅಲ್ಲವೆ? ಕೊನೆಯದಿನ ಕಂಬಳಿದಾರವನ್ನು ಒಣಗಿಹೋದ ನಿಂಬೆಕಾಯಿಗಳನ್ನು, ಬಟ್ಟೆಯ ಗೊಂಬೆಯನ್ನು ತೋರಿಸಿ ನಾರಾಯಣರೆಡ್ಡಿಗೆ ಮಾಟ ಮಾಡಿದ್ದಾರೆಂದು ಹೇಳುವುದು ಘೋರವಾದ ಮೋಸ ಅಲ್ಲವೆ? ಆತನಿಗಿರುವುದು ಸಾಧಾರಣ ದೆವ್ವದವೊಂದು ಸಮಸ್ಯೆಯಾದರೆ, ಅದನ್ನು ಕುರಿತು ಸ್ವಲ್ಪವಾದರು ಹೇಳದೆ, ಇಲ್ಲದಿರುವವುಗಳನ್ನೆಲ್ಲ ಹೇಳಿ ಅವುಗಳೆಲ್ಲವನ್ನು ತೆಂಗಿನಕಾಯಿಯೊಳಗಿನಿಂದ ತೆಗೆದು ಹಾಕಿದ್ದೇವೆನ್ನುವುದು ಪಾಪ ಭೀತಿ ಇಲ್ಲದೆ ಮೋಸ ಮಾಡಿದಂತಲ್ಲವೆ? ಇಲ್ಲಿಗೆ ಮೂವತ್ತೈದು ವರ್ಷಗಳ ಕೆಳಗೆ ದಿನಕ್ಕೆ ಎರಡುನೂರು ರೂ॥ಗಳನ್ನು ತೆಗೆದುಕೊಂಡಿದ್ದಾರೆ. ಈಗಿನಕಾಲದಲ್ಲಿ ಆ ಎರಡು ನೂರುಗಳ ಬೆಲೆ ಎರಡು ಸಾವಿರ ಆಗುತ್ತದೆ. ನಾವು ಹೋದಾಗ ಒಂದು ದಿನಕ್ಕೆ ಇಪ್ಪತ್ತು ಜನದವರೆಗು ಅಲ್ಲಿಗೆ ಹೋಗುವವರನ್ನು ನೋಡಿದೆನು. ಆ ಲೆಕ್ಕದ ಪ್ರಕಾರ ಒಂದು ದಿನಕ್ಕೆ ಎಷ್ಟು ಹಣ ಸಂಪಾಧಿಸುತ್ತಿದ್ದಾರೊ?

ನಾನು ಇಲ್ಲಿಯವರೆಗು ಎಷ್ಟೋ ದೆವ್ವಗಳ ವಿಷಯಗಳನ್ನು ಹೇಳಿದ್ದೇನೆ. ಎಲ್ಲ ವಾಸ್ತವವಾಗಿ ದೆವ್ವಗಳೆ. ಹಾಗೇ ದೇವತೆಗಳನ್ನು ಸಹ ನೋಡಿದ್ದೇನೆ. ಅವು ಸಹ ವಾಸ್ತವವೆ. ಆದರೆ ದೊಡ್ಡಮ್ಮನನ್ನು ನೋಡಿದ ತಕ್ಷಣವೆ ಆಕೆ ಶರೀರದಲ್ಲಿ ಯಾವ ದೇವತೆ ಇಲ್ಲವೆಂದು ತಿಳಿದುಕೊಂಡೆನು. ನಿಜವಾಗಿ ಆಕೆ ದೇವತೆಯಾಗಿದ್ದರೆ ನನ್ನನ್ನು ನೋಡುತ್ತಿದ್ದ ಹಾಗೆ ಭಯಪಡುತ್ತಿದ್ದಳು. ಅಲ್ಲಿ ಒಬ್ಬ ಹೆಂಗಸು, ದೇವತೆ ಮೈತುಂಬಿದಂತೆ ನಟಿಸುತ್ತಿದ್ದಾಳೆ. ಅಲ್ಲಿರುವ ಮೂವರು ಸೇರಿ ಮಾಡುವ ಮೋಸ ಬಹಳ ದೊಡ್ಡ ಮೋಸ. ಆದರೂ ಆ ದಿನದಿಂದ ಇಲ್ಲಿಯವರೆಗು ಎಲ್ಲಿಯು ಅವರು ಮಾಡುತ್ತಿರುವುದು ಮೋಸವೆಂದು ನಾನು ಹೇಳಲಿಲ್ಲ. ಅವರು ಬದುಕುವುದಕ್ಕೆ ಅದು ಒಂದು ಮಾರ್ಗವೆಂದುಕೊಂಡಿದ್ದೇನೆ. ಆದರೆ ಅವರು ಮಾಡುತ್ತಿರುವುದು, ಒಂದು ದೇವತೆ ಹೆಸರು ಹೇಳಿ ಪಾಪವನ್ನೆ ಸಂಪಾಧಿಸಿಕೊಳ್ಳುತ್ತಿದ್ದಾರೆ. ಅವರ ಕರ್ಮ ಅವರದೆಂದುಕೊಂಡಿದ್ದೇನೆ. ಈಗ ಸಂದರ್ಭ ಬಂದಿದೆಯಾದ್ದರಿಂದ ಹೇಳಬೇಕಾಗಿ ಬಂದಿದೆ. ನಾನು ದೆವ್ವಗಳಿವೆ

ಯೆಂದರೂ, ಶಾಸ್ತ್ರಬದ್ಧವಾಗಿಯೆ ಹೇಳುತ್ತಿದ್ದೇನೆ. ಎಲ್ಲವನ್ನು ಕುರುಡನಾಗಿ ದೆವ್ವಗಳೆಂದು, ದೇವತೆಗಳೆಂದು ಹೇಳುವುದು ಇಲ್ಲ ಎನ್ನುವುದಕ್ಕೆ ಇದು ಒಂದು ನಿದರ್ಶನ. ನಾನು ಈಗ ದೊಡ್ಡಮ್ಮನವರು ಸೂಕ್ಷ್ಮವು ಬಂದಿದೆ ಎಂದು ಹೇಳಿದವರಲ್ಲಿ ದೇವತೆ ಇಲ್ಲ ಎಂದು ಹೇಳುವುದು ಸಹ ಶಾಸ್ತ್ರಬದ್ಧವಾಗಿಯೆ ಹೇಳಿ ಅದನ್ನು ಮಹಿಮೆ ಎನ್ನುವುದು ಸರಿಯಲ್ಲವೆಂದಿದ್ದೇನೆ. ಒಂದು ವಿಷಯವನ್ನು ಒಪ್ಪಿಕೊಂಡರೂ, ಖಂಡಿಸಿದರೂ ಎರಡಕ್ಕೂ ಶಾಸ್ತ್ರಬದ್ಧತೆ ಇರಬೇಕು. ಕೆಲವರು ಹೇತುವಾದಿಗಳು ಶಾಸ್ತ್ರಬದ್ದತೆ ಇಲ್ಲದೆ ಎಲ್ಲವನ್ನು ಅಲ್ಲ, ಇಲ್ಲ, ಅಸತ್ಯ ಎಂದು ಅನ್ನುತ್ತಿದ್ದಾರೆ. ಅಲ್ಲನ್ನುವುದು ಹೇಗೆ ಅಲ್ಲವೊ, ಅಸತ್ಯವೆನ್ನುವುದು ಹೇಗೆ ಅಸತ್ಯವೊ ಶಾಸ್ತ್ರೀಯವಾಗಿ ವಿವರಿಸದೆ ಕುರುಡರಂತೆ ಅಸತ್ಯವೆಂದು, ಅಲ್ಲವೆಂದು ವಾದಿಸುತ್ತಿದ್ದಾರೆ. ಆದ್ದರಿಂದ ಹೇತುವಾದಿಗಳಿಗೆ, ನಾಸ್ತಿಕವಾದಿಗಳಿಗೆ ನಾವುಕೊಡುವ ಸಲಹೆ ಏನೆಂದರೆ, ಒಂದು ವಿಷಯವನ್ನು ಖಂಡಿಸಿದರೂ, ಅಥವಾ ಸಮರ್ಥಿಸಿದರೂ ಅದಕ್ಕೆ ಶಾಸ್ತ್ರೀಯತೆಯನ್ನು ತೋರಿಸಿ ಆ ಕೆಲಸವನ್ನು ಮಾಡಬೇಕು. ನಾನು ದೆವ್ವಗಳಿವೆ ಎನ್ನುತ್ತಿದ್ದೇನೆ. ಎಲ್ಲ ಯಥಾರ್ಥವಾಗಿ ನಡೆದ ಸಂಘಟನೆಗಳೆ. ನಾನು ಹೇಳಿರುವವುಗಳನ್ನು ಯಾರಾದರು ಖಂಡಿಸಬಹುದು. “ಖಂಡಿಸಬಾರದು, ನಾನು ಹೇಳಿರುವವನ್ನೆಲ್ಲ ಎಲ್ಲರು ಒಪ್ಪಿಕೊಳ್ಳಬೇಕೆಂದು” ಹೇಳುವುದಿಲ್ಲ. ಆದರೆ ನೀವು ಒಪ್ಪಿಕೊಳ್ಳುವುದಕ್ಕೆ, ಖಂಡಿಸುವುದಕ್ಕೆ ಶಾಸ್ತ್ರಬದ್ದತೆ ಇದೆಯಾ? ಎಂದು ಕೇಳುತ್ತಿದ್ದೇನೆ. ಶಾಸ್ತ್ರಬದ್ದತೆ ಇಲ್ಲದೆ ಮಾತನಾಡಿದರೆ ಯಾರಾದರು ಸಹ ಮೂಢನಂಬಿಕಸ್ತರೆ ಆಗುತ್ತಾರೆ.

ನಮ್ಮ ಶರೀರದಲ್ಲಿ ಮುಖ್ಯವಾದವು ಏಳು ಗ್ರಂಥಿಗಳಿವೆ. ಏಳು ಗ್ರಂಥಿಗಳಲ್ಲಿಯು ಚಿಕ್ಕದು ಒಂದು ಇದೆ. ಅದರ ಹೆಸರು ಗ್ರಂಥಿರಾಜ ಎನ್ನುತ್ತೇವೆ. ಗ್ರಂಥಿರಾಜ ಅಂದರೆ ಗ್ರಂಥಿಗಳೆಲ್ಲವುಗಳಿಗು ರಾಜ ಎಂದು ಅರ್ಥ. ಎಲ್ಲವುಗಳಿಗಿಂತ ಚಿಕ್ಕಗ್ರಂಥಿ ತನಗಿಂತ ದೊಡ್ಡ ಗ್ರಂಥಿಗಳನ್ನು ಸಹ ತನ್ನ ಆಜ್ಞೆಗೆ ಒಳಪಟ್ಟು ಕೆಲಸ ಮಾಡುವಂತೆ ಮಾಡಿಕೊಂಡಿದೆಯಾದ್ದರಿಂದ ಅದನ್ನು ಗ್ರಂಥಿರಾಜ ಎಂದು ಅನ್ನುತ್ತಿದ್ದೇವೆ. ಹಾಗೆ ಭೂಮಂಡಲದಲ್ಲಿ ಶಾಸ್ತ್ರಗಳು ಆರು ಇವೆ. ಅವುಗಳನ್ನು

"ಷಟ್‌ಶಾಸ್ತ್ರಗಳು" ಎಂದು ಅನ್ನುತ್ತೇವೆ. ಪ್ರಪಂಚದಲ್ಲಿ ಯಾವುದಾದರೂ ಈ ಷಟ್ ಶಾಸ್ತ್ರಗಳನ್ನು ಅನುಸರಿಸಿರುತ್ತವೆ. ಷಟ್ ಶಾಸ್ತ್ರಗಳಲ್ಲಿ ಎಲ್ಲವುಗಳಿಗಿಂತ ಚಿಕ್ಕದು ಆರನೇ ಶಾಸ್ತ್ರ. ಅದಕ್ಕಿಂತ ಉಳಿದ ಐದು ಶಾಸ್ತ್ರಗಳು ದೊಡ್ಡವೆ. ಆದರೂ ಆರನೇ ಶಾಸ್ತ್ರಕ್ಕೆ ಒಳಪಟ್ಟೇ ಉಳಿದ ಶಾಸ್ತ್ರಗಳೆಲ್ಲ ಇವೆ. ಆದ್ದರಿಂದ ಆರನೇ ಶಾಸ್ತ್ರವನ್ನು ರಾಜವಿದ್ಯಾ ಶಾಸ್ತ್ರ ಅಥವಾ ಬ್ರಹ್ಮವಿದ್ಯಾಶಾಸ್ತ್ರ ಎನ್ನುತ್ತೇವೆ. ಬ್ರಹ್ಮ ಎಂದರೆ ಎಲ್ಲಕ್ಕಿಂತ ದೊಡ್ಡದು ಎಂದು ಅರ್ಥ. ಹಾಗೆ ರಾಜ ಅಂದರೂ ಎಲ್ಲದಕ್ಕಿಂತ ದೊಡ್ಡದು ಎಂದು ಅರ್ಥ. ಜಗತ್ತಿನಲ್ಲಿ ಮೊಟ್ಟ ಮೊದಲು ತಿಳಿದ ಶಾಸ್ತ್ರ ಬ್ರಹ್ಮವಿದ್ಯಾಶಾಸ್ತ್ರ. ನಂತರ ಉಳಿದ ಶಾಸ್ತ್ರಗಳು ತಿಳಿದಿವೆ. ಈಗಿನ ಕಾಲದಲ್ಲಿ ತಿಳಿಯದಂತೆ ಹೋದ ಶಾಸ್ತ್ರವು ಸಹ ಮನುಷ್ಯನಿಗೆ ಮೊದಲು ತಿಳಿದ ಆರನೇಶಾಸ್ತ್ರವೆ. ಆರನೇ ಶಾಸ್ತ್ರವಾದ ಬ್ರಹ್ಮವಿದ್ಯಾಶಾಸ್ತ್ರವು, ಸೃಷ್ಠಿ ಆದಿಯಲ್ಲಿಯೇ ಮನುಷ್ಯನಿಗೆ ಪೂರ್ತಿಯಾಗಿ ತಿಳಿದುಹೋಗಿದೆ. ಉಳಿದ ಐದು ಶಾಸ್ತ್ರಗಳು ಸಂಪೂರ್ಣವಾಗಿ ಇನ್ನೂ ತಿಳಿದುಬಂದಿಲ್ಲ. ಕಾಲಕ್ರಮೇಣ ಉಳಿದ ಐದು ಶಾಸ್ತ್ರಗಳು ಅಭಿವೃದ್ಧಿ ಹೊಂದುತ್ತಿವೆ. ಅಭಿವೃದ್ಧಿಯಲ್ಲಿ ಎಲ್ಲವುಗಳಿಗಿಂತ ಹೆಚ್ಚಾಗಿ ಹಿಂದೆ ಬಿದ್ದಿರುವುದು ಐದನೇ ಶಾಸ್ತ್ರವಾದ ಜ್ಯೋತಿಷ್ಯಶಾಸ್ತ್ರ. ಮೊದಲೆ ಸಂಪೂರ್ಣವಾಗಿ ತಿಳಿದ ಬ್ರಹ್ಮವಿದ್ಯಾ ಶಾಸ್ತ್ರವು ತಿಳಿಯದಂತೆ ಹೋಗಿದೆ. ಐದನೆ ಶಾಸ್ತ್ರವಾದ ಜ್ಯೋತಿಷ್ಯಶಾಸ್ತ್ರ ಅಭಿವೃದ್ಧಿಯಾಗಿಲ್ಲ. ಸ್ವಲ್ಪಮಟ್ಟಿಗೆ ಅಭಿವೃದ್ಧಿ ಹೊಂದಿದ ಗಣಿತ, ಖಗೋಳ, ರಸಾಯನಿಕ, ಭೌತಿಕಗಳು ನಾಲ್ಕು ಪ್ರಜೆಗಳೊಳಗೆ ಸೇರಿಕೊಂಡು ಹೋಗಿವೆ. ಸ್ವಲ್ಪ ಮಟ್ಟಿಗೆ ಅಭಿವೃದ್ಧಿ ಹೊಂದಿರುವ ನಾಲ್ಕು ಶಾಸ್ತ್ರಗಳನ್ನು ಸ್ವಲ್ಪ ತಿಳಿದ ಮನುಷ್ಯ, ಅಭಿವೃದ್ಧಿ ಹೊಂದದ ಜ್ಯೋತಿಷ್ಯ ಶಾಸ್ತ್ರ ತನಗೆ ತಿಳಿದಿಲ್ಲವಾದ್ದರಿಂದ ಅದು ಇದೆಯೆಂದು ಕೆಲವರು, ಇಲ್ಲವೆಂದು ಕೆಲವರು ಅನ್ನುತ್ತಿದ್ದಾರೆ. ಪ್ರಾರಂಭದಲ್ಲಿದ್ದು, ಪ್ರಸ್ತುತಕಾಲದಲ್ಲಿ ಇಲ್ಲದಂತೆ ಹೋದ ಬ್ರಹ್ಮವಿದ್ಯಾಶಾಸ್ತ್ರವನ್ನು ಮನುಷ್ಯ ಇಲ್ಲವೆ ಇಲ್ಲ ಎನ್ನುತ್ತಿದ್ದಾನೆ.

ಜನನ, ಮರಣಗಳು ಎರಡು ಆರನೇ ಶಾಸ್ತ್ರವಾದ ಬ್ರಹ್ಮವಿದ್ಯಾಶಾಸ್ತ್ರಕ್ಕೆ ಸಂಬಂಧಿಸಿರುವವು. ಆರನೇಶಾಸ್ತ್ರ ತಿಳಿಯದಂತೆ ಹೋಗಿದೆ, ಆದ್ದರಿಂದ ಭೂಮಿ

ಮೇಲೆ ಕೆಲವರು ಮರಣಿಸಿದ ನಂತರ, ಮತ್ತೆ ಜನ್ಮವೆ ಇಲ್ಲ ಎನ್ನುತ್ತಿದ್ದಾರೆ. ಇಸ್ಲಾಮ್ ಮತದಲ್ಲಿಯೂ, ಕ್ರೈಸ್ತಮತದಲ್ಲಿಯು ಪುನರ್ಜನ್ಮವಿಲ್ಲ ಎನ್ನುವ ವಾದ ಕೇಳಿಸುತ್ತಾ ಇದೆ. ಇನ್ನು ಹೋದರೆ ಒಂದು ಇಂದೂಮತದಲ್ಲಿಯೇ ಪುನರ್ಜನ್ಮ ಇದೆಯೆಂದು ಕೆಲವರಿಗೆ ಮಾತ್ರ ಸ್ವಲ್ಪ ನಂಬಿಕೆ ಇದೆ. ಇಂದೂಮತದಲ್ಲಿಯೇ ಹೆಚ್ಚಿನ ಜನ ಜ್ಞಾನವನ್ನು ತಿಳಿಯದ ವಿದ್ಯಾಧಿಕರಾಗಿ, ಹೇತುವಾದಿಗಳಾಗಿ, ನಾಸ್ತಿಕವಾದಿಗಳಾಗಿ ತಯಾರಾಗಿ ದೈವವನ್ನೆ ನಂಬದವರಾಗಿ ಸತ್ತನಂತರ ಹುಟ್ಟುವುದೇನು? ತಿಳಿವಳಿಕೆ ಇರುವವನು, ಓದು ಇರುವವನು ಈ ಮಾತನ್ನು ಹೇಳುವುದಿಲ್ಲ. ಓದು ಇಲ್ಲದವರು, ತಿಳಿವಳಿಕೆ ಇಲ್ಲದವರೇ ಈ ಮಾತುಗಳನ್ನು ಅನ್ನುತ್ತಿರುತ್ತಾರೆ ಎಂದು ಹೇಳುತ್ತಿದ್ದಾರೆ. ಇದನ್ನೆಲ್ಲವನ್ನು ಅನುಸರಿಸಿ ನೋಡಿದರೆ ಭೂಮಿಮೇಲೆ ಸಾಯುವವರೆಗೆ ಹೊರತು, ಸತ್ತನಂತರ ಹುಟ್ಟುವುದಿಲ್ಲ ಎನ್ನುವವರು ಪ್ರಪಂಚ ಜನಸಂಖ್ಯೆಯಲ್ಲಿ ಶೇ.98 ರಷ್ಟು ಇದ್ದಾರೆ. ಕೇವಲ ಶೇ. 2 ರಷ್ಟು ಮಾತ್ರ ಜನ್ಮಗಳಿವೆ ಎಂದು ಹೇಳುವವರು ಇದ್ದಾರೆ. ಹಾಗೆ ಹೇಳುವವರಲ್ಲಿಯು ಪೂರ್ತಿ ನಂಬಿಕೆ ಇಲ್ಲದವರು ಶೇ. 1 ರಷ್ಟಿದ್ದರೆ, ಪೂರ್ತಿ ನಂಬಿಕೆಯಿಂದ ಹೇಳುವವರು ಶೇ. 1 ರಷ್ಟು ಇದ್ದಾರೆ. ಇದರ ಪ್ರಕಾರ ಪ್ರಪಂಚ ಜನಸಂಖ್ಯೆ 700 ಕೋಟಿಗಳಾದರೆ ಅದರಲ್ಲಿ 7 ಕೋಟಿ ಜನ ಮಾತ್ರ ಜನ್ಮಗಳನ್ನು ಪೂರ್ತಿಯಾಗಿ ವಿಶ್ವಾಸಿಸುವವರು ಇದ್ದಾರೆಂದು ತಿಳಿಯುತ್ತಿದೆ.

ಏಳುಕೋಟಿ ಜನರಲ್ಲಿ ಏಳು ಲಕ್ಷಜನ ಮಾತ್ರವೆ ವೇದಗಳನ್ನು, ಪುರಾಣಗಳನ್ನು ಬಿಟ್ಟು ಅಸಲಾದ ಬ್ರಹ್ಮವಿದ್ಯೆ ಮೇಲೆ ಆಸಕ್ತಿ ಇರುವವರಿದ್ದಾರೆ. ಏಳು ಲಕ್ಷ ಜನರಲ್ಲಿ ಏಳು ಸಾವಿರ ಜನ ಅಸಂಪೂರ್ಣ ದೈವಜ್ಞಾನವಿರುವ ವರಿದ್ದಾರೆ. ಏಳು ಸಾವಿರ ಜನರಲ್ಲಿ 70(ಎಪ್ಪತ್ತು) ಜನ ಮಾತ್ರ ಅಸಲಾದ ಬ್ರಹ್ಮವಿದ್ಯೆಯನ್ನು ತಿಳಿದು ಅಸಲಾದ ದೈವಜ್ಞಾನ ಹೊಂದಿದ್ದಾರೆ. ಬ್ರಹ್ಮವಿದ್ಯೆಯನ್ನು (ದೈವಜ್ಞಾನವನ್ನು) ಆಚರಿಸುವವರು ಸಂಪೂರ್ಣ ಜ್ಞಾನಾಗ್ನಿ ಇರುವವರು ಭೂಮಂಡಲದಲ್ಲಿ 70 (ಎಪ್ಪತ್ತು) ಜನರಲ್ಲಿ ಕೇವಲ ಏಳು (7) ಜನ ಮಾತ್ರ ಇದ್ದಾರೆ. 700 ಕೋಟಿ ಪ್ರಪಂಚ ಜನಸಂಖ್ಯೆಯಲ್ಲಿ ಮಾಯೆಯಿಂದ

ತಪ್ಪಿಸಿಕೊಂಡು, ದೈವಮಾರ್ಗದಲ್ಲಿ ಪ್ರಯಾಣಿಸುವವರು ಕೇವಲ ಏಳುಜನ ಮಾತ್ರವೆಯೆಂದು ತಿಳಿಯುತ್ತಿದೆ. ನೂರುಕೋಟಿ ಮನುಷ್ಯರಲ್ಲಿ ಅಸಲಾದ ದೈವಮಾರ್ಗ ತಿಳಿದು, ಅಸಲಾದ ದೈವಮಾರ್ಗದಲ್ಲಿ ಶಾಸ್ತ್ರಬದ್ಧವಾಗಿ ನಡೆಯುವವನು ಒಬ್ಬನೆಯೆಂದು ತಿಳಿಯುತ್ತಿದೆ. ಪ್ರಸ್ತುತ ನಮ್ಮ ದೇಶದ ಜನಸಂಖ್ಯೆ ನೂರು ಕೋಟಿಗಳಿಗು ಸ್ವಲ್ಪ ಮೀರಿದೆ. ಆದ್ದರಿಂದ ನಮ್ಮ ಭಾರತದೇಶ (ಇಂದೂದೇಶ) ಎಲ್ಲದಕ್ಕು, ಯಾರೋ ಒಬ್ಬನು ಆರನೆ ಶಾಸ್ತ್ರವನ್ನು ತಿಳಿದು ಅದರ ಪ್ರಕಾರ ನಡೆಯುವವನು ಇದ್ದಾನೆಂದು ಅರ್ಥವಾಗುತ್ತಿದೆ. ಸರಿಯಾಗಿ ಆಚರಿಸುವವನು ಒಬ್ಬನಿದ್ದರೂ, ಉಳಿದ 69 ಜನ ಸಂಪೂರ್ಣಜ್ಞಾನಿಗಳು ಆರನೆ ಶಾಸ್ತ್ರವನ್ನು ವಿವರವಾಗಿ ತಿಳಿದವರು ಇದ್ದಾರೆ. ಅಂತವರ ಹತ್ತಿರ ನಾನು ತಿಳಿದುಕೊಂಡ ಜ್ಞಾನದ ಪ್ರಕಾರ ಪುನರ್ಜನ್ಮಗಳು ಇವೆಯೆಂದು ಹೇಳುತ್ತಿದ್ದೇನೆ.

ಇನ್ನೂ ವಿವರವಾಗಿ ಹೇಳಿದರೆ ಪುನರ್ಜನ್ಮಗಳೇ ಅಲ್ಲ, ಪುನರ್ಮರಣ ಸಹ ಇದೆ. ಒಂದು ಬಾರಿ ಹುಟ್ಟಿದವನು ಸತ್ತುಹೋಗಿ, ಎರಡನೆಬಾರಿ ಹುಟ್ಟಿದರೆ ಅದನ್ನು ಪುನರ್ಜನ್ಮ ಎನ್ನುತ್ತೇವೆ. ಹಾಗೆ ಒಂದು ಬಾರಿ ಮರಣಿಸಿದವನು ಹುಟ್ಟಿ ನಂತರ ಸತ್ತುಹೋದರೆ ಅದನ್ನು ಪುನರ್ಮರಣ ಎನ್ನುತ್ತಿದ್ದೇವೆ. ಇದು ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ಹೇಳುವಮಾತು. ಇಲ್ಲಿ ಸ್ವಲ್ಪ ವಿವರವನ್ನು ಜಾಗ್ರತೆಯಿಂದ ಕೇಳೋಣ. ಶಾಸ್ತ್ರ ಎಂದಾಗ ಶಾಸನಗಳಿಂದ ಕೂಡಿಕೊಂಡಿರುವು ದೆಂದು, ಹೇಳಿರುವುದು ಹೇಳಿದಂತೆ ನಡೆದೇ ತೀರುತ್ತದೆಂದು ಹೇಳಬಹುದು. ಶಾಸ್ತ್ರ ಭೂಮಿಮೇಲೆ ಎಲ್ಲಾದರು, ಯಾವ ದೇಶದಲ್ಲಾದರು ಒಂದೇ ಬೆಲೆ, ಒಂದೇ ಆಚರಣೆ ಹೊಂದಿರುತ್ತದೆ. ಶಾಸ್ತ್ರವನ್ನು ಹೇಳಿರುವುದು ಮನುಷ್ಯರಿಗೇ ಆದ್ದರಿಂದ ಯಾವ ದೇಶದಲ್ಲಿನ, ಯಾವ ಮತಸ್ಥರಿಗಾದರು ಒಂದೇ ರೀತಿ ಅನ್ವಯಿಸುತ್ತದೆ. ಒಂದೊಂದು ಮತಕ್ಕು ಒಂದೊಂದು ವಿಧವಾಗಿ, ಒಂದೊಂದು ದೇಶಕ್ಕು ಒಂದೊಂದು ರೀತಿ ಅನ್ವಯಿಸುವುದಿಲ್ಲ. ಉದಾಹರಣೆಗೆ ಗಣಿತ ಶಾಸ್ತ್ರವನ್ನು ತೆಗೆದುಕೊಳ್ಳೋಣ. 3X3=9 ಎನ್ನುವ ಸೂತ್ರ ಯಾವ ದೇಶದಲ್ಲಾದರು,

ಯಾವ ಮತಸ್ಥನಿಗಾದರು ಅನ್ವಯಿಸುತ್ತದೆ. ಹಾಗೆಯೇ ಆರು ಶಾಸ್ತ್ರಗಳಲ್ಲಿ ದೊಡ್ಡ ಶಾಸ್ತ್ರವಾದ ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ **"ಜಾತಸ್ಯಹಿ ಧೃವೊ ಮೃತ್ಯುಃ ಧೃವಂ ಜನ್ಮ ಮೃತಸ್ಯಚ"** ಎನ್ನುವ ಸೂತ್ರ ಎಲ್ಲಾ ದೇಶಗಳಲ್ಲಿಯು ಎಲ್ಲಾ ಮತಗಳಲ್ಲಿಯು ಅನ್ವಯಿಸುತ್ತದೆ. ಶಾಸ್ತ್ರ ಶಾಪದ ಹಾಗೆ ನಡೆದೇ ನಡೆಯುತ್ತದೆ. ಆದ್ದರಿಂದ ಎಲ್ಲಾ ಮತಗಳಲ್ಲಿಯೂ ಇರುವ ಧರ್ಮ, ಜನನ ಮರಣಗಳನ್ನು ಸೂಚಿಸುತ್ತದೆ. ದೇವರು ಹೇಳಿದ ಧರ್ಮವನ್ನು ಆಯಾ ಮತಸ್ಥರು ಗ್ರಹಿಸದೆ ಮಾಯೆ ಬಲೆಯಲ್ಲಿ (ಸೈತಾನ್ ಬಲೆಯಲ್ಲಿ) ಬಿದ್ದು ಹೋಗಿ ದೈವವಾಕ್ಯವನ್ನು ಮರೆತುಹೋಗಿ ಜನ್ಮಗಳು ಇಲ್ಲ ಎನ್ನುತ್ತಿದ್ದಾರೆ. ಉದಾಹರಣೆಗೆ ಪರಿಶುದ್ಧ ಬೈಬಲ್‌ನಲ್ಲಿ ಮತ್ತಾಯ ಸುವಾರ್ತೆ 12ನೆ ಅಧ್ಯಾಯದಲ್ಲಿ 31,32 ವಚನಗಳನ್ನು ನೋಡಿದರೆ **"ಮನುಷ್ಯರು ಮಾಡುವ ಪ್ರತಿ ಪಾಪಕ್ಕೂ, ದೂಷಣೆಗೂ ಕ್ಷಮಾಪಣೆ ಇರುತ್ತದೆ. ಆದರೆ, ಆತ್ಮ ವಿಷಯವಾದ ದೂಷಣೆಗೆ ಪಾಪಕ್ಷಮಾಪಣೆ ಇಲ್ಲ. ಮನುಷ್ಯ ಕುಮಾರನಿಗೆ ವಿರೋಧವಾಗಿ ಮಾತನಾಡುವವನಿಗೆ ಪಾಪಕ್ಷಮಾಪಣೆ ಇದೆಯಾಗಲಿ, ಪರಿಶುದ್ಧಾತ್ಮಕ್ಕೆ ವಿರೋಧವಾಗಿ ಮಾತನಾಡುವವನಿಗೆ ಈ ಯುಗದಲ್ಲಾದರು, ಮುಂಬರುವ ಯುಗದಲ್ಲಾದರು ಪಾಪಕ್ಷಮಾಪಣೆ ಇಲ್ಲ."** ನಮ್ಮ ಮತದಲ್ಲಿ ಜನ್ಮಗಳು ಇಲ್ಲ ಎಂದು ಹೇಳುತ್ತಿರುವವರ ಗ್ರಂಥದಲ್ಲಿಯೆ ದೈವಧರ್ಮದ ಪ್ರಕಾರ ಜನ್ಮಗಳಿವೆಯೆನ್ನುವದಕ್ಕೆ ಸಾಕ್ಷಿಯಾಗಿ ಈ ಮಾತು ನಿಂತಿದೆ. ಶಾಸ್ತ್ರ ಯಾರಿಗಾದರು ಶಾಸನವೆ ಎನ್ನುವುದಕ್ಕೆ ಬೈಬಲ್‌ನಲ್ಲಿನ ವಾಕ್ಯ ನಿದರ್ಶನವಾಗಿದೆ. ಸಾತಾನು (ಮಾಯೆ) ಪ್ರಭಾವದಿಂದ ಮೇಲಿನ ವಾಕ್ಯವನ್ನು ಕ್ರೈಸ್ತರು ಇನ್ನೊಂದು ವಿಧವಾಗಿ ಅರ್ಥಮಾಡಿಕೊಂಡು, ಅದರಲ್ಲಿನ ಸತ್ಯವನ್ನು ಗ್ರಹಿಸದೆ ಹೋದರೂ, ದೈವಧರ್ಮಶಾಸ್ತ್ರದ ಪ್ರಕಾರ ಮನುಷ್ಯನಿಗೆ ಜನ್ಮಗಳಿವೆಯೆಂದೇ ಆ ವಾಕ್ಯ ಹೇಳುತ್ತಿದೆ.

ಜ್ಯೋತಿಷ್ಯಶಾಸ್ತ್ರದ ಪ್ರಕಾರ ಸ್ಥೂಲಶರೀರದಿಂದ ಮನುಷ್ಯ 120 ವರ್ಷಗಳು ಬದುಕಬಹುದು. ಸೂಕ್ಷ್ಮಶರೀರದಿಂದ ಎಷ್ಟು ಕಾಲವಾದರು ಬದುಕಬಹುದು. ನಮಗೆ ಕಾಣಿಸುವುದು ಸ್ಥೂಲಶರೀರವೆ ಆದ್ದರಿಂದ ಅದನ್ನು

ಕುರಿತೆ ಮಾತನಾಡಿಕೊಳ್ಳೋಣ. ಪ್ರಸ್ತುತ ಕಾಲದಲ್ಲಿ ಮನುಷ್ಯ 80 ಅಥವಾ 90 ವರ್ಷಗಳಿಗಿಂತ ಹೆಚ್ಚು ಬದುಕಲಾರದೆ ಇದ್ದಾನೆ. ಕೆಲವರಾದರೆ ಅತೀ ಬೇಗ ಸಾಯುತ್ತಿದ್ದಾರೆ. ಆಯಸ್ಸು ತೀರಿ ಸತ್ತುಹೋದವನು, ಆ ಕ್ಷಣವೆ ಜನ್ಮಕ್ಕೆ ಹೋಗುವನೆಂದು ಧರ್ಮಶಾಸ್ತ್ರವಾದ ಆರನೆಶಾಸ್ತ್ರ ಹೇಳುತ್ತಿದೆ. 1200 ವರ್ಷಗಳಿಗೆ 10 ಜನ್ಮಗಳು ತೆಗೆದುಕೊಳ್ಳಬೇಕಾದ ಮನುಷ್ಯ 15 ಅಥವಾ 20 ಅಥವಾ 30 ಜನ್ಮಗಳು ಹೊಂದುತ್ತಿದ್ದಾನೆ. ಒಂದು ವೇಳೆ 90 ವರ್ಷಗಳು ಬದುಕುವ ಹಾಗೆ ಲೆಕ್ಕಿಸಿದರೂ 1200 ವರ್ಷಗಳಿಗೆ 13 ಅಥವಾ 14 ಜನ್ಮಗಳು ಹೊಂದುತ್ತಿದ್ದಾನೆ. ಮನುಷ್ಯನಿಗೆ ಆಯಸ್ಸು ಪರಿಮಾಣವಿದ್ದಂತೆ, ನಾಲ್ಕು ಯುಗಗಳಿಗು ಸಹ ಪರಿಮಾಣವಿದೆ. ಕಲಿಯುಗದ ಆಯಸ್ಸು 4,32,000 ವರ್ಷಗಳು ಎಂದು ದೇವರಿಂದ ನಿರ್ಣಯಿಸಲ್ಪಟ್ಟಿದೆ. ಹಾಗೆಯೇ ದ್ವಾಪರಯುಗ 8,64,000 ವರ್ಷಗಳು ಎಂದೂ, ತ್ರೇತಾಯುಗ 12,96,000 ವರ್ಷಗಳು ಎಂದೂ, ಕೃತಯುಗ 17,28,000 ವರ್ಷಗಳು ಎಂದೂ ನಿರ್ಣಯಿಸಲ್ಪಟ್ಟಿದೆ. ಬೈಬಲ್‌ನಲ್ಲಿ ಹೇಳಿದ ವಾಕ್ಯ ಎರಡು ಸಾವಿರ ವರ್ಷಗಳ ಪೂರ್ವದ್ದೇ, ಆದ್ದರಿಂದ ಕಲಿಯುಗದಲ್ಲಿ ಹೇಳಿರುವುದೇಯೆಂದು ಸುಲಭವಾಗಿ ತಿಳಿಯುತ್ತಿದೆ. ಬೈಬಲ್ ವಾಕ್ಯದ ಪ್ರಕಾರ ಯಾರಾದರೂ ದೇವರನ್ನು ದೂಷಿಸಿದರೆ, ಅವನು ಎರಡು ಯುಗಗಳಲ್ಲಿ ಪಾಪವನ್ನು ಅನುಭವಿಸುವನು. ಉದಾಹರಣೆಗೆ ಪ್ರಸ್ತುತ ಕಾಲದಲ್ಲಿ ಈ ದಿನವೇ ದೇವರನ್ನು ದೂಷಣೆಯಾಗಿ ಮಾತನಾಡಿದವನು ಹತ್ತು ವರ್ಷಗಳ ನಂತರ ಸತ್ತುಹೋಗಿದ್ದಾನೆಂದುಕೊಳ್ಳೋಣ. ಆಗಿನಿಂದ ಈ ಯುಗದಲ್ಲಿಯು, ಬರುವ ಯುಗದಲ್ಲಿಯು ಪಾಪದ ಭಾರವನ್ನು ಹೊರಬೇಕಾಗಿರುತ್ತದೆ. ಆ ಲೆಕ್ಕ ಪ್ರಕಾರ ಕಲಿಯುಗ ಇಲ್ಲಿಯವರೆಗು ನಡೆದಿರುವುದಲ್ಲದೆ, ಉಳಿದಿರುವ ವರ್ಷಗಳು ಮತ್ತು ಮುಂಬರುವ ಕೃತಯುಗ  ವರ್ಷಗಳೆಲ್ಲವು ಒಟ್ಟಾರೆ ಅನುಭವಿಸಬೇಕಾಗಿರುತ್ತದೆ. ಕಲಿಯುಗ ಇಲ್ಲಿಯವರೆಗು 5110 ವರ್ಷಗಳು ಕಳೆದು ಹೋಗಿದೆ. ಅವನು ಈ ಜನ್ಮದಲ್ಲಿ ಸತ್ತುಹೋಗುವುದಕ್ಕೆ 10 ವರ್ಷಗಳಿವೆ. ಆದ್ದರಿಂದ ಅವನು ಸಾಯುವ ಸಮಯಕ್ಕೆ ಕಲಿಯುಗ 5,120 ವರ್ಷಗಳು ಕಳೆದು ಹೋಗುತ್ತವೆ. ಇನ್ನೂ ಉಳಿದಿರುವುದು 4,26,880 ವರ್ಷಗಳು. ಮುಂಬರುವ ಕೃತಯುಗ 17,28,000

ವರ್ಷಗಳು. ಈಗ ಈ ಯುಗದಲ್ಲಿನ 4,26,880 ವರ್ಷಗಳು, ಮುಂಬರುವ ಯುಗದಲ್ಲಿನ 17,28,000 ವರ್ಷಗಳನ್ನು ಸೇರಿಸಿದರೆ ಒಟ್ಟು 21,54,880 ವರ್ಷಗಳು ಪಾಪವನ್ನು ಅನುಭವಿಸಬೇಕಾಗುತ್ತದೆ.

ಈ ಜನ್ಮದಲ್ಲಿ ದೇವರ ಬಗ್ಗೆ ಪಾಪವನ್ನು ಸಂಪಾದಿಸಿಕೊಂಡವನು ಪ್ರತಿಜನ್ಮದಲ್ಲಿಯು 100 ವರ್ಷಗಳು ಜೀವಿಸಿದರೂ, ಬೈಬಲ್ ವಾಕ್ಯವನ್ನು ಅನುಸರಿಸಿ 21,549 ಬಾರಿ ಭೂಮಿ ಮೇಲೆ ಹುಟ್ಟಬೇಕಾಗಿ ಬರುತ್ತದೆ. 21 ಸಾವಿರ 5 ನೂರ 49 ಬಾರಿ ಜನ್ಮ ತೆಗೆದುಕೊಳ್ಳಬೇಕಾಗುತ್ತದೆ. ಮತ್ತಯಿ ಸುವಾರ್ತೆ 12ನೆ ಅಧ್ಯಾಯ 31,32 ವಾಕ್ಯಗಳಲ್ಲಿ ಸ್ಪಷ್ಟವಾಗಿ ಈ ಯುಗದಲ್ಲಾದರು, ಮುಂಬರುವ ಯುಗದಲ್ಲಾದರು ಎಂದು ಪ್ರಭುವೇ ಹೇಳಿರುವಾಗ ಕ್ರೈಸ್ತರು ಪ್ರಭು ಮಾತಿಗೆ ವಿರುದ್ಧವಾಗಿ ಸಾತಾನು ಮಾತಿನ ಪ್ರಕಾರ, ಮನುಷ್ಯನಿಗೆ ಜನ್ಮಗಳು ಇಲ್ಲ ಎನ್ನುವುದು ಅಧರ್ಮ ಅಲ್ಲವೆ! ಧರ್ಮಶಾಸ್ತ್ರಕ್ಕೆ ವಿರುದ್ಧವಲ್ಲವೆ?

ಆರನೇ ಶಾಸ್ತ್ರವಾದ ದೈವಶಾಸ್ತ್ರ ಅಥವಾ ಧರ್ಮಶಾಸ್ತ್ರ ಪ್ರತಿ ಮತದಲ್ಲಿಯು ಪ್ರತಿ ದೇಶದಲ್ಲಿಯು ಶಾಸನವಾಗಿ ನಿಂತಿದೆಯೆನ್ನುವುದಕ್ಕೆ ಬೈಬಲ್‌ನಲ್ಲಿನ ವಾಕ್ಯವೇ ಆಧಾರವಾಗಿದೆ. ಇದೇ ರೀತಿ ಕೆಲವು ಮತದವರು ತಮ್ಮ ತಮ್ಮ ಧರ್ಮಗ್ರಂಥಗಳಲ್ಲಿರುವ ದೈವ ವಾಕ್ಯವನ್ನು, ಮಾಯಾ ಪ್ರಭಾವದಿಂದ ತಪ್ಪಾಗಿ ಅರ್ಥಮಾಡಿಕೊಂಡು ಜನ್ಮಗಳು ಇಲ್ಲ ಎನ್ನುತ್ತಿದ್ದಾರೆ. ಹಾಗೆ ಕೆಲವು ಮತದವರು ದೆವ್ವಗಳಿವೆಯೆಂದು ಹೇಳುತ್ತಿದ್ದಾರೆ. ಕೆಲವು ಮತದವರು ದೆವ್ವಗಳಿಲ್ಲ ಎನ್ನುತ್ತಿದ್ದಾರೆ. ಬೈಬಲ್‌ನಲ್ಲಿ ಪ್ರಭು ಅನೇಕ ಸಂದರ್ಭಗಳಲ್ಲಿ ದೆವ್ವಗಳ ಪ್ರಸ್ತಾವನೆ ತಂದಿದ್ದಾನೆ. ನಾವು ಸಹ ಈ ಗ್ರಂಥದಲ್ಲಿ ಇಲ್ಲಿಯವರೆಗೂ ದೆವ್ವಗಳನ್ನು, ದೇವತೆಗಳನ್ನು, ಕ್ಷುದ್ರದೇವತೆಗಳನ್ನು, ದೇವತೆಗಳ ಹಾಗೆ ನಟಿಸುವವರ ವಿಷಯಗಳು ಎಷ್ಟೋ ತಿಳಿದುಕೊಂಡಿದ್ದೇವೆ. ಯಾರು ಇವೆಯೆಂದರೂ, ಯಾರು ಇಲ್ಲವೆಂದರೂ ದೆವ್ವಗಳು ಇರುವುದು ನೂರಕ್ಕೆ ನೂರುಪಾಲು ನಿಜವೆಂದು, ಎಷ್ಟೋ ಅನುಭವ ಸಂಘಟನೆಗಳ ಮುಖಾಂತರ ತಿಳಿದಿದೆ. ದೆವ್ವಗಳಿವೆ ಎನ್ನುವವರಿಗೆ ದೆವ್ವಗಳ ಭಯವು ಸಹ ಇರುತ್ತದೆ. ಆದ್ದರಿಂದ ಅವುಗಳಿಗೆ

ವಿರುದ್ಧವಾಗಿ ಮಾತನಾಡುವುದಿಲ್ಲ, ವಿರುದ್ಧವಾದ ಕೆಲಸಗಳು ಮಾಡುವುದಿಲ್ಲ. ದೆವ್ವಗಳಿಲ್ಲ ಎನ್ನುವವರಿಗೆ ಮಾತ್ರ ಅವುಗಳ ಭಯವಿರದು. ಇದ್ದರೆ ಅಲ್ಲವೆ ಭಯಪಡಬೇಕಾಗಿರುವುದು ಎನ್ನುವ ಧೈರ್ಯದಿಂದ ಇರುತ್ತಾರೆ. ಅಂತವರು ಅವು ಇಲ್ಲ ಎಂಬ ಧೈರ್ಯದಿಂದ ದೆವ್ವಗಳಿಗೆ ವಿರುದ್ಧವಾದ ಮಾತುಗಳು ಮಾತನಾಡುವುದು, ವಿರುದ್ಧವಾದ ಕೆಲಸಗಳು ಮಾಡುವುದು ನಡೆಯುತ್ತದೆ. ಕೆಲವು ದೆವ್ವಗಳ ಮನಸ್ತತ್ವವು ದೊಡ್ಡ ನೀತಿ ನಿಜಾಯಿತಿಯಾಗಿ ಇರುತ್ತವೆ. ಅಂತಹ ದೆವ್ವಗಳು ಯಾರ ತಂಟೆಗೂ ಬರುವುದಿಲ್ಲ, ಯಾರಿಗು ಹಾನಿ ಮಾಡುವುದಿಲ್ಲ. ಆದರೆ ಅವರನ್ನು ಯಾರಾದರೂ ರೇಗಿಸಿದರೂ, ದೂಷಿಸಿದರೂ, ಹೀಯಾಳಿಸಿ ಮಾತನಾಡಿದರೂ, ತಮ್ಮ ವಿಷಯಗಳನ್ನು ಹೊರಗಡೆ ತಿಳಿಯುವಂತೆ ಮಾಡಿದರೂ ಅವರ ಮೇಲೆ ಹಗೆತನ ತೋರಿಸುತ್ತವೆ. ಹಾಗಿರುವಾಗ ಕೆಲವು ದೆವ್ವಗಳು ಹಗೆ ತೋರಿಸುವುದೆ ಅಲ್ಲದೆ, ನೇರವಾಗಿ ಪ್ರಾಣ ತೆಗೆಯುವವು ಸಹ ಇವೆ. ಭೂಮಿಮೇಲೆ ಅಂತಹ ಸಂಘಟನೆಗಳು ಎಷ್ಟೋ ನಡೆದಿವೆ. ಹಾವು ದ್ವೇಷ ಇಟ್ಟುಕೊಂಡರೆ ಹಗೆ ಸಾಧಿಸುವುದಕ್ಕೆ 12 ವರ್ಷಗಳಾದರೂ ಜ್ಞಾಪಕ ಇಟ್ಟುಕೊಂಡು ಅವಕಾಶಕ್ಕಾಗಿ ಕಾದುಕೊಂಡು ಇರುತ್ತದೆ. ಅಂದುಕೊಂಡ ಮನುಷ್ಯನನ್ನು ಸಾಯಿಸುವವರೆಗು ಆಹಾರವನ್ನು ಸಹ ಮುಟ್ಟುವುದಿಲ್ಲ.

ಹಾವಿನ ದ್ವೇಷದಂತೆ ಕೆಲವು ಮಂದಿ ದೆವ್ವಗಳ ದ್ವೇಷ ಇರುತ್ತದೆನ್ನುವುದಕ್ಕೆ ಕೆಲವು ಸಂಘಟನೆಗಳು ಇವೆ. ಉದಾಹರಣೆಗೆ ಚಂದ್ರಮುಖಿ ಸಿನಿಮಾವನ್ನು ತೆಗೆದುಕೊಳ್ಳೋಣ. ಚಂದ್ರಮುಖಿ ಸಿನಿಮಾದಲ್ಲಿ ಇರುವ ಕಥೆ ತಮಿಳುನಾಡಿನಲ್ಲಿ ಪ್ರತ್ಯಕ್ಷವಾಗಿ ನಡೆದ ವಿಷಯವೇಯೆಂದು ವಾರ್ತೆಗಳಲ್ಲಿ ನೋಡಿದೆನು. ತಮಿಳುನಾಡಿನಲ್ಲಿ ಊರ ಹೆಸರನ್ನು ನೋಡಿದ್ದೇನೆ ಆದರೆ ಜ್ಞಾಪಕವಿಲ್ಲ. ಆ ಊರಿನಲ್ಲಿ ಹಳೆ ಬಂಗಲೆ ಇರುವುದು, ಅದರಲ್ಲಿ ಯಾರೂ ನಿವಾಸವಿಲ್ಲದೆ ಹೋಗಿರುವುದು, ಆ ಮನೆಯಲ್ಲಿ ಯಾರಾದರು ಇದ್ದರೆ ಸಂಗೀತ ಶಬ್ದ ಕೇಳಿಸುವುದು, ವಿಚಿತ್ರ ಸಂಘಟನೆಗಳು ನಡೆಯುವುದು ಎಲ್ಲವು ವಾಸ್ತವವಾಗಿರುವ ವಿಷಯಗಳೆ. ಆ ವಾಸ್ತವ ವಿಷಯವನ್ನು ಆಧಾರ ಮಾಡಿಕೊಂಡು ಒಂದು ಸಿನಿಮಾವನ್ನು ತೆಗೆಯಬೇಕೆಂದು ಅಂದುಕೊಂಡರು. ತಮಿಳುನಾಡಿನಲ್ಲಿ ಇರುವ

ಮನೆಯೂ ವಾಸ್ತವವೆ, ಚಂದ್ರಮುಖಿ ವಾಸ್ತವವೆ. ಅದರ ನಂತರ ಚಂದ್ರಮುಖಿಯನ್ನು ಮನೆಯಿಂದ ಓಡಿಸಿದ ಕಥೆ ವಾಸ್ತವವಲ್ಲ. ಸಿನಿಮಾಗೋಸ್ಕರ ವಾಸ್ತವ ಚರಿತ್ರೆಯನ್ನು ಮಧ್ಯೆದಿಂದ ನಡೆಯದ ಚರಿತ್ರೆಯನ್ನು ನಡೆದಂತೆ ಸಿನಿಮಾ ತೆಗೆದಿದ್ದಾರೆ. ಮೊದಲು ತಮಿಳ ಭಾಷೆಯಲ್ಲಿ ತೆಗೆದ ಸಿನಿಮಾವನ್ನು ತೆಲುಗಿನೊಳಗೆ ಡಬ್ಬಿಂಗ್ ಮಾಡಿದ್ದಾರೆ. ಚಂದ್ರಮುಖಿ ಹೆಸರಿನಿಂದ ತೆಗೆದ ಒಂದೇ ಯಾಕ್ಟರುಗಳಿದ್ದ ಸಿನಿಮಾ ಅತ್ತ ತಮಿಳುನಾಡಿನಲ್ಲಿಯು, ಇತ್ತ ಆಂಧ್ರಪ್ರದೇಶದಲ್ಲಿಯು ನಡೆಯಿತು. ಮೊದಲು ಚಂದ್ರಮುಖಿ ಸಿನಿಮಾ ತೆಗೆಯುವ ಮುನ್ನ ಚಂದ್ರಮುಖಿ ದೆವ್ವಕ್ಕೆ ಆ ವಿಷಯ ತಿಳಿದಿರಲಿಲ್ಲ. ಸಿನಿಮಾ ತೆಗೆದ ನಂತರ ಆ ಸಿನಿಮಾ ಹೊರಗೆ ಪ್ರದರ್ಶಿಸುತ್ತಿರುವಾಗ ತನ್ನ ಸಿನಿಮಾವನ್ನು ಕುರಿತು ಆಕೆಗೆ ತಿಳಿಯಿತು. ಆಕೆಯು ಸಹ ಆ ಸಿನಿಮಾವನ್ನು ನೋಡಿದಳು. ಆ ಸಿನಿಮಾದಲ್ಲಿ ಮಾಂತ್ರಿಕನು (ಭೂತವೈದ್ಯ) ಮತ್ತು ಮಾನಸಿಕ ವೈದ್ಯನು ಇಬ್ಬರು ಸೇರಿ ಬುದ್ಧಿವಂತಿಕೆಯಿಂದ ಮೋಸ ಮಾಡಿ ತನ್ನನ್ನು ಮನೆಯಿಂದ ಓಡಿಸಿದಂತೆ ಚಿತ್ರಿಸಿರುವುದು ಚಂದ್ರಮುಖಿಗೆ ಕೋಪ ಬಂದಿತು. ಎರಡು ನೂರು ಮೂರು ನೂರು ವರ್ಷಗಳಿಂದ ಸ್ತಬ್ದತೆಯಿಂದ ಯಾರ ತಂಟೆಗೂ ಹೋಗದಂತೆ ಇದ್ದ ನನ್ನನ್ನು ಹೀಗೆ ಚಿತ್ರಿಸುತ್ತೀರಾ? ಎಂದು ಆಕೆಗೆ ಕೋಪ ಬಂದಿತು. ಸಿನಿಮಾದಲ್ಲಿ ನಟಿಸಿ ತೋರಿಸಿರುವವರ ಮೇಲೆ ತನ್ನ ಕೋಪವನ್ನು ತೀರಿಸಿಕೊಳ್ಳಬೇಕೆಂದುಕೊಂಡಳು.

ಆಧ್ಯಾತ್ಮಿಕ ಶ್ರದ್ಧೆ ಇದ್ದು, ಜ್ಞಾನಸಮುಪಾರ್ಜನೆಯಲ್ಲಿದ್ದ ರಜನಿಕಾಂತ್ ಆ ಸಿನಿಮಾದಲ್ಲಿ ಮುಖ್ಯ ಪಾತ್ರವನ್ನು ಪೋಷಿಸಿರುವುದರಿಂದ ಚಂದ್ರಮುಖಿ ರಜನಿಕಾಂತ್‌ನನ್ನು ನೋಡುತ್ತಿದ್ದ ಹಾಗೆ ಹಿಂದೆಜ್ಜೆ ಹಾಕಿದಳು. ಅಷ್ಟೇ ಅಲ್ಲದೆ ಆತನೊಂದಿಗೆ ಸೇರಿ ನಟಿಸಿದ ಯಾರ ಮೇಲೆಯು ಬರುವುದಕ್ಕೆ ಚಂದ್ರಮುಖಿಗೆ ಧೈರ್ಯವಿಲ್ಲದೆ ಹೋಯಿತು. ಅದಕ್ಕೆ ಕಾರಣ ದೈವಜ್ಞಾನದ ಮೇಲೆ ಆಕೆಗಿರುವ ಗೌರವ ಅಂಥಾದ್ದು. ಚಂದ್ರಮುಖಿ ದೆವ್ವವಾಗಿ ಬದಲಾಗಿ, ಕಾಲ ಕಳೆಯುತ್ತಿರುವ ಆಕೆ ದೇವರ ಬಗ್ಗೆ ವಿಧೇಯಳಾಗಿ ಜ್ಞಾನಜಿಜ್ಞಾಸೆ ಹೊಂದಿದ್ದಾಳೆ. ಆದ್ದರಿಂದ ರಜನಿಕಾಂತ್‌ನನ್ನಾಗಲಿ, ಆತನ ಸಹ ನಟರನ್ನಾಗಲಿ ಏನು ಅನ್ನದಂತೆ ಸುಮ್ಮನಿದ್ದು

ಹೋಗಿದ್ದಾಳೆ. ತಮಿಳಭಾಷೆಯಲ್ಲಿ ತೆಗೆದ ಸಿನಿಮಾವನ್ನು ತೆಲುಗುನಲ್ಲಿ ಡಬ್ಬಿಂಗ್ ಮಾಡಿದಂತೆ, ಕನ್ನಡಕ್ಕೆ ಡಬ್ಬಿಂಗ್ ಮಾಡಿಕೊಂಡಿದ್ದರೆ ಚೆನ್ನಾಗಿರುತ್ತಿತ್ತು. ಕನ್ನಡದವರು ಹಾಗೆ ಮಾಡದಂತೆ, ಅದೇ ಕಥೆಯನ್ನು "ಆಪ್ತಮಿತ್ರ" ಅನ್ನುವ ಹೆಸರಿಟ್ಟು ಸಿನಿಮಾವನ್ನು ತೆಗೆದಿದ್ದಾರೆ. ಅದರಲ್ಲಿ ನಟನಟಿಯರೆಲ್ಲರು ಕನ್ನಡದವರೆ. ಕನ್ನಡ ಭಾಷೆಯಲ್ಲಿ ವಿಷ್ಣುವರ್ಧನ್, ಸೌಂದರ್ಯ ಮುಖ್ಯ ಪಾತ್ರಗಳನ್ನು ಪೋಷಿಸಿದ್ದಾರೆ. ಆ ವಿಷಯವನ್ನು ತಿಳಿದುಕೊಂಡ ಚಂದ್ರಮುಖಿ, ಕೋಪದಿಂದ ಕರ್ನಾಟಕ ರಾಷ್ಟ್ರಕ್ಕೆ ಹೋಗಿದ್ದಾಳೆ. ಅಲ್ಲಿ ಸಮಯ ನೋಡಿ ಮುಖ್ಯಪಾತ್ರಗಳನ್ನು ಮಾಡಿದ ವಿಷ್ಣುವರ್ಧನ್‌ನನ್ನು, ಸೌಂದರ್ಯಳನ್ನು ಸಾಯಿಸಿದಳು. ಸೌಂದರ್ಯಳನ್ನು ಹೆಲಿಕಾಪ್ಟರ್ ಅಪಘಾತದಲ್ಲಿ ಸಾಯಿಸಿದಳು. ಹಾಗೆ ವಿಷ್ಣುವರ್ಧನ್‌ನನ್ನು ಸಾಯಿಸಿದಳು. ತನ್ನನ್ನು ಹಿಂಸಿಸಿ, ಮೋಸಮಾಡಿ ಓಡಿಸಿದಹಾಗೆ ಸಿನಿಮಾದಲ್ಲಿ ತೋರಿಸಿರುವುದು, ಚಂದ್ರಮುಖಿಯನ್ನು ಅವಮಾನಪಡಿಸಿದಂತಾಗಿದೆ. ಆದ್ದರಿಂದ ಆಕೆಗೆ ಕೋಪ ಬಂದು ಅವರ ಮೇಲೆ ಸೇಡು ತೀರಿಸಿಕೊಂಡಿದ್ದಾಳೆ. "ಆಪ್ತಮಿತ್ರ" ಸಿನಿಮಾದಲ್ಲಿ ಮುಖ್ಯಪಾತ್ರಗಳು ಪೋಷಿಸಿದ ವಿಷ್ಣುವರ್ಧನ್‌ಗೆ, ಸೌಂದರ್ಯಳಿಗೆ ರಜನಿಕಾಂತ್‌ನಂತೆ ದೈವಜ್ಞಾನದ ಮೇಲೆ ಶ್ರದ್ಧೆಯಾಗಲಿ, ಜಿಜ್ಞಾಸೆಯಾಗಲಿ ಇಲ್ಲ. ಚಂದ್ರಮುಖಿಯನ್ನು ತಡೆದಿದ್ದ ದೈವಜ್ಞಾನ ಅವರ ಬಳಿ ಇಲ್ಲದಿರುವುದರಿಂದ, ಆಕೆಯ ಕೋಪಕ್ಕೆ ಸೌಂದರ್ಯ, ವಿಷ್ಣುವರ್ಧನ್ ಇಬ್ಬರು ಬಲಿಯಾಗಿ ಹೋದರು.

ಅವರಿಬ್ಬರು ಆಕಸ್ಮಿಕವಾಗಿ ಸತ್ತುಹೋಗಿರುವುದರಿಂದ ತಮಿಳುನಲ್ಲಿ ಆ ಸಿನಿಮಾದಲ್ಲಿ ನಟಿಸಿದ ರಜನಿಕಾಂತ್ ಕೆಲವು ಜ್ಯೋತಿಷ್ಯರಿಂದ ಚಂದ್ರಮುಖಿಯಿಂದಲೆ ಅವರಿಬ್ಬರು ಸತ್ತುಹೋಗಿರುವುದೆಂದು ತಿಳಿದುಕೊಂಡನು. ಆ ವಿಷಯುವನ್ನು ತಿಳಿದುಕೊಂಡ ನಂತರ ರಜನಿಕಾಂತ್ ಸಹ, ಚಂದ್ರಮುಖಿಯಿಂದ ಮುಪ್ಪು ಹೊಂಚುಹಾಕಿದೆಯೆಂದು ಜ್ಯೋತಿಷ್ಯರು ಹೇಳಿರುವುದರಿಂದ, ಆತನು ಆಲೋಚನೆಯಲ್ಲಿ ಬಿದ್ದನು. ಕೆಲವು ಪಂಡಿತರೊಂದಿಗೆ ಸೇರಿ ಚರ್ಚಿಸಿದ ನಂತರ ಚಂದ್ರಮುಖಿಯಿಂದ ಬರುವ

ಅಪಾಯವನ್ನು ತಪ್ಪಿಸಿಕೊಳ್ಳುವುದಕ್ಕೆ ರಜನಿಕಾಂತ್ "ಮೃತ್ಯುಂಜಯ ಯಜ್ಞ" ಮಾಡಬೇಕಾಗುತ್ತದೆಂದು ಪಂಡಿತರು ಅಭಿಪ್ರಾಯವನ್ನು ವ್ಯಕ್ತ ಪಡಿಸಿದರು. ಅವರ ಮಾತುಗಳನ್ನು ಕೇಳಿದ ನಂತರ ರಜನಿಕಾಂತ್‌ರವರು ಹಣವನ್ನು ಖರ್ಚಿಟ್ಟು ಮೃತ್ಯುಂಜಯ ಯಜ್ಞವನ್ನು ಮಾಡಿಸಿದರು. ಚಂದ್ರಮುಖಿ, ರಜನಿಕಾಂತ್ ತಂಟೆಗೆ ಬಾರದಿದ್ದರು ಪಂಡಿತರು ಅನಗತ್ಯವಾದ ಭಯವನ್ನು ಆತನಿಗೆ ಕಲ್ಪಿಸಿ ಯಜ್ಞವನ್ನು ಮಾಡಿಸಿದರು. ಕರ್ನಾಟಕದಲ್ಲಿ ಮುಖ್ಯಪಾತ್ರಗಳು ಮಾಡಿ ತನ್ನನ್ನು ಹೇಳನ ಮಾಡಿದ್ದಾರೆಂದು ದೈವಜ್ಞಾನವಿಲ್ಲದ ಇಬ್ಬರನ್ನು ಸಾಯಿಸಿದ ನಂತರ ಅದೇ ಕಥೆಯನ್ನು ಮತ್ತೊಂದು ಭಾಷೆಯಲ್ಲಿ ಹೊಸದಾಗಿ ತೆಗೆಯಬೇಕೆಂದು ಪ್ರಯತ್ನಿಸಿ ನಾಯಕಿ ಪಾತ್ರವನ್ನು ಪೋಷಿಸುವುದಕ್ಕೆ ಒಬ್ಬ ಯುವತಿಯನ್ನು ಆಯ್ಕೆ ಮಾಡಿಕೊಂಡು ಆಕೆಯಿಂದ ಚಂದ್ರಮುಖಿ ಪಾತ್ರವನ್ನು ರಿಹಾರ್ಸಲ್ ಮಾಡಿಸುತ್ತಿದ್ದ ಸಮಯದಲ್ಲಿ ಆ ಯುವತಿಗೆ ಚಂದ್ರಮುಖಿ ಸೂಕ್ಷ್ಮವು ಬಂದು ನಾನಾ ಹಂಗಾಮ ಮಾಡಿದೆಯಂತೆ. ಆ ಯುವತಿ ಹಾಗೆ ಪ್ರವರ್ತಿಸುವುದರಲ್ಲಿ ಸಿನಿಮಾವನ್ನು ತೆಗೆಯಬೇಕೆಂದುಕೊಂಡವರಿಗೆ ಸ್ವಲ್ಪ ಅನುಮಾನ ಬಂದು ಆ ಸಿನಿಮಾವನ್ನು ತಯಾರು ಮಾಡದಂತೆ ನಿಲ್ಲಿಸಿದರಂತೆ. ಯುವತಿಗೆ ಸೂಕ್ಷ್ಮ ಬಂದಿರುವುದು, ವಿಷ್ಣುವರ್ಧನ್ ಸತ್ತುಹೋಗಿದ್ದು, ರಜನಿಕಾಂತ್ ಮೃತ್ಯುಂಜಯ ಯಜ್ಞ ಮಾಡಿಸಿರುವುದು ತಮಿಳುನಾಡಿನಲ್ಲಿ ಚಂದ್ರಮುಖಿಯ ಸ್ವಂತ ಮನೆಯ ಫೋಟೊ ವಿಷಯಗಳೆಲ್ಲವು ಒಂದು ದಿನ "ಸಾಕ್ಷಿ" ದಿನಪತ್ರಿಕೆಯಲ್ಲಿ ನೋಡಿದಂತೆ ನನಗೆ ಜ್ಞಾಪಕವಿದೆ.

ಚಂದ್ರಮುಖಿ ಸಿನಿಮಾ ವಿಷಯವೆಲ್ಲವನ್ನು ವಿವರಿಸಿಕೊಂಡು ನೋಡಿದಾಗ ತಿಳಿಯುವುದೇನೆಂದರೆ! ತಮ್ಮನ್ನು ಕೀಳಾಗಿ ನೋಡಿದರೆ, ಕೆಲವು ಸೂಕ್ಷ್ಮಗಳು ಹಾವಿನಂತೆ ಸೇಡು ಇಟ್ಟುಕೊಂಡು ಸಾಧಿಸುತ್ತವೆಂದು ಅರ್ಥವಾಗುತ್ತಿದೆ. ದೆವ್ವಗಳಿಂದ ಎಷ್ಟೋ ಸಾವು ಬದುಕು ಸಮಸ್ಯೆಗಳು ಏರ್ಪಡುತ್ತಿದ್ದರೂ ಅವುಗಳ ಇರುವಿಕೆಯನ್ನು ಗ್ರಹಿಸದವರು ಎಷ್ಟು ಓದು ಓದಿದರೂ ಕುರುಡರೊಂದಿಗೆ ಸಮಾನವಲ್ಲವೆ! ಯಾರಾದರು ದೆವ್ವಗಳಿವೆ ಎಂದರೆ

ಅವನನ್ನು ಅಮಾಯಕನ ಕೆಳಗೆ ಜಮಕಟ್ಟಿ ಮಾತನಾಡುವವರನ್ನು ನಾವು ಯಾರ ಕೆಳಗೆ ಜಮಕಟ್ಟಬೇಕು? ದೊಡ್ಡ ಓದು ಓದಿಕೊಂಡ ಮಾತ್ರಕ್ಕೆ, ನಾವು ವಿಜ್ಞಾನಿಗಳು ಎಂದು ಹೆಸರಿಟ್ಟುಕೊಂಡ ಮಾತ್ರಕ್ಕೆ ತಮ್ಮ ಓದು ಸ್ವಲ್ಪವೆಯೆಂದು, ತಮ್ಮ ವಿಜ್ಞಾನ ವಿಜ್ಞಾನವಲ್ಲವೆಂದು ತಿಳಿಯದವರನ್ನು ಅಮಾಯಕರಲ್ಲೇ ದೊಡ್ಡ ಅಮಾಯಕರೆಂದು ಹೇಳಬಹುದು. ಭೂಮಿಮೇಲೆ ಇರುವ ಓದುಗಳೆಲ್ಲ ನಾಲ್ಕು ಶಾಸ್ತ್ರಗಳಿಗೆ ಸಂಬಂಧಿಸಿರುವವೆ. ಪ್ರಾಥಮಿಕ ಪಾಠಶಾಲೆಯಿಂದ ವಿಶ್ವವಿದ್ಯಾಲಯ ಗಳವರೆಗು ಅವುಗಳಲ್ಲಿ ಬೋಧಿಸಲ್ಪಡುವ ವಿದ್ಯೆಗಳೆಲ್ಲವನ್ನು ಸೇರಿಸಿ ನೋಡಿದರೆ, ಕೊನೆಗೆ ಕಾಣಿಸುವವು ನಾಲ್ಕು ಶಾಸ್ತ್ರಗಳೆ. ಗಣಿತಶಾಸ್ತ್ರ, ಖಗೋಳಶಾಸ್ತ್ರ, ರಸಾಯನಿಕಶಾಸ್ತ್ರ, ಭೌತಿಕಶಾಸ್ತ್ರ ವಿನಹಃ ಉಳಿದ ಯಾವ ಶಾಸ್ತ್ರಗಳು ಯಾವ ಬೋಧನಾಲಯಗಳಲ್ಲಿಯು ಕಾಣಿಸವು. ಈ ನಾಲ್ಕು ಶಾಸ್ತ್ರಗಳು ಮನುಷ್ಯನಿಗೆ ಸ್ಥೂಲವಾಗಿ ಕಾಣಿಸುತ್ತಿವೆ. ಆದ್ದರಿಂದ ಈ ನಾಲ್ಕು ಶಾಸ್ತ್ರಗಳು ಮನುಷ್ಯನಿಗೆ ಸ್ಥೂಲದೃಷ್ಠಿಯನ್ನು ಕೊಟ್ಟು, ಸ್ಥೂಲಭಾವನೆಗಳನ್ನು ಗ್ರಹಿಸುವ ಶಕ್ತಿ ಕೊಡುತ್ತಿವೆ. ಆದ್ದರಿಂದ ಸೂಕ್ಷ್ಮವಾಗಿರುವ ದೆವ್ವಗಳನ್ನು, ದೇವತೆಗಳನ್ನು ಓದಿನಲ್ಲಿ ಯಾವ ಡಿಗ್ರಿಯನ್ನು ಹೊಂದಿದವನಾಗಲಿ ತಿಳಿದುಕೊಳ್ಳದೆ ಇದ್ದಾನೆ. ಸೂಕ್ಷ್ಮವಾಗಿರುವ ದೆವ್ವಗಳನ್ನು, ದೇವತೆಗಳನ್ನು ಅವರ ಜೀವನ ವಿಧಾನಗಳನ್ನು ಗ್ರಹಿಸಬೇಕೆಂದರೆ ಮನುಷ್ಯನಿಗೆ, ಸೂಕ್ಷ್ಮದೃಷ್ಠಿ ಎನ್ನುವ ಜ್ಞಾನದೃಷ್ಠಿ ಅತ್ಯವಶ್ಯಕ. ಜ್ಞಾನದೃಷ್ಠಿ ಎನ್ನುವ ಪದ ಒಂದೇ ಒಂದು ಬ್ರಹ್ಮವಿದ್ಯಾಶಾಸ್ತ್ರದಲ್ಲಿ ಮಾತ್ರ ಕಾಣಿಸುತ್ತದೆ. ಸ್ವಲ್ಪವಾದರು ಆರನೇ ಶಾಸ್ತ್ರವಾದ ರಾಜವಿದ್ಯಾಶಾಸ್ತ್ರ, ಅಥವಾ ಧರ್ಮಶಾಸ್ತ್ರ ಎನ್ನುವ ಬ್ರಹ್ಮವಿದ್ಯಾಶಾಸ್ತ್ರವನ್ನು ತಿಳಿಯದೇ ಸೂಕ್ಷ್ಮಗಳನ್ನು ಕುರಿತು ಯಾರಿಗೂ ಏನೂ ತಿಳಿಯುವುದಿಲ್ಲ. ಆದ್ದರಿಂದ ಈಗಿನಕಾಲದಲ್ಲಿ ಎಷ್ಟು ಓದು ಓದಿದರು, ಎಷ್ಟು ವಿಜ್ಞಾನವನ್ನು ಸಂಪಾದಿಸಿಕೊಂಡರೂ, ಎಷ್ಟು ಡಿಗ್ರಿಗಳು ಹೆಸರಿನ ಕೊನೆಯಲ್ಲಿ ತಗಲಿಸಿಕೊಂಡರೂ, ಅವರಿಗೆ ದೆವ್ವಗಳನ್ನು ಕುರಿತಾಗಲಿ, ದೆವ್ವಗಳ ಗುಂಪಿಗೆ ಸೇರಿದ ದೇವತೆಗಳು, ದೇವರುಗಳನ್ನು ಕುರಿತಾಗಲಿ ಸ್ವಲ್ಪವಾದರು ತಿಳಿದಿಲ್ಲ. ಆಗಿರುವಾಗ ದೇವತೆಗಳಿಗು ದೆವ್ವಗಳಿಗು ಸಹ ಅತೀತವಾದ, ಅಗಮ್ಯ ಗೋಚರನಾದ ದೇವರು ತಿಳಿಯುವನಾ?

ವಿಶ್ವವಿದ್ಯಾಲಯಗಳಲ್ಲಿ ಬೋಧಿಸುವ ನಾಲ್ಕು ಶಾಸ್ತ್ರಗಳನ್ನು ಓದಿ ಬಾಹ್ಯಜ್ಞಾನವನ್ನು ಸಂಪಾದಿಸಿಕೊಂಡ ಶಾಸ್ತ್ರಜ್ಞರಿಗೇ ದೆವ್ವಗಳ, ದೇವತೆಗಳ, ದೇವರುಗಳ ವಿಷಯ ತಿಳಿಯದಿರುವಾಗ, ಯಾವ ಶಾಸ್ತ್ರವಲ್ಲದಂತಹ ಪುರಾಣಗಳನ್ನು, ವೇದಗಳನ್ನು ಓದಿದವರಿಗೆ ಸ್ವಲ್ಪವಾದರೂ ತಿಳಿದಿಲ್ಲವೆಂದು ಹೇಳಬಹುದು. ವೇದ, ಪುರಾಣಗಳನ್ನು ಓದಿದವರು, ದೆವ್ವಗಳಿವೆ ಎನ್ನುವ ಕುರುಡುನಂಬಿಕೆಯಿಂದ ಅವುಗಳನ್ನು ಗುರುತಿಸಿ ಶಾಸ್ತ್ರಬದ್ಧವಲ್ಲದ, ಅಸತ್ಯ ವಿಷಯಗಳು ಹೇಳುವುದರಿಂದ ಬಾಹ್ಯಶಾಸ್ತ್ರಗಳನ್ನು ಓದಿದವರು ಆ ವಿಷಯಗಳನ್ನು ಖಂಡಿಸುತ್ತಾರೆ. ಅಷ್ಟು ಮಾತ್ರಕ್ಕೆ ವಾಸ್ತವವಾಗಿ ದೆವ್ವಗಳು ಇಲ್ಲ, ದೇವರುಗಳು ಇಲ್ಲ ಎನ್ನುವುದು ತಪ್ಪು. ಇಲ್ಲಿಯವರೆಗು ಕೆಲವು ವಿಧಗಳ ಸಂಘಟನೆಗಳಿಗೆ ಸಂಬಂಧಿಸಿದ ವಿಷಯಗಳನ್ನು ಹೇಳಿಕೊಂಡಿದ್ದೇವೆ. ಕೊನೆಯಲ್ಲಿ ಚಂದ್ರಮುಖಿಯನ್ನು ಕುರಿತು ಹೇಳಿಕೊಂಡಿದ್ದೇವೆ. ಚಂದ್ರಮುಖಿ ದೈವಜ್ಞಾನ ದವೊಂದು ಜಿಜ್ಞಾಸೆ ಇರುವ ಮತ್ತು ಸ್ವಲ್ಪ ದೈವಜ್ಞಾನವಿರುವ ರಜನಿಕಾಂತ್‌ನನ್ನು ಗೌರವಿಸಿರುವುದು ಜ್ಞಾನ ಇಲ್ಲದವರನ್ನು ಯಾವುದೊ ಒಂದು ರೂಪದಲ್ಲಿ ಸಾಯಿಸಿಹಾಕಿದಂತೆ ತಿಳಿದುಕೊಂಡೆವು. ಇದರಿಂದ ದೆವ್ವಗಳು ಎಂದರೆ ಎಲ್ಲ ಕೆಟ್ಟದನ್ನು ಮಾಡುವವೆ ಎಂದು ಅಂದುಕೊಳ್ಳದೆ ಒಳ್ಳೆಯದನ್ನು ಮಾಡುವವು, ಜ್ಞಾನಕ್ಕೆ ಬೆಲೆಕೊಡುವವು, ದೈವಜ್ಞಾನವನ್ನು ಗೌರವಿಸುವವು ಮತ್ತು ಪೂಜ್ಯದಿಂದ ನೋಡುವವು, ದೇವರ ಸೇವೆ ಮಾಡುವವು, ದೇವರ ಸೇವೆ ಮಾಡುವವರಿಗೆ ರಕ್ಷಣೆ ಕೊಡುವವು ಇವೆಯೆಂದು ತಿಳಿಯುತ್ತಿದೆ.

ಚಂದ್ರಮುಖಿ, ಜ್ಞಾನಕ್ಕೆ ಬೆಲೆಕೊಟ್ಟು, ಜ್ಞಾನವಿಲ್ಲದವರನ್ನು ಸಾಯಿಸಿದ್ದಾಳೆ ಅಲ್ಲವೆ! ಹಾಗೆ ಜ್ಞಾನ ಜಿಜ್ಞಾಸೆಯಿಂದಿದ್ದು, ಜ್ಞಾನ ಸೇವೆಯನ್ನು ದೈವಸೇವೆಯಾಗಿ ಭಾವಿಸಿ ಮಾಡುವ ಸಾಧಾರಣ ವ್ಯಕ್ತಿಯನ್ನು ಚಂದ್ರಮುಖಿಯಂತೆ ಜ್ಞಾನಕ್ಕೆ ಬೆಲೆಕೊಡುವ ಒಂದು ಸೂಕ್ಷ್ಮವು ಹೇಗೆ ಸಾವಿನಿಂದ ರಕ್ಷಿಸಿದೆಯೋ ನಡೆದ ಒಂದು ಸಂಘಟನೆಯನ್ನು ಅನುಸರಿಸಿ ನೋಡಿದರೆ ತಿಳಿಯುತ್ತದೆ. ನಮ್ಮ ಬಳಿಗೆ ಬಂದ ಒಬ್ಬ ವ್ಯಕ್ತಿಯ ಹತ್ತಿರ ಯಾವ ಪ್ರತ್ಯೇಕತೆ ಇಲ್ಲ. ದೈವಜ್ಞಾನ ತಿಳಿಯದ

ಸಾಧಾರಣ ವ್ಯಕ್ತಿ ಮತ್ತು ಎಲ್ಲ ದುರ್ವ್ಯಸನಗಳಿದ್ದ ವ್ಯಕ್ತಿ, ತನ್ನ ಸಹಚರರು ನನ್ನನ್ನು ಕುರಿತು ದೊಡ್ಡದಾಗಿ ಹೇಳಿ, ಅವರ ಹಿಂದೆ ಆತನನ್ನು ಕರೆದುಕೊಂಡು ಬಂದರು. ಹಾಗೆ ಬಂದ ವ್ಯಕ್ತಿಗೆ "ಇಲ್ಲಿ ಯಾವ ಪ್ರಪಂಚ ಕೋರಿಕೆಗಳು ನೆರವೇರುವುದಿಲ್ಲ. ಕೇವಲ ದೈವಜ್ಞಾನ ಮಾತ್ರ ಹೇಳಲಾಗುತ್ತದೆ. ನಿನಗೆ ದೈವಜ್ಞಾನದ ಮೇಲೆ ಅಸಕ್ತಿಯಿದ್ದರೆ ಆಗಾಗ ಇಲ್ಲಿಗೆ ಬಂದು ಜ್ಞಾನ ತಿಳಿದುಕೊಳ್ಳಬಹುದು. ಹಾಗಲ್ಲದೆ ನನ್ನ ಬಳಿಗೆ ಬಂದರೆ ನಿಮಗೆ ಏನೊ ಒಳ್ಳೆಯದು ನಡೆಯುತ್ತದೆಂದು ಅಂದುಕೊಳ್ಳಬೇಡಿ. ನನ್ನ ಬಳಿಗೆ ಬಂದರೆ ಪ್ರಪಂಚಪರವಾಗಿ ಯಾವ ಒಳ್ಳೆಯದು ನಡೆಯುವುದಿಲ್ಲ" ಎಂದು ಹೇಳಿದೆನು. ನಾನು ಹೇಳಿದ ಮಾತುಗಳು ಆತನಿಗೆ ಇಷ್ಟವಾಗಿ ಎರಡು ಮೂರು ಬಾರಿ ನನ್ನ ಬಳಿಗೆ ತನ್ನ ಸಹಚರರೊಂದಿಗೆ ಬಂದನು. ಆತನ ಸಹಚರರು, ಮೊದಲಿನಿಂದಲೆ ನನ್ನ ಬಳಿ ದೈವಜ್ಞಾನವನ್ನು ತಿಳಿದಕೊಳ್ಳುತ್ತಾ ನನಲ್ಲಿನ ಜ್ಞಾನವನ್ನು ಚೆನ್ನಾಗಿ ವಿಶ್ವಸಿಸಿದವರು. ಅಂತಹ ಅನುಚರರಿಂದ ನನ್ನ ಜ್ಞಾನದವೊಂದು ಬೆಲೆ ದೊಡ್ಡದೆಂದು ತಿಳಿದು, ನನ್ನ ಬಳಿಗೆ ಬಂದಿರುವುದರಿಂದ ಆತನಿಗೆ ಪ್ರಪಂಚ ಜ್ಞಾನಕ್ಕಿಂತ, ದೈವಜ್ಞಾನ ದೊಡ್ಡದೆಂದು ತಿಳಿಯಿತು. ಆಗಿನಿಂದ ದೈವಜ್ಞಾನದ ಮೇಲೆ ಆಸಕ್ತಿಯನ್ನು ಬೆಳೆಸಿಕೊಂಡು, ಪ್ರಪಂಚ ಜ್ಞಾನದ ಮೇಲೆ ಆಸಕ್ತಿಯನ್ನು ಕಡಿಮೆ ಮಾಡಿಕೊಂಡನು. ಹಾಗೆ ಮಾಡಿರುವುದರಿಂದ ತನ್ನೊಳಗಿನ ಕುಡಿಯುವುದು ಮೊದಲಾದ ದುರ್ವ್ಯಸನಗಳೆಲ್ಲ ಆತನಿಗೆ ದೂರವಾಗಿ ಹೋದವು.

ಕರ್ನೂಲ್ ಜಿಲ್ಲೆ ಡೋನ್ ಸಮೀಪದಲ್ಲಿರುವ ಜಲದುರ್ಗ ಗ್ರಾಮದಲ್ಲಿ ವಿಶ್ವನಾಥ್ ಎನ್ನುವ ವೈಶ್ಯರ ಕುಟುಂಬ, ನನ್ನ ಬಳಿಗೆ ಬಂದು ಜ್ಞಾನವನ್ನು ತಿಳಿದುಕೊಳ್ಳುತ್ತಿದ್ದರು. ವಿಶ್ವನಾಥಗುಪ್ತನಿಗೆ ಅದೇ ಗ್ರಾಮಕ್ಕೆ ಸೇರಿದ ಶೇಖರ್ ಎನ್ನುವ ಮದುವೆಯಾಗದ ಯುವಕನು ಪರಿಚಯ. ಆ ಪರಿಚಯದಿಂದಲೆ ವಿಶ್ವನಾಥಗುಪ್ತ ಆತನಿಗೆ ತಾನು ತಿಳಿದುಕೊಂಡ ಜ್ಞಾನವನ್ನು ಹೇಳಿ, ನನ್ನಬಳಿಗೆ ಕರೆದುಕೊಂಡು ಬಂದಿದ್ದನು. ಹಾಗೆ ಬಂದ ವ್ಯಕ್ತಿಯೆ ಮೇಲೆ ನಾನು ಹೇಳಿದ ದುರಭ್ಯಾಸಗಳನ್ನು ಬಿಟ್ಟುಹಾಕಿದ್ದ ವ್ಯಕ್ತಿ. ನಂತರ ಸ್ವಲ್ಪಕಾಲಕ್ಕೆ ನನ್ನ ಸಮಕ್ಷಮ

ದಲ್ಲಿಯೇ ಮದುವೆ ಸಹ ಮಾಡಿಕೊಂಡನು. ಆತನ ವೃತ್ತಿ ಲಾರಿಯನ್ನು ನಡೆಸುವ ಡ್ರೈವರ್. ಆತನು ಡ್ರೈವರ್ ಕೆಲಸ ಮಾಡುತ್ತಲೇ ಅವಕಾಶ ದೊರಕಿದಾಗ ಜ್ಞಾನವನ್ನು ತಿಳಿದುಕೊಳ್ಳುತ್ತಿದ್ದನು. ತಾನು ಜ್ಞಾನವನ್ನು ತಿಳಿದುಕೊಂಡು ಅದನ್ನು ಇತರರಿಗೆ ತಿಳಿಸುವುದು ದೈವದ ಕೆಲಸ ಮಾಡಿದ ಹಾಗೆಂದು ನಾನು ಹೇಳಿರುವುದರಿಂದ ಆತನು ಡ್ರೈವರ್ ಆಗಿ ಹೋದಾಗಲು ಸಹ ತನ್ನ ಲಾರಿಯಲ್ಲಿ ನನ್ನ ರಚನೆಗಳಲ್ಲಿನ ಕೆಲವು ಗ್ರಂಥಗಳನ್ನು ಇಟ್ಟುಕೊಂಡು ಹೋಗುತ್ತಿದ್ದನು. ಅವಕಾಶ ದೊರಕಿದಾಗ ಇತರರಿಗೆ ಜ್ಞಾನವನ್ನು ಹೇಳುತ್ತಿದ್ದನು. ಕೇಳುವವರು ಆಸಕ್ತಿಯಿಂದ ಕಾಣಿಸಿದರೆ ಅವರಿಗೆ ತನ್ನ ಬಳಿಯಿರುವ ಗ್ರಂಥಗಳನ್ನು ಉಚಿತವಾಗಿ ಕೊಡುತ್ತಿದ್ದನು. ಹಾಗೆ ಆತನ ವೃತ್ತಿ ಡ್ರೈವರ್ ಆದರೆ, ಆತನ ಪ್ರವೃತ್ತಿ ಜ್ಞಾನವನ್ನು ಇತರರಿಗೆ ತಿಳಿಸುವುದೆಂದು ಹೇಳಬಹುದು. ನನ್ನ ಬಳಿ ಜ್ಞಾನವನ್ನು ತಿಳಿದುಕೊಂಡವರೆಲ್ಲ ಮುಖದ ಮೇಲೆ ಧರಿಸುವ ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳನ್ನು ಆತನು ನಿತ್ಯವೂ ಧರಿಸುತ್ತಿದ್ದನು. ಆ ವಿಧವಾಗಿ 24 ಗಂಟೆಗಳು ಆತನ ಮುಖದ ಮೇಲೆ ಕಾಲ, ಕರ್ಮ ಚಕ್ರಗಳು ಕಾಣಸುತ್ತಿದ್ದವು.

ಈ ರೀತಿ ಸ್ವಲ್ಪಕಾಲ ತಾನು ಜ್ಞಾನವನ್ನು ತಿಳಿದುಕೊಳ್ಳುತ್ತಾ ಇತರರಿಗೆ ತಿಳಿಸುತ್ತಾ, ಜ್ಞಾನಸೇವೆ ಮಾಡುತ್ತಿದ್ದ ಶೇಖರ್ ಕೊನೆಗೆ ನಾವು ಪೂಜಿಸುವ ದೇವತೆಗಳು, ದೇವರುಗಳು ಸಹ ದೇವರಿಂದ ಸೃಷ್ಠಿಸಲ್ಪಟ್ಟಿರುವವರೆಯೆಂದು, ಮನುಷ್ಯರನ್ನು, ದೇವತೆಗಳನ್ನು, ದೇವರುಗಳನ್ನು ಸೃಷ್ಠಿಸಿದ ಸೃಷ್ಠಿಕರ್ತನಾದ ದೇವರು ಪ್ರತ್ಯೇಕವಾಗಿ ಇದ್ದಾನೆಂದು, ದೇವರಿಗೆ ರೂಪ, ನಾಮ, ಕ್ರಿಯೆಗಳು ಇಲ್ಲವೆಂದು, ಆಕಾರವಾಗಲಿ, ಹೆಸರಾಗಲಿ, ಕೆಲಸವಾಗಲಿ ಇರುವವನು ಯಾವನೂ ದೇವರಲ್ಲವೆಂದು ತಿಳಿದುಕೊಂಡನು. ಭಗವದ್ಗೀತೆಯಲ್ಲಿ ಭಕ್ತಿಯೋಗದಲ್ಲಿ 10ನೇ ಶ್ಲೋಕದಲ್ಲಿ "ಮದರ್ಥಮಪಿ ಕರ್ಮಾಣಿ" ನನಗಾಗಿ ಕೆಲಸ ಮಾಡು ಎನ್ನುವ ಸೂತ್ರದ ಪ್ರಕಾರ ದೈವಜ್ಞಾನವೇ ತನ್ನ ಧ್ಯೇಯವಾಗಿ, ಪ್ರವೃತ್ತಿಯಾಗಿ ಮಾಡುತ್ತಿದ್ದನು. ಹಾಗೆ ಮನೋಭಾವನೆಯಲ್ಲಿ ಜ್ಞಾನಕ್ಕೆ ದೊಡ್ಡ ಸ್ಥಾನವನ್ನು ಕೊಟ್ಟ ಶೇಖರ್‌ನನ್ನು ಚಂದ್ರಮುಖಿಯಂತಹ ಒಂದು ಸೂಕ್ಷ್ಮ ನೋಡಿತು. ದೈವಜ್ಞಾನವನ್ನು

ಶಾಸ್ತ್ರಬದ್ಧವಾಗಿ ತಿಳಿದುಕೊಂಡು ಹಾಗೆಯೇ ಆಚರಿಸುತ್ತಾ ದೈವ ಭಾವವಿರುವ ವ್ಯಕ್ತಿಗಳನ್ನು ಗೌರವಿಸುವ ಸ್ವಭಾವವಿರುವ ಚಂದ್ರಮುಖಿಯಂತಹ ಸೂಕ್ಷ್ಮವು, ಆತನು ಮಾಡುವ ವೃತ್ತಿ ಲಾರಿಯನ್ನು ನಡೆಸುವುದಾದ್ದರಿಂದ ಆತನಿಗೆ ರಕ್ಷಣೆಯಾಗಿ ಆತನ ಹಿಂದೆ ಇರಬೇಕೆಂದುಕೊಂಡಿತು. ಆಗಿನಿಂದ ಆತನು ಲಾರಿಗೆ ಹೋದರೆ ಆ ಸೂಕ್ಷ್ಮ ಸಹ ಆತನ ಹಿಂದೆ ಹೋಗುತ್ತಿತ್ತು. ಆತನು ಮನೆಹತ್ತಿರ ಇದ್ದರೆ ಮನೆಹತ್ತಿರವೇ ಇರುತ್ತಿತ್ತು.

ದೇವತೆಗಳನ್ನು ಹುಟ್ಟಿಸಿರುವುದು, ಮನುಷ್ಯರನ್ನು ಹುಟ್ಟಿಸಿರುವುದು ಒಬ್ಬ ದೇವರೇ ಎಂದು ತಿಳಿದ ನಂತರ, ಶೇಖರ್‌ಗೆ ಮನುಷ್ಯರು ದೇವತೆಗಳನ್ನು ಪೂಜಿಸುವುದು, ದೇವರನ್ನು ಗುರುತಿಸದೆ ಹೋಗುವುದು ಸರಿಹೋಗುತ್ತಿರಲಿಲ್ಲ. ಆ ವಿಧವಾಗಿ ಇರುವಾಗ ಒಂದು ದಿನ ಬೆಂಗಳೂರಿಗೆ ಹೋಗುವ ಮಾರ್ಗವಾದ ಪಾಮಿಡಿ ಪ್ರಾಂತದಲ್ಲಿ ರಸ್ತೆ ಪಕ್ಕದಲ್ಲೇ ಬೇವಿನ ಗಿಡಕ್ಕೆ ತಾಯಮ್ಮ ಹೆಸರಿನಿಂದ ಪೂಜೆಮಾಡಿ ಗಿಡಕ್ಕೆ ಅರಿಶಿನ ಸೀರೆಕಟ್ಟಿರುವುದನ್ನು ನೋಡಿದನು. ರಾತ್ರಿ ಹೊತ್ತು ರೇಡಿಯೇಟರ್‌ಗೆ ನೀರು ಹಾಕುವುದಕ್ಕೆ ರಸ್ತೆಪಕ್ಕದಲ್ಲಿ ಲಾರಿಯನ್ನು ನಿಲ್ಲಿಸಿದಾಗ, ಪಕ್ಕದಲ್ಲೆ ಸೀರೆಕಟ್ಟಿರುವ ಗಿಡವನ್ನು ನೋಡಿದನು. ಜ್ಞಾನವನ್ನು ತಿಳಿದುಕೊಂಡ ನಂತರ ದೇವತೆಗಳೆಂದರೆ ಬಹಳ ಕೀಳು ಭಾವನೆ ಆತನಲ್ಲಿ ಏರ್ಪಟ್ಟಿತ್ತು. ಆದ್ದರಿಂದ ಗಿಡಕ್ಕೆ ಸೀರೆ ಏಕೆ? ಗಾಡಿ ಹೊರಸುವುದಕ್ಕೆ ಕೆಲಸಕ್ಕೆ ಬರುತ್ತದೆಂದು ಅಂದುಕೊಂಡು ಗಿಡಕ್ಕಿದ್ದ ಸೀರೆಯನ್ನು ತಂದುಕೊಂಡನು. ಆ ಸಮಯದಲ್ಲಿ ಆತನ ಹಣೆಯ ಮೇಲೆ ಕಾಲ, ಕರ್ಮಚಕ್ರಗಳನ್ನು ಇಟ್ಟುಕೊಂಡಿದ್ದಾನೆ. ರಾತ್ರಿ ಒಂದು ಗಂಟೆ ಸಮಯದಲ್ಲಿ ಎಲ್ಲರು ನಿದ್ರಿಸುತ್ತಿರುವುದರಿಂದ ಗಿಡಕ್ಕಿದ್ದ ಸೀರೆಯನ್ನು ತೆಗೆಯುವುದು ಮನುಷ್ಯರು ಯಾರೂ ನೋಡಲಿಲ್ಲ. ಆದರೆ ಆ ಗಿಡದ ಮೇಲೆಯೇ ಇದ್ದ ತಾಯಮ್ಮ ನೋಡಿದಳು. ಆತನ ಹಣೆಯ ಮೇಲೆ ಕಾಲ, ಕರ್ಮಚಕ್ರಗಳ ಗುರುತು ಇರುವುದರಿಂದ, ಅದು ಪ್ರಕಾಶಿಸುವಂತೆ ಕಾಣಿಸಿರುವುದರಿಂದ, ತಾಯಮ್ಮ ಆತನನ್ನು ಏನು ಮಾಡಲಾಗದೆ ಹೋದಳು. ಆಗಿನಿಂದ ಯಾವುದೊ ಒಂದು ವಿಧವಾಗಿ ಸಮಯ ದೊರಕಿದಾಗ ಶೇಖರ್‌ನನ್ನು ಇಕ್ಕಟ್ಟಿನಲ್ಲಿ

ಇಡಬೇಕೆಂದುಕೊಂಡಳು. ಆತನು ಬೆಂಗಳೂರು ಏರಿಯಾಗೆ ಹೋದಾಗಲೆಲ್ಲ ಆತನ ಮೇಲೆ ತಾಯಮ್ಮ ಕೋಪದಿಂದ ಇರುತ್ತಿದ್ದಳು. ತಾಯಮ್ಮ ಗಿಡಕ್ಕೆ ಸುತ್ತಿದ್ದ ಸೀರೆಯನ್ನು ಶೇಖರ್ ತಂದುಕೊಂಡ ನಂತರ, ಬಹುಶ ಒಂದು ತಿಂಗಳೊಳಗೆ ಮತ್ತೆ ಬೆಂಗಳೂರಿಗೆ ಹೋದನು. ಬೆಂಗಳೂರಿನಲ್ಲಿ ಅನ್‌ಲೋಡ್ ಮಾಡಿ ಖಾಲೀ ಲಾರಿಯನ್ನು ತೆಗೆದುಕೊಂಡು ಬರುವಾಗ ಬೆಂಗಳೂರು ಕೊನೆಯಲ್ಲಿ ಯಲಹಂಕ ಪ್ರಾಂತದ ಹತ್ತಿರ ರೋಡು ಪಕ್ಕಕ್ಕೆ ಲಾರಿಯನ್ನು ನಿಲ್ಲಿಸಿದನು. ಆಗ ಮಧ್ಯಾಹ್ನ ಒಂದುಗಂಟೆ ಸಮಯವಾದ್ದರಿಂದ ಊಟಕ್ಕೆ ನಿಲ್ಲಿಸಿದ್ದನು. ಅಲ್ಲೇ ರಸ್ತೆ ಪಕ್ಕದಲ್ಲಿ ಮೊಬೈಲ್ ಹೋಟಲ್ ಇದ್ದರೆ ಅಲ್ಲಿಗೆ ಹೋಗಿ ಕ್ಲೀನರ್ ರಮೇಶ್ ಡ್ರೈವರ್ ಶೇಖರ್ ಇಬ್ಬರು ಊಟಮಾಡಿದರು. ಅವರೊಂದಿಗೆ ಚಂದ್ರಮುಖಿಯಂತಹ ಸೂಕ್ಷ್ಮವು ಸಹ ಇತ್ತು. ರೋಡಿನ ಮೇಲೆ ಅಲ್ಲೇ ಸ್ಪೀಡ್ ಬ್ರೇಕರ್ ಇತ್ತು. ಅಷ್ಟೇ ಅಲ್ಲದೆ ರೋಡು ಬೆಂಗಳೂರು ಕಡೆ ಪೂರ್ತಿ ತಗ್ಗಾಗಿ ಇತ್ತು. ಡೌನ್‌ನಲ್ಲಿ ಸ್ಪೀಡಾಗಿ ಬರುವ ವಾಹನಗಳೆಲ್ಲ ಸ್ಪೀಡ್‌ಬ್ರೇಕರ್ ಇರುವುದರಿಂದ ಬ್ರೇಕ್‌ಹಾಕಿ, ಸ್ಲೋ ಮಾಡಿಕೊಂಡು ಬ್ರೇಕರ್‌ನ್ನು ದಾಟಿಕೊಂಡು ಹೋಗುತ್ತಿದ್ದಾರೆ. ಅಷ್ಟರಲ್ಲೆ ಬೆಂಗಳೂರು ಕಡೆ ಹೋಗುವ ಲಾರಿ ಡೌನ್‌ನಲ್ಲಿ ಸ್ಪೀಡಾಗಿ ಬಂದು ಮುಂದೆ ಬ್ರೇಕರ್ ಇರುವುದರಿಂದ ಬ್ರೇಕ್ ಹಾಕಲಾಯಿತು.

ಆಗ ಲಾರಿ ಬ್ರೇಕ್ ಕೆಲಸ ಮಾಡಲಿಲ್ಲ. ಮುಂದೆ ಸ್ಪೀಡ್ ಬ್ರೇಕರ್ ಹತ್ತಿರ ಕೆಲವು ಮೋಟರ್ ಸೈಕಲ್‌ಗಳು, ಎರಡು ಕಾರುಗಳು ಸ್ಲೋ ಆಗುತ್ತಿವೆ. ಲಾರಿ ಬ್ರೇಕ್ ಬೀಳದಿರುವುದರಿಂದ ಸ್ಪೀಡಾಗಿ ಬರುತ್ತಿದೆ. ಲಾರಿ ಸ್ವಲ್ಪ ಮುಂದಕ್ಕೆ ಬಂದರೆ ಎರಡು ಕಾರುಗಳು, ಕೆಲವು ಮೋಟಾರ್ ಸೈಕಲ್‌ಗಳು ಲಾರಿ ಕೆಳಗೆ ನಲುಗಿ ಹೋಗುತ್ತವೆ. ಅಂತಹ ಸಮಯದಲ್ಲಿ ಲಾರಿ ಡ್ರೈವರ್ ಸಮಯಸ್ಫೂರ್ತಿಯಿಂದ, ಲಾರಿಯನ್ನು ಎಡಗೈ ಕಡೆಗೆ ರಸ್ತೆಗೆ ಅಡ್ಡವಾಗಿ ಪಕ್ಕಕ್ಕೆ ತಿರುಗಿಸಿರುವುದರಿಂದ, ಮುಂದೆ ಇದ್ದ ಕಾರುಗಳನ್ನು ಮೋಟಾರ್ ಸೈಕಲ್‌ಗಳನ್ನು ಲಾರಿ ಗುದ್ದಲಿಲ್ಲ. ವೇಗದಲ್ಲಿದ್ದ ಲಾರಿಯನ್ನು ಅಡ್ಡವಾಗಿ ಪಕ್ಕಕ್ಕೆ ತಿರುಗಿಸುವುದರಿಂದ ಲಾರಿ ವೇಗವಾಗಿ ಹೋಗಿ, ರಸ್ತೆ ಪಕ್ಕದಲ್ಲಿದ್ದ ಒಂಭತ್ತು ಅಡಿಗಳ ಪ್ರಹರಿ

ಗೋಡೆಯನ್ನು ಗುದ್ದಿತು. ಟಾಟಾ ಕಂಪನಿ ಲಾರಿ ಪ್ರಹರಿ ಗೋಡೆಯನ್ನು ಗುದ್ದಿರುವುದರಿಂದ ಲಾರಿಕ್ಯಾಬಿನ್ ಅಗಲದಷ್ಟು ಗೋಡೆ ಬಿದ್ದು ಹೋಯಿತು. ಗೋಡೆ ಬಿದ್ದು ಹೋದಾಗ, ಕೆಳಗಿನ ಭಾಗದಲ್ಲಿ ಬಿದ್ದು ಹೋಗದಂತೆ ಉಳಿದ ಅಡಿ ಎತ್ತರದ ಗೋಡೆಗೆ ಲಾರಿ ಮುಂದಿನ ಚಕ್ರಗಳು ಆದುಕೊಂಡು, ಲಾರಿ ನಿಂತುಹೋಯಿತು. ಮೇಲಿನ ಗೋಡೆ ಎಲ್ಲಾ, ಲಾರಿ ಅಗಲದಷ್ಟು ಪಕ್ಕದಲ್ಲಿದ್ದ ತೋಟದೊಳಗೆ ಹೊಲದಲ್ಲಿ ಬಿದ್ದುಹೋಗಿದೆ. ಆ ಗೋಡೆ ಸಿಮೆಂಟ್ ಇಟ್ಟಿಗೆಗಳಿಂದ ಕಟ್ಟಿರುವುದರಿಂದ ಲಾರಿ ಗುದ್ದಿದಾಗ ಒಂದುಸಾರಿ ಪಕ್ಕಕ್ಕೆ ವಾಲಿಕೊಂಡಿದೆ. ಸುಮಾರು 9 ಇಂಚುಗಳ ಅಗಲ, 18 ಇಂಚುಗಳ ಉದ್ದವಿರುವ, ದೊಡ್ಡ ಇಟ್ಟಿಗೆಯಿಂದ ಕಟ್ಟಿದ ಗೋಡೆ ಪಕ್ಕದ ಹೊಲದೊಳಗೆ ಸುಮಾರು 10 ಅಡಿಗಳ ದೂರದವರೆಗು ಬಿದ್ದಿದೆ. ಈ ವಿಷಯವನ್ನು ಅಷ್ಟು ಪ್ರಾಮುಖ್ಯವಾಗಿ ಹೇಳಬೇಕಾದ ಕೆಲಸವೇನಿದೆ ಎಂದು ನೀವು ಅಂದುಕೊಳ್ಳಬಹುದು. ಏಕೆ ಹೇಳಿದ್ದೇನೆ ಅಂದರೆ! ಇಲ್ಲೇ ಒಂದು ಅಪಾಯದ ಸಂಘಟನೆ ಮತ್ತು ಆಶ್ಚರ್ಯಕರವಾದ ಸಂಘಟನೆ ನಡೆದಿದೆ. ಅಷ್ಟು ಆಶ್ಚರ್ಯಪಡುವುದು ಅಪಾಯವಾದದ್ದೇನೆಂದರೆ!

ಶೇಖರ್, ರಮೇಶ್ ಇಬ್ಬರೂ ಗೋಡೆಯನ್ನು ಆದುಕೊಂಡಿದ್ದ ಮೊಬೈಲ್ ಹೋಟಲ್ ಹತ್ತಿರ ನಿಲ್ಲಿಸಿ ಊಟಮಾಡಿ ಇಬ್ಬರೂ ತಮ್ಮ ಲಾರಿಕಡೆಗೆ ಬರಬೇಕೆಂದು ಹೊರಟರು. ರಮೇಶ್ ರಸ್ತೆ ಹತ್ತಿರಕ್ಕೆ ಬಂದನು, ಶೇಖರ್, ರಮೇಶ್ ಹಿಂದೆ ಎರಡು ಹೆಜ್ಜೆಗಳು ಬಂದು ಇನ್ನೂ ಸ್ವಲ್ಪ ನೀರು ಕುಡಿದು ಬರೋಣವೆಂದು ಗೋಡೆಕಡೆಗಿದ್ದ ಡಬ್ಬದಂತಹ ನೀರಿನ ಪಾತ್ರೆ ಕಡೆಗೆ ಹೋದನು. ನೀರು ಕುಡಿದು ತಿರುಗುತ್ತಿದ್ದ ಸಮಯದಲ್ಲಿ, ಲಾರಿ ರಸ್ತೆಗೆ ಅಡ್ಡ ತಿರುಗಿ ಗೋಡೆ ಕಡೆಗೆ ಬರುವುದನ್ನು ನೋಡಿದನು. ಲಾರಿ ಈ ಕಡೆಗೆ ಏಕೆ ಬರುತ್ತಿದೆ? ಎಂದು ಅಂದುಕೊಳ್ಳುವುದರೊಳಗೆ ಲಾರಿ ವೇಗವಾಗಿ ಬಂದು ಗೋಡೆಯನ್ನು ಗುದ್ದಿತು. ಶೇಖರ್ ಪಕ್ಕಕ್ಕೆ ಬರಬೇಕೆಂದು ಪ್ರಯತ್ನ ಮಾಡದ ಮೊದಲೆ ಲಾರಿ ಗುದ್ದುವುದು ನಡೆದು ಹೋಯಿತು. ಈ ರೀತಿ ಶೇಖರ್‌ಗೆ ಊಹಿಸದ ಅಪಘಾತ

ನಡೆಯಿತು. ಆ ಅಪಘಾತದಲ್ಲಿ ಈ ಕಡೆ ಲಾರಿಗೆ ಆಕಡೆ ಗೋಡೆಗೆ ಮಧ್ಯೆದಲ್ಲಿ ಶೇಖರ್ ಇದ್ದಾನೆ. ಆ ರೀತಿ ನಡೆದ ಅಪಘಾತದಲ್ಲಿ ಶೇಖರ್ ಗೋಡೆಗೆ ಲಾರಿಗೆ ಮಧ್ಯದಲ್ಲಿ ನಲುಗಿ ಹೋಗಿ, ಆತನ ಆಕಾರವು ಸಹ ಉಳಿಯದಂತೆ ಹೋಗಬೇಕು. ಆದರೆ ಅಲ್ಲಿ ನಡೆದ ಆಶ್ಚರ್ಯಕರವಾದ ಸಂಗತಿ ಏನೆಂದರೆ, ಶೇಖರ್ ಗೋಡೆಯೊಂದಿಗೆ ಹೊಲದಲ್ಲಿ ಬಿದ್ದಿದ್ದಾನೆ. ಅದೂ ಗೋಡೆ ಮೇಲೆ ಕುಳಿತುಕೊಂಡವನು ಗೋಡೆಯ ಕೊನೆಯಲ್ಲಿ ಬಿದ್ದಂತೆ ಹೊಲದಲ್ಲಿ ಗೋಡೆಯೆಲ್ಲಾ ಹತ್ತು ಅಡಿಗಳ ದೂರದವರೆಗು ಬಿದ್ದಿದೆ. ಹತ್ತು ಅಡಿಗಳ ಆಚೆ ಶೇಖರ್ ಬಿದ್ದಿದ್ದಾನೆ. ಶೇಖರ್ ಶರೀರಕ್ಕೆ ಎಂತಹ ಏಟು ಬೀಳಲಿಲ್ಲ, ಆದರೆ ಬಲಗಾಲಿನ ಮೇಲೆ ಸಿಮೆಂಟ್ ಇಟ್ಟಿಗೆಗಳು ಬಿದ್ದಿವೆ. ಎಡಗಾಲಿನ ಮೇಲೆ ಒಂದು ಇಟ್ಟಿಗೆ ಸಹ ಬಿದ್ದಿಲ್ಲ. ಶರೀರದಲ್ಲಿ ಎಲ್ಲಾದರಾಗಲಿ, ಎಡಗಾಲಾಗಲಿ ಏಟು ಬೀಳದಂತೆಹೋಗಿ ಬಲಗಾಲಿನ ಕೆಳಗಿನ ಪಾದದ ಮೇಲ್ಭಾಗದಲ್ಲಿ ಕಾಲಿನ ಮೇಲೆ ಸಿಮೆಂಟ್ ಇಟ್ಟಿಗೆಗಳು ಬಿದ್ದಿರುವುದರಿಂದ ಕಾಲಿಗೆ ಪಕ್ಕ ಕಂಡರಗಳು ಕಿತ್ತು ಮೂಳೆ ಮುರಿದಿದೆ. ಈ ರೀತಿ ಬಲಗಾಲಿಗೆ ಮಾತ್ರ ಏಟು ಬಿದ್ದು ಮೂಳೆ ಮುರಿದಿದೆ.

ಒಂಭತ್ತು (9) ಅಡಿಗಳ ಎತ್ತರವಿರುವ ಗೋಡೆಗೆ ಆದುಕೊಂಡು ಮನುಷ್ಯನಿರುವಾಗ, ಆ ಮನುಷ್ಯ ಐದೂವರೆ ಅಡಿಗಳ ಎತ್ತರ ಮಾತ್ರವೆ ಇದ್ದಾಗ, ಮನುಷ್ಯನ ಎತ್ತರಕ್ಕಿಂತ ಮೇಲೆ ಸುಮಾರು ಮೂರುವರೆ ಅಡಿಗಳ ಗೋಡೆ ಇದ್ದಾಗ, ಲಾರಿ ಗುದ್ದಿದರೆ ಮನುಷ್ಯನ ಆಕಾರವು ಸಹ ಉಳಿಯದಂತೆ ಹೋಗಬೇಕು. ಆದರೆ ಒಂದು ಕಾಲಿಗೆ ಮಾತ್ರ ಏಟು ಬಿದ್ದು, ಉಳಿದ ಶರೀರದಲ್ಲಿ ಎಲ್ಲಿಯೂ ತಗಲದಿರುವುದಕ್ಕೆ ಕಾರಣ ಏನೆಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗಿದೆ ನೋಡಿರಿ. ಲಾರಿ ಬ್ರೇಕ್‌ಫೇಯಿಲ್ ಆಗಿ ಗೋಡೆ ಕಡೆಗೆ ದೂಕಿಕೊಂಡುಬಂದಾಗ, ಶೇಖರ್‌ನೊಂದಿಗೆ ಆತನ ಪಕ್ಕದಲ್ಲೇ ಆತನಿಗೆ ರಕ್ಷಣೆ ಕೊಡಬೇಕೆಂದುಕೊಂಡ ಸೂಕ್ಷ್ಮವು ಸಹ ನಿಂತಿದೆ. ಶೇಖರ್ ಹೆಜ್ಜೆ ಪಕ್ಕಕ್ಕೆ ಹಾಕುವ ಮೊದಲೆ, ಲಾರಿ ಆತನನ್ನು ಗುದ್ದಿಬಿಡುತ್ತದೆಂದು ಸೂಕ್ಷ್ಮವು

ಗ್ರಹಿಸಿತು. ಆತನನ್ನು ಆ ಅಪಘಾತದಿಂದ ರಕ್ಷಿಸಬೇಕೆಂದುಕೊಂಡಿತು. ಅಷ್ಟರಲ್ಲಿಯೇ ಲಾರಿ ಶೇಖರ್‌ಗೆ ಅರ್ಧ ಅಡಿ ದೂರದವರೆಗು ಸಮೀಪಿಸಿತು. ಆಗ ಸೂಕ್ಷ್ಮವು ಶೇಖರ್‌ನನ್ನು ಗಾಳಿಯೊಳಕ್ಕೆ ಮೇಲಕ್ಕೆ ಗೋಡೆಯ ಕೊನೆಯ ಅಂಚಿನವರೆಗೂ ಎತ್ತಿತು. ಅಷ್ಟರೊಳಗೆ ಅರಕ್ಷಣದಲ್ಲಿ ಲಾರಿ ಗೋಡೆಯನ್ನು ಗುದ್ದಿತು. ಆಗ ಶೇಖರ್ ಗೋಡೆಯ ಕೊನೆ ಅಂಚಿನವರೆಗು ಮೇಲಕ್ಕೆ ಹೋಗಿರುವುದರಿಂದ ಗೋಡೆಗೆ, ಲಾರಿಗೆ ಮಧ್ಯದಲ್ಲಿ ಆತನು ನಲುಗಿ ಹೋಗಲಿಲ್ಲ. ಎರಡು ಸೆಕೆಂಡುಗಳು ಆಲಸ್ಯದಿಂದ ಲಾರಿ ಗುದ್ದಿದ್ದರೆ, ಶೇಖರ್‌ನನ್ನು ಸೂಕ್ಷ್ಮವು ಇನ್ನೂ ಮೇಲಕ್ಕೆ ಎತ್ತುತ್ತಿತ್ತು. ಹಾಗೆ ಇನ್ನೂ ಸ್ವಲ್ಪ ಮೇಲಕ್ಕೆ ಹೋಗುವ ಅವಕಾಶವಿದ್ದಿದ್ದರೆ ಗೋಡೆಗೆ ಸ್ವಲ್ಪ ದೂರದಲ್ಲಿ ಬೀಳುತ್ತಿದ್ದನು. ಬಲಗಾಲು ಸಹ ಗಾಯವಾಗುತ್ತಿರಲಿಲ್ಲ. ಅಲ್ಲಿಗೇ ಸೂಕ್ಷ್ಮವು, ಶೇಖರ್‌ನನ್ನು ಬಹಳದವರೆಗು ರಕ್ಷಿಸಿತು. ಲಾರಿ ಪಕ್ಕಕ್ಕೆ ಬರುವುದು ರಮೇಶ್ ಸಹ ಗಮನಿಸಿ, ಶೇಖರ್ ಕಡೆಗೆ ನೋಡುವುದರೊಳಗೆ ಶೇಖರ್ ಕಾಣಿಸದಂತೆ ಲಾರಿ ಅಡ್ಡವಾಗಿ ಹೋಯಿತು. ಅಷ್ಟರಲ್ಲಿಯೇ ಗೋಡೆಯನ್ನು ಗುದ್ದುವುದು ನಡೆಯಿತು. ಇನ್ನು ಶೇಖರ್ ಇಲ್ಲ ಎಂದು ರಮೇಶ್ ಅಂದುಕೊಂಡು ಆತುರದಿಂದ ಆಕಡೆ ಹೋಗಿ ನೋಡಿದನು. ಗೋಡೆಯ ಕೊನೆಯಲ್ಲಿ ಹೊಲದಲ್ಲಿ ಬಿದ್ದಿದ್ದ ಶೇಖರ್ ಹತ್ತಿರಕ್ಕೆ ಹೋಗಿ ಬಲಗಾಲಿನ ಮೇಲೆ ಬಿದ್ದಿದ್ದ ಇಟ್ಟಿಗೆಗಳನ್ನು ತೆಗೆದುಹಾಕಿ, ಶೇಖರ್‌ನನ್ನು ರಸ್ತೆ ಪಕ್ಕಕ್ಕೆ ಇತರರ ಸಹಾಯದಿಂದ ತೆಗೆದುಕೊಂಡು ಬಂದರು. ಆ ಸಮಯದಲ್ಲಿ ಶೇಖರ್ ಲಾರಿಕೆಳಗೆ ಬೀಳದೆ ಹೊಲದಲ್ಲಿ ಹೇಗೆ ಬಿದ್ದಿದ್ದಾನೆಂಬ ಯೋಚನೆಯು ಸಹ ರಮೇಶ್‌ಗೆ ಬರಲಿಲ್ಲ. ತಕ್ಷಣವೆ ಅಂಬುಲೆನ್ಸ್ ವ್ಯಾನ್ ಬಂದರೆ, ಆಸ್ಪತ್ರೆಗೆ ತೆಗೆದುಕೊಂಡು ಹೋಗುವುದು ನಡೆಯಿತು.

ಶೇಖರ್‌ನನ್ನು ಆತನ ಜೊತೆಗಿದ್ದ ಸೂಕ್ಷ್ಮ ರಕ್ಷಿಸಿದೆಯೆಂದು ಹೇಳಿದ್ದೇವಲ್ಲ! ಇನ್ನು ಶೇಖರ್ ಮೇಲೆ ಕೋಪದಿಂದಿದ್ದ ತಾಯಮ್ಮ ಏನು ಮಾಡಿದೆಯೊ ನೋಡೋಣ. ಸ್ಪೀಡ್ ಬ್ರೇಕರ್‌ವರೆಗು ಲಾರಿ ಬಾರದಮುನ್ನ, ತಾಯಮ್ಮ ಬ್ರೇಕ್ ಪೈಪನ್ನು ಮುರಿದು ಹೋಗುವಂತೆ ಮಾಡಿದಳು. ನಂತರ ಕ್ಯಾಬಿನ್‌ನೊಳಗೆ

ಬಂದು ಡ್ರೈವರ್ ಹತ್ತಿರ ಕುಳಿತಳು. ಸ್ಪೀಡ್ ಬ್ರೇಕರ್ ಹತ್ತಿರ ಬ್ರೇಕ್ ಹಾಕಿದರೆ, ಬ್ರೇಕ್ ಆಯಿಲ್ ಸೋರಿಹೋಗಿರುವುದರಿಂದ ಲಾರಿಗೆ ಬ್ರೇಕ್ ಬೀಳಲಿಲ್ಲ. ಲಾರಿಡ್ರೈವರ್ ಬ್ರೇಕ್‌ಫೆಯಿಲ್ ಆಗಿದೆಯೆಂಬ ಗಾಬರಿಯಲ್ಲಿ ಇರುವಾಗ ಆತನಿಗೆ ತಿಳಿಯದಂತೆ ಆತನ ಕೈಗಳು ಎಡಪಕ್ಕಕ್ಕೆ ಸ್ಟೀರಿಂಗ್‌ನ್ನು ಎಳೆದಿವೆ. ತಕ್ಷಣವೆ ಲಾರಿ ದಿಕ್ಕು ಬದಲಾಗಿ, ಶೇಖರ್ ಕಡೆ ಸಾಗಿತು. ಶೇಖರ್ ಮೇಲೆ ಕೋಪದಿಂದ ತಾಯಮ್ಮ, ಶೇಖರ್‌ನನ್ನು ಆತನ ಶರೀರವನ್ನು ಸಹ ಉಳಿಸದಂತೆ ಮಾಡಬೇಕೆಂದುಕೊಂಡಳು. ಆದರೆ ಆ ಸಮಯದಲ್ಲಿ ಶೇಖರ್ ಮುಖದ ಮೇಲೆ ಚಕ್ರಗಳಿರುವುದರಿಂದಲೂ, ಪಕ್ಕದಲ್ಲೇ ಇದ್ದ ಸೂಕ್ಷ್ಮವು ಆತನನ್ನು ಒಂದೇ ಸಾರಿಗೆ ಮೇಲಕ್ಕೆ ಎತ್ತಿರುವುದರಿಂದಲೂ ಶೇಖರ್ ಬದುಕಿ ಉಳಿದಿದ್ದಾನೆ. ಇಲ್ಲಿ ಒಂದು ಸೂಕ್ಷ್ಮ ಸಾಯಿಸಬೇಕೆಂದು ನೋಡಿದರೆ, ಒಂದು ಸೂಕ್ಷ್ಮವು ಬದುಕಿಸಬೇಕೆಂದು ನೋಡಿತು. ಕೊನೆಗೆ ಶೇಖರ್ ಕಡೆ ಇದ್ದ ಸೂಕ್ಷ್ಮವೇ ಆ ಹೋರಾಟದಲ್ಲಿ ಸ್ವಲ್ಪ ಗೆದ್ದಂತಾಗಿದೆ.

ಸ್ವಲ್ಪ ಕಾಲದ ನಂತರ ನನ್ನ ಬಳಿಗೆ ಬಂದ ಸೂಕ್ಷ್ಮದ ಮುಖಾಂತರ ನಡೆದ ವಿಷಯವೆಲ್ಲಾ ನನಗೆ ತಿಳಿಯಿತು. ಆದ್ದರಿಂದ ಈಗ ನಿಮಗೆ ನಾನು ಹೇಳುತ್ತಿದ್ದೇನೆ. ಇಲ್ಲಿ ನಡೆದಿರುವುದೆಲ್ಲಾ ಗಮನಿಸಿದರೆ, ಭೂಮಿಮೇಲೆ ಎಲ್ಲ ಕೆಟ್ಟದ್ದನ್ನು ಮಾಡುವ ದೆವ್ವಗಳೆ ಅಲ್ಲದೆ, ಒಳ್ಳೆಯದನ್ನು ಮಾಡುವವು, ಜ್ಞಾನವನ್ನು ತಿಳಿದುಕೊಳ್ಳುವವು ಎಷ್ಟೋ ಇವೆ. ಇಲ್ಲಿಯವರೆಗು ದೆವ್ವಗಳ ಕುರಿತು ನನಗೆ ತಿಳಿದ ಕೆಲವು ವಿಷಯಗಳನ್ನು ಮಾತ್ರ ತಿಳಿಸಿದ್ದೇನೆ. ನಾನು ದೆವ್ವಗಳಿವೆಯಾ? ಎನ್ನುವ ಪರಿಶೋಧನಾ ನಿಮಿತ್ತವಾಗಿ ಕಳೆದ ಸುಮಾರು ಒಂದೂವರೆ ಅಥವಾ ಎರಡು ವರ್ಷಗಳ ಕಾಲದಲ್ಲಿ ನಾನು ನೋಡಿದ ಹತ್ತರಷ್ಟು ವಿಷಯಗಳನ್ನು ಮಾತ್ರವೆ ಇಲ್ಲಿಯವರೆಗು ತಿಳಿಸಿದ್ದೇನೆ. ಇಲ್ಲಿಯವರೆಗು ತಿಳಿಸಿದ ವಿಷಯಗಳೆಲ್ಲವು ಕೇವಲ ದೆವ್ವಗಳಿಗೆ ಸಂಬಂಧಿಸಿದ ಸಮಾಚಾರಗಳೆ. ನಮಗೆ ಕಾಣಿಸದ ದೆವ್ವಗಳು ಒಂದೇ ಅಲ್ಲ. ಭೂತಗಳು ಸಹ ಇವೆ. ಭೂತಗಳು ಎನ್ನುವ ಮಾತು ದೆವ್ವಗಳಿಗೆ ಅನ್ವಯಿಸುವುದಿಲ್ಲವೆ? ಎಂದು ಯಾರಾದರು ಕೇಳಿದರೆ ದೆವ್ವಗಳು ಬೇರೆ,

ಭೂತಗಳು ಬೇರೆ ಎಂದು ಹೇಳಬಹುದು. ದೆವ್ವಗಳಂತವುಗಳೆ ಭೂತಗಳು, ಭೂತಗಳಂತವುಗಳೆ ದೆವ್ವಗಳು. ಆದರೂ ಅವುಗಳನ್ನು ಬಿಡಿಸಿ ದೆವ್ವಗಳು, ಭೂತಗಳು ಎಂದು ಬೇರೆ ಬೇರೆಯಾಗಿ ಹೇಳಬೇಕಾದ ಅಗತ್ಯವಿದೆ.

'ಭೂತ' ಎಂದರೆ ಜೀವಿ ಎಂದು ಅರ್ಥ. ದೆವ್ವ ಎಂದರೆ ದೇವರು ಅಲ್ಲದವನು ಜೀವಿ ಎಂದು ಅರ್ಥ. ದೆವ್ವ ಎಂದರೂ ಭೂತವೆಂದರೂ ಜೀವಿಯೆಂದೆ ಅರ್ಥ. ಹಾಗಿರುವಾಗ ದೆವ್ವಗಳು ಭೂತಗಳು ಬೇರೆಬೇರೆ ಎನ್ನುವುದೇನು ಎಂದು ಯಾರಾದರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಮನುಷ್ಯರೆಲ್ಲರು ಒಂದೇ ಜಾತಿಯಾದರೂ ಕೆಲವರು ಪಂಡಿತರಾಗಿ, ಕೆಲವರು ಪಾಮರರಾ (ಓದುಬಾರದವರಾ)ಗಿ ಇರಬಹುದು. ಒಂದೇ ಮನುಷ್ಯ ಜಾತಿಯಾದ ಮನುಷ್ಯರನ್ನು, ಅವರಿಗಿರುವ ಪರಿಜ್ಞಾನವನ್ನು ಅನುಸರಿಸಿ, ವಿದ್ಯಾ ಜ್ಞಾನವನ್ನು ಅನುಸರಿಸಿ ಯಾವ ವಿಧವಾಗಿ ಕೆಲವರನ್ನು ಪಂಡಿತರೆಂದು, ಕೆಲವರನ್ನು ಪಾಮರರೆಂದು ವಿಭಜಿಸಿ ಕರೆಯುತ್ತಿದ್ದೇವೊ, ಅದೇ ರೀತಿ ಎಲ್ಲರೂ ಜೀವಿಗಳೆ ಆದರೂ ಅವರು ಮಾಡುವ ಕಾರ್ಯಗಳನ್ನು ಅನುಸರಿಸಿ, ಅವರಿಗಿರುವ ಶಕ್ತಿಯನ್ನು ಅನುಸರಿಸಿ ದೆವ್ವಗಳು, ಭೂತಗಳು ಎಂದು ಎರಡು ವಿಧಗಳಲ್ಲಿ ವಿಭಜಿಸಬೇಕಾಗಿ ಬಂದಿದೆ. ಕೆಲವರು ತಮಗೆ ತಿಳಿಯದಿದ್ದರೂ ಕೆಲವು ಸಂದರ್ಭಗಳಲ್ಲಿ ಮಾತನಾಡುವಾಗ ದೆವ್ವಗಳು ಇಲ್ಲ, ಭೂತಗಳು ಇಲ್ಲ ಎನ್ನುತ್ತಿರುತ್ತಾರೆ. ಇನ್ನೂ ದೆವ್ವಗಳಾಗಲಿ, ಭೂತಗಳಾಗಲಿ ನನ್ನನ್ನು ಏನು ಮಾಡಲಾರವು ಎನ್ನುತ್ತಿರುತ್ತಾರೆ. ಕೆಲವು ಜಾಗಗಳಲ್ಲಿ ನನಗೆ ದೆವ್ವಗಳೆಂದರೂ, ಭೂತಗಳೆಂದರೂ ಭಯುವಿಲ್ಲ, ನಾನು ದೆವ್ವಗಳಿಗೆ ಭೂತಗಳಿಗೆ ಭಯಪಡುವುದಿಲ್ಲವೆಂದು ಹೇಳುತ್ತಿರುತ್ತಾರೆ. ಈ ವಿಧವಾಗಿ ಬಹಳ ಜನ ತಮಗೆ ತಿಳಿಯದಿದ್ದರೂ ದೆವ್ವಗಳು, ಭೂತಗಳು ಎನ್ನುವ ಪದಗಳನ್ನು ಹೇಳುವುದು ಕೇಳುತ್ತಿರುತ್ತೇವೆ. ನಮಗೆ ತಿಳಿಯದಿದ್ದರೂ ಅವುಗಳನ್ನು ಕುರಿತು ದೇವರೆ ಅವು ಬೇರೆಬೇರೆ ಎಂದು ತಿಳಿಯುವಂತೆ ನಮ್ಮಿಂದ ಹಾಗೆ ಮಾತನಾಡಿಸುತ್ತಾನೆ. ಈ ವಿಧವಾಗಿ ದೆವ್ವಗಳು, ಭೂತಗಳು ಎನ್ನುವ ಎರಡು ವಿಧಗಳು ಜಗತ್ತಿನಲ್ಲಿ

ಇವೆಯೆಂದು ತಿಳಿಯುತ್ತಿದೆ. ಇಲ್ಲಿಯವರೆಗು ದೆವ್ವಗಳ ವಿಷಯಗಳನ್ನು ಕೆಲವನ್ನು ಹೇಳಿಕೊಂಡಿದ್ದೇವೆ. ಭೂತಗಳ ವಿಷಯಗಳು ಹೇಳಿಕೊಳ್ಳಬೇಕಾಗಿದೆ.

ಭೂತಗಳನ್ನು ಎರಡು ವಿಧಗಳಾಗಿ ಹೇಳಿಕೊಳ್ಳಬಹುದು. ಒಂದು ಮಹಾಭೂತಗಳು, ಎರಡು ಸ್ವಲ್ಪಭೂತಗಳೆಂದು ಅವುಗಳನ್ನು ಹೇಳಬಹುದು. ಮಹಾಭೂತಗಳನ್ನುವವು ಪ್ರಕೃತಿಯೊಳಗಿನ ಭಾಗಗಳು. ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಪ್ರಕೃತಿಯೊಳಗಿನ ಐದು ಭಾಗಗಳನ್ನು ಐದು ಮಹಾಭೂತಗಳಾಗಿ ಹೇಳಬಹುದು. ಈ ಐದು ಎಲ್ಲ ಜೀವರಾಶಿಗಳಿಗಿಂತ ದೊಡ್ಡವು, ಆದ್ದರಿಂದ ಇವುಗಳನ್ನು ಮಹಾ ಭೂತಗಳೆಂದು ಕರೆಯುತ್ತಿದ್ದೇವೆ. ಸ್ವಲ್ಪ ಭೂತಗಳೆನ್ನುವವು ಸಹ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಹೆಸರಿನಿಂದಲೆ ಇವೆ. ಚೆನ್ನಾಗಿ ಅರ್ಥ ಮಾಡಿಕೊಂಡರೆ, ಮಹಾಭೂತಗಳನ್ನೆ ಸ್ವಲ್ಪ ಭೂತಗಳೆನ್ನುವ ಹೆಸರಿನಿಂದ ಕರೆಯುತ್ತಿದ್ದೇವೆ. ಮಹಾಭೂತಗಳಲ್ಲಿನ ಆಕಾಶಕ್ಕೆ, ಸ್ವಲ್ಪ ಭೂತಗಳಲ್ಲಿನ ಆಕಾಶಕ್ಕೆ ಏನು ವ್ಯತ್ಯಾಸ ಇರದು. ಹಾಗೆಯೇ ಮಹಾಭೂತಗಳೆನ್ನುವ ಗಾಳಿಗೆ, ಸ್ವಲ್ಪ ಭೂತಗಳೆನ್ನುವ ಗಾಳಿಗೆ ಏನು ವ್ಯತ್ಯಾಸವಿಲ್ಲ. ಮಹಾಭೂತ ಯಾವುದೊ ಸ್ವಲ್ಪ ಭೂತವು ಸಹ ಅದೇಯೆಂದು ಹೇಳಬಹುದು. ಸ್ವಲ್ಪ ಭೂತ ಮಹಾಭೂತ ಎರಡು ಒಂದೇ ಆಗಿರುವಾಗ ಸ್ವಲ್ಪ, ಮಹಾ ಅನ್ನುವ ವ್ಯತ್ಯಾಸವನ್ನು ತೋರಿಸುತ್ತಾ ಸ್ವಲ್ಪ ಭೂತಗಳೆಂದು, ಮಹಾಭೂತಗಳೆಂದು ಹೆಸರುಗಳು ಏಕೆ ಇಟ್ಟಿದ್ದಾರೆ? ಭೂತಗಳು ಎರಡು ವಿಧಗಳೆಂದು ಏಕೆ ಹೇಳಿದ್ದಾರೆಂದು ಯಾರಾದರು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ!

ವಿಶ್ವವು ಎರಡು ಭಾಗಗಳಾಗಿ ಇದೆ. ಒಂದು ಪ್ರಪಂಚ, ಎರಡು ಜಗತ್ತು. ಪ್ರಪಂಚ, ಜಗತ್ತು ಅನ್ನುವ ಎರಡನ್ನು ಸೇರಿಸಿ ಹೇಳಿದರೆ 'ವಿಶ್ವ' ಎಂದು ಹೇಳಬಹುದು. ವಿಶ್ವವನ್ನು ಇನ್ನೂ ವಿವರವಾಗಿ ಹೇಳಿಕೊಂಡರೆ, ವಿಶ್ವದೊಳಗಿನ ಮೊದಲ ಭಾಗ ಪ್ರಪಂಚ, ಎರಡನೇ ಭಾಗ ಜಗತ್ತು. 'ಪ್ರ' ಅಂದರೆ ದೊಡ್ಡದು ಅಥವಾ ಮುಖ್ಯವಾದ ಎಂದೂ "ಪಂಚ" ಅಂದರೆ ಐದು

ಎಂದು ಹೇಳಬಹುದು. ದೊಡ್ಡವಾದ ಐದನ್ನು ಪ್ರಪಂಚ ಎನ್ನುತ್ತಿದ್ದೇವೆ. ಆ ಐದು ಯಾವುವು ಎಂದರೆ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎಂದು ತಿಳಿಯುತ್ತಿದೆ. ಈ ಐದು ಸ್ವತಃವಾಗಿ ಪರಮಾತ್ಮ ಸಂಕಲ್ಪ ಬಲದಿಂದ ನಿರ್ಮಿಸಲ್ಪಟ್ಟಿವೆ. ಆದ್ದರಿಂದ ಈ ಐದಕ್ಕು ಪರಿಮಿತಿಯಿಲ್ಲದ ಅಮಿತ ಬಲವಿದೆ. ಈ ಐದು, ಎಲ್ಲ ಜೀವರಾಶಿಗಳಿಗಿಂತ ಬಲವಾದವು, ದೊಡ್ಡವು ಆದ್ದರಿಂದ ಇವುಗಳನ್ನು ಮಹಾಭೂತಗಳು ಎಂದು ಕರೆಯುತ್ತಿದ್ದೇವೆ. ಈ ಐದು (ಪಂಚ) ಸೇರಿ ಕಾಣಿಸುವುದೇ ಪ್ರಪಂಚ. ಶರೀರವಿರುವ ಜೀವರಾಶಿಗಳು, ಪ್ರಪಂಚ ಹುಟ್ಟಿದ ನಂತರ ಹುಟ್ಟಿರುವವು. ಜೀವರಾಶಿಗಳು ಶರೀರಗಳನ್ನು ಧರಿಸಿ ಹುಟ್ಟುತ್ತಿವೆ ಮತ್ತು ಮರಣಿಸುತ್ತಿವೆ. ಹುಟ್ಟುವಿಕೆಯನ್ನು "ಜನನ" ಎಂದು, ಮರಣಿಸುವುದನ್ನು "ಗತಿಸುವುದು" ಎಂದು ಹೇಳಬಹುದು. ಹುಟ್ಟುವುದು, ಸಾಯುವುದು ಹೊಂದಿರುವ ಜೀವ ಸಮುದಾಯಕ್ಕೆ ಜನಿಸುವುದು, ಗತಿಸುವುದು ಇರುವುದರಿಂದ "ಜಗತಿ" ಹೆಸರು ಇಟ್ಟು ಹೇಳುತ್ತಿದ್ದೇವೆ. ಜೀವ ಸಮುದಾಯ ಶರೀರಗಳಿರುವುದನ್ನು ಜಗತಿ ಎಂದು, ಪಂಚಭೂತ ಸಮುದಾಯವನ್ನು ಪ್ರಪಂಚ ಎಂದು ಪ್ರಪಂಚವನ್ನು, ಜಗತಿಯನ್ನು ಎರಡನ್ನು ಸೇರಿಸಿ ವಿಶ್ವ ಎಂದು ಹೇಳಬಹುದು. ಪಂಚಭೂತಗಳನ್ನು ಪ್ರಪಂಚ ಎಂದರೂ, ಪ್ರಪಂಚವನ್ನು ಪಂಚಭೂತಗಳು ಎಂದರೂ ಎರಡು ಒಂದೇ. ಇಲ್ಲಿಯವರೆಗು ಭೂತಗಳಲ್ಲಿ ಒಂದು ವಿಧವಾದ ಮಹಾಭೂತಗಳನ್ನು ಕುರಿತು ತಿಳಿದುಕೊಂಡೆವು. ಇನ್ನು ಸ್ವಲ್ಪ ಭೂತಗಳನ್ನು ಕುರಿತು ತಿಳಿದುಕೊಳ್ಳೋಣ.

ಸ್ವಲ್ಪ, ಮಹಾ ಎನ್ನುವ ಹೆಸರು ಹೊರತು ಭೂತಗಳು ಎಲ್ಲಾ ಒಂದೇಯೆಂದು ಹೇಳಿಕೊಂಡಿದ್ದೇವೆ. ಆಗಿರುವಾಗ ಸ್ವಲ್ಪ ಎಂದು ಹೆಸರು ಏಕೆ ಇಟ್ಟಿದ್ದೇವೆಂದರೆ! ಮಹಾಭೂತಗಳಲ್ಲಿ ಎಲ್ಲಾ ಅಖಂಡವಾಗಿ ಇವೆ. ಆದರೆ ಸಕಲ ಜೀವರಾಶಿಗಳ ಶರೀರಗಳಲ್ಲಿ ಸ್ವಲ್ಪ ಭೂತಗಳು ಖಂಡ ಖಂಡಗಳಾಗಿ ಇವೆ. ಒಂದು ಜೀವಿಯ ಶರೀರದಲ್ಲಿ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಅನೇಕ ಭಾಗಗಳಾಗಿ ವಿಭಜನೆಯಾಗಿ ಇವೆ. ಒಂದು ಶರೀರದಲ್ಲಿ ಪಂಚ

ಭೂತಗಳು ಯಾವ ನಿಷ್ಪತ್ತಿಯಲ್ಲಿವೆಯೊ ವಿವರಿಸಿಕೊಂಡು ನೋಡಿದರೆ, ಆಕಾಶ ಶೇ. 1ರಷ್ಟು, ಗಾಳಿ ಎರಡರಷ್ಟು, ಅಗ್ನಿ ಮೂರರಷ್ಟು, ನೀರು ಅರವತ್ತೊಂಭತ್ತರಷ್ಟು, ಭೂಮಿ ಇಪ್ಪತ್ತೈದರಷ್ಟು ಇವೆ. ಆಕಾಶ 1, ಗಾಳಿ 2, ಅಗ್ನಿ 3, ನೀರು 69, ಭೂಮಿ 25 ಪಾಲು ಶರೀರದಲ್ಲಿ ಇವೆಯೆಂದು ತಿಳಿಯುತ್ತಿದೆ. ಈ ವಿಧವಾಗಿ ಶರೀರದಲ್ಲಿ ಪರಿಮಿತ ಭಾಗಗಳಾಗಿ, ಪರಿಮಿತಿ ಶಕ್ತಿ ಇರುವ ಐದು ಭೂತಗಳನ್ನು ಪಂಚ ಸ್ವಲ್ಪಭೂತಗಳೆಂದು ಹೇಳುತ್ತಿದ್ದೇವೆ. ಜಗತ್ತು ಒಟ್ಟು ಜೀವಿಗಳ ಶರೀರಗಳಲ್ಲಿನ ಪಂಚಭೂತಗಳನ್ನು ಸೇರಿಸಿದರೆ ಸ್ವಲ್ಪ ಮಾತ್ರ ವ್ಯತ್ಯಾಸದಿಂದ ಅಂದರೆ ಹೆಚ್ಚು ಕಡಿಮೆ ಹೊರಗಿನ ಮಹಾಭೂತಗಳೊಂದಿಗೆ ಸಮಾನವಾಗಿ ಇವೆ. ವಿವರವಾಗಿ ಹೇಳಿದರೆ ಮಹಾಭೂತಗಳು ಹೊರಗೆ 50.1%ಆಗಿ ಇದ್ದರೆ, ಶರೀರದಲ್ಲಿನ ಸ್ವಲ್ಪ ಭೂತಗಳು 49.9%ಆಗಿ ಇವೆ. ಆದ್ದರಿಂದ ಹೆಚ್ಚು ಕಡಿಮೆ ಎಂದು ಹೇಳಿಕೊಂಡಿದ್ದೇವೆ. ಇಲ್ಲಿಗೆ ಶರೀರದೊಳಗೆ ಸ್ವಲ್ಪ ಪಂಚಭೂತಗಳು ಇವೆಯೆಂದು ಎಲ್ಲರಿಗು ಅರ್ಥವಾಗಿರುತ್ತದೆ.

ಒಂದು ಶರೀರದೊಳಗಿನ ಜೀವಿಯನ್ನು ಸಹ ಭೂತವೆಂದೇ ಹೇಳಬಹುದು. ಜೀವಿ ಎನ್ನುವ ಭೂತವು ಪಂಚಭೂತಗಳನ್ನು ಆಶ್ರಯಿಸಿಕೊಂಡು ಶರೀರದಲ್ಲಿ ನಿವಾಸಿಸುತ್ತಿದ್ದಾನೆ. ಇದನ್ನನುಸರಿಸಿ ನೋಡಿದರೆ ಒಂದು ಸಜೀವ ಶರೀರದಲ್ಲಿ ಒಟ್ಟು ಆರು ಭೂತಗಳಿವೆಯೆಂದು ಹೇಳಬಹುದು. ಒಂದು ಶರೀರದಲ್ಲಿ ಜೀವಿಸುವ ಜೀವಿಯಾದರೆ, ಉಳಿದ ಐದು ಭೂತಗಳು ಶರೀರವಾಗಿ ನಿರ್ಮಾಣವಾಗಿವೆ. ಶರೀರದಲ್ಲಿ ಜೀವಿಯೊಂದಿಗೆ ಆತ್ಮ ಸಹ ನಿವಾಸ ಮಾಡುತ್ತಿದೆ. ಜೀವಿಯನ್ನು ಅಂಟಿಕೊಂಡು ಇರುವುದು ಆತ್ಮ. ಆತ್ಮ ಇಲ್ಲದೆ ಜೀವಾತ್ಮ ಎಲ್ಲಾದರು, ಯಾವಾಗಲಾದರು ಇರುವುದು ಅಸಂಭವ. ಆತ್ಮ ಜೀವಾತ್ಮನಿಗೆ ಅಧಿಪತಿಯಾಗಿ ಶರೀರದಲ್ಲಿದೆ. ಆತ್ಮ ಒಂದು ಜೀವಾತ್ಮನಿಗೆ ಅಧಿಪತಿ ಅಲ್ಲದೆ ಶರೀರದೊಳಗಿರುವ ಐದು ಸ್ವಲ್ಪ ಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಗು ಸಹ ಅಧಿಪತಿಯಾಗಿ ಇದೆ. ಅಂದರೆ ಶರೀರವೆಲ್ಲದಕ್ಕು ಸಹ ಅಧಿಪತಿಯಾಗಿ ಇದೆಯೆಂದು ಹೇಳಬಹುದು. ಶರೀರ ರೂಪದಲ್ಲಿರುವ ಐದು

ಸ್ವಲ್ಪ ಭೂತಗಳು ಆತ್ಮ ಅಧೀನದಲ್ಲಿದ್ದೂ ಆತ್ಮ ಆದೇಶಿಸಿದಂತೆ ನಡೆದುಕೊಳ್ಳುತ್ತವೆ. ಅಷ್ಟೇ ಅಲ್ಲದೆ ದೊಡ್ಡ ಯೋಗೀಶ್ವರರಾದವರು ತಮ್ಮನ್ನು ಆದೇಶಿಸಿದರೆ, ಅವರು ಆತ್ಮನೊಂದಿಗೆ ಸಮಾನರಾದವರಂತೆ ಗುರುತಿಸಿ ಅವರ ಮಾತನ್ನು ಶಿರಸಾವಹಿಸಿ ಆಚರಿಸುತ್ತವೆ. ಯೋಗೀಶ್ವರರ ಮಾತುಗಳನ್ನು ಶರೀರದೊಳಗೆ ಸ್ವಲ್ಪ ಭೂತಗಳು ಮಾತ್ರವೆ ಕೇಳಿ ಆಚರಿಸುತ್ತವೆ. ಆದರೆ ಹೊರಗಿನ ಮಹಾಭೂತಗಳು ಮಾತ್ರ ಯಾವ ಯೋಗೀಶ್ವರನ ಮಾತನ್ನು ಲೆಕ್ಕಿಸುವುದಿಲ್ಲ. ಶರೀರದ ಹೊರಗಿರುವ ಐದು ಮಹಾಭೂತಗಳು, ಒಂದು ಪರಮಾತ್ಮ ಅಧೀನದಲ್ಲಿ ಮಾತ್ರ ಇರುತ್ತವೆ. ಆದ್ದರಿಂದ ಪರಮಾತ್ಮನ ಮಾತನ್ನಲ್ಲದೆ ಇತರರ ಮಾತುಗಳನ್ನು ಯಾವ ಕಾರಣಕ್ಕು ಕೇಳುವುದಿಲ್ಲ. ಸ್ವಲ್ಪ ಭೂತಗಳು, ಮಹಾಭೂತಗಳು ಎರಡು ಒಂದೇ ಆದರೂ ಸ್ವಲ್ಪ ಭೂತಗಳು ಶರೀರದೊಳಗೆ, ಮಹಾಭೂತಗಳು ಶರೀರದ ಹೊರಗೆ ಇವೆ. ಸ್ವಲ್ಪ ಭೂತಗಳು ಆತ್ಮ ಅಧೀನದಲ್ಲಿ ಇದ್ದರೆ, ಮಹಾಭೂತಗಳು ಪರಮಾತ್ಮ ಅಧೀನದಲ್ಲಿ ಇವೆ. ಸ್ವಲ್ಪ ಭೂತಗಳು ಆತ್ಮ ಮಾತು ಕೇಳುತ್ತವೆ, ಮಹಾಭೂತಗಳು ಆತ್ಮ ಮಾತು ಕೇಳುವುದಿಲ್ಲ. ಸ್ವಲ್ಪ ಭೂತಗಳು ಯೋಗೀಶ್ವರರ ಮಾತುಗಳಿಗೆ ಗೌರವಕೊಡುವವು, ಮಹಾಭೂತಗಳು ಪರಮಾತ್ಮವನ್ನಲ್ಲದೆ ಯಾರನ್ನು ಗೌರವಿಸುವುದಿಲ್ಲ. ಶರೀರದೊಳಗಿರುವ ಜೀವಾತ್ಮನನ್ನು ದೆವ್ವ ಅಂದಂತೆ, ಸ್ವಲ್ಪ ಭೂತಗಳನ್ನು ಹಾಗೆ ದೆವ್ವಗಳೊಂದಿಗೆ ಜಮಕಟ್ಟಬಾರದು. ಸ್ವಲ್ಪ ಭೂತಗಳ ಶಕ್ತಿ ಪರಿಮಿತ, ಮಹಾಭೂತಗಳ ಶಕ್ತಿ ಅಪರಿಮಿತ. ಈ ವಿಧವಾಗಿ ಹೇಳುತ್ತಾ ಹೋದರೆ ಸ್ವಲ್ಪ, ಮಹಾಭೂತಗಳಿಗು ಎಷ್ಟೋ ವ್ಯತ್ಯಾಸಗಳಿವೆ.

ಶರೀರದಲ್ಲಿ ನಿವಾಸಿಸುವುದರಿಂದ ಜೀವಾತ್ಮನನ್ನು ಸಹ ಭೂತ ಎಂದು ಹೇಳಬಹುದು. ಬ್ರಹ್ಮವಿದ್ಯಾ ಶಾಸ್ತ್ರವಾದ ಭಗವದ್ಗೀತೆಯಲ್ಲಿ ಜೀವಾತ್ಮನನ್ನು ಭೂತ ಎಂದು ಉಚ್ಚರಿಸಿದ್ದಾರೆ. ಜೀವಾತ್ಮನನ್ನು ವಿನಹ ಭೂತಗಳನ್ನು ಎರಡು ವಿಧಗಳಾಗಿ ಹೇಳಬಹುದು. ಒಂದು ಮಹಾಭೂತಗಳು, ಎರಡು ಸ್ವಲ್ಪಭೂತಗಳೆಂದು ಹೇಳಬಹುದು. ದೆವ್ವಗಳನ್ನು ಕುರಿತು ಹೇಳಿದ ಹಿಂದಿನ ಪುಟಗಳಲ್ಲಿ ಲಕ್ಷ್ಮಣಮೂರ್ತಿಯನ್ನು ಕುರಿತು ಹೇಳಿದಾಗ ರೋಗದ ರೂಪದಲ್ಲಿದ್ದ

ಗಾಳಿ, ನೀರು ಶರೀರದೊಳಗಿಂದ ಮಾತನಾಡಿರುವಂತೆ ಹೇಳಿದ್ದೇವೆ. ಆಗ ಮಾತನಾಡಿರುವುದು ಆ ಶರೀರದೊಳಗಿನ ಸ್ವಲ್ಪ ಭೂತಗಳೆಂದು ನೆನಪಲ್ಲಿಟ್ಟು ಕೊಳ್ಳಬೇಕು. ಯೋಗಿಗಳ ಮಾತುಗಳಿಗೆ ಗೌರವಕೊಡುವವು ಅನ್ನುವಂತೆ, ಆ ದಿನ ಸ್ವಲ್ಪಭೂತಗಳಾದ ಗಾಳಿ, ನೀರು ನಮ್ಮ ಮಾತು ಕೇಳಿರುವುದು ನಡೆಯಿತು. ಸ್ವಲ್ಪ ಭೂತಗಳಿಗೆ ಸಂಬಂಧಿಸಿದ ಮತ್ತೊಂದು ಯಥಾರ್ಥ ಸಂಘಟನೆಯನ್ನು ವಿವರಿಸಿ, ನಂತರ ಮಹಾಭೂತಗಳನ್ನು ಕುರಿತು ವಿವರಿಸುತ್ತೇವೆ. ಮನುಷ್ಯರು ಮಾಡಿಕೊಂಡ ಪಾಪಗಳನ್ನು ಜಾರಿಗೆ ಮಾಡುವುದಕ್ಕೆ ಪ್ರಕೃತಿ ಮಹಾಭೂತಗಳಾಗಿ, ಸ್ವಲ್ಪಭೂತಗಳಾಗಿ ಏರ್ಪಟ್ಟಿದೆ. ಸಾಮೂಹಿಕವಾಗಿ ಮನುಷ್ಯರನ್ನಾಗಲಿ, ಇತರ ಜೀವರಾಶಿಗಳನ್ನಾಗಲಿ ಬಾಧಿಸುವುದಕ್ಕಾಗಲಿ, ಸಾಯಿಸುವುದಕ್ಕಾಗಲಿ ಮಹಾಭೂತಗಳು ವಿಜೃಂಭಿಸುತ್ತಿವೆ. ಒಬ್ಬ ಮನುಷ್ಯನ ಪಾಪವನ್ನು ಅನುಭವಿ ಸುವಂತೆ ಮಾಡುವುದಕ್ಕಾಗಲಿ, ಆತನನ್ನು ಶರೀರದಲ್ಲಿಯೇ ಕ್ಷೀಣಿಸುವಂತಾಗಲಿ, ಸಾಯಿಸುವುದಕ್ಕಾಗಲಿ ಸ್ವಲ್ಪಭೂತಗಳು ಶರೀರದಲ್ಲಿಯೇ ವಿಜೃಂಭಿಸುತ್ತವೆ. ಸಾಮೂಹಿಕವಾಗಿ ಮನುಷ್ಯರ ಪಾಪಗಳನ್ನು ಜಾರಿಗೊಳಿಸುವುದಕ್ಕೆ ಮಹಾಭೂತಗಳಾದ ಭೂಮಿ ವಿಜೃಂಭಿಸಿ ಭೂಕಂಪಗಳನ್ನು ಸೃಷ್ಟಿಸಿ ಎಷ್ಟೋ ಜನರನ್ನು ಸಾಯಿಸುವುದು, ಗಾಯಪಡಿಸುವುದು, ಅಂಗಹೀನರನ್ನಾಗಿ ಮಾಡುವುದು ನಡೆಯುತ್ತಿದೆ. ನೀರು ವಿಜೃಂಭಿಸಿದರೆ ತುಫಾನುಗಳು ಸುನಾಮಿಗಳನ್ನು ತಂದಿಟ್ಟು ಭಯಂಕರವಾಗಿ ಬಾಧೆ ಇಡುವುದು, ಸಾಯಿಸುವುದು ಮಾಡುತ್ತಿದೆ. ಅಗ್ನಿ ಅಂದುಕೊಂಡರೆ ಅಗ್ನಿ ಪರ್ವತಗಳನ್ನು ಸಿಡಿದುಹೋಗುವಂತೆ ಮಾಡಿ, ಸೂರ್ಯರಶ್ಮಿಯಲ್ಲಿ ಶಾಖವನ್ನು ಹೆಚ್ಚಿಸಿ ಮನುಷ್ಯರು ಸಹಿಸಿಕೊಳ್ಳದಂತೆ ಮಾಡಿ, ಮನುಷ್ಯರನ್ನು ಸಾಮೂಹಿಕವಾಗಿ ಸಾಯಿಸುವುದು, ಬಾಧೆ ಇಡುವುದು ಮಾಡುತ್ತಿದೆ. ಗಾಳಿ ಅಂದುಕೊಂಡರೆ ತನ್ನ ಬಲವಾದ ಗಾಳಿಯನ್ನು ವೇಗವಾಗಿ ಬೀಸುವಂತೆ ಮಾಡಿ, ಏನನ್ನಾದರು ನಾಶಮಾಡಬಲ್ಲದು, ಗಾಳಿಯಲ್ಲಿ ಎಗರಿ ಹೋಗುವಂತೆ ಮಾಡುತ್ತದೆ. ಆಕಾಶ ಕೋಪಿಸಿಕೊಂಡರೆ ವಾತಾವರಣದಲ್ಲಿ ಎಷ್ಟೋ ಬದಲಾವಣೆಗಳು ಬರಬಹುದು, ವಾತಾವರಣ ಸ್ಥಂಭಿಸಿಹೋಗಬಹುದು.

ಮೇಲಿರುವ ಸಾಟಿಲೈಟ್ಸ್, ಖಗೋಳದಲ್ಲಿರುವ ಗೋಳಗಳೆಲ್ಲವು ನಿಂತು ಹೋಗುತ್ತವೆ. ಒಂದೊಂದು ಮಹಾಭೂತವು, ತನ್ನ ಅಪಾರವಾದ ಶಕ್ತಿಯಿಂದ, ಒಂದು ಸಮಯದಲ್ಲಿಯೆ ನೂರು, ಸಾವಿರ, ಲಕ್ಷಗಳು, ಕೋಟಿಜನರನ್ನು ಸಾಯಿಸಬಲ್ಲದು.

ಈಗ ಪ್ರಸ್ತುತವಾಗಿ ಸ್ವಲ್ಪಭೂತಗಳ ವಿಷಯಕ್ಕೆ ಬರೋಣ. ಒಬ್ಬ ಮನುಷ್ಯನಲ್ಲಿನ ಪಾಪವನ್ನು ಅವನು ಮಾತ್ರ ಅನುಭವಿಸುವಂತೆ ಮಾಡುವವು ಸ್ವಲ್ಪಭೂತಗಳು. ಮನುಷ್ಯನಲ್ಲಿ ಬರುವ ರೋಗಗಳು, ರುಜಿನಗಳು ಮೊದಲಾದವು ಗಳೆಲ್ಲವು ಸ್ವಲ್ಪಭೂತಗಳಿಂದ ಬರುವವೆಂದೆ ಹೇಳಬಹುದು. ಸ್ವಲ್ಪ ಭೂತಗಳ ಅವಗಾಹನೆಗಾಗಿ, ಅವು ಯೋಗಿಗಳ ಮಾತಿಗೆ ಹೇಗೆ ಗೌರವವನ್ನು ಕೊಡುತ್ತಿವೆಯೊ ತಿಳಿಯುವುದಕ್ಕಾಗಿ, ಒಂದು ಯಥಾರ್ಥ ವಿಷಯವನ್ನು ಹೇಳಿಕೊಳ್ಳೋಣ. ನನ್ನ ಬಳಿಗೆ ಬಂದು, ದೇವರ ಜ್ಞಾನವನ್ನು ತಿಳಿದುಕೊಳ್ಳುವವ ರಲ್ಲಿ ಒಂದು ಮುಸ್ಲಿಮ್ ಕುಟುಂಬವು ಸಹ ಇದೆ. ನಾನು ತಿಳಿಸುವ ಮತಗಳಿಗೆ ಅತೀತವಾದ ಜ್ಞಾನವನ್ನು ತಿಳಿದುಕೊಂಡು, ಜ್ಞಾನದ ಮೇಲೆ ಕುಟುಂಬದಲ್ಲಿರುವವರೆಲ್ಲ ಆಸಕ್ತಿಯಿಂದಿದ್ದಾರೆ. ಗಂಡ ಡ್ಯೂಟಿಯಸಲುವಾಗಿ ಬೆಂಗಳೂರಿನಲ್ಲಿ ಇದ್ದಾನೆ. ಹೆಂಡತಿ ರಂಜಾನ್‌ಭಿ ನಲ್ಗೊಂಡ ಜಿಲ್ಲೆ ಮಿರ್ಯಾಲ ಗೂಡದಲ್ಲಿ ಇರುತ್ತಿದ್ದಳು. ಸೈದಾ ಹೆಂಡತಿ ರಂಜಾನ್‌ಭಿಗೆ ಇದ್ದಕ್ಕಿದ್ದಂತೆ ರೋಗ ಬಂದಿದೆ. ಆಕೆ ಪ್ರವೇಟ್ ಆಸ್ಪತ್ರೆಯಲ್ಲಿ ಸೇರಿ ಚಿಕಿತ್ಸೆ ಮಾಡಿಸಿಕೊಂಡಿದ್ದಾಳೆ. ಸ್ವಲ್ಪವೂ ಗುಣವಾಗದೆ ಆ ರೋಗ ಇನ್ನೂ ಸ್ವಲ್ಪ ತೀವ್ರವಾಯಿತು. ಇಲ್ಲಿ ಮಿರ್ಯಾಲಗೂಡದಲ್ಲಿ ರಂಜಾನ್‌ಭಿ ತನ್ನ ಸ್ಥಿತಿ ಅಪಾಯಸ್ಥಿತಿಗೆ ಬಂದಿದೆಯೆಂದು ಗಂಡನಿಗೆ ಹೇಳಿದಾಗ, ಗಂಡ ಸೈದಾ ಬೆಂಗಳೂರಿನಿಂದ ಗಾಬರಿಯಿಂದ ನನ್ನ ಹತ್ತಿರದಲ್ಲಿರುವವರಿಗೆ ಫೋನ್ ಮಾಡಿ ತನ್ನ ಹೆಂಡತಿ ಪರಿಸ್ಥಿತಿ ಚೆನ್ನಾಗಿಲ್ಲ, ನಾನು ದೂರಲ್ಲಿದ್ದೇನೆ ಸ್ವಾಮಿಯವರಿಗೆ ನನ್ನ ಹೆಂಡತಿ ಸ್ಥಿತಿ ಚೆನ್ನಾಗಿಲ್ಲವೆಂದು ಹೇಳಿರೆಂದು ಹೇಳಿದನು. ಆತನು ಸಾಯಂಕಾಲ ನಾಲ್ಕುಗಂಟೆಗಳಿಗೆ ಶ್ರೀನಿವಾಸ ಎಂಬ ವ್ಯಕ್ತಿಗೆ ಹೇಳಿದಾಗ, ಆತನು ಆರು ಗಂಟೆಗಳಿಗೆ ಸೈದಾ ಹೆಂಡತಿಯ ವಿಷಯ ಹೇಳಿದನು. ಆಗ ನಾನು ಹೈದರಾಬಾದಿನಲ್ಲಿ ಇದ್ದೇನೆ. ಆ ವಿಷಯ

ನನಗೆ ತಿಳಿದ ನಂತರ ಸ್ವಲ್ಪ ಯೋಚಿಸಿದೆನು. ಸೈದಾ ಕುಟುಂಬ ಜ್ಞಾನ ತಿಳಿದುಕೊಳ್ಳುತ್ತಿದೆ ಮತ್ತು ಅವರು ಬಡವರು ರೋಗಕ್ಕೆ ಎಷ್ಟು ಹಣವಾದರೂ ಖರ್ಚು ಇಡುವ ಸಾಮರ್ಥ್ಯವಿಲ್ಲ, ಮೇಲಾಗಿ ರೋಗ ತೀವ್ರಮಟ್ಟದಲ್ಲಿ ಇದೆಯೆನ್ನುವುದು, ಇವೆಲ್ಲವನ್ನು ನೋಡಿ ಅವರಿಗೆ ಸ್ವಲ್ಪ ಒಳ್ಳೆಯದನ್ನು ಮಾಡಬೇಕೆಂದುಕೊಂಡು, ನನಗೆ ವಿಷಯವನ್ನು ಹೇಳಿದ ಶ್ರೀನಿವಾಸನಿಗೆ "ನಾನು ಮಿರ್ಯಾಲಗೂಡಗೆ ಈಗಲೇ ಹೋಗಿ ರಂಜಾನ್‌ಭಿಯನ್ನು ನೋಡಿಬರುತ್ತೇನೆ" ಎಂದು ಹೇಳಿ ಆರೂವರೆಗಂಟೆಗೆ ಹೊರಟೆನು. ಶ್ರೀನಿವಾಸ ರಂಜಾನ್‌ಭಿಗೆ ನಾನು ಹೊರಟ ವಿಷಯವನ್ನು ಹೇಳಿದನು. ಶ್ರೀನಿವಾಸನಿಂದ ನಾನು ಬರುತ್ತಿದ್ದೇನೆಂಬ ವಿಷಯವನ್ನು ರಂಜಾನ್‌ಭಿಗೆ ತಿಳಿದ ತಕ್ಷಣವೆ ಒಂದು ನಿಮಿಷದೊಳಗೆ ಆಕೆಯ ಶರೀರದೊಳಗಿನ ರೋಗ ಸ್ವಲ್ಪವಾದರು ಇಲ್ಲದಂತೆ ಹೋಗಿದೆ. ಅಲ್ಲಿಯವರೆಗು ಬೆಡ್ ಮೇಲೆ ಏಳದಂತಿದ್ದ ಆಕೆ ತಕ್ಷಣವೆ ಎದ್ದು ಕುಳಿತುಕೊಂಡು ಕಾಲುಗಳು, ಮುಖ ಶುಭ್ರಮಾಡಿಕೊಂಡು ಫ್ರೆಷ್ ಆಗಿ ತಯಾರಾಗಿ, ಪಕ್ಕದ ಬೆಡ್‌ಗಳಲ್ಲಿದ್ದವರಿಗೆಲ್ಲರಿಗು ನಮ್ಮ ಗುರುಗಳು ಬರುತ್ತಿದ್ದಾರೆಂದು ಹೇಳಿದಳು. ಅಲ್ಲಿಯವರೆಗು ಅನಾರೋಗ್ಯದಿಂದ ಇದ್ದ ಆಕೆ ಒಂದೇ ಬಾರಿಗೆ ಎದ್ದು ಆರೋಗ್ಯದಿಂದ ತಿರುಗಾಡುವುದನ್ನು ನೋಡಿ ಅಲ್ಲಿದ್ದವರಿಗೆಲ್ಲ ಆಶ್ಚರ್ಯವಾಗಿದೆ.

ನಾನು, ನನ್ನ ಹಿಂದೆ ಇನ್ನೂ ಮೂವರು ಮನುಷ್ಯರು ಹೊರಟು ರಾತ್ರಿ ಒಂಬತ್ತು ಗಂಟೆಗೆ ಮಿರ್ಯಾಲಗೂಡ ಸೇರಿಕೊಂಡೆವು. ನಾವು ಆಸ್ಪತ್ರೆಗೆ ಹೋಗಿ ರಂಜಾನ್‌ಭಿಯನ್ನು ನೋಡಿದರೆ ಆಕೆಗೆ ಯಾವ ರೋಗವಿಲ್ಲದಂತೆ ಕಾಣಿಸಿದಳು. ಆಕೆಗೆ ರೋಗ ಚೆನ್ನಾಗಾಗಿರುವುದು ನಮಗೆ ತಿಳಿಯದು. ಆದ್ದರಿಂದ "ನಿನ್ನ ರೋಗ ಏನಾಗಿದೆ" ಎಂದು ಕೇಳಿದೆವು. ಅದಕ್ಕೆ ಆಕೆ "ನೀವು ಇಲ್ಲಿಗೆ ಹೊರಟಿದ್ದೀರೆಂದು ಶ್ರೀನಿವಾಸ ಅಣ್ಣ ಹೇಳಿದ ತಕ್ಷಣವೆ, ನನ್ನಲ್ಲಿ ಅಲ್ಲಿಯವರೆಗು ಇದ್ದ ರೋಗ ಇಲ್ಲದಂತೆ ಹೋಯಿತು. ಒಂದೇಸಾರಿಗೆ ಗುಣವಾಗಿ ಹೋಗಿದೆ." ಎಂದು ಹೇಳಿದಳು. ಆಕೆಯ ಮಾತುಗಳನ್ನು ಕೇಳಿ ನಮಗೆ ಆಶ್ಚರ್ಯವಾಯಿತು.

ಪಕ್ಕದ ಮಂಚಗಳ ಮೇಲಿರುವ ಪೇಷಂಟ್‌ಗಳು ಸಹ "ಆಕೆ ಒಂದೇಬಾರಿಗೆ ಎದ್ದು ಕುಳಿತುಕೊಂಡು ರೋಗದ ಬಾಧೆ ಇಲ್ಲದಂತೆ ಹೋಗಿದೆಯೆಂದು, ನೀವು ಬರುತ್ತಿದ್ದೀರೆಂದು ಸಹ ಹೇಳಿದಳು." ಎಂದು ಅವರು ಹೇಳಿದರು. ನಂತರ ನಾವು ಆಕೆಯನ್ನು ಪರಾಮರ್ಶಿಸಿ ಮತ್ತೆ ಹೈದರಾಬಾದ್‌ಗೆ ಹೊರಟು ಬಂದೆವು. ಆಕೆಗೆ ರೋಗ ಏಕೆ ಇದ್ದಕ್ಕಿದ್ದಂತೆ ಚೆನ್ನಾಗಾಗಿದೆ, ಎಂದು ಯೋಚಿಸಿದೆವು. ಆಗ ನಮ್ಮ ಯೋಚನೆಗೆ ಬಂದ ವಿವರ ಏನೆಂದರೆ! ಆಕೆಗೆ ಶ್ವಾಸ ಸಂಬಂಧವಾದ ರೋಗ ಮತ್ತು ಇತರೆ ರೋಗ ಎರಡೂ ಗಾಳಿಯಿಂದ ಏರ್ಪಟ್ಟ ರೋಗಗಳು. ಗಾಳಿ ಆಕೆಯ ಶರೀರದಲ್ಲಿ ಸ್ವಲ್ಪಭೂತಗಳಲ್ಲಿ ಒಂದು. ಆ ಸ್ವಲ್ಪಭೂತವು ನಾನು ಬರುತ್ತಿದ್ದೇನೆಂದು ಕೇಳುತ್ತಿದ್ದ ಹಾಗೆ ನನಗೆ ಗೌರವ ಕೊಡುವುದಾಗಿ ತಕ್ಷಣವೆ ತನ್ನಿಂದ ಉಂಟಾದ ರೋಗವನ್ನು ಉಪಸಂಹರಿಸಿಕೊಂಡಿದೆ. ಅವರು ಬಡವರು ಆದ್ದರಿಂದ ಅವರಿಗೆ ರೋಗ ಗುಣಪಡಿಸಬೇಕೆನ್ನುವ ಉದ್ದೇಶದಿಂದ ನಾನು ಹೊರಟಾಗಲೆ, ಆ ಉದ್ದೇಶವನ್ನು ಗ್ರಹಿಸಿದ ಗಾಳಿ ದೈವಜ್ಞಾನಕ್ಕೆ ಯೋಗಕ್ಕೆ ಮರ್ಯಾದೆ ಕೊಡುವುದಾಗಿ, ನಾನು ಹೊರಟಿದ ಐದು ನಿಮಿಷಗಳಿಗೆ ಆಕೆಗೆ ರೋಗ ಇಲ್ಲದಂತೆ ಹೋಗಿರುವುದು ನಡೆದಿದೆ. ಈ ವಿಧವಾಗಿ ಸ್ವಲ್ಪ ಭೂತಗಳು ಶರೀರದಲ್ಲಿ ಪಾಪವನ್ನು ಪಾಲಿಸುವಂತವುಗಳಾಗಿದ್ದೂ ಅವಶ್ಯವಾದಾಗ ಯೋಗಿಗಳ ಮಾತುಗಳನ್ನು ಗೌರವಿಸಿದಂತೆ ಎಷ್ಟೋ ಕಡೆ ಚರಿತ್ರೆಯಲ್ಲು ಸಹ ಇದೆ. ನಡೆದ ಚರಿತ್ರೆಯನ್ನು ತಿರುವಿಹಾಕಿ ನೋಡಿದರೆ ಎಷ್ಟೋ ಸಂದರ್ಭಗಳಲ್ಲಿ ಯೋಗಿಗಳಾದವರು ಹೇಳಿದ ಮಾತಿಗೆ, ತಾಕಿದ ಸ್ಪರ್ಶಕ್ಕೆ, ನೋಡಿದ ನೋಟಕ್ಕೆ ರೋಗಗಳು ಹೋಗಿರುವಂತೆ ತಿಳಿಯುತ್ತಿದೆ. ಸ್ವಲ್ಪ ಭೂತಗಳು ಜೀವಾತ್ಮನ ಪಾಪವನ್ನೇ ಅಲ್ಲದೆ, ಪುಣ್ಯವನ್ನು ಸಹ ಶರೀರದಲ್ಲಿ ಪಾಲಿಸುತ್ತವೆ. ಆದ್ದರಿಂದ ಪುಣ್ಯ ಮಾಡಿಕೊಂಡ ಶರೀರದಲ್ಲಿ ಕೆಲವರಿಗೆ ಎಂಬತ್ತು ವರ್ಷಗಳ ವಯಸ್ಸಿನಲ್ಲಿಯು ಸಹ "ಪ್ಯಾಂಕ್ರಿಯಾಸ್" ಗ್ರಂಥಿ ಚೆನ್ನಾಗಿ ಕೆಲಸಮಾಡುತ್ತಾ ಶುಗರ್ ಕಾಯಿಲೆ ಆತನಿಗೆ ಬಾರದಂತೆ ಮಾಡುತ್ತದೆ. ಹಾಗೆಯೇ ಪಾಪ ಮಾಡಿಕೊಂಡವರಿಗೆ ಮೂವತ್ತು ವರ್ಷಗಳ

ವಯಸ್ಸಿನಲ್ಲಿ ಗ್ರಂಥಿ ಕೆಲಸ ಮಾಡದಂತೆ ಹೋಗಿ ಶುಗರ್ ಕಾಯಿಲೆ ಬರುತ್ತದೆ. ಶರೀರದಲ್ಲಿ ಭಾಗಗಳೆಲ್ಲ ಚೆನ್ನಾಗಿ ಕೆಲಸ ಮಾಡುವುದಕ್ಕಾಗಲಿ, ಮಾಡದೆ ಇರುವುದಕ್ಕಾಗಲಿ ಸ್ವಲ್ಪಭೂತಗಳೇ ಕಾರಣ. ಸ್ವಲ್ಪಭೂತಗಳು ಕೆಲಸ ಮಾಡುವಂತವುಗಳಾಗಿದ್ದು ಅವುಗಳಿಗೆ ಯೋಚನೆ ಕೆಲಸ ಮಾಡುವಂತೆ ಹೇಳುವವನು ಶರೀರದೊಳಗಿನ ಆತ್ಮ. ಶರೀರದೊಳಗಿನ ಆತ್ಮ ಶರೀರದೊಳಗಿನ ಸ್ವಲ್ಪಭೂತಗಳಿಗೆ ಅಧಿಪತಿಯಾಗಿದ್ದರು, ತನ್ನ ಇಷ್ಟಾನುಸಾರ ಯೋಚನೆಗಳು ಜಾರಿ ಮಾಡುವುದಿಲ್ಲ. ಆ ಶರೀರದಲ್ಲಿ ನಿವಾಸಿಸುತ್ತಿರುವ ಜೀವಾತ್ಮನು ಗತಜನ್ಮದಲ್ಲಿ ಮಾಡಿಕೊಂಡ ಪಾಪವನ್ನು ಅನುಸರಿಸಿ, ಹೇಗೆ ನಡೆದುಕೊಳ್ಳಬೇಕೆಂಬುದನ್ನು ಆತ್ಮ ಆಜ್ಞಾಪಿಸಿದರೆ ಅದಕ್ಕೆ ಅನುಗುಣವಾಗಿ ಸ್ವಲ್ಪ ಭೂತಗಳು ನಡೆದುಕೊಳ್ಳುತ್ತವೆ. ಒಂದು ಶರೀರದೊಳಗಿನ ಸ್ವಲ್ಪ ಭೂತಗಳಿಗೆ ಶರೀರವೆಲ್ಲಾ ಇರುವ ಆತ್ಮ ಅಧಿಪತಿಯಾದರೆ, ಆತ್ಮಕ್ಕೆ ವಿಶ್ವವೆಲ್ಲಾ ಇರುವ ಪರಮಾತ್ಮ ಅಧಿಪತಿಯಾಗಿದ್ದಾನೆಂದು ತಿಳಿಯಬೇಕು. ಈ ವಿಧವಾಗಿ ಸ್ವಲ್ಪಭೂತಗಳು ಆತ್ಮವನ್ನು ಅನುಸರಿಸಿ, ಆತ್ಮ ಕರ್ಮವನ್ನು ಅನುಸರಿಸಿ ಶರೀರದಲ್ಲಿ ಕೆಲಸ ಮಾಡುತ್ತವೆ. ವಿಶ್ವವೆಲ್ಲಾ ತುಂಬಿರುವ ಪರಮಾತ್ಮನ ಅಧೀನದಲ್ಲಿ ಮಹಾಭೂತಗಳು, ಶರೀರವೆಲ್ಲಾ ವ್ಯಾಪಿಸಿರುವ ಆತ್ಮ ಅಧೀನದೊಳಗಿನ ಸ್ವಲ್ಪಭೂತಗಳು, ದೈವನಿರ್ಮಿತವಾದ ಕರ್ಮ ಎನ್ನುವ ಕಾನೂನನ್ನು ಜಾರಿಗೆ ಮಾಡುತ್ತಿವೆ.

ದೇಶವಿದ್ದರೆ ಅದಕ್ಕೆ ಒಬ್ಬ ಪ್ರಭು, ಪ್ರಭುತ್ವ ಇರುತ್ತದೆ. ಪ್ರಭುತ್ವಕ್ಕೆ ಒಂದು ಕಾನೂನು ಇರುತ್ತದೆ, ಕಾನೂನನ್ನು ಜಾರಿಗೆ ಮಾಡುವವರಿರುತ್ತಾರೆ. ಅದನ್ನೇ "ಲಾ ಅಂಡ್ ಆರ್ಡರ್" ಎಂದು ಸಹ ಅನ್ನುತ್ತಿದ್ದಾರೆ. ಕಾನೂನು ಯಾವುದಾದರೂ ಅದು ದೇಶಕ್ಕೆ ಅಧಿಪತಿ ಯಾದ ಪ್ರಭುವಿನಕೈಯಲ್ಲಿ ಇರುತ್ತದೆ. ಆತನು ಕೆಲಸ ಮಾಡುವವನಲ್ಲ, ಆತನ ಕೆಳಗೆ ಪರಿಪಾಲನೆ ಕೆಲವು ಶಾಖೆಗಳ ರೂಪದಲ್ಲಿ ಇರುತ್ತದೆ. ಎಷ್ಟು ತಪ್ಪು ಮಾಡಿದವನಿಗಾದರು ಕೊನೆಗೆ ಕಾನೂನಿನ ಪ್ರಕಾರ ಗಲ್ಲು ಶಿಕ್ಷೆಗೆ ಗುರಿಯಾದವನನ್ನಾದರು ಕ್ಷಮಿಸಿ ಬಿಡುವ ಅಧಿಕಾರ ಪ್ರಭುವಿಗೆ (ರಾಷ್ಟ್ರಪತಿಗೆ) ಇರುತ್ತದೆ. ಹಾಗೆ ದೇಹ ಎನ್ನುವ ದೇಶಕ್ಕೆ ಅಧಿಪತಿ

ಪರಮಾತ್ಮ, ಆತನ ಅಧೀನದಲ್ಲಿಯೇ ಶರೀರ ಪರಿಪಾಲನೆಯೆಲ್ಲಾ ನಡೆಯುತ್ತಿರುತ್ತದೆ. ಕರ್ಮ ಎನ್ನುವ ಕಾನೂನಿನ ಪ್ರಕಾರ ಆತ್ಮ ಎನ್ನುವ ಜಡ್ಜಿ ನಿರ್ಣಯಿಸಿದ ಶಿಕ್ಷೆಗಳನ್ನು ಸ್ವಲ್ಪಭೂತಗಳೆನ್ನುವ ಭಟರು ಜಾರಿಗೆ ಮಾಡುತ್ತಾರೆ. ಕಾನೂನಿನ ಪ್ರಕಾರ ಅಪರಾದ ಮಾಡಿ ಉರಿಶಿಕ್ಷೆ ಬಿದ್ದವನಿಗಾದರು ತನ್ನ ಇಷ್ಟ ಪ್ರಕಾರ ಶಿಕ್ಷೆಯನ್ನು ರದ್ದು ಮಾಡಿ ಬಿಡುಗಡೆ ಮಾಡಬಹುದಾದ ಅಧಿಕಾರ ಪರಿಪಾಲನಾಧಿಪತಿಯಾದ ಪ್ರಭುವಿಗೆ ಇದ್ದಂತೆ, ಎಷ್ಟು ಪಾಪಾತ್ಮನಾದರು ಯಾವ ಬಾಧೆಯನ್ನು ಅನುಭವಿಸದಂತೆ, ಯಾವ ಶಿಕ್ಷೆ ಜಾರಿಯಾಗದಂತೆ, ತನಗೆ ಇಷ್ಟವಾದರೆ ಶಿಕ್ಷೆಯನ್ನು ರದ್ದು ಮಾಡಿ ಬಿಡುಗಡೆ ಮಾಡುವವನು (ಮುಕ್ತಿಗೆ ಕಳುಹಿಸುವವನು) ದೇವರು ಎಂದು ತಿಳಿಯಬೇಕು. ಎಷ್ಟು ಪಾಪಾತ್ಮನಾದರು ದೈವವನ್ನು ಗುರುತಿಸಿ, ಆರಾಧಿಸುವುದರಿಂದ ಒಂದೇ ಜನ್ಮದಲ್ಲಿ ಮುಕ್ತಿ ಹೊಂದಬಹುದು. ಇದೇ ಮಾತನ್ನು ಭಗವದ್ಗೀತೆ ರಾಜವಿದ್ಯಾ ರಾಜಗುಹ್ಯಾ ಯೋಗದಲ್ಲಿ, ಶ್ಲೋ॥ 30,31 “ಅಪಿಚೇತ್ಸು ದುರಾಚಾರೋ ಭಜತೇ ಮಾ ಮನನ್ಯಭಾಕ್, ಸಾಧುರೇವಸ ಮನ್ತವ್ಯ ಸ್ಸಮ್ಯಗ್ವ್ಯವಸಿತೋಹಿಸಃ, ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾನ್ತಿಂ ನಿಗಚ್ಛತಿ.” ಎಷ್ಟು ದುರ್ಮಾರ್ಗನಾದರು ಅವನು ನನ್ನನ್ನು ಆರಾಧಿಸುವುದರಿಂದ ಮತ್ತು ನಾನು ದೈವವೆಂದು ನಿಶ್ಚಯ ಮಾಡಿಕೊಂಡಿರುವುದರಿಂದ ಅವನನ್ನು ಸಾಧುವೆಂದು (ಒಳ್ಳೆಯವನೆಂದು) ನಾನು ಲೆಕ್ಕಿಸುತ್ತೇನೆ. ಅಂತವನು ಧರ್ಮಾತ್ಮನು ಆದ್ದರಿಂದ ಅವನಿಗೆ ಬೇಗ, ಶಾಶ್ವತಶಾಂತಿಯಾದ ಮೋಕ್ಷ ಲಭಿಸುತ್ತದೆ.” ಎಂದು ಇದೆ. ವೇಮನಯೋಗಿ ಬರೆದ ಒಂದು ಪದ್ಯದಲ್ಲಿ **“ಪತಿ ಮೆಚ್ಚಿದರೆ ಸತಿ ಮೆಚ್ಚುವಳು”** ಎಂಬ ಪದ್ಯದಲ್ಲಿಯು ಸಹ ದೇವರು ಮೆಚ್ಚಿಕೊಂಡರೆ ಅವನಿಗೆ ಕರ್ಮದ ಕಾನೂನು ಅನ್ವಯಿಸದಂತೆ ಮುಕ್ತಿ ಹೊಂದುವನೆಂದು ಹೇಳಿದ್ದಾನೆ. ಈ ವಿಧವಾಗಿ ಪರಿಶೀಲಿಸಿ ನೋಡಿದರೆ ರಾಷ್ಟ್ರಪತಿ ಗಲ್ಲು ಶಿಕ್ಷೆಯನ್ನು ರದ್ದು ಮಾಡಿದಂತೆ, ದೈವವು ಜನ್ಮವನ್ನೇ ರದ್ದು ಮಾಡಿ ಮುಕ್ತಿಗೆ ಕಳುಹಿಸಬಲ್ಲದು.

ಅಪರಿಮಿತವಾದ, ಯಾರೂ ಊಹಿಸಲಾಗದ ಶಕ್ತಿ ಹೊಂದಿರುವ ಮಹಾಭೂತಗಳಿಗೆ ಅಧಿನಾಯಕನಾದ ದೈವ ಅಂದುಕೊಂಡರೆ ಎಷ್ಟರ ಪಾಪವನ್ನಾದರು ಕ್ಷಮಿಸಿ ಮುಕ್ತಿ ಕೊಡಬಲ್ಲನು. ಒಂದು ವೇಳೆ ದೊಡ್ಡ ಭೂತಗಳಿಗೇ ದೊಡ್ಡವನಾದ ದೈವವನ್ನು ಚಿಕ್ಕ ಭೂತಗಳಿಗಿಂತ ಚಿಕ್ಕವನಾದ ಮನುಷ್ಯ, ದೈವವನ್ನು ಲೆಕ್ಕ ಮಾಡದಂತೆ ದೂಷಿಸಿದರೂ ಅಥವಾ ದೂಷಣೆ ಭಾವನೆ ಹೊಂದಿದ್ದರೂ ಅಂತವನಿಗೆ ದೊಡ್ಡ ಪಾಪ ಅಂಟಿಕೊಂಡು ಎರಡು ಯುಗಗಳ ಕಾಲ ಅನುಭವಿಸಬೇಕಾಗಿರುತ್ತದೆ. ದೈವವನ್ನು ಇಷ್ಟಪಟ್ಟು ಆರಾಧಿಸಿದರೆ ದುರ್ಮಾರ್ಗನಾದರೂ ಮುಕ್ತಿ ಹೊಂದಬಹುದು, ಅಯಿಷ್ಟಪಟ್ಟು ದೂಷಿಸಿದರೆ, ಸನ್ಮಾರ್ಗನಾದರೂ ಎರಡು ಯುಗಗಳು ನರಕ ಅನುಭವಿಸುವನು. ಒಂದು ಯುಗ ಕೆಲವು ಲಕ್ಷ ಸಂವತ್ಸರಗಳಿರುವಾಗ ಅಂತವುಗಳು ಎರಡು ಯುಗಗಳ ನರಕ ಅನುಭವಿಸಬೇಕೆಂದರೆ, ಎಷ್ಟು ದುಸ್ಥಿತಿಯೊ ಯೋಚಿಸಿದರೆ ಭಯಂಕರವಾಗಿ ಇರುತ್ತದೆ. ಅಂತಹ ನರಕವನ್ನು ಹೊಂದಬೇಕೆಂದು, ಮಾನವನು ತಿಳಿಯದೆ ದೈವವನ್ನು ದೂಷಿಸುತ್ತಿದ್ದಾನೆ. ಮತಗಳ ಭ್ರಮೆಯಲ್ಲಿ ಬಿದ್ದು ಬಹಳ ಜನ ದೈವವನ್ನು ದೂಷಿಸುತ್ತಾರೆ. ಮನುಷ್ಯ ಮತಗಳ ಮತ್ತಿನಲ್ಲಿ ಬಿದ್ದು, ತನಗೆ ತಿಳಿದವನೆ ದೇವರೆಂದು, ಇನ್ಯಾರು ದೇವರಲ್ಲವೇ ಅಲ್ಲವೆಂದು, ಪಂಚ ಮಹಾಭೂತಗಳಿಗೆ ಅಧಿಪತಿಯಾದ ದೇವರನ್ನು ತಿಳಿಯದೆ, ಆತನ ಪರಿಪಾಲನೆಯನ್ನು ಗುರುತಿಸದೆ, ಮಹಾಭೂತಗಳು ಹೊರಗಿನ ದೇಶದಲ್ಲಿ, ಸ್ವಲ್ಪ ಭೂತಗಳು ಒಳಗಿನ ದೇಹದಲ್ಲಿ ಸ್ವರ್ಗ, ನರಕಗಳನ್ನು ಉಂಟುಮಾಡುತ್ತ ವೆಂದು ಅರ್ಥ ಮಾಡಿಕೊಳ್ಳದೆ, ನಾವು ಪ್ರತಿದಿನ ಅನುಭವಿಸುವವು ಪಾಪ ಪುಣ್ಯ ಫಲಗಳಾದ ಸುಖದುಃಖಗಳೆಂದು ಗ್ರಹಿಸದೆ, ಎಲ್ಲೊ ಸ್ವರ್ಗ, ನರಕಗಳು ಇವೆಯೆನ್ನುವ ಭ್ರಮೆಯಲ್ಲಿ ಮುಳುಗಿ ಹೋಗಿದ್ದಾನೆ. ಕೆಲವು ಮತದವರು, ದೇವರ ವಿಷಯದಲ್ಲಿ ತಪ್ಪಾಗಿ ಅರ್ಥೈಸಿಕೊಂಡಿದ್ದಾರೆ. ಕಣ್ಣೆದುರೆ ಕಾಣಿಸುವ ಸ್ವರ್ಗ, ನರಕಗಳನ್ನೇ ಗುರುತಿಸದ ಕುರುಡರು, ಕಣ್ಣಿಗೆ ಕಾಣಿಸದ ದೈವವನ್ನು ಗುರುತಿಸಬಲ್ಲರಾ? ಗುರುತಿಸದೆ, ತಮಗೆ ತಿಳಿದಿದ್ದೇ ಜ್ಞಾನವೆಂದು, ತಾವು

ವಿಶ್ವಾಸಿಸಿದವನೇ ದೇವರೆಂದು, ತಾವಿರುವುದೇ ನಿಜವಾದ ಮತವೆಂದು ಅಂದುಕೊಳ್ಳುವ ಮತ ವಿಶ್ವಾಸಿಗಳು ದೇವರನ್ನು ಎಂದಿಗು ತಿಳಿಯಲಾರರು. ದೇವರು ಮತಾತೀತನೆಂದು ತಿಳಿಯದೆ, ಆತನೇ ಪ್ರಜೆಗಳಿಗೆ ಪ್ರಭುವೆಂದು (ರಾಜನೆಂದು), ಪ್ರಭುವಿನ ಅಧೀನದೊಳಗಿರುವುದೇ ಪಂಚಭೂತಗಳ ಪರಿಪಾಲನಾ ಪ್ರಭುತ್ವವೆಂದು ತಿಳಿಯದೆ, ಅಸಲಾದ ಪರಬ್ರಹ್ಮಸ್ವರೂಪವಾದ ಪರಮಾತ್ಮನನ್ನು ಗುರುತಿಸಲಾರರು. ಆದ್ದರಿಂದ ಅಸಲಾದ ದೇವರನ್ನು ತಿಳಿಯಬೇಕೆಂದರೆ ಮೊದಲು ಆತನ ಪ್ರಭುತ್ವವನ್ನು ಕುರಿತು ತಿಳಿದುಕೊಳ್ಳಬೇಕು. ಪ್ರತ್ಯಕ್ಷವಾಗಿ ಎಲ್ಲರಿಗು ತಿಳಿಯುವಂತೆ ನಡೆಯುತ್ತಿರುವ ವಿಧಾನವನ್ನು ಯೋಚಿಸಿ ನೋಡಿದರೆ ದೇವರು ಸೃಷ್ಠಿಸಿದ ಸೃಷ್ಠಿ ನಮ್ಮ ಮುಂದೆಯೇ ಇದ್ದಾಗ, ಅದನ್ನೇ ಆಧಾರ ಮಾಡಿಕೊಂಡು ನೋಡಿದರೆ, ಅದನ್ನು ಸೃಷ್ಠಿಸಿದ ಸೃಷ್ಠಿಕರ್ತ ತಿಳಿಯುವನೆಂದು ಆಲೋಚಿಸದೆ, ಮತಗಳು ಹೇಳಿದ ಮಾರ್ಗದಲ್ಲಿ ಹೋದರೆ ಮಾಯೆ ಕಾಣಿಸುತ್ತದೆ, ಆದರೆ ದೇವರು ತಿಳಿಯುವುದಿಲ್ಲ.

ಇಲ್ಲಿ ಒಂದು ಚಿಕ್ಕ ಉದಾಹರಣೆಯನ್ನು ನೋಡೋಣ. ಒಂದು ಮನೆಯಲ್ಲಿ ಕಳ್ಳತನ ನಡೆದಿದೆ. ಆ ಮನೆಯೊಳಗೆ ಪ್ರವೇಶಿಸಿದ ಕಳ್ಳ, ತಾನ್ಯಾರೊ ಇತರರಿಗೆ ತಿಳಿಯದಂತೆ ಕಳ್ಳತನ ಮಾಡಿ ಹೋಗಿದ್ದಾನೆ. ಆ ಮನೆಯಲ್ಲಿ ಹೋಗಿರುವುದು ಎಷ್ಟಾದರು, ಏನಾದರು ಕಳ್ಳನನ್ನು ಕಂಡು ಹಿಡಿಯಬೇಕಾದ ಜವಾಬ್ದಾರಿ ಪೊಲೀಸ್‌ನವರದು. ಕಳ್ಳತನ ಮಾಡಿದ ಕಳ್ಳ, ಯಾವ ಪೊಲೀಸರು ತನ್ನನ್ನು ಗುರುತಿಸಲಾರರೆನ್ನುವ ಧೈರ್ಯದಿಂದ ಪೊಲೀಸರಿಗೆ ಸವಾಲಾಗಿ ಒಂದು ಲೇಖನವನ್ನು ಬಿಟ್ಟು ಹೋಗಿದ್ದಾನೆ. ನೀವು ನನ್ನನ್ನು ಗುರುತಿಸಿದರೆ, ನೀವು ಉದ್ಯೋಗ ಮಾಡದಿದ್ದರೂ ಪ್ರತಿ ತಿಂಗಳು ಸಂಬಳವನ್ನು ನಾನೇ ಕೊಡುತ್ತೇನೆ. ಯಾವ ಕೆಲಸ ಕಾರ್ಯಇಲ್ಲದಂತೆ ನಾನು ಉಚಿತವಾಗಿ ಕೊಡುವ ಸಂಬಳದಿಂದ ನೀವು ಹಾಯಾಗಿ ಇರಬಹುದೆಂದು, ತನ್ನನ್ನು ಗುರುತಿಸಿದರೆ ಸಿಗುವ ಲಾಭವನ್ನು ಸಹ ಹೇಳಿದ್ದಾನೆ. ಆ ಕಳ್ಳ ಹಾಗೆ ಹೇಳಿರುವುದೆ ಅಲ್ಲದೆ, ತನ್ನನ್ನು ಗುರುತಿಸುವುದಕ್ಕೆ ಅವಶ್ಯಕವಾದ ತನ್ನ ಕೈ ಬರವಣಿಗೆಯನ್ನು ಬಿಟ್ಟು

ಹೋಗಿದ್ದಾನೆ. ಆ ಕಳ್ಳತನವನ್ನು ಹೇಗಾದರೂ ಮಾಡಿ ಛೇದಿಸಬೇಕೆಂದು ಪೊಲೀಸರು ಆ ಕಳ್ಳತನವನ್ನು ಪರಿಶೋಧಿಸುವುದಕ್ಕೆ ಕೆಲವು ಗುಂಪುಗಳಾಗಿ ಸೀಳಿಹೋಗಿ ಒಂದೊಂದು ಗುಂಪು, ಒಂದೊಂದು ಕೋನದಿಂದ ಇನ್ವೆಷ್ಟಿಗೇಶನ್ (ಪರಿಶೋಧನೆ) ಪ್ರಾರಂಭಿಸಿದರು. ಒಂದು ಗ್ರೂಪು ಅದಕ್ಕಿಂತ ಮೊದಲು ನಡೆದ ಕಳ್ಳತನ ಮಾಡಿದವರನ್ನು ವಿಚಾರಿಸತೊಡಗಿದರು. ಒಂದು ಗ್ರೂಪು ಬೆರಳಚ್ಚು ತೆಗೆದುಕೊಂಡು ಪರಿಶೋಧನೆ ಪ್ರಾರಂಭಿಸಿತು. ಒಂದು ಗುಂಪಿನವರು ಕಳ್ಳನಿಗೆ ಸಂಬಂಧಿಸಿದ "ಕ್ಲೂ" (ಆಧಾರ) ದೊರಕುತ್ತದೇನೊ ಎಂದು ಕಳ್ಳತನ ನಡೆದ ಮನೆಯಲ್ಲಿ ಹುಡುಕಿದರು. ಈ ವಿಧವಾಗಿ ಒಂದೊಂದು ಕೋನದಲ್ಲಿ ಒಬ್ಬೊಬ್ಬರು ಹುಡುಕುವುದನ್ನು ಪ್ರಾರಂಭಿಸಿದರು. ಬಹಳ ಕಷ್ಟಪಟ್ಟು ಬಹಳ ಬೇಗನೇ ಕಳ್ಳನನ್ನು ಹಿಡಿಯಬೇಕೆಂದುಕೊಂಡರು. ಅಷ್ಟಾಗಿ ಅವರು ಶ್ರಮಿಸುವುದಕ್ಕೆ ಮುಖ್ಯಕಾರಣ, ಕಳ್ಳತನ ನಡೆದ ಮನೆ ಹೋಮ್ ಮಿನಿಷ್ಟರ್‌ರವರದು ಪೊಲೀಸುನವರು ಎಷ್ಟು ಹುಡುಕಿದರೂ ಕಳ್ಳ ದೊರಕುವಂತಿಲ್ಲವೆಂದು ಒಂದು ಗುಂಪು ಪೊಲೀಸರು ನಿರ್ಧರಿಸಿಕೊಂಡರು. ಇನ್ನೂ ಮೂರು ಗುಂಪುಗಳ ಪೊಲೀಸರು ಹುಡುಕಿ ಒಂದೊಂದು ಗುಂಪಿನವರು ಒಬ್ಬೊಬ್ಬರನ್ನು ಹಿಡಿದು ಕೊಂಡು ಬಂದು ಈತನೇ ಕಳ್ಳ ಅಂದರು. ಮೂರು ಗುಂಪಿನವರು ಮೂವರು ಹಳೆಯ ಅಪರಾದಿಗಳಾದ ಹಳೆ ಕಳ್ಳರನ್ನೇ ಹಿಡಿದುಕೊಂಡು ಬಂದರು. ಮೂರು ಗುಂಪುಗಳಲ್ಲಿ ಒಂದು ಗುಂಪಿನ ಪೊಲೀಸರು ನಾನೇ ಅಸಲಾದ ಕಳ್ಳನನ್ನು ಹಿಡಿದುಕೊಂಡು ಬಂದಿದ್ದೇನೆಂದು ಹೇಳಿದರೆ, ಉಳಿದ ಪೊಲೀಸ್ ಪಾರ್ಟಿ ಇಲ್ಲ ನಾವು ಹಿಡಿದುಕೊಂಡು ಬಂದವನೇ ನಿಜವಾದ ಕಳ್ಳತನ ಮಾಡಿದ್ದಾನೆ ಎಂದು ಹೇಳಿದ್ದಾರೆ. ಹಾಗೆ ಎಲ್ಲರೂ ನಾವು ತಂದಿರುವವನೆ ನಿಜವಾದ ಕಳ್ಳ ಅಂದಾಗ, ಒಂದು ಗುಂಪಿನವರು ಮಾತ್ರ ನಮಗೆ ಸಿಗದ ಕಳ್ಳ ನಿಮಗೆ ಹೇಗೆ ದೊರಕುತ್ತಾನೆ. ಇವರೆಲ್ಲಾ ಹಳೆಯ ಕಳ್ಳರು ಆದರೆ ಇವರಲ್ಲಿ ಅಸಲಾದ ಕಳ್ಳ ಇಲ್ಲ ಅಂದರಂತೆ.

ಕೊನೆಗೆ ಪೊಲೀಸ್ ಉನ್ನತಾಧಿಕಾರಿಗಳ ವಿಚಾರಣೆಯಲ್ಲಿ ಮೂರು ಗುಂಪಿನವರು ಕರೆತಂದ ಕಳ್ಳರಲ್ಲಿ ನಿಜವಾದ ಕಳ್ಳನಿಲ್ಲವೆಂದು ತಿಳಿದುಹೋಯಿತು. ಪೊಲೀಸರು ಇವರೇ ಕಳ್ಳರೆಂದು ಕರೆತಂದರೂ, ಹಾಗೆ ಕಳ್ಳರಂತೆ ತೋರಿಸಲಾದ ಯಾವ ಒಬ್ಬರೂ ಆ ಮನೆಯಲ್ಲಿ ಕಳ್ಳತನ ಮಾಡಲಿಲ್ಲವೆಂದು ತಿಳಿಯಿತು. ಕೊನೆಗೆ ಯಾರನ್ನು ಹಿಡಿದುಕೊಂಡು ಬಾರದವರನ್ನು ಕರೆದು ನಿಮಗೆ ಕಳ್ಳ ಏಕೆ ದೊರಕಲಿಲ್ಲವೆಂದು ಕೇಳಿದರು. ಆಗ ಆ ಗುಂಪಿನ ಇನ್‌ಚಾರ್ಜ್ ಆದ ಇನ್‌ಸ್ಪೆಕ್ಟರ್ ಹೀಗೆ "ನಾವು ಕಳ್ಳನನ್ನು ಹಿಡಿದುಕೊಳ್ಳಬೇಕೆಂದರೆ ಆತನು (ಕಳ್ಳ) ಬರೆದ ಲೇಖನವನ್ನೇ ಆಧಾರವಾಗಿ ತೆಗೆದುಕೊಳ್ಳಬೇಕು. ನಾವು ಆ ಬರವಣಿಗೆಯನ್ನು ಚೆನ್ನಾಗಿ ಗಮನಿಸಿದರೆ, ಅದರಲ್ಲಿ "ನೀವು ನನ್ನನ್ನು ಗುರುತಿಸಿದರೆ ನೀವು ಉದ್ಯೋಗ ಮಾಡದಿದ್ದರು ಪ್ರತಿ ತಿಂಗಳು ಸಂಬಳವನ್ನು ನಾನೇ ಕೊಡುತ್ತೇನೆ" ಎಂದು ಇದೆ. ಅಷ್ಟೇ ಅಲ್ಲದೆ ಕಳ್ಳತನ ನಡೆದ ಮನೆ ಸ್ವತಃ ಹೋಮ್ ಮಿನಿಷ್ಟರ್‌ರವರದು. ನಾವು ಎಲ್ಲ ವಿಧಗಳಲ್ಲಿ ಆಲೋಚಿಸಿದರೆ, ನಾವು ಕಳ್ಳನನ್ನು ಗುರುತಿಸಿದರೆ, ನಾವು ಡ್ಯೂಟೀ ಮಾಡದಿದ್ದರೂ ಪ್ರತಿ ತಿಂಗಳು ಸಂಬಳ ಕೊಡುವ ಸಾಮರ್ಥ್ಯ ಅಧಿಕಾರ ಒಬ್ಬ ಹೋಮ್‌ಮಿನಿಷ್ಟರ್‌ರವರಿಗೇ ಇರುತ್ತದೆ. ಒಂದು ವೇಳೆ ಬೇರೆ ಯಾರಾದರೂ ಎಂತಹ ಕಳ್ಳನಾದರೂ ಬಹಳ ಹಣವಿರುವಂತವನಾದರು ನಾವು ಉದ್ಯೋಗ ಮಾಡದಿದ್ದರೂ ಹಣ ಯಾವಾಗ ಅವಶ್ಯವಿರುತ್ತದೊ ಆಗ ಕೊಡುತ್ತಾನಾಗಲಿ, ಕರೆಕ್ಟಾಗಿ ಪ್ರತಿ ತಿಂಗಳು ಕೊಡುವುದಿಲ್ಲ ಅಲ್ಲವೆ! ಯಾವಾಗ ಅವಶ್ಯಬಂದರೆ ಆಗ ಕೊಡುತ್ತೇನೆಂದು ಬರೆದಿದ್ದರೆ ನಾವು ಕಳ್ಳನನ್ನು ಹುಡುಕುವವರೆ, ಆದರೆ ಪ್ರತಿ ತಿಂಗಳ ಸಂಬಳ ಕೊಡುತ್ತೇನೆಂದು ಹೇಳಿರುವುದರಿಂದ, ಮೇಲಾಗಿ ಚೆನ್ನಾಗಿ ಓದಿಕೊಂಡವರು ಬರೆದ ಬರವಣಿಗೆಯಾದ್ದರಿಂದ, ಕಳ್ಳ ಕೊಡುವ ಹಣವನ್ನು ಸಂಬಳ ಎಂದು ಹೇಳಿರುವುದರಿಂದ, ಮತ್ತು ಪ್ರತಿ ತಿಂಗಳು ಎಂದು ನಿರ್ಧಿಷ್ಟವಾಗಿ ಸಹ ಹೇಳಿರುವುದರಿಂದ, ಅಷ್ಟೇ ಅಲ್ಲದೆ ನನ್ನನ್ನು ನೀವು ಗುರುತಿಸಿದರೆ ಎಂದು ಬರೆದಿದ್ದಾನೆಂದರೆ, ನಾನು ನಿಮಗೆ ಚೆನ್ನಾಗಿ ತಿಳಿದಿರುವವನೆಂದು ಅರ್ಥ ವಾಗುತ್ತಿದೆ. ಈ ವಿಧವಾಗಿ ಎಲ್ಲ ವಿಧಗಳಲ್ಲಿ ಯೋಚಿಸಿ ನೋಡಿದರೆ ನಮ್ಮ

ಮೇಲೆ ಪೂರ್ತಿ ಅಧಿಕಾರವಿರುವ ಹೋಮ್ ಮಿನಿಷ್ಟರ್‌ರವರೆ ಕಳ್ಳ ಎಂದು ಹೇಳಬಹುದು. ಬರೆದ ಬರವಣಿಗೆಯ ಆಧಾರವಾಗಿ ಬರಹವನ್ನು ಬರೆದವನು ಇಂತವನೆ ಎಂದು ಗುರುತಿಸಿ ಹೇಳುತ್ತಿದ್ದೇವೆ ಆದರೆ ಆತನನ್ನು ಹಿಡಿದುಕೊಳ್ಳುವ ಸಾಮರ್ಥ್ಯ ನಮಗಿಲ್ಲ" ಎಂದು ಹೇಳಿದನು. ಆ ವಿಷಯವನ್ನು ಕೇಳಿದ ಪೊಲೀಸ್ ಅಧಿಕಾರಿಗಳು ಆ ವಿಷಯವನ್ನು ಹೋಮ್ ಮಿನಿಷ್ಟರ್‌ರವರಿಗೆ ತಿಳಿಸಿದಾಗ ಮಿನಿಷ್ಟರ್, ತನ್ನ ಮೇಲೆ ಅಪರಾದದ ಆರೋಪಣೆ ಮಾಡಿದವರನ್ನು ಅಭಿನಂದಿಸಿ ತಾನೇ ಆ ಕಳ್ಳತನವನ್ನು ಸೃಷ್ಠಿಸಿರುವುದೆಂದು (ಮಾಡಿರುವುದೆಂದು) ಒಪ್ಪಿಕೊಂಡನಂತೆ. ಆ ಲೇಖನದಲ್ಲಿ ಬರೆದ ಪ್ರಕಾರ ತನ್ನನ್ನು ಗುರುತಿಸಿದವರಿಗೆ ಪ್ರಮೋಷನ್ ಕೊಟ್ಟು ಕೆಲಸವಿಲ್ಲದ ಪೋಸ್ಟಿನಲ್ಲಿ ಅವರನ್ನು ನೇಮಿಸಿ ಶ್ರಮ ಇಲ್ಲದಂತೆ ಮಾಡಿದನಂತೆ. ಪೊಲೀಸ್ ನವರ ಸಾಮರ್ಥ್ಯವನ್ನು ತಿಳಿದುಕೊಳ್ಳುವು ದಕ್ಕೆ, ಅವರಲ್ಲಿ ಸಾಮರ್ಥ್ಯವನ್ನು ಬೆಳೆಸುವುದಕ್ಕೆ ಮಿನಿಷ್ಟರ್‌ರವರೆ ತನ್ನ ಮನೆಯೊಳಗಿನ ಕಳ್ಳತನ ತಾನೇ ಮಾಡಿ, ಅದನ್ನು ಮಾಡಿದ ಕಳ್ಳ ಯಾರೊ ಕಂಡುಹಿಡಿಯಿರೆಂದು ಹೇಳಿದ್ದಾನೆ. ಕಳ್ಳತನ ತನ್ನ ಮನೆಯಲ್ಲಿ ನಡೆದಂತೆ ತಿಳಿದ ಮಂತ್ರಿ, ತಾನೇ ಲೇಖನವನ್ನು ಬರೆದು, ಪೊಲೀಸರಿಗೆ ಸವಾಲು ಬೀಸಿದಂತೆ ಮಾಡಿರುವುದರಿಂದ ಕೆಲವರು ಪೊಲೀಸರು, ಮೊದಲಿನಿಂದ ಕಳ್ಳರಂತೆ ಹೆಸರುವಾಸಿಯಾದವರನ್ನು ಹಿಡಿದುಕೊಂಡು ಬಂದಿದ್ದಾರಾಗಲಿ, ಅಸಲಾದ ಕಳ್ಳನನ್ನು, ಇಂತವನೆಂದು ಊಹೆಯನ್ನು ಸಹ ಮಾಡಲಾಗದೆ ಹೋದರು. ಒಂದು ಗುಂಪಿನವರು ಮಾತ್ರ ಕಳ್ಳಬರೆದ ಲೇಖನವನ್ನು ಹಿಡಿದುಕೊಂಡು ಕಳ್ಳನನ್ನು ಗುರುತಿಸಿದರು.

ಮೇಲಿನ ಕಳ್ಳತನವನ್ನು ನೋಡಿದರೆ, ನಮಗೆ ಸ್ವಲ್ಪ ಸಮಾಚಾರ ಅರ್ಥವಾಗುತ್ತಿದೆ. ತಿಳಿಯಬೇಕಾದ ಕಳ್ಳ ಪೊಲೀಸ್‌ರೆಲ್ಲರಿಗು ದೊಡ್ಡವನಾದ ಹೋಮ್ ಮಿನಿಷ್ಟರ್‌ರವರು. ಹಾಗೆ ತಿಳಿಯಬೇಕಾದವನು ಮನುಷ್ಯರೆಲ್ಲರಿಗು ದೊಡ್ಡವನಾದ ದೇವರು! ಪೊಲೀಸರು ನಾಲ್ಕು ಗುಂಪುಗಳಾಗಿ ಕಳ್ಳನಿಗಾಗಿ ಅನ್ವೇಷಣೆ ಮಾಡಿವೆ. ಹಾಗೆ ನಾಲ್ಕು ಮತದವರು ದೇವರಿಗಾಗಿ ಅನ್ವೇಷಣೆ

ಮಾಡಿದ್ದಾರೆ. ಮೂರು ಗ್ರೂಪ್‌ಗಳ ಪೊಲೀಸರು ಮೂವರು ಕಳ್ಳರನ್ನು ತಂದಿದ್ದಾರೆ. ಹಾಗೆ ಮೂರು ಮತದವರು ಮೂವರು ದೇವರುಗಳನ್ನು ತೋರಿಸುತ್ತಿದ್ದಾರೆ. ಮೊದಲಿನಿಂದ ಹೆಸರು ಪಡೆದ ಕಳ್ಳರನ್ನೇ ಮೂರು ಪೊಲೀಸ್ ಗ್ರೂಪ್‌ಗಳು ಕಳ್ಳನಂತೆ ತೋರಿಸುತ್ತವೆ. ಹಾಗೆ ಮೊದಲಿನಿಂದ ಇವರು ದೇವರುಗಳು ಎಂದು ಹೆಸರು ಪಡೆದವರನ್ನೇ ಮೂರು ಮತದವರು ದೇವರೆಂದು ತೋರಿಸುತ್ತಿದ್ದಾರೆ. ಒಂದು ಪೊಲೀಸ್ ಗ್ರೂಪು ಮಾತ್ರ ಇಂಥವನೆ ಕಳ್ಳನೆಂದು ತೋರಿಸಲಿಲ್ಲ. ಹಾಗೆ ಕೆಲವರು ಜ್ಞಾನಿಗಳು ಮಾತ್ರ, ಇಂಥವನೇ ದೇವರೆಂದು ತೋರಿಸುವುದಿಲ್ಲ. ಅಧಿಕಾರಿಗಳ ವಿಚಾರಣೆಯಲ್ಲಿ ಪೊಲೀಸ್‌ನವರು ಕರೆತಂದ ಕಳ್ಳರಲ್ಲಿ ಅಸಲು ಕಳ್ಳ ಇಲ್ಲವೆಂದು ತಿಳಿಯಿತು. ಹಾಗೆ ಯೋಗೀಶ್ವರರ ವಿಚಾರಣೆಯಲ್ಲಿ ಕೆಲವು ಮತದವರು ಹೇಳುತ್ತಿರುವ ದೇವರುಗಳಲ್ಲಿ ಅಸಲಾದ ದೇವರು ಇಲ್ಲವೆಂದು ತಿಳಿಯಿತು. ಒಂದು ಗ್ರೂಪ್ ಪರಿಶೋಧನಾಧಿಕಾರಿಗಳು, ಕಳ್ಳನ ಕೈಯಿಂದ ಬರೆದ ಕಾಣಿಸುವ ಲೆಟರ್ ಆಧಾರವಾಗಿ ಕಾಣಿಸದ ಕಳ್ಳನನ್ನು ಗುರುತಿಸಬಹುದು ಎಂದಿದ್ದಾರೆ. ಹಾಗೆ ಕೆಲವರು ಜ್ಞಾನಾನ್ವೇಷಿಗಳು, ದೇವರು ಸೃಷ್ಟಿಸಿದ ಕಾಣಿಸುವ ಪಂಚಭೂತಗಳ ಆಧಾರದಿಂದ ಕಾಣಿಸದ ದೇವರನ್ನು ಗುರುತಿಸಬಹುದು ಎಂದಿದ್ದಾರೆ. ಪೊಲೀಸರಿಗೆ ಪ್ರತಿ ತಿಂಗಳು ಸಂಬಳ ಕೊಡುವ ಅಧಿಕಾರಿ, ಕೆಲಸ ಮಾಡದಿದ್ದರೂ ಸಂಬಳ ಕೊಡುವಂತಹ ಸಾಮರ್ಥ್ಯ ಇರುವವನು ಹೋಮ್ ಮಿನಿಷ್ಟರ್. ಹಾಗೆ ಪ್ರತಿ ಜನ್ಮಕ್ಕು ಜೀವನವನ್ನು ಕೊಡುವವನು, ಕೆಲಸವಿದ್ದರೂ, ಕೆಲಸವಿಲ್ಲದಿದ್ದರೂ ಜೀವನವನ್ನು ಮಾತ್ರ ಕೊಡುವಂತಹ ಸಾಮರ್ಥ್ಯವಿರುವವನು ದೇವರು. ಪೊಲೀಸ್‌ನವರು ಕಳ್ಳನನ್ನು ಗುರುತಿಸಿದರೆ, ಉಚಿತವಾಗಿ ಸಂಬಳ ಕೊಡುವವನು ಕಳ್ಳನಾದ ಹೋಮ್ ಮಿನಿಸ್ಟರೆ. ಹಾಗೆ ಜ್ಞಾನಿಗಳು ತಿಳಿಯಬೇಕಾದ ದೇವರು ಇಂತವನೆ ಎಂದು ಗುರುತಿಸಿ ಹೇಳಿದರೆ ಮೋಕ್ಷಕೊಡುವವನು ದೇವರೇ. ಮೂರು ಗ್ರೂಪ್‌ಗಳ ಪೊಲೀಸ್‌ನವರು ಸಹ ಕಳ್ಳ ಬಿಟ್ಟು ಹೋದ ಲೇಖನದ ಬಗ್ಗೆ ಚಿಂತಿಸಲಿಲ್ಲ. ಮೂರು ಮತದವರು ಆಧಾರವಾಗಿರುವ ಪ್ರಕೃತಿಯನ್ನು (ಪಂಚಭೂತಗಳನ್ನು) ನೋಡಲಿಲ್ಲ. ಲೇಖನ ಆಧಾರದಿಂದ ಒಂದು ಗ್ರೂಪ್ ಪೊಲೀಸರು ಅಸಲಾದ ಕಳ್ಳನನ್ನು ಗುರುತಿಸಿದ್ದಾರೆ.

ಹಾಗೆ ಶಾಸ್ತ್ರಬದ್ಧವಾದ ಜ್ಞಾನವನ್ನು ಅನುಸರಿಸುವವರು ಪ್ರತ್ಯಕ್ಷವಾದ ಪ್ರಕೃತಿಯನ್ನು ಆಧಾರ ಮಾಡಿಕೊಂಡು ಅಸಲಾದ ದೇವರನ್ನು ಗುರುತಿಸಿದ್ದಾರೆ. ಕೊನೆಗೆ ಕಳ್ಳ ಪೊಲೀಸರಿಗೆ ಅಧಿಪತಿಯಾದ ಹೋಮ್‌ನಿಸ್ಟರ್ ಎಂದು ತಿಳಿದಿದೆ. ಹಾಗೇ ಕೊನೆಗೆ ದೇವರು ಎಲ್ಲರಿಗು ಅಧಿಪತಿಯಾದ ಪರಮಾತ್ಮ ಎಂದು ತಿಳಿಯಿತು.

ಮೇಲಿನ ಸಾರಾಂಶವೆಲ್ಲವನ್ನು ನೋಡಿದರೆ, ಕಳ್ಳ ಬಿಟ್ಟುಹೋದ ಲೇಖನ ಆಧಾರದಿಂದಲೆ ಕಳ್ಳನನ್ನು ಗುರುತಿಸಿದ ಹಾಗೆ, ದೇವರು ನಮ್ಮ ಮುಂದೆ ಉಳಿಸಿರುವ ಪ್ರಕೃತಿ ಆಧಾರದಿಂದಲೇ ಅಸಲಾದ ದೇವರನ್ನು ಗುರುತಿಸಬಹುದು ಎನ್ನುವ ವಿಧಾನ ತಿಳಿಯುತ್ತದೆ. ಆದ್ದರಿಂದ ದೇವರಿಂದಲೆ ತಯಾರು ಮಾಡಲಾದ, ನಮ್ಮ ಮುಂದೆ ಕಾಣಿಸುತ್ತಿರುವ ಪಂಚಭೂತಗಳನ್ನು (ಪ್ರಕೃತಿಯನ್ನು) ಆಧಾರ ಮಾಡಿಕೊಂಡು ದೇವರನ್ನು ತಿಳಿಯಬಹುದು ಎಂದು ಧೈರ್ಯವಾಗಿ ಹೇಳಬಹುದು. ಹಾಗಲ್ಲದೆ ಪ್ರಕೃತಿಯನ್ನು ತಿಳಿಯದೆ ಪರಮಾತ್ಮನನ್ನು ಗುರುತಿಸಲಾರೆವು. ಆದ್ದರಿಂದ ಬ್ರಹ್ಮವಿದ್ಯಾ ಶಾಸ್ತ್ರವಾದ ಭಗವದ್ಗೀತೆಯಲ್ಲಿ ಪ್ರಕೃತಿಯನ್ನು ಪಂಚಭೂತಗಳಾಗಿ ವಿಭಜಿಸಿದ ಜ್ಞಾನ, ಪ್ರಕೃತಿಯಿಂದಲೆ ಸಕಲ ಶರೀರಗಳು ತಯಾರಾದ ವಿಷಯ, ಪ್ರಕೃತಿಯಿಂದಲೆ ಅಜ್ಞಾನಕ್ಕೆ ಮೂಲವಾದ ಗುಣಗಳು ತಯಾರಾದ ವಿವರ, ಪ್ರಕೃತಿಯಿಂದಲೆ ಜೀವಿಗಳ ಸಾವುಹುಟ್ಟುಗಳು ನಡೆಯುತ್ತಿವೆಯೆಂದು ತಿಳಿಸುವ ಸಮಾಚಾರವಿದೆ. ಪ್ರಕೃತಿಯೆ ತನ್ನ ಗರ್ಭವನ್ನು ಹೊರುತ್ತಿರುವ ಹೆಂಡತಿಯೆಂದು, ಸರ್ವಜೀವರಾಶಿಗಳಿಗೆ ಪ್ರಕೃತಿಯೆ ತಾಯಿ ಎಂದು, ತಂದೆಯಾದ ನಾನು ಏನು ಮಾಡುವುದಿಲ್ಲವೆಂದು, ಮಾಡುವುದೆಲ್ಲ ಪ್ರಕೃತಿಯೆಂದೆ ಪ್ರಕೃತಿಯನ್ನು ಕುರಿತು ವಿಸ್ತಾರವಾಗಿ ಹೇಳಿದ್ದಾರೆ. ದೇವರನ್ನು ತಿಳಿದುಕೊಳ್ಳುವುದರಲ್ಲಿ ಪ್ರಕೃತಿ (ಪಂಚಭೂತಗಳ) ಪಾತ್ರ ಎಷ್ಟೋ ಪ್ರಾಮುಖ್ಯವಾಗಿ ಇದ್ದಂತೆ ತಿಳಿಯುತ್ತಿದ್ದರೂ, ಮತಕ್ಕೊಬ್ಬ ದೇವರನ್ನು ಇಟ್ಟುಕೊಂಡು ಪ್ರಕೃತಿಯನ್ನು ವಿಸ್ಮರಿಸಿದವರು ಯಾರಾದರು ದೇವರನ್ನು ತಿಳಿಯಬಲ್ಲರಾ? ಎಂದು ಪ್ರಶ್ನಿಸುತ್ತಿದ್ದೇನೆ. **ಯಾವ ಮತದವನಾದರೂ ದೇವರನ್ನು ಪೂರ್ತಿ ವಿಶ್ವಸಿಸಿದರೂ, ದೇವರನ್ನು ಪ್ರಾರ್ಥನೆಗಳಿಂದ, ಪೂಜೆಗಳಿಂದ, ಯಜ್ಞಗಳ ಮುಖಾಂತರ,**

**ವೇದಪಠನೆಗಳ ಮುಖಾಂತರ, ದಾನಗಳ ಮುಖಾಂತರ, ತಪಸ್ಸುಗಳ ಮುಖಾಂತರ ತಿಳಿಯಲಾರರೆಂದು ಗೀತೆಯಲ್ಲಿ ಹೇಳಿದ್ದಾರೆ.** ಎಲ್ಲವನ್ನು ಮೀರಿರುವ ಯೋಗದಿಂದಲೆ ದೇವರನ್ನು ತಿಳಿಯಬಹುದೆಂದು ಅದೇ ಗೀತೆಯಲ್ಲಿ ಹೇಳಿದ್ದಾರೆ. ಯೋಗವನ್ನು ಆಚರಿಸಬೇಕೆಂದರೆ ಪ್ರಕೃತಿಯಿಂದ ಪ್ರಪಂಚ ಹೇಗೆ ಇದೆ? ಪ್ರಕೃತಿಯಿಂದ ಶರೀರ ಹೇಗೆ ತಯಾರಾಗಿದೆ? ಪ್ರಕೃತಿಯಿಂದ ತಯಾರಾದ ಗುಣಗಳು ಹೇಗೆ ಕೆಲಸಮಾಡುತ್ತಿದೆ? ಪ್ರಕೃತಿ ದೈವಮಾರ್ಗಕ್ಕೆ ಆತಂಕವಾದ ಮಾಯೆಯಂತೆ ಹೇಗೆ ಕೆಲಸ ಮಾಡುತ್ತಿದೆ? ತಿಳಿದ ನಂತರವೇ ಯೋಗ ಯಾರಿಗಾದರೂ ಸಾಧ್ಯವಾಗುತ್ತದೆ.

ಆದ್ದರಿಂದ ಪ್ರಕೃತಿಯನ್ನು ಕುರಿತು ತಿಳಿದುಕೊಳ್ಳಬೇಕಾದ ಅವಶ್ಯವಿದೆ. ಪ್ರಕೃತಿಯೆ ಪಂಚಮಹಾಭೂತಗಳಾಗಿ ಹೊರಗೆ, ಪಂಚ ಸ್ವಲ್ಪಭೂತಗಳಾಗಿ ಶರೀರದೊಳಗೆ ಇವೆ. ಶರೀರದೊಳಗಿನ ಸ್ವಲ್ಪಭೂತಗಳನ್ನು ಕುರಿತು ಸ್ವಲ್ಪ ಅವಗಾಹನೆಗಾಗಿ ಎರಡು ಸಂಘಟನೆಗಳು ಹೇಳಿಕೊಂಡಿದ್ದೇವೆ. ಅವುಗಳನ್ನು ಕುರಿತು ತಿಳಿದುಕೊಳ್ಳಬೇಕಾಗಿರುವುದು ಎಷ್ಟೋ ಇದೆ. ಶರೀರದಲ್ಲಿ ಮಾಯೆಯಾಗಿ ಕೆಲಸ ಮಾಡುವ 36 ಗುಣಗಳು ಸಹ ಪಂಚ ಸ್ವಲ್ಪ ಭೂತಗಳಿಂದಲೆ ತಯಾರಾಗಿವೆ. ಸ್ವಲ್ಪ ಭೂತಗಳನ್ನು ಕುರಿತು ತಿಳಿದುಕೊಳ್ಳಬೇಕಾಗಿರುವುದು ಎಷ್ಟೋ ಇದ್ದರೂ, ಪ್ರಸ್ತುತವಾಗಿ ಅವುಗಳನ್ನು ಬಿಟ್ಟು ಪಂಚಮಹಾಭೂತಗಳನ್ನು ಕುರಿತಾದ ಸಮಾಚಾರವನ್ನು ಸ್ವಲ್ಪ ತಿಳಿದುಕೊಳ್ಳೋಣ. ದೇವರು ಸೃಷ್ಠಿ ಆದಿಯಲ್ಲಿ ತನ್ನ ಸಂಕಲ್ಪದಿಂದ ಪ್ರಕೃತಿಯನ್ನು ಮೊದಲು ಸೃಷ್ಠಿಸಿದ್ದಾನೆ. ನಂತರ ತಕ್ಷಣವೆ ಆತ್ಮ, ಜೀವಾತ್ಮಗಳನ್ನು ಸೃಷ್ಠಿಸಿದ್ದಾನೆ. ಈಗ ನೀವು ಅರ್ಜೆಂಟಾಗಿ ಒಂದು ಪ್ರಶ್ನೆ ಕೇಳಬಹುದು. ರೂಪ, ನಾಮ, ಕ್ರಿಯೆಗಳು ಇಲ್ಲದವನು ದೇವರು ಎಂದಿದ್ದೀರಲ್ಲ! ಈಗ ಆತನಿಗೆ ಒಂದು ಕೆಲಸವನ್ನಿಟ್ಟು ತೋರಿಸುತ್ತಿದ್ದೀರ. ಪ್ರಕೃತಿಯನ್ನು ಸೃಷ್ಠಿಸಿದನು, ನಂತರ ಆತ್ಮ, ಜೀವಾತ್ಮಗಳನ್ನು ಸೃಷ್ಠಿಸಿದನು ಎಂದಿದ್ದೀರ. ಆಗಿರುವಾಗ ದೇವರು ಸಹ ಸೃಷ್ಠಿಸುವ ಕೆಲಸವನ್ನು ಮಾಡಿದಂತೆ ಆಗುತ್ತದೆ. ಇದನ್ನು ಅನುಸರಿಸಿ ನೋಡಿದಾಗ ಕೆಲಸವಿಲ್ಲದವನು (ಕ್ರಿಯೆ ಇಲ್ಲದವನು)

ದೇವರು ಎನ್ನುವ ಸೂತ್ರ ಕೆಟ್ಟು ಹೋಗುತ್ತದಲ್ಲವೆ! ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ರೂಪ, ನಾಮ, ಕ್ರಿಯೆಗಳು ಇಲ್ಲದವನು ದೇವರು ಎನ್ನುವುದು ಸೂತ್ರ. ಸೂತ್ರ ಎಂದರೆ ಶಾಸ್ತ್ರಬದ್ಧವಾದುದೆಂದು ಅರ್ಥ. ಆ ಮಾತು ಶಾಸನವಾಗಿ ಎಂದಿಗೂ ಚಕ್ಕುಚದರದೇ ಇರುತ್ತದೆ. ಆಗಿರುವಾಗ ಸೂತ್ರ ಕೆಟ್ಟುಹೋಗುವುದು ನಡೆಯುವುದಿಲ್ಲ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರುವುದು ಏನೆಂದರೆ! ರೂಪ, ನಾಮ, ಕ್ರಿಯೆಗಳು ಇಲ್ಲದವನು ಅನ್ನುವ ಸೂತ್ರ ಯಾವಾಗ ಹೇಳಲಾಗಿದೆಯೆಂದು ಯೋಚಿಸಿದರೆ ರೂಪ, ಹೆಸರು, ಕೆಲಸ ಇರುವ ಮಾನವನು ತಯಾರಾದಾಗಿನಿಂದ ರೂಪ, ನಾಮ, ಕ್ರಿಯೆಗಳು ಇಲ್ಲದವನಿದ್ದಾನೆಂದು, ಆಗಿನಿಂದ ಆ ಸೂತ್ರ ಅನ್ವಯಿಸುತ್ತದೆಂದು ತಿಳಿಯಬೇಕು. ಒಬ್ಬನಿಗೆ ರೂಪವಿರುವಾಗಲೆ ಇನ್ನೊಬ್ಬನಿಗೆ ರೂಪವಿಲ್ಲವೆಂದು ಹೇಳಬಹುದು. ಹಾಗೆ ಒಬ್ಬನಿಗೆ ಹೆಸರು, ಕೆಲಸ ಇರುವಾಗಲೆ ಇನ್ನೊಬ್ಬನಿಗೆ ಹೆಸರು ಕೆಲಸ ಇಲ್ಲವೆಂದು ಹೇಳಬಹುದು. ಒಂದು ರೂಪವಿರುವಾಗಲೆ, ರೂಪ ಎಂದರೆ ಏನೊ ನಮಗೆ ತಿಳಿದಾಗಲೆ, ರೂಪವನ್ನು ಹೋಲಿಸಿ, ರೂಪ ಇಲ್ಲವಂತಹುದೆಂದು ಹೇಳಬಹುದು. ಹಾಗೆ ರೂಪ, ಹೆಸರು, ಕೆಲಸ ಇರುವ ಮನುಷ್ಯ ಬಂದ ನಂತರ ಆತನು ಮಾಡುತ್ತಿರುವ ಕೆಲಸವನ್ನಾಗಲಿ, ಆತನಿಗಿರುವ ಹೆಸರನ್ನಾಗಲಿ, ರೂಪವನ್ನಾಗಲಿ ಹೋಲಿಸಿ ನಿನಗಿರುವ ಇಂತಹುಗಳು ಯಾವುವು ಇಲ್ಲವೆಂದು ತಿಳಿಸುತ್ತಾ ರೂಪ, ನಾಮ, ಕ್ರಿಯರಹಿತನು ಎಂದಿದ್ದಾರೆ. ಸೃಷ್ಠಿಗೆ ಪೂರ್ವದಲ್ಲಿ ದೇವರಿಗೆ ಈ ಮಾತು ಅನ್ವಯಿಸುವುದಿಲ್ಲ. ಸೃಷ್ಠಿ ನಡೆದ ನಂತರ ದೇವರ ಸೂತ್ರಾನುಸಾರ ನಮ್ಮಹಾಗೆ ಆಕಾರವಾಗಲಿ, ನಮ್ಮಹಾಗೆ ಹೆಸರಾಗಲಿ, ನಮ್ಮಹಾಗೆ (ಜೀವರಾಶಿಗಳ ಹಾಗೆ) ಕೆಲಸವಾಗಲಿ ಏನೂ ಇಲ್ಲ. ಸೃಷ್ಠಿನಡೆದ ನಂತರ ಎಲ್ಲ ಕಾರ್ಯಗಳನ್ನು ಪ್ರಕೃತಿಯೆ ಮಾಡುವಂತೆ, ಒಂದು ಕಾನೂನನ್ನು ನಿರ್ಣಯಿಸಿ ಇಟ್ಟಿದ್ದಾನೆ. ಆ ಕಾನೂನಿನ ಪ್ರಕಾರ ರೂಪ, ನಾಮ, ಕ್ರಿಯೆಗಳಿರುವ ಪ್ರಕೃತಿ ಎಲ್ಲ ಕೆಲಸಗಳನ್ನು ತಾನೇ ಮಾಡುತ್ತಿದೆ. ಮನುಷ್ಯರನ್ನು ಹುಟ್ಟಿಸುವುದು, ಜೀವನ ಸಾಗಿಸುವುದು, ಮರಣಿಸುವುದು ಎಲ್ಲವನ್ನು ಪ್ರಕೃತಿಯೆ ಮಾಡುತ್ತಿದೆ.

ಈ ವಿಶ್ವದಲ್ಲಿ ಏನು ನಡೆದರೂ ಪ್ರಕೃತಿಯಿಂದಲೆ ನಡೆಯುತ್ತಿದೆ. ವಿಶ್ವವೆಲ್ಲಾ ತುಂಬಿರುವ ಪರಮಾತ್ಮ ಸಾಕ್ಷಿಭೂತನಾಗಿ ಇದ್ದಾನೆ ಹೊರತು ಕಾರ್ಯಭೂತನಾಗಿ ಇಲ್ಲ. ಇದು ಬ್ರಹ್ಮವಿದ್ಯಾ ಶಾಸ್ತ್ರದಲ್ಲಿನ ಮುಖ್ಯವಾದ ಮಾತು.

ರೂಪ, ನಾಮ, ಕ್ರಿಯೆಗಳಿರುವ ವಿಶ್ವವು ಸೃಷ್ಠಿಸಲ್ಪಡುವುದಕ್ಕಿಂತ ಮೊದಲು, ಕ್ರಿಯೆ ಇಲ್ಲದವನು ಎನ್ನುವ ವಾಕ್ಯ ದೇವರಿಗೆ ಅನ್ವಯಿಸುವುದಿಲ್ಲ. ಸೃಷ್ಠಿ ಇಲ್ಲದ ಸಮಯದಲ್ಲೂ ಸಹ ದೈವದವೊಂದು ಸಂಕಲ್ಪದಿಂದಲೆ ಸೃಷ್ಠಿ ಆರಂಭವಾಗಿದೆ. ಆಗಲು ಸಹ ದೈವವು ಕಾರ್ಯರೂಪದಲ್ಲಿ ಏನನ್ನು ತಯಾರು ಮಾಡಲಿಲ್ಲ. ಸಂಕಲ್ಪವು ಸಹ ಕೆಲಸದೊಂದಿಗೆ ಸಮಾನವೇ ಆದರೂ, ಸೃಷ್ಠಿ ಇಲ್ಲದ ಮೊದಲು ರೂಪ, ನಾಮ, ಕ್ರಿಯೆಗಳು ಇಲ್ಲದವನು ದೇವರು ಎನ್ನುವುದಕ್ಕೆ ಆಗ ಈ ಸೂತ್ರ ಅನ್ವಯಿಸುವುದಿಲ್ಲ. ಸೃಷ್ಠಿ ಇಲ್ಲದಿರುವಾಗ ನೀನು ಇಲ್ಲ ಆದುದರಿಂದ ನೀನಿರುವಾಗಲೆ ಸೂತ್ರವಾಗಲಿ ನೀನು ಇಲ್ಲದಿರುವಾಗ (ಜೀವರಾಶಿ ಹುಟ್ಟದ ಮೊದಲು) ಈ ಸೂತ್ರವೇ ಇರುವುದಿಲ್ಲ. ಅಷ್ಟೇ ಅಲ್ಲ, ಸೃಷ್ಠಿ ಇಲ್ಲದ ಮೊದಲು ದೇವರನ್ನು ಪರಮಾತ್ಮ ಎಂದು ಅನ್ನುವುದಕ್ಕಾಗಲಿ, ಪುರುಷೋತ್ತಮ ಎಂದು ಅನ್ನುವುದಕ್ಕಾಗಲಿ, ದೇವರು ಎಂದು ಅನ್ನುವುದಕ್ಕಾಗಲಿ ಅವಕಾಶವಿಲ್ಲ. ಏಕೆಂದರೆ ಆತ್ಮವೇ ಇಲ್ಲದಿರುವಾಗ ಆತ್ಮಕ್ಕಿಂತ ಪರವಾಗಿರುವವನೆಂದು ಅರ್ಥ ಬರುವಂತೆ, ಪರಮಾತ್ಮ ಎನ್ನುವ ಮಾತನ್ನು ಹೇಳುವುದಕ್ಕೆ ಅವಕಾಶವಿಲ್ಲ. ಬೇರೆ ಪುರುಷರೆ ಇಲ್ಲದಿರುವಾಗ, ಪುರುಷರಲ್ಲಿ ಉತ್ತಮವಾದವನು ಎಂದು ಅರ್ಥಬರುವಂತೆ ಪುರುಷೋತ್ತಮಾ ಎನ್ನುವುದಕ್ಕೂ ಸಹ ಅವಕಾಶವಿಲ್ಲ. ಹಾಗೆ ಹುಡುಕುವ ಜೀವಿಯೇ ಇಲ್ಲದಿರುವಾಗ ಹುಡುಕಲ್ಪಡುವವನು ಇರುವುದಿಲ್ಲ. ಹುಡುಕುವವನೇ ಇಲ್ಲದಿರುವಾಗ ಹುಡುಕಿಸಿಕೊಳ್ಳುವವನು ಇರುವುದಿಲ್ಲ. ಆದ್ದರಿಂದ ಹುಡುಕಿಸಿಕೊಳ್ಳುವವನು ಎನ್ನುವ ಅರ್ಥಬರುವ ದೇವರು ಎನ್ನುವ ಉಚ್ಚಾರಣೆಯೆ ಇರುವುದಿಲ್ಲ. ಸೃಷ್ಠಿ ನಡೆದ ನಂತರ ದೈವವನ್ನು ಗುರುತಿಸಿಕೊಳ್ಳುವುದಕ್ಕೆ ದೇವರು, ಪರಮಾತ್ಮ, ಪುರುಷೋತ್ತಮ ಎಂದು ಹೇಳುತ್ತಿದ್ದೇವೆ ಹೊರತು ಸೃಷ್ಠಿ ಇಲ್ಲದಾಗ ದೈವಕ್ಕೆ ಯಾವ ಗುರುತು ಇಲ್ಲ.

ಆದ್ದರಿಂದ ಆಗ ದೈವವನ್ನು ದೇವರೆಂದಾಗಲಿ, ಪುರುಷೋತ್ತಮನೆಂದಾಗಲಿ ಪರಮಾತ್ಮ ಎಂದಾಗಲಿ ಹೇಳುವುದಕ್ಕೆ ಅವಕಾಶವಿಲ್ಲ.

ದೇವರ ಸೃಷ್ಠಿಯಲ್ಲಿ ಮೊದಲನೆಯದು ಪ್ರಕೃತಿ, ಎರಡನೆಯ ಸೃಷ್ಠಿ ಆತ್ಮ, ಜೀವಾತ್ಮಗಳು. ಪ್ರಕೃತಿ, ಆತ್ಮ, ಜೀವಾತ್ಮಗಳನ್ನು ಒಂದು ಸಮಯದಲ್ಲಿಯೇ, ಸೃಷ್ಠಿ ಆದಿಯಲ್ಲಿಯೇ ತಯಾರು ಮಾಡಿದರೂ, ಮೊದಲು ಸೃಷ್ಠಿಸಿರುವುದು ಪ್ರಕೃತಿಯನ್ನು, ನಂತರ ಸೃಷ್ಠಿಸಿರುವುದು ಆತ್ಮ, ಜೀವಾತ್ಮಗಳನ್ನು. ಎಲ್ಲ ಒಂದೇ ಬಾರಿ ತಯಾರಾದರೂ ವರಸೆ ಕ್ರಮದಲ್ಲಿ ಪ್ರಕೃತಿಯೇ ಮುಂದಿದೆಯೆಂದು ತಿಳಿಯುತ್ತಿದೆ. ಪ್ರಕೃತಿ ನಂತರ ಆತ್ಮ, ಜೀವಾತ್ಮಗಳಿವೆಯೆಂದು ಎಲ್ಲರಿಗೂ ತಿಳಿಯುವಂತೆ, ಪ್ರಸ್ತುತ ಪ್ರಪಂಚದಲ್ಲಿ ಒಂದು ವಿಧಾನ ಜಾರಿಯಲ್ಲಿದೆ. ಆ ವಿಧಾನ ಜಾರಿಯಲ್ಲಿದ್ದರೂ, ಇದು ಇಂತದ್ದೆ ಗುರುತು ಎಂದು ಯಾರೂ ಗುರುತಿಸಲಾಗದೆ ಹೋಗುತ್ತಿದ್ದಾರೆ. ಯಾವುದಕ್ಕಾದರು ಪ್ರಶ್ನೆ ಇದ್ದರೆ ಉತ್ತರಕ್ಕಾಗಿ ಹುಡುಕುತ್ತೇವೆ. ಪ್ರಶ್ನೆ ಇಲ್ಲದಿರುವಾಗ ಉತ್ತರ ಯಾವುದೊ ತಿಳಿಯದು. ಇಂದಿನ ಮಾನವನು ಹಣ ಸಂಪಾದನೆಯ ಮೇಲೆಯೇ ತನ್ನ ಬುದ್ಧಿಯನ್ನೆಲ್ಲಾ ಉಪಯೋಗಿಸುತ್ತಿದ್ದಾನೆ. ಆದ್ದರಿಂದ ಆತನಿಗೆ ಉಳಿದ ಯಾವುದರ ಮೇಲೆ ಪ್ರಶ್ನೆ ಬರುವುದಿಲ್ಲ. ಮನುಷ್ಯ ತನ್ನನ್ನು ಕುರಿತಾಗಲಿ, ತನಗಿಂತ ಮುಂದಿರುವ ಪ್ರಪಂಚವನ್ನು ಕುರಿತಾಗಲಿ ಯೋಚಿಸುವುದಿಲ್ಲ. ಯಾರೂ ಯೋಚಿಸದಿದ್ದರೂ, ಪ್ರಶ್ನಿಸದಿದ್ದರೂ, ಅವರ ಪರವಾಗಿ ನಾವೇ ಪ್ರಶ್ನೆಹಾಕಿಕೊಂಡು ನಾವೇ ಉತ್ತರ ಹೇಳಿಕೊಳ್ಳೋಣ. ಇಲ್ಲಿ ಪ್ರಶ್ನೆ ನಮ್ಮದೆ, ಉತ್ತರ ನಮ್ಮದೇಯೆಂದು ಇಷ್ಟಬಂದಂತೆ ಹೇಳಬಾರದು. ಉತ್ತರ ಶಾಸ್ತ್ರಬದ್ಧವಾಗಿ ಇರಬೇಕು. ಇದು ದೈವಜ್ಞಾನ ಆದ್ದರಿಂದ ಪ್ರತಿಮಾತು ಸೂತ್ರಬದ್ಧವಾಗಿ ಇರಬೇಕು, ಹಾಗಲ್ಲದೆ ಹೋದರೆ ಎಲ್ಲಾ ಅಸತ್ಯವಾಗಿ ಹೋಗುತ್ತದೆ.

ಈಗ ಒಂದು ಪ್ರಶ್ನೆಯನ್ನು ಪ್ರಶ್ನಿಸಿಕೊಳ್ಳೋಣ. ಅದೇನೆಂದರೆ! ದೈವವು ಸೃಷ್ಠಿ ಆದಿಯಲ್ಲಿ ಮೊದಲು ಪ್ರಕೃತಿಯನ್ನೇ ಏಕೆ ಸೃಷ್ಠಿಸಬೇಕು? ಆತ್ಮ, ಜೀವಾತ್ಮಗಳನ್ನು ಏಕೆ ಮೊದಲು ಸೃಷ್ಠಿಸಲಿಲ್ಲ? ವರಸೆ ಕ್ರಮದಲ್ಲಿ ಪ್ರಕೃತಿಯೇ

ಮೊದಲು ಇರಬೇಕಾದ ಅವಶ್ಯವೇನು? ಅದಕ್ಕೆ ಉತ್ತರ ಏನೆಂದರೆ! ಒಂದು ವಸ್ತು ಹೊರಗೆ ಗೊತ್ತಾಗದಂತಿರುವುದಕ್ಕೆ ಅದರ ಮೇಲೆ ಏನಾದರು ಹೊದಿಸಿರುತ್ತೇವೆ. ಉದಾಹರಣೆಗೆ ಒಂದು ಧಾನ್ಯದ ಕುಪ್ಪೆಯನ್ನು (ರಾಶಿಯನ್ನು) ದೊಡ್ಡ ಬಟ್ಟೆಯನ್ನು ಉಪಯೋಗಿಸಿ ಹೊದಿಸಿ ಇಟ್ಟಿದ್ದೇವೆ ಎಂದುಕೊಳ್ಳೋಣ. ಆಗ ನೋಡುವುದಕ್ಕೆ ಮೊದಲು ಹೊರಗಿರುವ ಬಟ್ಟೆಯೇ ಕಾಣಿಸುತ್ತದೆ. ಬಟ್ಟೆಕೆಳಗೆ ಏನಿದೆಯೆನ್ನುವುದು ಹೊದಿಸಿ ಇಟ್ಟವರಿಗೆ ಹೊರತು ಬೇರೆ ಯಾರಿಗೂ ಗೊತ್ತಿರುವುದಿಲ್ಲ. ಬಟ್ಟೆ ಎತ್ತರವಾಗಿದೆಯಲ್ಲ? ಅದು ಹೀಗೆ ಎತ್ತರವಾಗಿ ಇರುವುದಕ್ಕೆ ಕೆಳಗೆ ಆಧಾರವಾಗಿ ಏನಾದರು ಇದೆಯಾ? ಎಂದು ಯೋಚಿಸುವವರು ಬಟ್ಟೆಯನ್ನು ತೊಲಗಿಸಿ ನೋಡಬಲ್ಲರು. ಹಾಗೆ ಬಟ್ಟೆಯನ್ನು ತೊಲಗಿಸಿ ನೋಡಿದವರಿಗೆ ಮಾತ್ರವೆ ಒಳಗಿರುವ ಧಾನ್ಯ ಕಾಣಿಸುತ್ತದೆ. ಬಟ್ಟೆ ಎತ್ತರವಾಗಿ ಹೇಗೆ ನಿಂತಿದೆ? ಎಂದು ಪ್ರಶ್ನೆ ಬಾರದವರಿಗೆ, ಅದನ್ನು ಕುರಿತು ಯೋಚಿಸದವರಿಗೆ, ಮೇಲಿರುವ ಬಟ್ಟೆ ಮಾತ್ರ ಗೊತ್ತಾಗುತ್ತದೆ. ಒಳಗೆ ಒಂದಿದೆಯೆಂದಾಗಲಿ, ಒಳಗಿರುವುದು ಏನೆಂದಾಗಲಿ ತಿಳಿದಿರುವುದಿಲ್ಲ. ಅದೇ ವಿಧವಾಗಿ ದೈವ, ಪ್ರಕೃತಿ ಎನ್ನುವ ಬಟ್ಟೆಯ ಕೆಳಗೆ ಆತ್ಮ, ಜೀವಾತ್ಮಗಳನ್ನು ಇಟ್ಟಿದ್ದಾನೆ. ಆತ್ಮ, ಜೀವಾತ್ಮಗಳನ್ನು ಪ್ರಕೃತಿ (ಮಾಯೆ) ಎನ್ನುವ ಬಟ್ಟೆ ಹೊದಿಸಿರುವುದರಿಂದ, ಹೊರಗೆ ಎಲ್ಲರಿಗು ಪ್ರಕೃತಿಯೆ ಕಾಣಿಸುವುದಾಗಲಿ ಆತ್ಮ, ಜೀವಾತ್ಮಗಳು ಯಾರಿಗು ಕಾಣಿಸವು. ಯಾರಾದರೂ ನೂರಕ್ಕೊ, ಕೋಟಿಗೊ ಒಬ್ಬನು ಪ್ರಕೃತಿ ಕೆಳಗೆ ಏನಿದೆ? ಪ್ರಕೃತಿ ಏನನ್ನು ಹೊದಿಸಿದೆ? ಎಂದು ಪ್ರಶ್ನಿಸಿಕೊಂಡು ಮೊದಲು ಪ್ರಕೃತಿಯನ್ನು ಕುರಿತು ತಿಳಿದುಕೊಂಡು, ಎಲ್ಲಿ ಹಿಡಿದು ಎಳೆದರೆ ಪ್ರಕೃತಿ ಮುಸುಗು ಹೋಗುತ್ತದೊ ತಿಳಿದುಕೊಂಡು, ನಂತರ ಜ್ಞಾನವೆನ್ನುವ ವಿಧಾನದಿಂದ, ಮಾಯೆ ಎನ್ನುವ ಪ್ರಕೃತಿಯನ್ನು ತೊಲಗಿಸಿ ನೋಡಿದರೆ ಆತ್ಮ, ಜೀವಾತ್ಮಗಳು ಯಾರೋ ತಿಳಿಯುವರು. ಆಗ ಆತ್ಮ ಜೀವಾತ್ಮಗಳಿಂದ ಅವರನ್ನು ಮುಚ್ಚಿಟ್ಟ ಪರಮಾತ್ಮನನ್ನು ತಿಳಿಯಬಹುದು. ಹಾಗೆ ತಿಳಿದಾಗ ತಿಳಿಯಲ್ಪಟ್ಟಿರುವ ಅದಕ್ಕೆ ಬೆಲೆ ಇರುತ್ತದೆ. ಮನುಷ್ಯ ಹುಡುಕಿ ತಿಳಿದುಕೊಳ್ಳುವುದಕ್ಕೆ ದೇವರು, ಪ್ರಕೃತಿಯನ್ನು ಮೇಲೆ ಅಡ್ಡ

ಇಟ್ಟಿದ್ದಾನೆ. ಮೊದಲು ಜೀವಾತ್ಮ, ಆತ್ಮಗಳ ವಿಷಯಗಳು ತಿಳಿಯದಂತೆ ಇರುವುದಕ್ಕೆ ಪ್ರಕೃತಿಯನ್ನು ಅಡ್ಡವಾಗಿ ಮಾಯೆರೂಪದಲ್ಲಿ ನಮ್ಮ ತಲೆಯಲ್ಲಿಯೇ ಇಟ್ಟಿದ್ದಾನೆ. ಆದ್ದರಿಂದ ಮನುಷ್ಯನ ಎಲ್ಲ ವಿಧಾನಗಳೆಲ್ಲದರಲ್ಲಿಯು ಮೊದಲಸ್ಥಾನ ಮಾಯೆಗೆ ಅಥವಾ ಪ್ರಕೃತಿಗೆ ದಕ್ಕಿದೆ.

ಆತ್ಮ, ಜೀವಾತ್ಮಗಳ ವಿಧಾನವನ್ನು ಪ್ರಕೃತಿಯಿಂದ ಮುಚ್ಚಿಟ್ಟು, ಮೊದಲು ಪ್ರಕೃತಿಯೆ ತಿಳಿಯುವಂತೆ ಮಾಡಿದ ಪರಮಾತ್ಮ, ತನ್ನಿಂದ ತಯಾರು ಮಾಡಲಾದ ಪ್ರಕೃತಿಯನ್ನು (ಮಾಯೆಯನ್ನು) ಮನುಷ್ಯನ ವಿಧಾನಗಳೆಲ್ಲದರಲ್ಲಿಯು ಮೊದಲ ಸ್ಥಾನದಲ್ಲಿ ಇಟ್ಟಿರುವ ಪರಮಾತ್ಮ, ಕಾಣಿಸದ ಕಾರಣವಾದ ತನಗೆ (ಪರಮಾತ್ಮನಿಗೆ) ಕಾಣಿಸುವ ಕಾರ್ಯವಾದ ಪ್ರಕೃತಿಯನ್ನು ಕವಚವಾಗಿ ಇಟ್ಟುಕೊಂಡ ಪರಮಾತ್ಮ, ತನ್ನಿಂದ ಸೃಷ್ಟಿಸಲ್ಪಟ್ಟ ಆತ್ಮ, ಜೀವಾತ್ಮಗಳಿಗಿಂತ ಮೊದಲು ಸೃಷ್ಟಿಸಲ್ಪಟ್ಟಿರುವುದು ಪ್ರಕೃತಿಯೆಂದು ಎಲ್ಲರಿಗು ತಿಳಿಯುವಂತೆ, ಮನುಷ್ಯರ ನಡುವೆ ಪ್ರಕೃತಿಗೆ ಸಂಬಂಧಿಸಿದ ಪದವನ್ನೆ ಮೊದಲು ಉಚ್ಚರಿಸುವಂತೆ ಅಳವಡಿಸಿದ್ದಾನೆ. ಪರಮಾತ್ಮ ಪುಲ್ಲಿಂಗ, ಪ್ರಕೃತಿ ಸ್ತ್ರೀಲಿಂಗ ಎಂದು ಆಧ್ಯಾತ್ಮಿಕ ವಿದ್ಯೆಯಲ್ಲಿ ಹೇಳಲಾಗಿದೆ. ಆದ್ದರಿಂದ ಎಲ್ಲಾದರು ಪರಮಾತ್ಮನಿಗೆ ಸಂಬಂಧಿಸಿದ ಪುಂಲಿಂಗಕ್ಕಿಂತ, ಪ್ರಕೃತಿಗೆ ಸಂಬಂಧಿಸಿದ ಸ್ತ್ರೀಲಿಂಗವನ್ನೇ ಮೊದಲು ಹೇಳುವಂತೆ ಅಥವಾ ಮಾತನಾಡು ವಂತೆ ದೇವರು ಅಳವಡಿಸಿದ್ದಾನೆ. ಅದು ಹೇಗೆಂದರೆ! ನಾವು ಮಾತನಾಡುವ ಭಾಷೆ ಯಾವುದಾದರು ಆಗಿರಬಹುದು, ಅದರಲ್ಲಿ ಮೊದಲು ಸ್ತ್ರೀ ತತ್ವವಾದ ಶಬ್ದವನ್ನೇ ಉಚ್ಚರಿಸುತ್ತಿದ್ದೇವೆ. ಉದಾಹರಣೆಗೆ ಹೆಣ್ಣು ಗಂಡು, ಸ್ತ್ರೀ ಪುರುಷರು, ಹೆಂಡತಿ ಗಂಡ, ಪಾರ್ವತಿ ಪರಮೇಶ್ವರರು, ಲಕ್ಷ್ಮಿನಾರಾಯಣರು, ರಾಧಾಕೃಷ್ಣ, ಸೀತಾರಾಮ, ಪ್ರಕೃತಿ ಪುರುಷರು ಎಂದು ಮಾತನಾಡುವುದು ಎಲ್ಲರಿಗು ತಿಳಿದ ವಿಷಯವೆ. ಇಲ್ಲಿ ಎಲ್ಲಕಡೆ ಪ್ರಕೃತಿ (ಹೆಣ್ಣು) ವಿಧಾನವೇ ಮೊದಲಿಗಿದೆ. ಆದರೆ ಯಾವ ಮನುಷ್ಯ ಸಹ ಹೀಗೆ ಏಕೆ ಇದೆ ಎಂದು ಯೋಚಿಸುವುದಿಲ್ಲ. ಹಾಗೆ ಯೋಚಿಸಿದರೆ ಅದಕ್ಕೆ ಸಮಾಧಾನ ಆರನೇ ಶಾಸ್ತ್ರವಾದ ರಾಜವಿದ್ಯಾ ಶಾಸ್ತ್ರದಲ್ಲಿಯೇ ದೊರಕುತ್ತದೆ. ಯಾರಾದರು ಪ್ರಶ್ನಿಸಿಕೊಂಡು ಸಮಾಧಾನಕ್ಕಾಗಿ

ಅನ್ವೇಷಣೆ ಮಾಡಿದರೆ, ದೇವರು ಸೃಷ್ಠಿ ಆದಿಯಲ್ಲಿ ಪ್ರಕೃತಿಯನ್ನು ತಯಾರು ಮಾಡಿದಹಾಗೆ ತಿಳಿಯುತ್ತದೆ. ಹಾಗೆ ಏಕೆ ಮಾಡಿದ್ದಾನೊ ಸಹ ತಿಳಿಯುತ್ತದೆ, ಅಷ್ಟೇ ಅಲ್ಲದೆ ತಯಾರು ಮಾಡಿದವನು ಯಾರೊ ಸಹ ತಿಳಿಯುತ್ತದೆ. ಮೊದಲು ಕಾಣಿಸುವ ಪ್ರಕೃತಿಯನ್ನು ಆಧಾರ ಮಾಡಿಕೊಂಡು, ಅದನ್ನು ತಯಾರುಮಾಡಿದ, ಕಾಣಿಸದವನನ್ನು ಕಂಡು ಕೊಳ್ಳುವುದೆ ಮುಖ್ಯವಾದ ಪರಿಶೋಧನೆ. ಹಾಗೆ ಪರಿಶೋಧನೆಯಲ್ಲಿ ಮುಂದಕ್ಕೆ ಹೋದರೆ ತಿಳಿಯುವುದು ಏನೆಂದರೆ!

ರಾಜ ರಾಜಧಾನಿಯಲ್ಲಿ ಇರುವನು, ರಾಜನವೊಂದು ಪರಿಪಾಲನೆ ರಾಜ್ಯದಲ್ಲಿ ಇರುವುದು. ರಾಜಧಾನಿಯಲ್ಲಿರುವ ರಾಜನನ್ನು ಪ್ರಭು ಎನ್ನುತ್ತಾರೆ. ಆತನ ರಾಜ್ಯದಲ್ಲಿರುವ ಪರಿಪಾಲನೆಯನ್ನು ಪ್ರಭುತ್ವ ಎನ್ನುತ್ತಾರೆ. ಪ್ರಭುತ್ವ ಎಲ್ಲಿಯವರೆಗು ವಿಸ್ತರಿಸಿದೆಯೊ, ಅಲ್ಲಿಯವರೆಗೂ ಪ್ರಭು ಕಾಣಿಸದಂತಿರುವನು. ಕಾಣಿಸದ ಪ್ರಭುವಿನ ಯೋಚನೆಗಳು (ಪ್ರಣಾಳಿಕೆಗಳು) ಕಾಣಿಸುವ ಪರಿಪಾಲಕರಿಂದ ಜಾರಿ ಮಾಡಿಸಲ್ಪಡುತ್ತದೆ. ಕಾಣಿಸದ ಪ್ರಭು ಅಥವಾ ರಾಜ ದೇವರಾದರೆ ರಾಜ್ಯದಲ್ಲಿ ಕೆಲಸ ಮಾಡುವವರು ಮತ್ತು ಮಾಡಿಸುವವರು ಮುಖ್ಯವಾಗಿ ಕಾಣಿಸುವ ಐದು ಜನ ಅಧಿಕಾರಿಗಳು ಇರುವರು. ರಾಜ್ಯದಲ್ಲಿ ಕಾಣಿಸುತ್ತಾ ತಾವು ಕೆಲಸಮಾಡುತ್ತಾ, ತಮ್ಮ ಅನುಚರರಿಂದ ಕೆಲಸ ಮಾಡಿಸುತ್ತಾ, ರಾಜ್ಯದಲ್ಲಿ ಪರಿಪಾಲನೆ ಸಕ್ರಮವಾಗಿ ಸಾಗುವಂತೆ ಮಾಡುವ ಐವರನ್ನು ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎಂದು ಹೇಳಬಹುದು. ಇಲ್ಲೊಂದು ವಿಚಿತ್ರ ಸಮಾಚಾರ ನಾವು ಹೇಳದೆ ತಪ್ಪುವುದಿಲ್ಲ. ಅದೇನೆಂದರೆ! ಪರಿಪಾಲನಾಕರ್ತನಾದ ಪ್ರಭು ಪುರುಷನೆ! ಪರಿಪಾಲಿಸಲ್ಪಡುವ ಪ್ರಜೆಗಳು ಪುರುಷರೆ! ಇನ್ನು ಮಧ್ಯೆದಲ್ಲಿ ಪರಿಪಾಲನೆ ಮಾಡುವವರು ಮಾತ್ರ ಎಲ್ಲರು ಸ್ತ್ರೀಯರೆ. ವಿವರವಾಗಿ ಹೇಳಿದರೆ ಪ್ರಭು ಅಥವಾ ರಾಜ ದೇವರಾದರೆ, ಪ್ರಜೆಗಳು ಜೀವಿಗಳಾದರೆ, ಪರಿಪಾಲಿಸುವ ಮುಖ್ಯ ಅಧಿಕಾರಿಗಳು ಐವರು. ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ. ಈ ಐದು ಜನ ಸ್ತ್ರೀಯರನ್ನು ಸೇರಿಸಿದರೆ ಒಂದೇ ಪ್ರಕೃತಿ ಎಂದು ಹೇಳಬಹುದು. ಒಬ್ಬನೇ ಪುರುಷನಾದ ಪರಮಾತ್ಮ ಆತ್ಮ, ಜೀವಾತ್ಮಗಳಾಗಿ ವಿಭಜಿಸಲ್ಪಟ್ಟಂತೆ,

ಒಂದೇ ಸ್ತ್ರೀ ಆದ ಪ್ರಕೃತಿ ಆಕಾಶ, ಗಾಳಿ, ಅಗ್ನಿ, ನೀರು ಭೂಮಿಯಾಗಿ ವಿಭಜಿಸಲ್ಪಟ್ಟಿದೆ. ರಾಜ ಪುರುಷ, ರಾಜ್ಯಾಂಗ ಸ್ತ್ರೀ. ಪರಮಾತ್ಮನ ರಾಜ್ಯದಲ್ಲಿ ಪ್ರಕೃತಿಯ ಪರಿಪಾಲನೆ ನಡೆಯುತ್ತಿದೆ. ವಿವರವಾಗಿ ಹೇಳಿದರೆ **ಮಗ ರಾಜನ ಕೆಳಗೆ ಹೆಣ್ಣಿನ ಪರಿಪಾಲನೆ ನಡೆಯುತ್ತಿದೆಯೆಂದು ಅರ್ಥಮಾಡಿಕೊಳ್ಳಬೇಕು**.

ಈಗ ಪರಿಪಾಲನಾ ವಿಭಾಗಕ್ಕೆ ಬಂದು ನೋಡಿ, ಅಲ್ಲಿರುವ ವಿವರವೆಲ್ಲಾ ತಿಳಿದುಕೊಳ್ಳೋಣ. ಪರಿಪಾಲನೆಯಲ್ಲಿ ಪ್ರಧಾನಪಾತ್ರ ಪೋಷಿಸುತ್ತಿದೆ ಪ್ರಕೃತಿ. ಪ್ರಕೃತಿ ಐದು ಭಾಗಗಳಾಗಿ ಬೇರ್ಪಟ್ಟು ವಿಶ್ವವೆಲ್ಲಾ ತುಂಬಿರುವ ಜಗತ್ತಿನಲ್ಲಿ ಪಾಲನೆ ಸಾಗಿಸುತ್ತಿದೆ. ಭೂಮಿ ಮೇಲಿರುವ ಜೀವರಾಶಿಗಳೆಲ್ಲವನ್ನು ಸೇರಿಸಿ ಜಗತಿ ಎನ್ನುತ್ತಿದ್ದೇವೆ. ಜಗತಿಯನ್ನು ಬಿಡಿಬಿಡಿಯಾಗಿ ನೋಡಿದರೆ ಒಂದೊಂದು ಜೀವಿಗೆ ಒಂದೊಂದು ಶರೀರವಿದೆ. ಜೀವಿಯ ಶರೀರದಲ್ಲಿಯು ಸಹ ಐದು ಭಾಗಗಳಾಗಿ ಪ್ರಕೃತಿಯಿದೆ. ಹೊರಗೆ ಪಂಚಮಹಾಭೂತಗಳಾಗಿರುವ ಪ್ರಕೃತಿ, ಶರೀರದಲ್ಲಿ ಪಂಚ ಸ್ವಲ್ಪ ಭೂತಗಳಾಗಿ ಇದೆ. ಶರೀರದ ಹೊರಗೆ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಯಾಗಿರುವ ಪ್ರಕೃತಿ, ಶರೀರದೊಳಗು ಸಹ ಆ ಹೆಸರುಗಳಿಂದಲೆ ಇದೆ. ಶರೀರದ ಹೊರಗೆ ಐದು ಮಹಾಭೂತಗಳಾಗಿರುವ ಪ್ರಕೃತಿ ಐದು ಭೂತಗಳಿಂದ ಭೂಕಂಪಗಳು, ಪ್ರವಾಹಗಳು ಸುನಾಮಿಗಳು, ಅಗ್ನಿಪರ್ವತ ಸ್ಫೋಟಗಳು, ಸುಳಿಗಾಳಿಗಳ ವಿಜೃಂಭಣೆ ಮೊದಲಾದ ಭೀಭತ್ಸಗಳನ್ನು ಸೃಷ್ಠಿಸುತ್ತಿದೆ. ಶರೀರದೊಳಗಿರುವ ಐದು ಸ್ವಲ್ಪ ಭೂತಗಳಾಗಿರುವ ಪ್ರಕೃತಿ ಎಷ್ಟೋ ರೋಗಗಳನ್ನು, ತನ್ನ ಭಾಗಗಳಿಂದ ಸೃಷ್ಠಿಸುತ್ತಿದೆ. ಶರೀರದಲ್ಲಿ ನಿವಾಸಮಾಡುವ ಜೀವಾತ್ಮನು, ದುಃಖವನ್ನು ಹೊಂದಬೇಕೆಂದರೂ, ಅಥವಾ ಸುಖವನ್ನು ಹೊಂದಬೇಕೆಂದರು ಪಂಚಭೂತಗಳು ಕೆಲಸ ಮಾಡಬೇಕಾದ್ದೇ! ಶರೀರದಲ್ಲಿ ಶ್ವಾಸ ಗಾಳಿ, ಕಂಕುಳದಲ್ಲಿ ಬಿಸಿ, ನಾಲಿಗೆ ತೇವ, ಕಿವಿ ಆಕಾಶ, ಚರ್ಮದ ಮೇಲೆ ಮಣ್ಣು ಕಾಣಿಸುತ್ತಾ ಪಂಚಭೂತಗಳು ತಿಳಿಯುತ್ತಿದ್ದರೂ, ಶರೀರದಲ್ಲಿನ ಮುಖ್ಯ ಭಾಗಗಳು ಇಪ್ಪತ್ತು ನಾಲ್ಕು (24) ಪಂಚಭೂತಗಳಿಂದಲೆ ತಯಾರಾಗಿವೆ. 24 ಭಾಗಗಳು ಕೆಲಸ ಮಾಡುವುದಕ್ಕೆ ಅನುಬಂಧವಾಗಿ

ಶರೀರದೊಳಗೆ ಮತ್ತೆ ಕೆಲವು ಅವಯವಗಳು ಸಹ ತಯಾರಾಗಿವೆ. ಈ ವಿಧವಾಗಿ 24 ಭಾಗಗಳು, ಅವುಗಳ ಅನುಬಂಧ ಭಾಗಗಳು ಎಲ್ಲವನ್ನು ಸೇರಿಸಿ ಶರೀರ ಎನ್ನುತ್ತಿದ್ದೇವೆ.

ಶರೀರವೆಲ್ಲಾ ಪ್ರಕೃತಿ ಭಾಗಗಳಿಂದ ತಯಾರು ಮಾಡಲಾಗಿದೆ, ಆದ್ದರಿಂದ ಶರೀರವನ್ನು ಸ್ತ್ರೀ ಲಿಂಗಕ್ಕೆ ಸೇರಿರುವುದೆಂದು ಹೇಳಿಕೊಳ್ಳುತ್ತಿದ್ದೇವೆ. ಆತ್ಮ, ಜೀವಾತ್ಮ ಎರಡು ಪುಂಲಿಂಗಕ್ಕೆ ಸಂಬಂಧಿಸಿರುವವು ಆದ್ದರಿಂದ ಎರಡು ಆತ್ಮಗಳನ್ನು ಪುರುಷರಂತೆ ಹೇಳಿಕೊಳ್ಳುತ್ತಿದ್ದೇವೆ. ಪ್ರಕೃತಿಯಾದ ಪಂಚಭೂತಗಳು ಹೆಂಡತಿಯ ಸ್ಥಾನದಲ್ಲಿದ್ದರೆ, ಪರಮಾತ್ಮ ಗಂಡನ ಸ್ಥಾನದಲ್ಲಿ ಇದ್ದಾನೆ. ಜೀವಾತ್ಮ ಎನ್ನುವವನು ಪ್ರಕೃತಿ, ಪರಮಾತ್ಮರಿಂದ ಹುಟ್ಟಿದ್ದಾನೆ, ಆದ್ದರಿಂದ ಜೀವಾತ್ಮನಿಗೆ ಪ್ರಕೃತಿ ತಾಯಿ, ಪುರುಷೋತ್ತಮನಾದ ಪರಮಾತ್ಮ ತಂದೆ ಎಂದು ಭಗವದ್ಗೀತೆಯಲ್ಲಿ ಹೇಳಲಾಗಿದೆ. ಇನ್ನು ಆತ್ಮ ವಿಷಯಕ್ಕೆ ಬಂದರೆ ಆತ್ಮ ಪ್ರತ್ಯೇಕವಾದದ್ದು. ಪ್ರಕೃತಿ ಆತ್ಮ ತಯಾರಾಗುವುದಕ್ಕೆ ಯಾವ ಉಪಯೋಗಪಟ್ಟಿಲ್ಲ. ದೇವರು ಪ್ರಕೃತಿಯನ್ನು ತಯಾರು ಮಾಡಿದ ತಕ್ಷಣವೆ ಆತ್ಮವನ್ನು ತಯಾರು ಮಾಡಿದ್ದಾನೆ. ಆತ್ಮವನ್ನು ಮಾಡಿದ ನಂತರ ಪ್ರಕೃತಿಯನ್ನು ಹೆಂಡತಿಯಾಗಿ ಉಪಯೋಗಿಸಿಕೊಂಡು ಜೀವಿಯನ್ನು ಹುಟ್ಟಿಸಿದ್ದಾನೆ ಅಥವಾ ತಯಾರುಮಾಡಿದ್ದಾನೆ. ಆದ್ದರಿಂದ ಪ್ರಕೃತಿ ಪರಮಾತ್ಮರು ಜೀವಿಗಳಿಗೆ ಶಾಶ್ವತವಾದ ತಾಯಿ ತಂದೆಯಾದರೆ, ಆತ್ಮ, ಪ್ರಕೃತಿಗೆ ಸೋದರನು ಆಗುತ್ತದೆ. ದೈವಸೃಷ್ಟಿಯಲ್ಲಿ ಮೊದಲು ಪ್ರಕೃತಿ ಹುಟ್ಟಿದಾಗ, ಅದನ್ನು ಅನುಸರಿಸಿ ಎರಡನೆಯದಾಗಿ ಹುಟ್ಟಿರುವುದು ಆತ್ಮ ಆದ್ದರಿಂದ, ಪ್ರಕೃತಿಗೆ ಆತ್ಮ ಅನುಜನು (ತಮ್ಮ) ಆಗುವನು. ಪ್ರಕೃತಿಗೆ ಆತ್ಮ ತಮ್ಮನಾದರೆ, ಜೀವಾತ್ಮನು ಕುಮಾರನಾಗುವನು. ಸ್ವಚ್ಛವಾಗಿ ಪರಮಾತ್ಮನಿಂದ ಉದ್ಭವಿಸಿದವನು ಆತ್ಮ. ಆತ್ಮ, ಜೀವಾತ್ಮನಿಗೆ ಜೊತೆಯಾಗಿ ಶರೀರದೊಳಗಿನ ಪುರುಷನಾಗಿ ಇದ್ದಾನೆ. ಚೈತನ್ಯಶಕ್ತಿಯಾಗಿ ಶರೀರದಲ್ಲಿ ಇದ್ದು, ಶರೀರದೊಳಗಿನ ದೇವರಾಗಿ ಗುರುತುಹೊಂದಿದ್ದಾನೆ. ಪರಮಾತ್ಮ ಶಕ್ತಿಗೆ ನಮೂನೆಯಾಗಿ ದೇಹದೊಳಗೆ ಆತ್ಮ ಇದೆ. ಹೊರಗಿನ ಪ್ರಪಂಚದಲ್ಲಿ

ಪಂಚಮಹಾಭೂತಗಳಿಗೆ ಪರಮಾತ್ಮ ಅಧಿಪತಿಯಾಗಿ ಇದ್ದಂತೆ, ದೇಹದೊಳಗೆ ಆತ್ಮ, ಪಂಚ ಸ್ವಲ್ಪ ಭೂತಗಳಿಗೆ ಅಧಿಪತಿಯಾಗಿ ಇದ್ದಾನೆ. ಪಂಚ ಮಹಾಭೂತಗಳು ಒಬ್ಬ ಪರಮಾತ್ಮನ ಮಾತು ಮಾತ್ರ ಕೇಳುವವು. ಹಾಗೆ ಶರೀರದೊಳಗಿನ ಪಂಚಸ್ವಲ್ಪಭೂತಗಳು ಆತ್ಮಮಾತನ್ನು ಕೇಳುವವು. ಹೀಗೆ ಎಷ್ಟೋ ವಿಧಗಳಲ್ಲಿ ಆತ್ಮ ಪ್ರತ್ಯೇಕತೆಯನ್ನು ಹೊಂದಿದೆ. ಅಷ್ಟೇ ಅಲ್ಲದೆ **ಎಂತಹ ಜ್ಞಾನಿಯಾಗಲಿ, ಮೊದಲು ಆತ್ಮವನ್ನು ತಿಳಿದುಕೊಳ್ಳಬೇಕಾದ್ದೇ.** ಆತ್ಮವನ್ನು ಅಧ್ಯಯನ ಮಾಡುವುದೇ ಆಧ್ಯಾತ್ಮಿಕ ಅನ್ನುತ್ತೇವೆ. ಆತ್ಮವನ್ನು ತಿಳಿಯದವನು ಪರಮಾತ್ಮ ಜ್ಞಾನವನ್ನು ತಿಳಿಯಲಾರನು.

ಈಗಿನ ಪ್ರಪಂಚದಲ್ಲಿ ದೊಡ್ಡ ಹೆಸರು ಪಡೆದ ಸ್ವಾಮೀಜಿಗಳಿಗು ಸಹ ಆತ್ಮ ವಿಷಯ ಅಣು ಮಾತ್ರ ಸಹ ತಿಳಿದಿಲ್ಲ. ಜೀವಾತ್ಮನನ್ನೇ ಆತ್ಮ ಎನ್ನುವವರು ಕೆಲವರಿದ್ದರೆ, ಪರಮಾತ್ಮನೆ ಆತ್ಮ ಎನ್ನುವವರು ಎಷ್ಟೋ ಜನ ಇದ್ದಾರೆ. ಇನ್ನೂ ಕೆಲವರು, ಮನಸ್ಸನ್ನು, ಬುದ್ಧಿಯನ್ನು, ಚಿತ್ತವನ್ನು, ಅಹಂನ್ನು ಮೊದಲಾದವುಗಳೆಲ್ಲವನ್ನು ಆತ್ಮವೇ ಎನ್ನುತ್ತಿದ್ದಾರೆ. ಆತ್ಮವನ್ನೇ ಮನಸ್ಸು ಎಂದು ಅನ್ನಬಹುದು, ಹಾಗೆ ಬುದ್ಧಿ ಎಂದು ಅನ್ನಬಹುದು ಎಂದು ಹೇಳುತ್ತಿದ್ದಾರೆ. ಒಟ್ಟಾರೆ ಆತ್ಮ ಎಂದರೆ ಇದು ಎಂದು, ಆತ್ಮದವೊಂದರ ಪಾತ್ರ ಇದು ಎಂದು ಶಾಸ್ತ್ರೀಯವಾಗಿ ಯಾರೂ ಹೇಳಲಾಗದೆ ಹೋಗುತ್ತಿದ್ದಾರೆ. ಭಗವದ್ಗೀತೆ ಶಾಸ್ತ್ರದಲ್ಲಿ ಆತ್ಮವನ್ನು ಉದ್ದೇಶಿಸಿ ಅಕ್ಷರ ಎಂದು ಭಗವಂತನು ಹೇಳಿದರೆ, ಗೀತೆಯನ್ನು ವ್ಯಾಖ್ಯಾನಿಸಿದವರೆಲ್ಲರು ಅಕ್ಷರನನ್ನು ಜೀವಾತ್ಮನಾಗಿ ಬರೆದುಕೊಂಡಿದ್ದಾರೆ. ದೊಡ್ಡ ಸ್ವಾಮೀಜಿಗಳಿಗೆ, ಪೀಠಾಧಿಪತಿಗಳಿಗೆ ಅಕ್ಷರನೆಂದರೆ ಯಾರೊ ತಿಳಿಯದೆ ಹೋದರೆ, ಸಾಮಾನ್ಯ ಪ್ರಜೆಗಳಿಗೆ ಆತ್ಮ ವಿಷಯ ಹೇಗೆ ತಿಳಿಯುತ್ತದೆ? ಇಲ್ಲಿಯವರೆಗು ಪ್ರಪಂಚದಲ್ಲಿನ ಮನುಷ್ಯರಲ್ಲಿ ಅಗಮ್ಯಗೋಚರವಾಗಿ ಇರುವುದು ಆತ್ಮ. ಒಂದು ಹಿಂದೂಮತದಲ್ಲಿಯೆ ಅಲ್ಲ, ಪ್ರಪಂಚದಲ್ಲಿನ ಯಾವ ಮತದಲ್ಲಿಯು ಸಹ ಆತ್ಮವೆಂದರೆ ಯಾರೊ ತಿಳಿದಿಲ್ಲ. ಆತ್ಮ ಎನ್ನುವ ಮಾತನ್ನು ಎಲ್ಲರು ಹೇಳಿಕೊಳ್ಳುತ್ತಿದ್ದಾರೆ. ಆತ್ಮ ಎನ್ನುವ ಪದವನ್ನು ಅಲ್ಲಲ್ಲಿ ಸ್ವಾಮೀಜಿಗಳು ಎಲ್ಲರು

ಉಪಯೋಗಿಸಿಕೊಳ್ಳುತ್ತಿದ್ದಾರೆ. ಆದರೂ ಅದು ಏನೊ? ಹೇಗಿದೆಯೊ? ಅದರ ಕೆಲಸವೇನೊ? ಅದು ಹೇಗೆ ತಯಾರಾಗಿದೆಯೊ? ಯಾವಾಗ ತಯಾರು ಮಾಡಲಾಗಿದೆಯೊ? ಜೀವಾತ್ಮನ ಬಗ್ಗೆ ಅದರ ಪಾತ್ರವೇನೊ? ಅದು ಶರೀರದಲ್ಲಿ ಎಲ್ಲಿದೆಯೋ ಯಾರಿಗಾದರೂ ಗೊತ್ತಾ? ಗುಂಡಿಗೆಯ ಮೇಲೆ ಕೈಇಟ್ಟುಕೊಂಡು ಯಾರಾದರು ಧೈರ್ಯವಾಗಿ ಆತ್ಮವೆಂದರೆ ಏನೊ ಹೇಳಬಲ್ಲಿರಾ? ಹೇಳಲಾರರು, **ಆದ್ದರಿಂದಲೇ ಭಗವದ್ಗೀತೆಯಲ್ಲಿ ಆತ್ಮವನ್ನು ಕುರಿತು ದೊಡ್ಡ ದೊಡ್ಡ ಸ್ವಾಮೀಜಿಗಳು ಸಹ ತಪ್ಪಾಗಿ ಬರೆದಿದ್ದಾರೆ**. ಆತ್ಮ ಯಾರಿಗೂ ತಿಳಿದಿಲ್ಲ ಎನ್ನುವುದಕ್ಕೆ, ನಾವು ಜ್ಞಾನಿಗಳು ಎಂದು ಗೀತೆಯನ್ನು ಬರೆದವರೆಲ್ಲರು ಆತ್ಮವನ್ನು ಕುರಿತು ತಪ್ಪಾಗಿ ಬರೆದಿರುವುದೇ ನಿದರ್ಶನ.

ಇಷ್ಟು ಜನರಿಗೆ ತಿಳಿಯದಿರುವುದು ಈತನಿಗೊಬ್ಬನಿಗೆ ಗೊತ್ತಾ? ಎಂದು ಎಷ್ಟು ಗರ್ವದಿಂದ ಮಾತನಾಡುತ್ತಿದ್ದಾನೆ? ಎಂದು ಕೆಲವರು ನನ್ನನ್ನು ಕುರಿತು ಅಂದುಕೊಳ್ಳಬಹುದು. ನನಗೆ ಗೊತ್ತಿದೆ ಎಂದು ನಾನು ಯಾವಾಗಲು ಹೇಳಿಲ್ಲ. ನನಗೆ ತಿಳಿದಿರುವುದು ಇಲ್ಲಿ ಬರೆದಿದ್ದೇನೆ, ನನ್ನೊಳಗಿನ ಆತ್ಮ ನನ್ನಿಂದ ಬರೆಯಿಸಿದರೆ ಬರೆಯುತ್ತಿದ್ದೇನೆ. ಈ ಮಾತುಗಳೆಲ್ಲ ನಾನು ಸ್ವಂತವಾಗಿ ಕೇಳುವವಲ್ಲ. ಆತ್ಮೆ ನಿಮ್ಮನ್ನು ಪ್ರಶ್ನಿಸುತ್ತಾ ಇದೆಯೆಂದು ನೀವೇಕೆ ಅಂದುಕೊಳ್ಳಬಾರದು? ನನಗೆ ಗೊತ್ತು, ಹೇಗೆ ಹೇಳಿದರೂ ನೀವು ನನ್ನನ್ನೆ ಅಂದುಕೊಳ್ಳುತ್ತೀರ. ಏಕೆಂದರೆ ಆತ್ಮವೆಂದರೆ ಯಾರೊ ನಿಮಗೆ ತಿಳಿದಿಲ್ಲವಲ್ಲ! ಯಾರಿಗೆ ತಿಳಿದರೂ, ತಿಳಿಯದಿದ್ದರೂ ಎಲ್ಲರ ಶರೀರಗಳಲ್ಲಿ ಜೀವಾತ್ಮನೊಂದಿಗೆ ಆತ್ಮನಿದ್ದಾನೆ. ಆತ್ಮ ಪುರುಷನೇ! ಪರಮಾತ್ಮ ಪುರುಷನೇ!! ಆತ್ಮ ಒಂದು ವಿಧವಾಗಿ ಪರಮಾತ್ಮನಿಂದ ಹುಟ್ಟಿರುವುದಕ್ಕೆ, ದೇವರಿಗೆ ಕುಮಾರನಾಗುತ್ತಾನೆ. ಮತ್ತೊಂದು ವಿಧವಾಗಿ ಪ್ರಕೃತಿಗೆ ತಮ್ಮ ಆಗಿರುವುದಕ್ಕೆ ದೇವರಿಗೆ ಬಾವಮೈದ ಆಗುವನು. ಜೀವಾತ್ಮನಿಗೆ ಮಾಮ ಆಗುವನು. ಇನ್ನು ಪ್ರಕೃತಿ, ಪರಮಾತ್ಮರಿಂದ ಹುಟ್ಟಿರುವುದಕ್ಕೆ ದೇವರಿಗೆ ಒಂದು ವಿಧವಾಗಿ ಮಗಳು ಆಗುವುದು. ಮತ್ತೊಂದು ವಿಧವಾಗಿ ದೇವರ ಬೀಜದಿಂದ ಜೀವಾತ್ಮನ ಶರೀರವನ್ನು ತಯಾರು ಮಾಡಿದೆ ಮತ್ತು

ಜೀವಾತ್ಮನು ಹುಟ್ಟುವುದಕ್ಕೆ ತಾನು ಸಹಕರಿಸಿರುವುದರಿಂದ ದೇವರಿಗೆ ಪತ್ನಿಯಾಗಿದೆ. ಜೀವಾತ್ಮನನ್ನು ದೇವರಕಡೆಗೆ ಹೋಗದಂತೆ ಪ್ರಕೃತಿ ಮಾಡುತ್ತಿದೆ, ಆದ್ದರಿಂದ ಜೀವಿಗೆ ಪ್ರಕೃತಿ ಒಂದು ವಿಧವಾಗಿ ಕೆಟ್ಟದ್ದನ್ನು ಮಾಡುವ ಮಾಯೆಯಂತೆ ಇದೆ. ಆತ್ಮ ಯಾವಾಗಲು ಜೀವಾತ್ಮನನ್ನು ಬಿಡದಂತೆ ಇದ್ದು ದೇವರಕಡೆಗೆ ಹೋಗುವುದಕ್ಕೆ ಅವಕಾಶ ಕಲ್ಪಿಸಿ ಒಳ್ಳೆಯದು ಮಾಡುತ್ತಿದೆ. ಆದ್ದರಿಂದ ಪಕ್ಕದವನಾಗಿ ಸ್ನೇಹಿತನಾಗಿ ಆತ್ಮವನ್ನು ಹೇಳಬಹುದು.

ಈಗ ಹೇಳಿರುವುದನ್ನು ಅನುಸರಿಸಿ ನೋಡಿದರೆ ಪ್ರಕೃತಿ ಆತ್ಮಕ್ಕೇನಾಗುತ್ತದೊ, ಪರಮಾತ್ಮಕ್ಕೇನಾಗುತ್ತದೊ, ಜೀವಾತ್ಮನಿಗೇನಾಗುತ್ತದೊ ಅರ್ಥವಾಗಿದೆ. ಹಾಗೆ ಆತ್ಮ ಪ್ರಕೃತಿಗೇನಾಗುತ್ತದೊ, ಪರಮಾತ್ಮಕ್ಕೇನಾಗುತ್ತದೊ, ಜೀವಾತ್ಮನಿಗೇನಾಗುತ್ತದೊ ಅರ್ಥವಾಗಿದೆ. ಜೀವಾತ್ಮ ಪ್ರಕೃತಿಗೆ ಏನಾಗುತ್ತದೊ, ಆತ್ಮಕ್ಕೆ ಏನಾಗುತ್ತದೊ, ಪರಮಾತ್ಮಕ್ಕೆ ಏನಾಗುತ್ತದೊ ಅರ್ಥವಾಗಿದೆ. ಹಾಗೆ ಪರಮಾತ್ಮಕಡೆಯಿಂದ ನೋಡಿದರೆ, ಪರಮಾತ್ಮ ಪ್ರಕೃತಿಗೆ ಏನಾಗುತ್ತದೊ, ಆತ್ಮಕ್ಕೆ ಏನಾಗುತ್ತದೊ ಜೀವಾತ್ಮಕ್ಕೆ ಏನಾಗುತ್ತದೊ ಅರ್ಥವಾಗಿದೆ. ಮೊದಲೆ ಸ್ವಲ್ಪ ಜ್ಞಾನ ತಿಳಿದವರಿಗಾದರು ಈ ವಾವಿ ವರಸೆಗಳು ಬೇಗ ಅರ್ಥವಾಗುವುದಿಲ್ಲ. ಆದ್ದರಿಂದ ಸ್ವಲ್ಪ ಶ್ರದ್ಧೆಯಿಂದ ಯೋಚನೆಮಾಡಿ, ನೋಡಿದರು ಹೇಳಿರುವುದೆಲ್ಲ ಸತ್ಯವೆಯೆಂದು ತಿಳಿಯುವುದು. ಅರ್ಥಮಾಡಿಕೊಂಡರೆ ಇದರಲ್ಲಿ ಜ್ಞಾನವೆ ಕಾಣಿಸುವುದು. ಅರ್ಥವಾಗದೆ ಹೋದರೆ ಅಜ್ಞಾನ ಕಾಣಿಸುವುದು. ದೇವರಿಗೆ ವಾವಿ ವರಸೆಗಳು ಇಲ್ಲ ಎನ್ನುವಂತೆ ಅರ್ಥವಾಗುತ್ತದೆ. ವಾವಿ ವರಸೆಗಳು ಇಲ್ಲದವನು ದೇವರು ಹೇಗಾಗುವನೆಂದು ಮಾಯೆ ಪ್ರೇರೇಪಿಸಬಲ್ಲದು. ಆದ್ದರಿಂದ ಯೋಚಿಸಿ ನಿಜ ತಿಳಿದುಕೊಳ್ಳಬೇಕೆನ್ನುತ್ತಿದ್ದೇವೆ.

ನಿಮಗೆ ಚೆನ್ನಾಗಿ ಅರ್ಥವಾಗುವುದಕ್ಕೆ ಕೆಳಗೆ ಪಟ್ಟಿರೂಪದಲ್ಲಿ ಬರೆಯುತ್ತಿದ್ದೇವೆ ನೋಡಿರಿ.

| | | |
|---|---|---|
| ಪ್ರಕೃತಿ ಆತ್ಮಕ್ಕೆ ಅಕ್ಕ | ಜೀವಾತ್ಮನಿಗೆ ತಾಯಿ<br>ಜೀವಾತ್ಮನಿಗೆ ಮಾಯೆ | ಪರಮಾತ್ಮನಿಗೆ ಪತ್ನಿ<br>ಪರಮಾತ್ಮನಿಗೆ ಮಗಳು |
| ಆತ್ಮ ಪ್ರಕೃತಿಗೆ ತಮ್ಮ | ಜೀವಾತ್ಮನಿಗೆ ಮಾಮ<br>ಜೀವಾತ್ಮನಿಗೆ ಸ್ನೇಹಿತ | ಪರಮಾತ್ಮನಿಗೆ ಮಗ<br>ಪರಮಾತ್ಮನಿಗೆ ಬಾವಮೈದ |
| ಜೀವಾತ್ಮ ಪ್ರಕೃತಿಗೆ ಪುತ್ರ<br>ಪ್ರಕೃತಿಗೆ ಕೀಲುಗೊಂಬೆ | ಆತ್ಮಕ್ಕೆ ಅಳಿಯ<br>ಆತ್ಮಕ್ಕೆ ಅನುಚರನು | ಪರಮಾತ್ಮನಿಗೆ ಮಗ |
| ಪರಮಾತ್ಮ ಪ್ರಕೃತಿಗೆ ಪತಿ<br>ಪ್ರಕೃತಿಗೆ ತಂದೆ | ಆತ್ಮಕ್ಕೆ ತಂದೆ<br>ಆತ್ಮಕ್ಕೆ ಬಾವ | ಜೀವಾತ್ಮನಿಗೆ ತಂದೆ |

ಇಲ್ಲಿಯವರೆಗೂ ತಿಳಿದುಕೊಂಡ ವಿಷಯಗಳಲ್ಲಿ ಆತ್ಮ, ಜೀವಾತ್ಮ, ಪರಮಾತ್ಮ ವಿವರವನ್ನು, ಮೂವರು ಪುರುಷರ ವಿಷಯುವನ್ನು ತಿಳಿದುಕೊಂಡಿದ್ದೇವೆ. ಮುಖ್ಯವಾಗಿ, ಮೊದಲು ತಿಳಿಯಬೇಕಾದ ಪ್ರಕೃತಿಯ ವಿಷಯಗಳನ್ನೇ ಇನ್ನೂ ತಿಳಿದುಕೊಳ್ಳಬೇಕಾದ ಅವಶ್ಯವಿದೆ. ಪ್ರಕೃತಿಯ ವಿಭಜನೆಯಲ್ಲಿಯು ಸಹ ಮಹಾಭೂತಗಳು, ಸ್ವಲ್ಪಭೂತಗಳವರೆಗು ತಿಳಿದುಕೊಂಡಿದ್ದೇವೆ. ಆದರೂ ಇನ್ನೂ ತಿಳಿದುಕೊಳ್ಳಬೇಕಾಗಿರುವುದು, ಮುಖ್ಯವಾಗಿ ನಮಗೆ ತಿಳಿಯದಿರುವುದು ಬಹಳ ಇದೆ. ಅದನ್ನು ಕುರಿತು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಿದರೆ, ಅಷ್ಟಕ್ಕೆ ಅಷ್ಟೂ ಆಗದಿದ್ದರೂ, ಸ್ವಲ್ಪಕ್ಕೆ ಸ್ವಲ್ಪವಾದರೂ ಅರ್ಥವಾಗುತ್ತದೆ. ರಾಜನ ಪರಿಪಾಲನೆಯಲ್ಲಿ ಮಂತ್ರಿ ಹತ್ತಿರದಿಂದ ಸಿಪಾಯಿವರೆಗು ಎಷ್ಟೋ ಮಂದಿ ಭಾಗಸ್ಥರಾಗಿ ಇರುವಂತೆ, ದೇವರ ಪರಿಪಾಲನೆಯಲ್ಲಿಯು ಸಹ ಪ್ರಕೃತಿ ಮೊದಲುಗೊಂಡು ಗ್ರಹಗಳವರೆಗು ಎಷ್ಟೋ ಜನ ಭಾಗಸ್ಥರಾಗಿ ಇದ್ದಾರೆಂದು ತಿಳಿಯುತ್ತದೆ. ದೇವರ ಪರಿಪಾಲನೆ ಸೃಷ್ಠಿಯೆಲ್ಲಾ ವ್ಯಾಪಿಸಿದೆ. ಪ್ರತಿ ಜೀವರಾಶಿ ಶರೀರದೊಳಗೆ ಪ್ರತಿ ಅಣುವಿನಲ್ಲೂ ವ್ಯಾಪಿಸಿರುವು ದರಿಂದ, ದೇವರ ಪಾಲನೆಯಿಂದ ಯಾರಾಗಲಿ ತಪ್ಪಿಸಿಕೊಳ್ಳುವ ಅವಕಾಶವಿರುವು ದಿಲ್ಲ. ಪ್ರತಿ ಜೀವರಾಶಿ ಶರೀರದಲ್ಲಿ ಸ್ವಲ್ಪ ಭೂತಗಳು ವ್ಯಾಪಿಸಿ ಪಾಲನೆ ಸಾಗಿಸುತ್ತಿವೆ. ಹಾಗೇ ಹೊರಗಿನ ಪ್ರಪಂಚದಲ್ಲಿ ಆಕಾಶ, ಗಾಳಿ, ಇಲ್ಲದ ಸ್ಥಳವಂತು ಇಲ್ಲ. ಹೊರಗೂ ಸಹ ಪಂಚಭೂತಗಳಿಗೆ ತಿಳಿಯದಂತೆ ಯಾರೂ ಏನು

ಮಾಡುವುದಕ್ಕೆ ಅವಕಾಶವಿಲ್ಲ. ಇತ್ತ ಶರೀರದ ಒಳಗಾಗಲಿ, ಅತ್ತ ಶರೀರದ ಹೊರಗಾಗಲಿ ಪಂಚಭೂತಗಳಿಗೆ ತಿಳಿಯದಂತೆ ಯಾರೂ ಏನೂ ಮಾಡಲಾರರು.

ದೇವರ ಪಾಲನೆ ಮಹಾಭೂತಗಳು, ಸ್ವಲ್ಪಭೂತಗಳು ಅನ್ನುವ ಎರಡು ಭಾಗಗಳಿಂದಲೆ ಅಲ್ಲದೆ ಮತ್ತೊಂದು ವಿಭಾಗದಿಂದಲು ಸಹ ಮಾಡಲ್ಪಡುತ್ತದೆ. ಇದನ್ನು ಅನುಸರಿಸಿ ನೋಡಿದರೆ ಪಾಲನೆ ವಿಧಾನ ಒಟ್ಟು ಮೂರು ಭಾಗಗಳಾಗಿ ಇದೆಯೆಂದು ಹೇಳಬಹುದು. ಮೂರು ಭಾಗಗಳಲ್ಲಿ ಎರಡು ಭಾಗಗಳು ನಮಗೆ ತಿಳಿದ ಮಹಾಭೂತಗಳು, ಸ್ವಲ್ಪಭೂತಗಳಾಗಿ ಇವೆ. ನಮಗೆ ಇಲ್ಲಿಯವರೆಗು ತಿಳಿಯದ ವಿಭಾಗದವೊಂದು ಹೆಸರು ಉಪಭೂತಗಳು.

**1) ಮಹಾಭೂತಗಳು : ಸೃಷ್ಠಿಯೆಲ್ಲಾ ಇವುಗಳೇ ಇವೆ. ಅವು ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ.**

**2) ಸ್ವಲ್ಪಭೂತಗಳು : ಹುಟ್ಟಿದ ಜೀವಿಗಳ ಶರೀರಗಳಲ್ಲಿ ಇವೆ. ಅವುಗಳು ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ.**

**3) ಉಪಭೂತಗಳು : ಖಗೋಳದಲ್ಲಿ ದ್ವಾದಶ (ಹನ್ನೆರಡು) ಗ್ರಹಗಳು ಮೊದಲುಗೊಂಡು ಭೂಗೋಳದವರೆಗು ಲೆಕ್ಕವಿಲ್ಲದಷ್ಟು ಇವೆ.**

ಉಪಭೂತಗಳು ಎನ್ನುವವು ಮಹಾಭೂತಗಳು, ಸ್ವಲ್ಪಭೂತಗಳಹಾಗೆ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಯ ಹಾಗೆ ಬಿಡಿಬಿಡಿಯಾಗಲ್ಲದೆ, ಐದು ಭೂತಗಳು ಸೇರಿ ಏರ್ಪಟ್ಟ ಶರೀರಗಳೊಂದಿಗೆ ಇರುವವು. ಪಂಚಭೂತಗಳಿಂದ ಏರ್ಪಟ್ಟ ಜೀವರಾಶಿಗಳ ಶರೀರಗಳಂತೆ ಅಲ್ಲದೆ ವಿವಿಧ ರೀತಿಯ ಆಕಾರಗಳಿಂದ ಕೆಲವು ಕಾಣಿಸುವಂತವುಗಳಾಗಿ, ಕೆಲವು ಕಾಣಿಸದಂತವುಗಳಾಗಿ ಇವೆ. ಕಾಣಿಸುವವುಗಳಲ್ಲಿ ಉದಾಹರಣೆಗೆ ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ ಮೊದಲಾದವುಗಳು. ಕಾಣಿಸದವುಗಳನ್ನು ಇಂತವುಗಳೆ ಎಂದು

ಹೇಳುವುದಕ್ಕೆ ಅವಕಾಶವಿಲ್ಲ. ಕಾಣಿಸುವವುಗಳಲ್ಲಿಯು ಸಹ ಕೆಲವು ತಮಗೆ ಇಷ್ಟಬಂದ ಸಮಯಗಳಲ್ಲಿ ಮಾತ್ರ ಕಾಣಿಸಿ ಉಳಿದ ಸಮಯಗಳಲ್ಲಿ, ಕಾಣಿಸದಂತೆ ಹೋಗುವವು ಇವೆ. ಅಂತಹುಗಳಲ್ಲಿ ಉದಾಹರಣೆಗೆ ಮೇಘಗಳನ್ನು ಹೇಳಿಕೊಳ್ಳಬಹುದು. ನಮಗೆ ತಿಳಿದ ಸಪ್ತಗ್ರಹಗಳು ಸಹ ಜೀವಿಗಳೆ! ಆದ್ದರಿಂದ ಅವುಗಳನ್ನು ಗ್ರಹಗಳು ಎನ್ನುತ್ತಿದ್ದೇವೆ. ಸೂರ್ಯ ಚಂದ್ರಾದಿ ಗ್ರಹಗಳು ಜೀವ ಇರುವಂತವುಗಳು ಮತ್ತು ಪ್ರಾಣ ಸಹ ಇರುವವೆಂದು ಹೇಳಬಹುದು. ಹಾಗೆ ಮೇಘಗಳು, ಹಾಗೆಯೇ ಎಷ್ಟೋ ಅಸಂಖ್ಯಾತವಾಗಿರುವ ಉಪಭೂತಗಳು ಸಹ ಜೀವವಿರುವವು ಮತ್ತು ಪ್ರಾಣ ಇರುವಂತವುಗಳಾಗಿವೆ. ಉಪಭೂತಗಳಲ್ಲಿ ಮೇಘ ಒಂದು ಭೂತವಾದರೆ, ರೋಗವು ಸಹ ಒಂದು ಭೂತವಾಗಿ ಇದೆ. ಭೂಮಿಮೇಲೆ ಉಪಭೂತಗಳಾಗಿ ಎಷ್ಟೋ ಮೇಘಗಳು, ಎಷ್ಟೋ ರೋಗಗಳು ಅಸಂಖ್ಯಾತ ಸಂಖ್ಯೆಯಲ್ಲಿದ್ದರೆ, ನಾವು ಹೇಳಲಾಗದಂತವುಗಳು, ಹೆಸರುಗಳು ತಿಳಿಯದಂತವುಗಳು ಎಷ್ಟೋ ಲೆಕ್ಕವಿಲ್ಲದಷ್ಟು ಇವೆ. ಅಂತಹ ಉಪಭೂತಗಳು, ಭೂಗೋಳದಿಂದ ಖಗೋಳದವರೆಗೂ ವ್ಯಾಪಿಸಿವೆ. ಉಪಭೂತಗಳು ಮೇಘಗಳು, ರೋಗಗಳು ಮೊದಲುಗೊಂಡು, ಸೂರ್ಯ ಚಂದ್ರಾದಿ ಗೋಳಗಳವರೆಗು, ದೇವರ ಪರಿಪಾಲನಾ ವಿಭಾಗದಲ್ಲಿ ಪಾತ್ರಧಾರಿಗಳಾಗಿವೆ. ಪ್ರಜೆಗಳು ಬೇರೆ, ಪ್ರಭುತ್ವ ಬೇರೆಯಾಗಿ ಇದ್ದಂತೆ, ಜೀವರಾಶಿಗಳು ಬೇರೆ ಪಾಲನಾ ಭೂತಗಳು ಬೇರೆಯೆಂದು ತಿಳಿಯುತ್ತದೆ.

ಪಾಲನಾ ವಿಭಾಗದಲ್ಲಿರುವ ಪ್ರತಿ ಭೂತವು ಕರ್ಮವನ್ನು ಪಾಲಿಸುವಂತವುಗಳಾಗಿವೆ. ಉಪಭೂತಗಳೆಲ್ಲವು ನಿಯಮಿತ ಕೆಲಸವನ್ನು ಮಾತ್ರ ಮಾಡುತ್ತಿವೆ. ಒಬ್ಬ ಉದ್ಯೋಗಿ ತನಗೆ ಯಾವ ಕೆಲಸ ನಿಯಮಿತವಾಗಿದ್ದರೆ ಆ ಕೆಲಸವನ್ನೇ ಮಾಡಿದಂತೆ, ಉಪಭೂತಗಳು ಮಾಡುತ್ತಿವೆ. ಉದಾಹರಣೆಗೆ ಬಿಲ್‌ಕಲೆಕ್ಟರ್ ಬಿಲ್ಲುಗಳನ್ನು ಮಾತ್ರವೆ ವಸೂಲಿ ಮಾಡುವನು, ಬಸ್‌ಕಂಡಕ್ಟರ್ ಬಸ್ಸಿನಲ್ಲಿ ಹತ್ತಿದ ಪ್ರಯಾಣಿಕರಿಗೆ ಟಿಕೆಟ್‌ಗಳು ಕೊಡುವನು. ಅದೇ ವಿಧವಾಗಿ ನವಗ್ರಹಗಳು ಒಂದು ವಿಧವಾಗಿ ಅವರವರ ನಿಯಮಿತ ಕೆಲಸವನ್ನು ಮಾಡಿದರೆ,

ರೋಗಗಳು, ಮೇಘಗಳು ಸಹ ನಿಯಮಿತ ಕೆಲಸವನ್ನೇ ಮಾಡುತ್ತಿವೆ. ಆದ್ದರಿಂದಲೆ ರೋಗಗಳಿಗೆ, ಅವವುಗಳ ಕೆಲಸವನ್ನು ಅನುಸರಿಸಿ ಒಂದನ್ನು ದೊಡ್ಡ ಅಮ್ಮ ರೋಗ ಎನ್ನುತ್ತೇವೆ, ಮತ್ತೊಂದನ್ನು ಸಿಡುಬು ರೋಗ ಎನ್ನುತ್ತೇವೆ. ಹೊರಗೆ ನಮಗೆ ಕಾಣಿಸುವ ಪ್ರಭುತ್ವದಲ್ಲಿ ಬಿಲ್ ಕಲೆಕ್ಟರ್‌ಗೆ, ಜಿಲ್ಲಾಕಲೆಕ್ಟರ್‌ಗೆ ಎಷ್ಟು ವ್ಯತ್ಯಾಸ ಇರುತ್ತದೊ ಹಾಗೆ ಕಾಣಿಸದ ದೇವರ ಪಾಲನೆಯಲ್ಲಿ ಸಹ ಮಲೇರಿಯಕ್ಕು, ದೊಡ್ಡ ಅಮ್ಮ ರೋಗಕ್ಕೂ ಎಷ್ಟೋ ಸ್ವಲ್ಪ ವ್ಯತ್ಯಾಸ ಇರುವುದು. ಈ ವಿಧವಾಗಿ ದೇವರ ಪಾಲನೆಯನ್ನು ವಿಶ್ಲೇಷಿಸುತ್ತಾ ಹೋದರೆ, ಒಂದು ರೋಗಕ್ಕು ಮತ್ತೊಂದು ರೋಗಕ್ಕು, ಒಂದು ಮೇಘಕ್ಕು ಮತ್ತೊಂದು ಮೇಘಕ್ಕು, ಒಂದು ಗ್ರಹಕ್ಕು ಮತ್ತೊಂದು ಗ್ರಹಕ್ಕು ಅವುಗಳ ನಿಯಮಿತ ಕೆಲಸಗಳಲ್ಲಿ ಎಷ್ಟೋ ವ್ಯತ್ಯಾಸಗಳಿರುತ್ತವೆ.

ಮಹಾಭೂತಗಳು, ಸ್ವಲ್ಪಭೂತಗಳು, ಉಪಭೂತಗಳು ಎಲ್ಲವು ಜೀವರಾಶಿಗಳ ಕರ್ಮಗಳನ್ನು ಪಾಲಿಸುವವುಗಳೆ ಆಗಲಿ, ಜೀವಿಗಳ ಹಾಗೆ ಕರ್ಮವನ್ನು ಅಂಟಿಸಿಕೊಳ್ಳುವುದಿಲ್ಲ. ಮೂರು ವಿಧಗಳ ಭೂತಗಳಿಗೆ ಕರ್ಮಗಳು ಅಂಟಿಕೊಳ್ಳುವ ವಿಧಾನವಿಲ್ಲ. ಎಲ್ಲ ಜೀವರಾಶಿಗಳಿಗೆ ಇದ್ದಂತೆ, ಮೂರು ವಿಧಗಳ ಭೂತಗಳಿಗೆ ಮನೊ, ಬುದ್ಧಿ, ಚಿತ್ತ, ಅಹಂಗಳು ಇಲ್ಲ. ಆದ್ದರಿಂದ ಒಂದು ಮೇಘ ಮಳೆಯನ್ನು ಸುರಿಸಿ ಪ್ರವಾಹವನ್ನು ಕಲ್ಪಿಸಿ ಎಷ್ಟೋ ಜನರನ್ನು ದಯೆ, ದಾಕ್ಷಿಣ್ಯ ಇಲ್ಲದಂತೆ ಚಿಕ್ಕಮಕ್ಕಳನ್ನು ಸಹಿತ ಸಾಯಿಸಿದರೂ, ಆ ಮೇಘಕ್ಕೆ ಅಷ್ಟು ಜನರನ್ನು ಸಾಯಿಸಿದ ಪಾಪ ಅಂಟುವುದಿಲ್ಲ. ಮಹಾಭೂತಗಳಿಗಾಗಲಿ, ಸ್ವಲ್ಪಭೂತಗಳಿಗಾಗಲಿ, ಉಪಭೂತಗಳಿಗಾಗಲಿ ಗುಣಗಳಿರುವುದಿಲ್ಲ. ಆದ್ದರಿಂದ ಪಾಪ ಮಾಡಿದವನನ್ನು ನಿರ್ದಾಕ್ಷಿಣ್ಯವಾಗಿ ಸಾಯಿಸುತ್ತಿವೆ. ಯಾವ ಮಾತ್ರವು ಪ್ರೀತಿಯಾಗಲಿ, ಯಾವ ಮಾತ್ರವು ದಯೆಯಾಗಲಿ ಇಲ್ಲದ ರೋಗ, ಪಾಪ ಜಾರಿಗೆ ಬಂದಾಗ ಮನುಷ್ಯ ಹಾಲುಕುಡಿಯುವ ವಯಸ್ಸಿನಲ್ಲಿದ್ದರೂ, ಮಧ್ಯೆವಯಸ್ಸಿನಲ್ಲಿದ್ದರೂ, ವೃದ್ಧಾಪ್ಯದಲ್ಲಿದ್ದರೂ ಹಿಂಸಿಸುವುದು ಬಿಡುವುದಿಲ್ಲ. ಹಾಲು ಕುಡಿಯುವ ವಯಸ್ಸಿನಲ್ಲಿ ಸಿಡುಬು ಅಥವಾ ಸೀತಾಳ ರೋಗ ಬಂದರೆ,

ಒಂದೂವರೆ ವರ್ಷದ ಹುಡುಗನು ಬಾಧೆಯನ್ನು ಅನುಭವಿಸಲಾರದೆ ಅಳುತ್ತಿದ್ದರೆ, ಹುಡುಗನನ್ನು ನೋಡುವ ತಾಯಿತಂದೆಯರು ದೇವರಿಗೆ ದಯೆ ಇಲ್ಲವೆಂದರೂ, ದೇವರಿಗೆ ನ್ಯಾಯವಿಲ್ಲವೆಂದರೂ, ಹುಡುಗನು ಇಷ್ಟೆಲ್ಲಾ ಬಾಧೆಪಡುತ್ತಿದ್ದರೆ ದೇವರಿಗೆ ಕೈಮುಗಿದರೂ, ಸ್ವಲ್ಪವಾದರೂ ಕರುಣೆ ಇಲ್ಲವೆಂದರೂ, ಪಾಪವನ್ನು ರೋಗವು ಖಂಡಿತ ಜಾರಿಗೆ ಮಾಡುತ್ತದೆ. ಒಂದುವೇಳೆ ಹುಡುಗನ ಪಾಪ ಹೆಚ್ಚಾಗಿದ್ದರೆ ರೋಗ ಸಾಯಿಸಿ ಹಾಕಬೇಕಾಗುತ್ತದೆ. ಮನಸ್ಸಾಗಲಿ, ದಯೆಯಾಗಲಿ ಇಲ್ಲದ ರೋಗ ಹುಡುಗನನ್ನು ಸಾಯಿಸಿದರೆ ತಾಯಿತಂದೆಯರಿಗೆ ಕೋಪಬಂದು ದೇವರನ್ನೆ ನಿಂದನೆ ಮಾಡುವುದು, ದೇವರು ಕುರುಡನೆನ್ನುವುದು ನಡೆಯುತ್ತಿದೆ.

ದೇವರ ಪ್ರಭುತ್ವ ವಿಧಾನವನ್ನು, ಪರಿಪಾಲನಾ ವಿಭಾಗಗಳನ್ನು ತಿಳಿಯದ ಪ್ರಜೆಗಳು ತಮ್ಮ ಕರ್ಮಗಳನ್ನು ಗುರುತುಮಾಡಿಕೊಳ್ಳದೆ ದೇವರಿಗೆ ನ್ಯಾಯವಿಲ್ಲವೆಂದು, ದೇವರಿಗೆ ದಯೆಯಿಲ್ಲವೆಂದು ನಿಂದಿಸುವುದು ನಡೆಯುತ್ತಿದೆ. ಏನಾದರು ಬಹಳ ನೋವಾದಂತಹ ಸಂಘಟನೆ ನಡೆದರೂ, ಬಹಳ ಮುದ್ದಾಗಿ ಪ್ರೇಮದಿಂದ ಬೆಳೆಸಿಕೊಂಡ ಹುಡುಗನು ಸತ್ತು ಹೋದರೂ, ಅಲ್ಲಿಯವರೆಗೂ ದೇವರಿದ್ದಾನೆಂದು ಸ್ವಲ್ಪ ನಂಬಿಕೆಯಿರುವವರು ಸಹ ಆ ಸಂಘಟನೆಯಿಂದ ದೇವರೇ ಇಲ್ಲವೆಂಬ ನಿರ್ಧಾರಕ್ಕೆ ಬರುತ್ತಾರೆ. ಕೆಲವರಾದರೆ ದೇವರು ಕಾಣಿಸಲಿಲ್ಲ ಆದ್ದರಿಂದ ಸರಿಹೋಗಿದೆ. ಒಂದುವೇಳೆ ದೇವರು ಕಾಣಿಸಿದರೆ ಚಪ್ಪಲಿಯಿಂದ ಒದೆಯುತ್ತಿದ್ದೇನೆಂದು ಬೈಯ್ಯುವುದನ್ನು ಸ್ವತಃವಾಗಿ ನಾನೇ ಕೇಳಿದ್ದೇನೆ. ಆರು ವರ್ಷಗಳ ವಯಸ್ಸಿರುವ ಹೆಣ್ಣು ಹುಡುಗಿ ರಸ್ತೆ ಅಪಘಾತದಲ್ಲಿ ಸತ್ತುಹೋದರೆ, ಆ ಅಪಘಾತದಲ್ಲಿ ಬದುಕಿದವರು "ನಾವಂದರೆ ಪಾಪ ಮಾಡಿರುತ್ತೇವೆ, ನಾವು ಸತ್ತುಹೋದರೂ ಸರಿಹೋಗುತ್ತದೆ. ಆದರೆ ಚಿಕ್ಕ ಹುಡುಗಿ ಏನು ಮಾಡಿದ್ದಾಳೆ? ಎಷ್ಟೊ ಪಾಪಗಳು ಮಾಡಿದವರು ನಾವಿದ್ದರೆ, ನಮಗೆ ಏನು ಆಗದಂತೆ ಚಿಕ್ಕಹುಡಿಗಿ ಸತ್ತಿರುವುದನ್ನು ನೋಡಿದರೆ ದೇವರಿಗೆ ಕಣ್ಣು ಇವೆಯಾ? ದೇವರು ಕುರುಡನಲ್ಲವೆ, ಕಾಣಿಸಿದರೆ ದೇವರೆಂದು ಸಹ ಲೆಕ್ಕಹಾಕದಂತೆ ಒಡೆಯುತ್ತಿದ್ದೆ, ಎಂದು ಒಬ್ಬ ದೊಡ್ಡ ಮನುಷ್ಯ ಅಳುತ್ತಾ ಎನ್ನುವುದು ನಡೆದಿದೆ. ಆತನು ಬಾಧೆಯಿಂದ

ಹಾಗೆ ಎನ್ನುವುದನ್ನು ನೋಡಿದರೆ ದೇವರು ಸಾಯಿಸಲಿಲ್ಲ, ಸಾಯಿಸಿದವರು ಬೇರೆಯವರು ಎಂದು ಆತನಿಗೆ ತಿಳಿಯದೆ ಹೋಗಿರುವುದರಿಂದ ಹಾಗೆ ಮಾತನಾಡುವುದು ನಡೆಯಿತು. ಈ ವಿಧವಾಗಿ ದೇವರ ಪರಿಪಾಲನೆ ತಿಳಿಯದವರೆಲ್ಲರು ಮಾತನಾಡುವುದು ನಡೆಯುತ್ತಿದೆ.

ದೇವರ ಪರಿಪಾಲನಾ ವಿಧಾನ ಯಾವ ವಿಧವಾಗಿ ಇದೆ, ಸಾಮಾನ್ಯ ಪ್ರಜೆಗಳೇ ಅಲ್ಲದೆ, ನಾವು ಜ್ಞಾನಿಗಳು ಎಂದು ಅಂದುಕೊಳ್ಳುವವರಿಗೂ ಸಹ ಏನೂ ತಿಳಿದಿಲ್ಲ. ದೇವರ ಪರಿಪಾಲನೆ, ಅದರೊಳಗಿನ ವಿಭಾಗಗಳು ಪ್ರತ್ಯಕ್ಷವಾಗಿ ನಮ್ಮ ಮುಂದೆಯಿದ್ದರೂ ಅವುಗಳನ್ನು ಗ್ರಹಿಸಲಾಗದೆ ಹೋಗಿದ್ದೇವೆ. ರೋಗಗಳು, ಮೇಘಗಳನ್ನು ನಾವು ನಿತ್ಯವು ನೋಡುತ್ತಿದ್ದರೂ, ಇವು ಏಕೆ ಹೀಗಿವೆ ಎಂದು ಆಲೋಚಿಸಲಾಗದೆ ಹೋಗಿದ್ದೇವೆ. ಪ್ರತ್ಯಕ್ಷವಾಗಿ ದೇವರಪಾಲನೆ ನಮ್ಮ ಮುಂದೆಯೆ ಸಾಗುತ್ತಿದ್ದರೂ ಇದು ಪ್ರತ್ಯಕ್ಷನರಕವೆಂದು ತಿಳಿಯದೆ, ನರಕ ಎಲ್ಲೋ ಇದೆಯೆಂದು ಬರೆದುಕೊಂಡಿದ್ದೇವೆ. ಪಾಪ ಎಂದರೆ ಏನೊ ತಿಳಿಯದೆ ಅದರ ಧ್ಯಾಸ ಸ್ವಲ್ಪವಾದರು ಇಲ್ಲದೆ ಧನ ಮದಾಂಧರಾಗಿ ಕೆಲವರು, ಅಧಿಕಾರಮದದಿಂದ ಕುರುಡರಾಗಿ ಕೆಲವರು, ದೈವಜ್ಞಾನ ಎನ್ನುವ ವಾಸನೆಯಿಲ್ಲದ ಅಜ್ಞಾನ ಅಂಧಕಾರರಾಗಿ ಸುಲಭವಾಗಿ ಪಾಪವನ್ನು ಮೂಟೆಕಟ್ಟಿಕೊಳ್ಳುತ್ತಿದ್ದಾರೆ. ಪ್ರಸ್ತುತ ಸುಖಗಳನ್ನು ಅನುಭವಿಸುತ್ತಾ ಹಣ, ಅಧಿಕಾರ ಇದ್ದರೆ, ಆತನು ದೇವರನ್ನಾಗಲಿ, ದೇವರ ಜ್ಞಾನದಿಂದ ಕೂಡಿಕೊಂಡ ಜ್ಞಾನಿಗಳನ್ನು, ಯೋಗಿಗಳನ್ನಾಗಲಿ ಲೆಕ್ಕಮಾಡದೆ ಮಾತನಾಡುತ್ತಿದ್ದಾನೆ. ಪಾಪವೆಂದರೆ ಭಯವಿಲ್ಲದ ಕೆಲಸಗಳನ್ನು ಮಾಡುತ್ತಿದ್ದಾನೆ. ಅದರಿಂದ ಸಂಭವಿಸುವ ಭಯಂಕರವಾದ ಪಾಪವನ್ನು ಅನುಭವಿಸಲಾಗದೆ, ದೇವರ ಹತ್ತಿರ ನ್ಯಾಯವಿಲ್ಲ, ದಯೆಯಿಲ್ಲವೆಂದು ಅನ್ನುತ್ತಿದ್ದಾನೆ. ನಡೆದ ದಿನಗಳಲ್ಲಿ ತನ್ನ ಇಷ್ಟಪ್ರಕಾರ ನಡೆದುಕೊಂಡು ಪಾಪಭೀತಿ ಇಲ್ಲದಂತೆ ಪ್ರವರ್ತಿಸಿ, ಪಾಪವನ್ನು ಸಂಪಾದಿಸಿಕೊಂಡು, ಲೆಕ್ಕ ಪ್ರಕಾರ ಅನುಭವಿಸಬೇಕಾಗಿ ಬಂದಾಗ ಮಾತ್ರ ದೇವರು ಜ್ಞಾಪಕಕ್ಕೆ ಬರುತ್ತಾನೆ. ದೇವರ ಹತ್ತಿರ ನ್ಯಾಯವಿಲ್ಲ ಎನ್ನುತ್ತಾರೆ.

ದೇವರು ಸೃಷ್ಠಿ ಆದಿಯಲ್ಲಿ ಪಾಪ ಪುಣ್ಯಗಳ ಸಂಪಾದನೆ, ಅದರ ಅನುಭವಗಳಾದ ನರಕ ಸ್ವರ್ಗಗಳು ಎಲ್ಲವು ಭೂಮಿಮೇಲೆಯೇ ಇರುವಂತೆ, ತನ್ನ ಪರಿಪಾಲನೆ ಮುಖಾಂತರ ಲೆಕ್ಕ ಪ್ರಕಾರ ಪಾಪಗಳನ್ನು ಅನುಭವಿಸುವಂತೆ ನಿರ್ಮಿಸಿ ಇಟ್ಟಿದ್ದಾನೆ. ಅದರ ಪ್ರಕಾರವೆ ಎಲ್ಲ ನಡೆಯುತ್ತಿವೆ. ಸ್ವರ್ಗ, ನರಕಗಳು ಎರಡು ಮನುಷ್ಯ ಭೂಮಿಮೇಲೆಯೇ ಯಾವುವೊ ಭೂತಗಳ ಮುಖಾಂತರ ಅನುಭವಿಸುವಂತೆ ದೇವರು ಏರ್ಪಾಟು ಮಾಡಿ ಇಟ್ಟಿದ್ದಾನೆ. ತನ್ನ ಪರಿಪಾಲನೆಯಲ್ಲಿ ಶಿಕ್ಷೆಗಳು, ಅವುಗಳನ್ನು ಜಾರಿಗೆಗೊಳಿಸುವ ಭೂತಗಳು ಎಲ್ಲ ಇರುವಾಗ, ಪ್ರತಿ ಮತದವರು ಎಲ್ಲೋ ಸ್ವರ್ಗ, ನರಕಗಳು ಇವೆಯೆನ್ನುವುದರ ಮೂಲಕ ಯಾವ ಮತದಲ್ಲಿಯೂ ದೇವರ ಪರಿಪಾಲನೆ ತಿಳಿದಿಲ್ಲವೆಂದೇ ಅರ್ಥವಾಗುತ್ತದೆ. ಒಂದು ಹಿಂದೂಮತವೇ ಅಲ್ಲದೆ, ಇತರ ಮತದವರು ಸಹ ದೇವರ ಜ್ಞಾನವನ್ನು ತಿಳಿದವರೆಂದು ಹೇಳಿಕೊಳ್ಳುತ್ತಾ, ಸ್ವರ್ಗನರಕಗಳ ನಿಜಸ್ಥಿತಿಯನ್ನು, ದೇವರು ಅಳವಡಿಸಿದ ಪ್ರತ್ಯಕ್ಷ ನರಕವನ್ನು, ಪ್ರತ್ಯಕ್ಷ ಸ್ವರ್ಗವನ್ನು ತಿಳಿಯದೆ ಮೇಲಿನ ಲೋಕದಲ್ಲಿ ಸ್ವರ್ಗವಿದೆಯೆಂದು, ಕೆಳಗಿನ ಲೋಕದಲ್ಲಿ ನರಕವಿದೆಯೆಂದು ಹೇಳುತ್ತಿದ್ದಾರೆ. ಹಾಗೆ ಅಸತ್ಯವನ್ನು ಹೇಳುವುದರಿಂದ ದೈವಜ್ಞಾನದ ಬಗ್ಗೆ ಇನ್ನೂ ಪಾಪ ಮಾಡಿದವರಾಗುತ್ತಾರೆ.

ದೇವರ ಪಾಲನಾ ವಿಷಯ ತಿಳಿಯದವರು, ದೇವರು ಮನುಷ್ಯನನ್ನು ಸೃಷ್ಠಿಸಿ ಭೂಮಿಮೇಲೆ ಬಿಟ್ಟು ತಾನು ಎಲ್ಲೋ ಮೇಲೆ ಇದ್ದಾನೆಂದು, ಮೇಲಿನ ಲೋಕದಲ್ಲಿರುವ ದೇವರು ಅಲ್ಲಿ ಮಾನವನಿಗಾಗಿ ಸ್ವರ್ಗ, ನರಕ ಏರ್ಪಾಟು ಮಾಡಿದ್ದಾನೆಂದು, ಭೂಮಿಮೇಲೆ ಪಾಪ ಪುಣ್ಯ ಸಂಪಾಧಿಸಿಕೊಂಡವರು, ಅಲ್ಲಿಗೆ ಹೋಗಿ ಮೊದಲು ನರಕವನ್ನು ಅನುಭವಿಸಿ, ನಂತರ ಸ್ವರ್ಗಕ್ಕೆ ಹೋಗುವರೆಂದು, ಪುಣ್ಯವನ್ನು ಸ್ವರ್ಗದಲ್ಲಿ ಅನುಭವಿಸಿದ ನಂತರ, ಮತ್ತೆ ಭೂಮಿಮೇಲೆ ಹುಟ್ಟುತ್ತಿರುವರೆಂದು ಹಿಂದೂಗಳು ಹೇಳುತ್ತಿರುವಾಗ! ಇತರೆ ಮತದವರು ನರಕ ಮುಗಿದ ತಕ್ಷಣವೆ ಸ್ವರ್ಗದಲ್ಲಿ ಹಾಯಾಗಿ ಇರುವರೆಂದು ತಿರುಗಿ ಯಾರು ಹುಟ್ಟುವುದಿಲ್ಲವೆಂದು, ಪುನರ್ಜನ್ಮಗಳೆ ಇಲ್ಲವೆಂದು ಹೇಳುತ್ತಿದ್ದಾರೆ.

ಈ ರೀತಿ ಎಲ್ಲ ಮತದವರು ಮಾಯೆ ಪ್ರಭಾವದಿಂದ ಅಜ್ಞಾನದಶೆಯಲ್ಲಿದ್ದು, ದೇವರ ಪರಿಪಾಲನೆ ಪ್ರತ್ಯಕ್ಷವಾಗಿ ಭೂಮಿಮೇಲೆ ಇದೆಯೆಂದು, ಸ್ವರ್ಗನರಕಗಳು ಭೂಮಿಮೇಲೆ ಇವೆಯೆಂದು, ನಾವು ನಿತ್ಯವು ಅನುಭವಿಸುವ ಸುಖಗಳೆ ಸ್ವರ್ಗಸುಖಗಳೆಂದು, ನಿತ್ಯವು ಅನುಭವಿಸುವ ಕಷ್ಟಗಳು ಬಾಧೆಗಳು ದುಃಖಗಳು ಎಲ್ಲವು ನರಕಗಳೆಂದು ತಿಳಿಯದೆ ಭ್ರಮೆಯಲ್ಲಿ ಮುಳುಗಿದ್ದಾರೆ. ಭೂಮಿಮೇಲೆ ಯಾವ ಮಾತ್ರಕ್ಕು ರಿಯಾಯಿತಿ ಇಲ್ಲದ ದುಃಖಗಳನ್ನು ತಾನು ಅನುಭವಿಸುತ್ತಿದ್ದರೂ, ಭಯಂಕರವಾದ ಬಾಧೆಗಳನ್ನು ಎದುರಿಗಿರುವವರು ಅನುಭವಿಸುತ್ತಿದ್ದರು ನಮ್ಮ ಮುಂದೆಯೆ ನಡೆಯುವ ಹಿಂಸೆಗಳು ಎಲ್ಲಿಯವೆಂದು, ಯಾವ ಕಾರಣದಿಂದ ಬರುತ್ತವೆಂದು ಯೋಚಿಸದೆ ಕುರುಡರಾಗಿ ಅನುಭವಿಸುತ್ತಾ, ಯಾವಾಗಲೊ ಸತ್ತನಂತರ ಯಮಲೋಕ ಬರುತ್ತದೆಂದುಕೊಳ್ಳುವುದು ತಪ್ಪಲ್ಲವೆ?

ಯಮಲೋಕ ಒಂದಿದೆಯಂದು ಅದರಲ್ಲಿ ಯಮಧರ್ಮರಾಜ ಇದ್ದಾನೆಂದು ಹಾಗೆ ನಮ್ಮ ಪಾಪಗಳನ್ನು ಲೆಕ್ಕಹಾಕುವ ಚಿತ್ರಗುಪ್ತನಿದ್ದಾನೆಂದು ಸಹ ಹೇಳುತ್ತಿದ್ದಾರೆ. ಅಂತವರು, ಶರೀರದಲ್ಲಿ ಚೈತನ್ಯಶಕ್ತಿಯಾಗಿ, ಶರೀರವನ್ನು ಕದಲಿಸಿ ನಡೆಸುವ ಆತ್ಮ ಚಿತ್ರಗುಪ್ತನೆಂದು ತಿಳಿದುಕೊಳ್ಳದೆ ಹೋಗಿದ್ದಾರೆ. ದಂಡನಾಧಿಕಾರಿಗಳಲ್ಲಿ ರಾಜನಾದ ಯಮಧರ್ಮರಾಜ ವಿಶ್ವವೆಲ್ಲಾ ವ್ಯಾಪಿಸಿದ ಪರಮಾತ್ಮ ಎಂದು ತಿಳಿದುಕೊಳ್ಳದೆ ಹೋಗಿದ್ದಾರೆ. ಶರೀರದಲ್ಲಿ ಚಿತ್ರಗುಪ್ತ ಲೆಕ್ಕಹಾಕಿದ ಪಾಪಗಳ ಪ್ರಕಾರ ಚಿತ್ರಹಿಂಸೆಗಳು ಭೂಮಿಮೇಲೆಯೇ ಅನುಭವಿಸುತ್ತಿದ್ದೇವೆಂದು ತಿಳಿದುಕೊಳ್ಳದೆ ಹೋಗಿದ್ದಾರೆ. ಯಾವ ರೀತಿ ನೋಡಿದರೂ, ದೈವಜ್ಞಾನದ ಪ್ರಕಾರ, ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ, ಈ ಭೂಮಂಡಲವೇ ಪಾಪ ಮಾಡಿದವರಿಗೆ ಯಮಲೋಕ, ಪುಣ್ಯ ಮಾಡಿದವರಿಗೆ ಸ್ವರ್ಗಲೋಕವಾಗಿದೆ. ಶರೀರದಲ್ಲಿ ಯಾರಿಗೂ ತಿಳಿಯದಂತೆ ಗುಪ್ತವಾಗಿರುವ ಆತ್ಮವೆ ಚಿತ್ರಗುಪ್ತ. ತಾನೇ ಎಲ್ಲಾ ಮಾಡುತ್ತಾ, ಏನೂ ಮಾಡದವನಂತಿದ್ದೂ, ಏನನ್ನು ಮಾಡಿದರೂ ಅದನ್ನು ಸ್ವಲ್ಪವಾದರೂ ಅನುಭವಿಸದವನಾಗಿ, ಏನು ಮಾಡಿದರೂ ಅದರ ಪಾಪವನ್ನಾಗಲಿ, ಪುಣ್ಯವನ್ನಾಗಲಿ ಅಂಟದವನಾಗಿ, ತನ್ನ

ಕೆಲಸಗಳು ಕಾಣಿಸುತ್ತಿದ್ದರೂ, ತಾನು ಕಾಣಿಸದಂತೆ ದೇಹದಲ್ಲಿ ಎಲ್ಲಾಕಡೆ ತುಂಬಿದ್ದರೂ, ಶರೀರದಲ್ಲಿ ತನ್ನನ್ನು ಯಾರೂ ಗುರುತಿಸದಂತೆ ವಿಚಿತ್ರವಾಗಿ ಶರೀರದಲ್ಲಿ ಅಡಗಿರುವ ಆತ್ಮವನ್ನು ತಿಳಿದ ಜ್ಞಾನಿಗಳು, ಆತ್ಮ ಇಂತಹುದು ಎಂದು ಅರ್ಥವಾಗುವಂತೆ ಆತ್ಮವನ್ನು ಚಿತ್ರಗುಪ್ತ ಎಂದಿದ್ದಾರೆ. ಈ ವಿಧವಾಗಿ ನಮ್ಮ ಶರೀರದಲ್ಲಿಯೇ ಚಿತ್ರಗುಪ್ತ ಎನ್ನುವ ಹೆಸರಿದ್ದು, ನಾವು ಮಾಡಿಕೊಂಡ ಪಾಪಗಳನ್ನು ಲೆಕ್ಕಹಾಕಿ ಅನುಭವಿಸುವಂತೆ ಮಾಡುತ್ತಿರುವ ಆತ್ಮವನ್ನು ತಿಳಿಯದಿದ್ದೇವೆ. ಮನುಷ್ಯ ಅನೇಕ ಪಾಪಗಳನ್ನು ಸಂಪಾದಿಸಿಕೊಳ್ಳುತ್ತ, ಅದಕ್ಕಿಂತ ಹಿಂದಿನ ಜನ್ಮಗಳಲ್ಲಿ ಸಂಪಾದಿಸಿಕೊಂಡ ಪಾಪಗಳನ್ನು ಅನುಭವಿಸುತ್ತಾ ಇದ್ದಾನೆ. ಇತರರು ಅನುಭವಿಸುತ್ತಿರುವ ನರಕ ಬಾಧೆಗಳೆಲ್ಲವನ್ನು ಪ್ರತ್ಯಕ್ಷವಾಗಿ ನೋಡುತ್ತಿದ್ದರೂ, ಅವುಗಳನ್ನು ಸ್ವಲ್ಪವಾದರೂ ಲೆಕ್ಕಹಾಕದೆ ಯಮಧರ್ಮರಾಜ, ಯಮಲೋಕ, ಚಿತ್ರಗುಪ್ತ, ನರಕ ಎಲ್ಲೋ ಇದೆಯೆಂದುಕೊಳ್ಳುವುದು ನಮ್ಮಲ್ಲಿರುವ ಅಜ್ಞಾನವಲ್ಲವೆ? ಮನುಷ್ಯ ತನ್ನ ಅಜ್ಞಾನವನ್ನು ಇಲ್ಲದಂತೆ ಮಾಡಿಕೊಂಡು ಜ್ಞಾನ ನೇತ್ರದಿಂದ ನೋಡಿದರೆ, ಸ್ವರ್ಗನರಕಗಳು ಭೂಮಿ ಮೇಲೆಯೆ ಇವೆಯೆಂದು ತಿಳಿಯುತ್ತವೆ. ಅವುಗಳನ್ನು ಅನುಭವಿಸುವಂತೆ ಮಾಡುವುದಕ್ಕೆ ಮುಖ್ಯಪಾತ್ರವಹಿಸುವವು ಪಂಚ ಮಹಾಭೂತಗಳು, ಪಂಚ ಸ್ವಲ್ಪಭೂತಗಳಲ್ಲದೆ ಅನೇಕ ಪಾತ್ರಗಳಾಗಿ ಜಾರಿಗೆ ಮಾಡುವವು ಉಪಭೂತಗಳೆಂದು ತಿಳಿಯುತ್ತಿದೆ.

ಪಂಚ ಮಹಾಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಯನ್ನು ಕುರಿತು ಸ್ವಲ್ಪ ಜನರಿಗೆ ಸ್ವಲ್ಪವಾದರೂ ತಿಳಿದಿರುತ್ತದೆ. ಪಂಚ ಸ್ವಲ್ಪ ಭೂತಗಳನ್ನು ಕುರಿತು, ಅವು ಮಾಡುತ್ತಿರುವ ಕಾರ್ಯಗಳನ್ನು ಕುರಿತು ಬಹುಶ ಬಹಳಜನರಿಗೆ ತಿಳಿದಿಲ್ಲ. ಹಾಗೆ ಉಪಭೂತಗಳನ್ನು ಕುರಿತಾಗಲಿ, ಅವುಗಳ ಕೆಲಸವನ್ನು ಕುರಿತಾಗಲಿ, ಅವು ಇವೆಯೆಂದಾಗಲಿ ಯಾರಿಗೂ ತಿಳಿದಿಲ್ಲವೆಂದೇ ಹೇಳಬಹುದು. ಇಷ್ಟು ವಿಭಾಗಗಳಾಗಿ ದೇವರ ಪರಿಪಾಲನೆ ನಿರ್ಣಯಿಸಲ್ಪಟ್ಟಿದೆಯೆಂದು, ಆ ಪರಿಪಾಲನೆಯಲ್ಲಿ ಯಾರು, ಯಾವ ಕೆಲಸವನ್ನು ಮಾಡಿದರೂ ಅವನ ಶರೀರದಲ್ಲಿನ ಆತ್ಮವೆ ಅದನ್ನು ಬಿಡದೆ ಕರ್ಮರೂಪದಲ್ಲಿ,

ಕರ್ಮಚಕ್ರದಲ್ಲಿನ ಪಾಪಪುಣ್ಯಗಳ ಸ್ಥಾನಗಳಲ್ಲಿ ಅದನ್ನು ನಿಲ್ಲುವಂತೆ ಮಾಡುತ್ತದೆಂದು, ನಂತರ ಜನ್ಮಗಳಲ್ಲಿ ಅದನ್ನು ಜಾರಿಗೆಗೊಳಿಸಿ ಜೀವಾತ್ಮನಿಂದಲೆ ಅನುಭವಿಸುವಂತೆ ಮಾಡುವುದೆಂದು, ದೊಡ್ಡ ಆಧ್ಯಾತ್ಮಿಕ ಶಾಸ್ತ್ರಜ್ಞರೆಂದುಕೊಂಡ ವರಿಗೂ ಸಹ ತಿಳಿದಿಲ್ಲ. ಇಲ್ಲಿ ಕೆಲವರು ನಮ್ಮನ್ನು ಈ ವಿಧವಾಗಿ ಪ್ರಶ್ನಿಸಬಹುದು. “ನಿಮಗೆ ಎಲ್ಲ ತಿಳಿದಹಾಗೆ, ನಿಮಗಲ್ಲದೆ ದೊಡ್ಡ ಸ್ವಾಮೀಜಿಗಳಿಗೆ, ಪೀಠಾಧಿಪತಿಗಳಿಗೆ, ಗುರುಗಳಾಗಿರುವವರಿಗೆ ತಿಳಿದಿಲ್ಲವೆಂದು ಹೇಳುವುದರಿಂದ ಎಲ್ಲರನ್ನು ಹೀಯಾಳಿಸಿದಂತೆ ಅಲ್ಲವೆ? ನಿಮಗಿದು ಒಳ್ಳೆಯ ಪದ್ಧತಿಯೆ?’ ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ನೀವು ಅಂದಹಾಗೆ ಹಾಗೆ ಹೇಳುವುದು ಒಳ್ಳೆಯ ಪದ್ಧತಿಯೆ? ಅಲ್ಲವೆ? ಎಂದು ಲೆಕ್ಕಹಾಕಿ ನೋಡಿದರೆ, ಪ್ರಪಂಚ ವಿಧಾನದ ಪ್ರಕಾರ ಪ್ರಪಂಚ ವಿಷಯವೇನಾದರು ಎದುರಿಗಿರುವವನಿಗೆ ತಿಳಿಯದಿದ್ದರೂ ನಿನಗೆ ತಿಳಿದಿಲ್ಲವೆಂದು ಬಹಿರಂಗವಾಗಿ ಹೇಳುವುದು ಆತನನ್ನು ಅವಮಾನಪಡಿಸಿದಂತೆ ಆಗುತ್ತದೆ. ಯಾರಾದರು ಹಾಗೆ ಹೇಳುವುದರಲ್ಲಿ ಅವನೊಳಗಿನ ಗರ್ವ ಎನ್ನುವ ಗುಣದಿಂದ ನಡೆದಿದೆಯೆಂದೇ ಹೇಳಬಹುದು. ಆದರೆ ಇಲ್ಲಿ ಹೇಳುವ ವಿಷಯ ದೈವಸಂಬಂಧ ಜ್ಞಾನವಿಷಯ. ಇದು ಪ್ರಪಂಚ ವಿಧಾನವಲ್ಲ, ಪರಮಾತ್ಮ ವಿಧಾನದಲ್ಲಿ ಹೇಳುವುದು. ದೇವರ ವಿಷಯದಲ್ಲಿ ಮಾನ, ಅವಮಾನಗಳ ಪ್ರಮೇಯ ಇರುವುದಿಲ್ಲ. ಕೇವಲ ಸತ್ಯ ಅಸತ್ಯಗಳ ಪ್ರಮೇಯವೇ ಇರುತ್ತದೆ. ದೇವರ ವಿಷಯದಲ್ಲಿ ತಿಳಿದು ಸತ್ಯವನ್ನು ಹೇಳದೆ ಹೋದರೆ ದೈವದ್ರೋಹವಾಗುತ್ತದೆ. ಇತರರು ಬಾಧೆ ಬೀಳುವರೆಂದು ಸಾಟಿ ಮನುಷ್ಯರನ್ನು ಕುರಿತು, ದೇವರ ವಿಷಯವನ್ನು ಮುಚ್ಚಿಡುವುದರಿಂದ ದೇವರಿಗಿಂತ ಮನುಷ್ಯರಿಗೆ ಹೆಚ್ಚಿನ ಬೆಲೆಕೊಟ್ಟಂತಾಗುತ್ತದೆ. ಹಾಗೆ ಮಾಡುವುದು ಒಳ್ಳೆಯದಲ್ಲ. ಯಾರು ಏನೆಂದುಕೊಂಡರೂ ದೈವವಿಷಯದಲ್ಲಿ ಸತ್ಯವನ್ನು ಹೇಳುವುದರಿಂದ ಆಗ ಅದು ಅವಮಾನದಂತೆ ಕೆಲವರಿಗಿದ್ದರೂ, ನಂತರ ಅವರಿಗು ಸಹ ಮಾರ್ಗದರ್ಶನವಾಗುತ್ತದೆ. ಒಂದು ಔಷಧವನ್ನು ನುಂಗುವಾಗ ಕಹಿಯಾಗಿದ್ದರೂ, ನುಂಗುವವನಿಗೆ ಕಷ್ಟವಾಗಿದ್ದರು ಸ್ವಲ್ಪಕಾಲದ ನಂತರ ಆ ಔಷಧವೆ ಅವನಲ್ಲಿನ

ರೋಗವನ್ನು ಹೋಗಲಾಡಿಸಿ ಒಳ್ಳೆಯ ಆರೋಗ್ಯವನ್ನು ಕೈಗೂಡಿಸುವಂತೆ, ನಾವು ಹೇಳಿದ ಸತ್ಯವಾದ ಜ್ಞಾನವೆನ್ನುವ ಔಷಧ, ಪ್ರಸ್ತುತವಾಗಿ ಕೆಲವರಿಗೆ ಕಹಿಯಂತೆ ಅನಿಸಿದರು ನಂತರ ಕಾಲದಲ್ಲಿ ಇದೇ ಜ್ಞಾನದಿಂದ ಅವರೊಳಗಿನ ಅಜ್ಞಾನ ರೋಗವೆಲ್ಲಾ ಹೋಗಿ ಸಂಪೂರ್ಣ ಜ್ಞಾನಿಗಳು ಆಗಬಲ್ಲರು. ಆದ್ದರಿಂದ ನಾವು ಹೇಳುವ ಮಾತುಗಳು ಕೆಲವರಿಗೆ ಕಷ್ಟವಾಗಿದ್ದರೂ ಪರವಾಗಿಲ್ಲ. ನಂತರ, ಅವರಿಗೆ ನಮ್ಮ ಮಾತುಗಳು ಒಳ್ಳೆಯ ಜ್ಞಾನಮಾರ್ಗವನ್ನು ತೋರಿಸುತ್ತವೆನ್ನುವ ಉದ್ದೇಶದಿಂದಲೆ ಇದ್ದದ್ದು ಇದ್ದಹಾಗೆ ಹೇಳಬೇಕಾಗಿಬಂದಿದೆ.

ಯಾರಿಗೂ ತಿಳಿಯದಂತೆ ತಮ್ಮ ಕೆಲಸವನ್ನು ತಾವು ಮಾಡುತ್ತ, ಎಲ್ಲಿ ದೈವ ನಿರ್ಣಿತವಾಗುವ ಪಾಲನಾ ಕಾನೂನಾದ ಧರ್ಮಗಳನ್ನು ಅತಿಕ್ರಮಿಸ ದಂತೆ, ಪ್ರಕೃತಿ ಜನಿತಗಳಾದ ದಯಾ ಗುಣವನ್ನಾಗಲಿ, ಕೋಪ ಗುಣವನ್ನಾಗಲಿ, ಪ್ರೇಮವನ್ನಾಗಲಿ, ಅಸೂಯವನ್ನಾಗಲಿ ಇಲ್ಲದಂತೆ, ಜೀವಿಯ ಕರ್ಮಪ್ರಕಾರ ಪ್ರವರ್ತಿಸುವ ಉಪಭೂತಗಳನ್ನು ಕುರಿತು ಈಗ ತಿಳಿದುಕೊಳ್ಳೋಣ. ನಮಗೆ ಚೆನ್ನಾಗಿ ಅರ್ಥವಾಗುವುದಕ್ಕೆ ಅಸಂಖ್ಯಾತಗಳಾದ ಉಪಭೂತಗಳಲ್ಲಿ ಮೊದಲು "ರೋಗ ಒಂದು ಭೂತ" ಎನ್ನುವ ವಿಷಯವನ್ನು ಕುರಿತು ಹೇಳಿಕೊಳ್ಳೋಣ. ಶರೀರದಲ್ಲಿ ಎರಡು ವಿಧಗಳ ಶರೀರ ಬಾಧೆಗಳು ಏರ್ಪಡುತ್ತವೆ. ಅವುಗಳನ್ನು ಒಂದು ರೋಗ, ಎರಡು ಜಾಡ್ಯ ಎಂದು ಹೇಳಬಹುದು. ಶರೀರದಲ್ಲಿ ಏರ್ಪಡುವ ಬಾಧೆಗಳೆಲ್ಲವನ್ನು ರೋಗಗಳೆಂದು ಬಹಳ ಜನ ಹೇಳುತ್ತಿರುತ್ತಾರೆ. ಹಾಗೆ ಇರುವ ಬಾಧೆಗಳೆಲ್ಲ ರೋಗಗಳಲ್ಲ. ಕೆಲವು ರೋಗಗಳು ಆಗಬಹುದು, ಕೆಲವು ಜಾಡ್ಯಗಳು ಆಗಿರಬಹುದು. ರೋಗ ಎಂದರೆ ಶರೀರದಲ್ಲಿ ಏರ್ಪಡುವ ರೋಗ ಎಂದು ಹೇಳಬಹುದು. ಉದಾಹರಣೆಗೆ ಮಲೇರಿಯಾ, ಟೈಫಾಯಿಡ್, ಕಲರಾ, ಶಲ್ದಿ (ಗನೇರಿಯಾ), ಶವಾಯಿ (ಸಿಪ್‌ಲಿಸ್), ಕ್ಷಯ (ಟಿ.ಬಿ), ಕುಷ್ಟ, ಕಜ್ಜಿ, ತಾಮರ, ಅತಿಸಾರ (ಬೇದಿಗಳು) ರಾಚಹುಣ್ಣು (ಕ್ಯಾನ್ಸರ್) ಮೊದಲಾದ ಅನೇಕ ರೋಗಗಳಿವೆ. ಶರೀರದ ಹೊರಗಿನಿಂದ ಬಂದು, ಶರೀರದಲ್ಲಿ ಪ್ರವೇಶಿಸುವವು ರೋಗಗಳು ಎಂದು ಹೇಳಬಹುದು. ರೋಗ ಶರೀರದಲ್ಲಿ ಸ್ವಲ್ಪ ಕಾಲವಿದ್ದು

ಹೋಗಬಹುದು. ರೋಗ ಶರೀರದ ಹೊರಗಿನಿಂದ ಬಂದಿರುವುದು, ಆದ್ದರಿಂದ ಅದು ಮತ್ತೆ ಶರೀರವನ್ನು ಬಿಟ್ಟು ಹೊರಗೆ ಹೋಗಬಹುದು. ಆದರೆ ಜಾಡ್ಯ ಅಂಥಾದಲ್ಲ, ಜಾಡ್ಯ ಶರೀರದ ಹೊರಗಿನಿಂದ ಬರುವುದಿಲ್ಲ ತಿರುಗಿ ಶರೀರವನ್ನು ಬಿಟ್ಟು ಹೊರಗೆ ಹೋಗುವುದಿಲ್ಲ. ಶರೀರದಲ್ಲೇ ಉತ್ಪನ್ನವಾಗುವ ಬಾಧೆಯನ್ನು ಜಾಡ್ಯ ಎನ್ನುತ್ತೇವೆ. ಉದಾಹರಣೆಗೆ ಮೊಣಕಾಲು ಕೀಲುಗಳ ನೋವುಗಳು, ಉಬ್ಬಸ, ಮಧುಮೇಹ (ಷುಗರ್‌ವ್ಯಾಧಿ), ಚತ್ವಾರ (ಕುರುಡುತನ ಅಥವಾ ದೃಷ್ಠಿ ಸ್ಥಗಿತ) ವೃದ್ಧಾಪ್ಯ ಚರ್ಮ ಸುಕ್ಕುಗಟ್ಟುವುದು, ಗ್ರಂಥಿಗಳ ಕೆಲಸ ಕಡಿಮೆಯಾಗುವುದು, ನರಗಳು ಬಲಹೀನತೆಗೊಳ್ಳುವುದು, ಶರೀರ ಸಹಜತ್ವವನ್ನು ಕಳೆದುಕೊಳ್ಳುವುದು ಮೊದಲಾದವುಗಳೆಲ್ಲವು ರೋಗಗಳಲ್ಲ ಜಾಡ್ಯಗಳು ಎಂದು ಹೇಳಬಹುದು.

ಜಾಡ್ಯ ಎಂದರೆ! ಶರೀರ ತನ್ನ ಸಹಜತ್ವವನ್ನು ಕಳೆದುಕೊಂಡು ಅವಯವಗಳಲ್ಲಿ ಕಾರ್ಯಲೋಪಗಳು ಬೆಳೆದು ಹೋಗುವುದು ಅಥವಾ ಶರೀರದೊಳಗಿನ ಅವಯವಗಳಿಗೆ ವಯಸ್ಸು ಮುಗಿದುಹೋಗುವುದರಿಂದ ಏರ್ಪಡುವ ಲಕ್ಷಣಗಳನ್ನು ಜಾಡ್ಯ ಎನ್ನುತ್ತೇವೆ. ವಯಸ್ಸು ಮುಗಿದುಹೋಗಿ ವೃದ್ಧಾಪ್ಯ ಸೂಚನೆಗಳು ಕಾಣಿಸಿದಾಗ ಅದನ್ನು ರೋಗ ಎನ್ನುವುದಿಲ್ಲ ಅಲ್ಲವೆ. ಹಾಗೆ ಶರೀರದೊಳಗಿನ ಅವಯವಗಳ ಸಾಮರ್ಥ್ಯವನ್ನು ಸಹಜವಾಗಿ ಕಳೆದುಕೊಂಡರೆ ಅದನ್ನು ರೋಗವೆನ್ನುವುದಾಗಲಿ, ನಡೆಯುವುದಿಲ್ಲ, ಅದನ್ನು ಜಾಡ್ಯ ಎನ್ನಬೇಕು. ಶರೀರದಲ್ಲಿ ಕ್ಲೋಮರಸ ಗ್ರಂಥಿ (ಪ್ಯಾಂಕ್ರಿಯಾಸ್ ಗ್ಲಾಂಡ್) ತನ್ನ ಸಾಮರ್ಥ್ಯವನ್ನು ಕಳೆದುಕೊಂಡರೆ, ಅದರಿಂದ ಡಯಾಬಿಟಿಸ್ (ಷುಗರ್) ವ್ಯಾಧಿ ಬಂದರೆ, ಆ ವ್ಯಾಧಿಯನ್ನು ಜಾಡ್ಯ ಎನ್ನುತ್ತೇವೆ. ಸಾಮರ್ಥ್ಯವನ್ನು ಕಳೆದುಕೊಂಡಿರುವುದನ್ನು ಯಾರೂ ಗುಣಪಡಿಸಲಾರರು. ಆದ್ದರಿಂದ ಔಷಧಗಳಿಂದ ಷುಗರ್‌ವ್ಯಾಧಿ ಗುಣವಾಗುವುದಿಲ್ಲ. ಔಷಧಗಳಿಂದ ಕ್ಲೋಮರಸ ಗ್ರಂಥಿ ಮತ್ತೆ ಕೆಲಸ ಮಾಡುವಂತೆ ಯಾವ ಡಾಕ್ಟರುಗಳು ವೈದ್ಯವನ್ನು ಮಾಡಲಾರರು. ಆ ಗ್ರಂಥಿ ಉತ್ಪತ್ತಿ ಮಾಡದ ಇನ್ಸುಲಿನ್ ಹಾರ್ಮೋನನ್ನು

ಹೊರಗಿನಿಂದ ಕಳುಹಿಸಿ ಶರೀರದಲ್ಲಿ ಇನ್ಸುಲಿನ್ ಅವಶ್ಯಕವನ್ನು ತೀರಿಸಬಹುದು. ಆದರೆ ಇನ್ಸುಲಿನ್ ಔಷಧವಲ್ಲ, ಷುಗರ್ ವ್ಯಾಧಿ ರೋಗವಲ್ಲ. ಇದನ್ನು ಅನುಸರಿಸಿ ನೋಡಿದರೆ ಶರೀರದಲ್ಲಿ ಏರ್ಪಡುವ ಲಕ್ಷಣಗಳಲ್ಲಿ ಕೆಲವು ಸಹಜ ಸಿದ್ಧವಾದ ಜಾಡ್ಯಗಳಾದರೆ, ಕೆಲವು ಮಾತ್ರ ರೋಗಗಳಾಗಿವೆ. ಅಂತಹ ರೋಗಗಳು ಕೆಲವು ಔಷಧಗಳಿಂದಲೂ, ಕೆಲವು ಮಂತ್ರಗಳಿಂದಲು ಹೋಗುವವು ಇದ್ದಾಗ, ಮತ್ತೆ ಕೆಲವು ಅಪರೂಪವಾಗಿ ಔಷಧಗಳಿಗಾಗಲಿ, ಮಂತ್ರಗಳಿಗಾಗಲಿ, ಹೋಗದ ರೋಗಗಳು ಸಹ ಇವೆಯೆಂದು ಮೊದಲೇ ಹೇಳಿಕೊಂಡಿದ್ದೇವೆ. ಹಾಗೆ ಏಕೆ ನಡೆಯುತ್ತಿದೆಯೆಂದು ವಿವರವಾಗಿ ತಿಳಿದುಕೊಳ್ಳಬೇಕೆಂದರೆ ರೋಗ ಎಂದರೆ ಏನೊ ಅದನ್ನು ಕುರಿತು ಪೂರ್ತಿಯಾಗಿ ತಿಳಿದುಕೊಳ್ಳಬೇಕು.

ನಮ್ಮ ಶರೀರದಲ್ಲಿ ಬರುವ ಯಾವ ರೋಗವಾದರು ಅದು ಸಹ ಒಂದು ಭೂತವೇ, ಎಂದರೆ ಜೀವವಿರುವುದು ಎಂದು ಅರ್ಥ. ಒಬ್ಬ ಜೀವಿಯನ್ನು ಭೂತ ಎಂದು ಸಹ ಅನ್ನಬಹುದೆಂದು ಮೊದಲೆ ಹೇಳಿಕೊಂಡಿದ್ದೇವೆ. ಕೆಲವು ಕೋಟಿ ಜೀವಧಾತುಕಣ ಸಮುದಾಯವನ್ನು ಒಂದು ಸಜೀವ ಶರೀರ ಎಂದು ಹೇಳುತ್ತೇವೆ. ಸಜೀವ ಶರೀರವನ್ನು ಒಬ್ಬ ವ್ಯಕ್ತಿ ಎನ್ನುತ್ತೇವೆ. ವ್ಯಕ್ತಿ ಕಾಣಿಸುತ್ತಾನೆ, ವ್ಯಾಧಿ ಕಾಣಿಸದು. ವ್ಯಕ್ತಿಗೆ ಉದ್ದೇಶ, ಕಾರ್ಯ ಇರುವಹಾಗೆ, ವ್ಯಾಧಿಗು ಸಹ ಉದ್ದೇಶ, ಕೆಲಸ ಎರಡೂ ಇವೆ. ವ್ಯಾಧಿ ಎನ್ನುವ ಹೆಸರು ಮೊದಲು "ವ್ಯಕ್ತಿ" ಎನ್ನುವ ಹೆಸರಿಗೆ ಹತ್ತಿರವಾಗಿರುವಂತೆ "ವ್ಯಧಿ" ಎಂದು ಕರೆಯಲ್ಪಡುತ್ತಿತ್ತು. ಕಾಲಕ್ರಮದಲ್ಲಿ ವ್ಯಧಿ ಎನ್ನುವ ಹೆಸರು 'ವ್ಯಾಧಿ' ಯಾಗಿ ಬದಲಾಗಿದೆ. ವ್ಯಾಧಿಯನ್ನೇ ಎಲ್ಲರು ರೋಗ ಎಂದು ಕರೆಯುತ್ತಿದ್ದಾರೆ. ಕೆಲವು ಕೋಟಿ ಜೀವಕ್ರಿಮಿಗಳ ಸಮುದಾಯ ಒಂದು ರೋಗವಾಗಿ ಇದೆ. ಉದಾಹರಣೆಗೆ 'ಕಲರಾ' ರೋಗವನ್ನು ತೆಗೆದುಕೊಳ್ಳೋಣ. ಕಲರಾ ಎನ್ನುವುದು ಎಲ್ಲರಿಗು ತಿಳಿದಹಾಗೆ ಒಂದು ರೋಗವೆ. ಆದರೆ ಎಲ್ಲರಿಗು ತಿಳಿಯದಹಾಗೆ ಅದು ಸಹ ಒಂದು ಉಪಭೂತವಾಗಿ ಇದೆ. ಉಪಭೂತವಾದ ಕಲರಾ ತನ್ನ ಕ್ರಿಮಿಸಮುದಾಯದಿಂದ ಮನುಷ್ಯರೊಳಗೆ ವ್ಯಾಪಿಸಬಲ್ಲದು. ಮನುಷ್ಯನೊಳಗೆ ಸೇರಿದ ಕಲರಾ, ಆ ಮನುಷ್ಯನನ್ನು 48

ಗಂಟೆಗಳಿಗೆ ಸಾಯಿಸಬಲ್ಲದು. ಇದನ್ನು ಅನುಸರಿಸಿ ನೋಡಿದರೆ ಕಲರಾ ರೋಗಕ್ಕೆ ಮನುಷ್ಯರನ್ನು ಸಾಯಿಸಬೇಕೆಂಬ ಉದ್ದೇಶವಿದೆಯೆಂದು ತಿಳಿಯುತ್ತಿದೆ. ಒಬ್ಬ ಮನುಷ್ಯನನ್ನು ಸಾಯಿಸಬೇಕೆಂಬ ಉದ್ದೇಶದಿಂದ ಆತನೊಳಗೆ ಸೇರಿ ಆತನ ಶರೀರದಲ್ಲಿ ಬಲಗೊಂಡು ಕೊನೆಗೆ ಆತನನ್ನು ಸಾಯಿಸುತ್ತದೆ, ಹಾಗೆ ಏಕೆ ಮಾಡಬೇಕಾಗಿ ಬಂದಿದೆಯೆಂದರೆ, ಆ ಮನುಷ್ಯ ಮಾಡಿಕೊಂಡ ಪಾಪ ಹಾಗೆ ಇರುತ್ತದೆ. ಒಬ್ಬ ಮನುಷ್ಯ ಮಾಡಿಕೊಂಡ ಪಾಪವನ್ನು ಅನುಸರಿಸಿ ಆತನನ್ನು ಎಲ್ಲಿಯವರೆಗೆ, ಯಾವ ಹಂತದ ಬಾಧೆಯಿಂದ, ಹೇಗೆ ಹಿಂಸಿಸಬೇಕೊ ಹಾಗೆ ಹಿಂಸಿಸಿ ಆತನನ್ನು ಸಾಯಿಸುವುದು ನಡೆಯುತ್ತಿದೆ. ಆದ್ದರಿಂದ ಒಬ್ಬ ಕಲರಾ ರೋಗಿಗೆ, ಮತ್ತೊಬ್ಬ ಕಲರಾ ರೋಗಿಗೆ ಅವರವರ ಕರ್ಮಗಳ ಪ್ರಕಾರ, ಅವರವರ ಅನುಭವಗಳು ಸಹ ವ್ಯತ್ಯಾಸದಿಂದಿರುತ್ತವೆ.

ಒಬ್ಬ ವ್ಯಕ್ತಿ ಕರ್ಮಪ್ರಕಾರ ಕಲರಾ ರೋಗ ಆತನ ಶರೀರದೊಳಗೆ ಸೇರಿ, ಎರಡು ಅಥವಾ ಮೂರು ದಿನಗಳು ಆತನನ್ನು ಬಾಧೆಪಡಿಸಿ, ಸಾಯಿಸದೆ ಬಿಟ್ಟುಹಾಕಬೇಕಾಗಿದ್ದರೆ, ಹಾಗೇ ಮನುಷ್ಯನೊಳಗೆ ಸೇರಿದ ಕಲರಾ, ಎರಡು ಮೂರು ದಿನಗಳು ಬಾಧೆಕೊಟ್ಟು, ಆತನು ಬಳಸಿದ ಔಷಧಗಳಿಂದ ಆತನನ್ನು ಬಿಟ್ಟುಹೋದಂತೆ ನಮಗೆ ಕಾಣಿಸುತ್ತದೆ. ವಾಸ್ತವವಾಗಿ ಹಾಗೆ ಬಿಟ್ಟು ಹೋಗಬೇಕಾದ ಕರ್ಮ ಇದ್ದರೇನೆ ಔಷಧಗಳ ನೆಪದಿಂದ ಬಿಟ್ಟುಹೋಗುವುದು. ಇದನ್ನು ಅನುಸರಿಸಿ ನೋಡಿದರೆ ಕಲರಾ ರೋಗ ಔಷಧಗಳಿಂದ ಹೋಗುತ್ತ ದೆಂದು ತಿಳಿಯುತ್ತಿದೆ. ಒಂದೊಂದು ಸಲ ಕಲರಾ ಸೇರಿದ ವ್ಯಕ್ತಿಗೆ ಕರ್ಮ ಬಲವಾಗಿದ್ದು ಸತ್ತುಹೋಗಬೇಕಾದ ನಿರ್ಣಯ ಜಾಫಥಕ(ಜಾತಕ)ದಲ್ಲಿ ಇದ್ದರೆ, ಆತನಿಗೆ ಎಷ್ಟು ಖರೀದಾದ ಔಷಧಗಳನ್ನು ಬಳಸಿದರೂ, ಎಷ್ಟು ದೊಡ್ಡ ಡಾಕ್ಟರುಗಳು ವೈದ್ಯ ಮಾಡಿದರೂ, ಅವುಗಳೆಲ್ಲವನ್ನು ಕಲರಾ ಅತಿಕ್ರಮಿಸಿ ಆತನನ್ನು ಸಾಯಿಸುತ್ತದೆ. ಒಂದು ವೇಳೆ ಒಬ್ಬ ವ್ಯಕ್ತಿಗೆ ಕರ್ಮಬಾಧೆ, ಅನುಭವಿಸುವವರೆಗು ಮಾತ್ರವೇ ಇದ್ದು, ಸಾಯುವುದು ಇಲ್ಲವೆಂದುಕೊಳ್ಳೋಣ, ಆ ವ್ಯಕ್ತಿಗೆ ವೈದ್ಯವು ಸಹ ಸಿಗಲಿಲ್ಲವೆಂದುಕೊಳ್ಳೋಣ, ವೈದ್ಯವು ಸಿಗದಿದ್ದರೂ ಆತನ ಕರ್ಮಾನುಸಾರ

ಕಲರಾ ಪ್ರವರ್ತಿಸಿ ಆತನನ್ನು ಬಿಟ್ಟು ಹೋಗುತ್ತದೆ. ಕಲರಾ ರೋಗ ಬಂದ ನಂತರ ಔಷಧಗಳನ್ನು ಬಳಸದಿದ್ದರೂ ಬದುಕಿದವರನ್ನು ನಾನು ನೋಡಿದ್ದೇನೆ. ಕೆಲವರು ಔಷಧಗಳನ್ನು ಬಳಸಿದರೂ ಸತ್ತುಹೋದವರನ್ನು ನೋಡಿದ್ದೇನೆ. ಹಾಗೇ ಔಷಧಗಳನ್ನು ಬಳಸಿದ ನಂತರ ಕಲರಾ ರೋಗ ಬಿಟ್ಟುಹೋದವರನ್ನು ಸಹ ನೋಡಿದ್ದೇನೆ. ನಮಗೆ ಕಾಣಿಸದ ಕರ್ಮವನ್ನು ಅನುಸರಿಸಿ ಕಲರಾ ರೋಗವುವೊಂದು ಆತ್ಮ ಆದೇಶಾನುಸಾರ ಅಥವಾ ಆತ್ಮ ಆಡಿಸಿದಂತೆ ಕಲರಾ ಆಡುತ್ತಿದೆ. ಭೂಮಿಮೇಲೆ ಪ್ರತಿ ಜೀವಿಯು ಆತ್ಮ ಆಡಿಸಿದಂತೆ ಆಡಬೇಕಾದದ್ದೆ. ಆ ಸೂತ್ರದ ಪ್ರಕಾರ ಕಲರಾ ಸಹ ಜೀವತ್ವ ಇರುವಂತದ್ದೆ, ಆದ್ದರಿಂದ ಆತ್ಮ ಆದೇಶಾನುಸಾರ ಕೆಲಸಮಾಡುತ್ತಿದೆ. ಆತ್ಮ ಜೀವಿಗಿರುವ ಕರ್ಮಾನುಸಾರ ಕಲರಾವನ್ನು ಆದೇಶಿಸಿದರೆ, ಆತ್ಮ ಆದೇಶವನ್ನೇ ತನ್ನ ಉದ್ದೇಶವಾಗಿಟ್ಟುಕೊಂಡು ಕಲರಾ ಕೆಲಸವಮಾಡುತ್ತಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ! ಆತ್ಮ ಆದೇಶ ನಮಗೆ ಸ್ವಲ್ಪವಾದರು ತಿಳಿದಿಲ್ಲ. ಆತ್ಮ ಆಡಿಸುತ್ತಿದ್ದರೂ, ಆ ವಿಷಯ ನಮಗೆ ತಿಳಿಯದೆ ಮಾಡುವುದೆಲ್ಲಾ ನಾನೇ ಎಂದು ಮನುಷ್ಯ ಅಂದುಕೊಳ್ಳುತ್ತಿದ್ದಾನೆ. ಆದರೆ ಆತ್ಮ ಆದೇಶ ರೋಗಕ್ಕೆ ತಿಳಿಯುತ್ತದೆ. ರೋಗ ತಾನು ಮಾಡುತ್ತಿರುವ ಕೆಲಸ, ಆತ್ಮ ಆದೇಶದಿಂದ ಮಾಡುತ್ತಿದ್ದೇನೆಂದು ತಿಳಿದು ಮಾಡುತ್ತಿದೆ. ಆತ್ಮ ಆದೇಶವನ್ನೇ ತನ್ನ ಉದ್ದೇಶವಾಗಿಟ್ಟುಕೊಂಡು ಕೆಲಸವನ್ನು ಮಾಡುತ್ತಿದೆ. ತನ್ನ ಪ್ರತ್ಯೇಕತೆ ಏನು ಇಲ್ಲದ ರೋಗ, ಯಾರನ್ನು ಬಾಧಿಸಿದರೂ, ಎಷ್ಟು ಬಾಧಿಸಿದರೂ, ಆ ರೋಗಕ್ಕೆ ಕರ್ಮ ಅಂಟುವುದಿಲ್ಲ. ಒಬ್ಬ ಜೀವಿಯ ಕರ್ಮಾನುಸಾರ ಆತ್ಮ ಕೆಲಸ ಮಾಡಿದರೆ, ಆತ್ಮಾನುಸಾರ ರೋಗ ಕೆಲಸಮಾಡುತ್ತಾ, ಆ ಜೀವಾತ್ಮನನ್ನು ಅನುಭವಿಸುವಂತೆ ಮಾಡುತ್ತಿದೆ, ಆದ್ದರಿಂದ ಜೀವಾತ್ಮನ ಕರ್ಮಾನುಸಾರ ಕೆಲಸ ಮಾಡುವ ಆತ್ಮಕ್ಕಾಗಲಿ, ಆತ್ಮಾನುಸಾರ ಕೆಲಸ ಮಾಡುವ ರೋಗಕ್ಕಾಗಲಿ ಯಾವ ಕರ್ಮಗಳು ಅಂಟುವುದಿಲ್ಲ.

ರೋಗ ಸಜೀವವಾದದ್ದೇ ಆದರೂ, ದೇವರ ಪರಿಪಾಲನಾ ವ್ಯವಸ್ಥೆಯಲ್ಲಿ ಕೆಲಸ ಮಾಡುವ ಸೈನಿಕನಂತಹುದು. ಒಬ್ಬ ಸೈನಿಕನು ಪ್ರಭುತ್ವದ ಆದೇಶಾನುಸಾರ ಶತ್ರುಗಳನ್ನು ಎಷ್ಟು ಜನರನ್ನು ಸಾಯಿಸಿದರೂ, ಎಷ್ಟು ಜನರನ್ನು ಹಿಂಸಿಸಿದರೂ ಆ ಸೈನಿಕನನ್ನು ಹಂತಕನು ಎನ್ನುವುದಿಲ್ಲ, ಆತನಿಗೆ ಯಾವ ಕೇಸುಗಳಿರುವುದಿಲ್ಲ. ಹಾಗೆ ಒಂದು ರೋಗ ಆತ್ಮವೊಂದರ ಆದೇಶಾನುಸಾರ ಮನುಷ್ಯರನ್ನು ಎಷ್ಟು ಜನರನ್ನು ಸಾಯಿಸಿದರೂ, ಎಷ್ಟು ಜನರನ್ನು ಹಿಂಸಿಸಿದರೂ, ಆ ರೋಗಕ್ಕೆ ಪಾಪ ಅಂಟುವುದಿಲ್ಲ, ಅದಕ್ಕೆ ಅನುಭವ ಇರುವುದಿಲ್ಲ. "ನಾನಾರೂಪೇಣಾ ಕಾಲ ಕಿಂಕರಃ" ಎನ್ನುವ ವಾಕ್ಯವನ್ನು ಹಿರಿಯರು ಹೇಳಿದ್ದಾರೆ. ಕಿಂಕರ ಎಂದರೆ ಸೈನಿಕನೆಂದು ಅರ್ಥ. ಕಾಲ ಎಂದರೆ ದೇವರು ಎಂದು ಅರ್ಥ, ಕಾಲಕಿಂಕರರು ಎಂದರೆ ದೇವರ ಸೈನಿಕರೆಂದು ಅರ್ಥ. ನಾನಾರೂಪೇಣ ಎಂದರೆ ಅನೇಕ ರೋಗಗಳ ರೂಪದಿಂದ ಎಂದು ಈ ಸಂದರ್ಭದಲ್ಲಿ ಅರ್ಥ ಮಾಡಿಕೊಳ್ಳೋಣ. ಇದರ ಪ್ರಕಾರ ಕಲರಾ ದೇವರ ಪ್ರಭುತ್ವದಲ್ಲಿ ಒಬ್ಬ ಸೈನಿಕನಂತೆ ಕೆಲಸ ಮಾಡುತ್ತಿದೆಯೆಂದು ತಿಳಿದುಬರುತ್ತದೆ. ಮನುಷ್ಯರು ಮಾಡಿಕೊಂಡ ಪಾಪವನ್ನು ಅನುಸರಿಸಿ, ಕಲರಾ ಕೆಲವರನ್ನು ಬಾಧೆಪಡುವಂತೆ ಮಾಡಿ ಬಿಟ್ಟುಹಾಕುತ್ತದೆ. ಕೆಲವರನ್ನು ಬಾಧೆಪಡುವಂತೆ ಮಾಡಿ ಸಾಯಿಸಿಹಾಕುತ್ತದೆ. ಒಬ್ಬ ಮನುಷ್ಯನನ್ನು ಮತ್ತೊಬ್ಬ ಮನುಷ್ಯ ನೋಯಿಸಿದರೆ ಪಾಪ ಬರುತ್ತದೆ. ಆದರೆ ಕಲರಾ ಎನ್ನುವ ಜೀವಿ ಮನುಷ್ಯ ಎಂಬ ಜೀವಿಯನ್ನು ನೋಯಿಸಿದರೆ ಪಾಪ ಬರುವುದಿಲ್ಲ. ಹಾಗೆ ಬಾರದಿರುವುದಕ್ಕೆ ಕಲರಾ ಸಾಧಾರಣ ಜೀವಿಯಲ್ಲ, ದೇವರ ಪರಿಪಾಲನೆಯಲ್ಲಿ ಕೆಲಸ ಮಾಡುತ್ತಿರುವ ಜೀವಿ (ಸೈನಿಕನು). ಆದ್ದರಿಂದ ಕಲರಾ ಎನ್ನುವ ವ್ಯಾಧಿ ಪಾಪ ಪುಣ್ಯಗಳಿಗೆ, ಪ್ರೇಮ, ದ್ವೇಷಗಳಿಗೆ ಅತೀತವಾಗಿದ್ದು ಆತ್ಮವನ್ನು ಗೌರವಿಸುತ್ತದೆ. ಆತ್ಮವನ್ನು ಗೌರವಿಸುವುದೇ ಅಲ್ಲದೆ, ಆತ್ಮ ಜ್ಞಾನವನ್ನು ತಿಳಿದುಕೊಂಡ ಯೋಗಿಗಳನ್ನು ಸಹ ಗೌರವಿಸುತ್ತದೆ. ಹಾಗೆಂದು ಕರ್ಮ ವಿಷಯದಲ್ಲಿ ಯೋಗಿಗಳಿಗೆ ರಿಯಾಯಿತಿ ಏನು ಇರುವುದಿಲ್ಲ ಕರ್ಮವಿರುವಾಗ ಯೋಗಿಯನ್ನಾದರು ರೋಗ ಬಾಧೆಪಡುವಂತೆ ಮಾಡಬೇಕಾಗಿರುತ್ತದೆ. ಆತ್ಮ

ಆದೇಶಾನುಸಾರ ಕೆಲಸ ಮಾಡುವ ಕಲರಾ, ಆತ್ಮಜ್ಞಾನವಿರುವ ಯೋಗಿಯ ವೊಂದರ ಆಜ್ಞೆಯನ್ನು ಸಹ ಪಾಲಿಸುತ್ತದೆ. ಆದ್ದರಿಂದ ಯೋಗೀಶ್ವರರು ಹೇಳಿದರೆ ಒಂದು ಶರೀರದೊಳಗಿರುವ ಕಲರಾ ಸಹ, ಆ ಶರೀರವನ್ನು ಬಿಟ್ಟು ಹೊರಗೆ ಹೋಗುವುದು. ಇಲ್ಲಿ ಔಷಧವಾಗಲಿ, ಮಂತ್ರವಾಗಲಿ ಇಲ್ಲದೇ ಕೇವಲ ಬಾಯಿಮಾತಿನಿಂದ ಕಲರಾ ರೋಗ ಹೊರಗೆ ಹೋಗುವುದು ನಡೆಯುತ್ತಿದೆ ಯೆಂದರೆ, ಆತ್ಮ ಆದೇಶವನ್ನು ಪಾಲಿಸಿದ ಕಲರಾ, ಯೋಗೀಶ್ವರರ ಆದೇಶವನ್ನು ಸಹ ಪಾಲಿಸುತ್ತದೆ. ಯೋಗಿಗಳ ಮಾತು ರೋಗ ಕೇಳುತ್ತದೆಂದು ತಿಳಿದರೂ ಪ್ರಕೃತಿ ಸಿದ್ಧವಾದ ರೋಗವನ್ನು, ಧರ್ಮಬದ್ಧನಾದ ಯೋಗಿ ಯಾವಾಗಲೂ ಆದೇಶಿಸನು. ಯಾವಾಗಲಾದರು ದೈವಜ್ಞಾನ ಪ್ರಚಾರವಾಗುವುದಕ್ಕೆ, ಜ್ಞಾನಶಕ್ತಿ ಇಷ್ಟು ದೊಡ್ಡದೆಂದು ತಿಳಿಸುವುದಕ್ಕೆ, ನಿರೂಪಣೆ ನಿಮಿತ್ತವಾಗಿ ಅಪರೂಪವಾಗಿ ಯೋಗಿ ಉಪಭೂತವಾದ ರೋಗವನ್ನು ಆದೇಶಿಸುವನು. ಆಗ ಅದು ಎಷ್ಟು ದೊಡ್ಡ ರೋಗವಾದರು ಯೋಗಿ ಮಾತನ್ನು ಗೌರವಿಸಿ, ಯೋಗೀಶ್ವರರ ಆದೇಶಾನುಸಾರ ನಡೆದುಕೊಳ್ಳುವುದು.

ಒಂದು ಶರೀರದೊಳಗಿನ ಜೀವಾತ್ಮನು ಮಾಡಿಕೊಂಡ ಪಾಪವನ್ನು ಅನುಭವಿಸುವಂತೆ ಮಾಡುವುದಕ್ಕೆ, ಕಾಲಕಿಂಕರರು ಎನ್ನುವ ತನ್ನ ಸೇನೆಯನ್ನು ದೇವರು ತಯಾರು ಮಾಡಿದ್ದಾನೆಂದುಕೊಂಡಿದ್ದೇವಲ್ಲ! ಸೇನೆ ಅಥವಾ ಸೈನ್ಯ ಎಂದರೆ ಎಷ್ಟೋ ಸಂಖ್ಯೆ ಇರುತ್ತದೆ. ಅದರಲ್ಲಿಯು ಎಷ್ಟೋ ವಿಭಾಗಗಳು ಇರುತ್ತವೆ. ಸೈನ್ಯದಲ್ಲಿ 1. ಸಿಪಾಯಿ 2. ನಾಯಕ 3. ಹವಾಲದಾರ 4. ಸುಬೇದಾರ 5. ಕ್ಯಾಪ್ಟನ್ 6. ಮೇಜರ್ 7. ಲೆಫ್ಟಿನೆಂಟ್ ಕಲ್ನಲ್ 8. ಕಲ್ನಲ್ 9. ಬ್ರಿಗೇಡಿಯರ್ 10. ಜನರಲ್ ಹುದ್ದೆಗಳು ಇರುವಹಾಗೆ, ಹುದ್ದೆಗಳಿಗೆ ತಕ್ಕಹಾಗೆ ಅವರ ಅಧಿಕಾರಬಲವಿದ್ದಂತೆ, ಕಾಲಕಿಂಕರರು ಎನ್ನುವ ಸೈನಿಕರು ಸಹ ಹುದ್ದೆಗಳನ್ನು ಹೊಂದಿದ್ದಾರೆ. ಹುದ್ದೆಗಳು ಹೊರಗೆ ಕಾಣಿಸುವಂತವಲ್ಲ. ಹೊರಗಿನ ಹುದ್ದೆಗಳ ಹಾಗೆ ಅಧಿಕಾರಬಲದಲ್ಲಿ ವ್ಯತ್ಯಾಸಗಳಿರದೆ, ಅವರ ಶಕ್ತಿಸಾಮರ್ಥ್ಯಗಳಲ್ಲಿ ವ್ಯತ್ಯಾಸಗಳಿರುತ್ತವೆ. ಚೆನ್ನಾಗಿ ಅರ್ಥವಾಗುವುದಕ್ಕೆ ಉದಹರಿಸಿ ಹೇಳಿಕೊಳ್ಳೋಣ.

ಒಂದು ಹಳ್ಳಿ ಇದೆಯೆಂದುಕೊಳ್ಳೋಣ. ಆ ಚಿಕ್ಕ ಗ್ರಾಮದಲ್ಲಿ ಒಂದು ಸಾವಿರ ಮನೆಗಳು ಇವೆಯೆಂದುಕೊಳ್ಳೋಣ. ಸಾವಿರ ಮನೆಗಳಿಗೆ ಮನೆಗೆ ಹತ್ತು ಮಂದಿ ಪ್ರಕಾರ ಹತ್ತು ಸಾವಿರ ಮಂದಿ ಜನಸಂಖ್ಯೆ ಇದ್ದಾರೆಂದುಕೊಳ್ಳೋಣ. ಹತ್ತುಸಾವಿರ ಜನರಿಗೆ ಕರ್ಮಪ್ರಕಾರ ಒಂದು ಕಾಲದಲ್ಲಿ ಕಲರಾ ವ್ಯಾಧಿ ಊರೆಲ್ಲಾ ವ್ಯಾಪಿಸಿ, ಹತ್ತುಸಾವಿರ ಜನರನ್ನು ಬಾಧೆಪಡುವಂತೆ ಮಾಡುತ್ತದೆ. ಅದರಲ್ಲಿ ಕೆಲವರನ್ನು ಸಾಯಿಸುತ್ತದೆ, ಕೆಲವರಿಗೆ ನೋವು ಮಾತ್ರ ಕೊಟ್ಟು ಬಿಡುತ್ತದೆ. ಊರಿನೊಳಗೆ ಕಲರಾರೋಗ ಪ್ರವೇಶಿಸಿದ ತಕ್ಷಣವೆ ಡಾಕ್ಟರುಗಳು ಸ್ಪಂದಿಸಿ ಊರೆಲ್ಲರಿಗು ವೈದ್ಯ ಮಾಡಿದರೂ, ಕೆಲವರು ಮರಣಿಸುವುದು, ಕೆಲವರು ಉಳಿಯುವುದು ನಡೆದಿದೆ. ಸತ್ತುಹೋದವರು ಶೇ. 2% ರಷ್ಟು, ಬದುಕಿ ಉಳಿದವರು 98% ರಷ್ಟು. ಸತ್ತುಹೋದವರು ಎರಡುನೂರು ಜನರಾದರೆ, ಬದುಕಿ ಉಳಿದವರು ಒಂಬತ್ತು ಸಾವಿರದ ಎಂಟುನೂರು ಜನ ಎಂದು ಅರ್ಥವಾಗುತ್ತಿದೆ.

ಹತ್ತು ಸಾವಿರ ಮಂದಿ ಇರುವ ಚಿಕ್ಕ ಊರಿನಲ್ಲಿ, ಒಂದೇ ಬಾರಿಗೆ ಕೆಲವು ದಿನಗಳ ವ್ಯತ್ಯಾಸದಿಂದ ಕಲರಾ ವ್ಯಾಧಿ ಎಲ್ಲರಿಗು ಹರಡುವುದು ನಡೆದಿದೆ. ನಾಲ್ಕು ಅಥವಾ ಐದು ದಿನಗಳ ವ್ಯತ್ಯಾಸದಲ್ಲಿ ಊರೆಲ್ಲಾ ವ್ಯಾಪಿಸಿದ ಕಲರಾ ಎನ್ನುವ ಭೂತ (ಜೀವಾತ್ಮ) ಒಂದೇನಾ, ಅಥವಾ ಒಬ್ಬೊಬ್ಬರಿಗೆ ಒಂದೊಂದು ಕಲರಾ ಭೂತ ಸೇರಿದೆಯಾ ಎಂದು ಕೆಲವರಿಗೆ ಪ್ರಶ್ನೆಬರಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಕೆಲವು ಕೋಟಿ ಜೀವಕ್ರಿಮಿ ಸಮುದಾಯವಿರುವ ಕಲರಾ ಭೂತ ಒಂದೆಯೇ, ಒಂದು ಊರೆಲ್ಲಾ ಹರಡಬಲ್ಲದು. ಒಂದು ಊರೇ ಅಲ್ಲ, ಆ ಊರಿನ ಸುತ್ತಮುತ್ತ ಗ್ರಾಮಗಳಿಗು ಸಹ ಹರಡಬಲ್ಲದು. ಹಾಗೆ ಒಂದೇ ಕಲರಾ ಭೂತ ಒಂದು ಜಿಲ್ಲೆಯೆಲ್ಲಾ ಹರಡುವಂತಹ ಸಾಮರ್ಥ್ಯವನ್ನು ಹೊಂದಿರುತ್ತದೆ. ಒಂದು ಗ್ರಾಮದೊಳಗಿನ ಒಬ್ಬರಲ್ಲಿ ಮೊದಲು ಕಲರಾವ್ಯಾಧಿ ಕಾಣಿಸಿ, ಅಲ್ಲಿಂದ ತನ್ನ ಜೀವಕ್ರಿಮಿಗಳ ಮುಖಾಂತರ ಇತರರಲ್ಲಿ ವ್ಯಾಪಿಸುತ್ತಾ ಹೋಗುವುದು. ಹಾಗೆ ಒಂದು ಊರಿನೊಳಗಿನ ಹತ್ತು ಸಾವಿರ ಜನರಿಗೂ ಸಹ ನಾಲ್ಕೈದು ದಿನಗಳಲ್ಲಿ ಹರಡುವುದು. ಇದನ್ನು ಅನುಸರಿಸಿ ನೋಡಿದರೆ

ಅನೇಕ ಹುದ್ದೆಗಳನ್ನು ಹೊಂದಿದ ಭೂತಗಳಲ್ಲಿ ಕಲರಾರೋಗ ಹೊರಗಿನ ಸೈನ್ಯದಲ್ಲಿ ಮೂರನೆಸ್ಥಾನದಲ್ಲಿರುವ ಹಾವಲ್ದಾರ್ ಹುದ್ದೆಗೆ ಸಮಾನವಾದ ಹುದ್ದೆಯನ್ನು ಹೊಂದಿದೆಯೆಂದು ಅರ್ಥವಾಗುತ್ತಿದೆ. ಮೂರನೇ ಸ್ಥಾನ ಹುದ್ದೆಯನ್ನು ಹೊಂದಿದ ಕಲರಾ ಭೂತ ಒಂದೇ ಒಂದು ಜಿಲ್ಲೆಯನ್ನಾಗಲಿ, ಒಂದು ರಾಷ್ಟ್ರವನ್ನಾಗಲಿ ಕೆಲವು ದಿನಗಳಲ್ಲಿಯೇ ಅಲ್ಲೋಲಕಲ್ಲೋಲ ಮಾಡಿ, ಪೀಡಿಸಿ ಕೆಲವರನ್ನಾದರು ಸಾಯಿಸಬಲ್ಲದು ಅಥವಾ ಎಲ್ಲರನ್ನಾದರು ಸಾಯಿಸಬಲ್ಲದು. ಮೂರನೆ ಸ್ಥಾನದಲ್ಲಿರುವ ಕಲರಾ ಭೂತ ಒಂದಕ್ಕೆ ಅಷ್ಟು ಬಲ ಇದ್ದರೆ, ಅದಕ್ಕಿಂತ ದೊಡ್ಡ ಹುದ್ದೆಗಳನ್ನು ಹೊಂದಿರುವ ಉಪಭೂತಗಳಿಗೆ ಎಷ್ಟು ಬಲವಿರುವುದೊ ಸುಲಭವಾಗಿ ಅರ್ಥ ಮಾಡಿಕೊಳ್ಳಬಹುದು.

ಇಲ್ಲಿ ಮತ್ತೊಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! ಭೂಮಂಡಲ ಎಲ್ಲದಕ್ಕು ಕಲರಾ ಭೂತ ಒಂದೇ ಇದೆಯಾ ಅಥವಾ ಕಲರಾಭೂತಗಳು ಇನ್ನೂ ಇವೆಯಾ? ಈ ಪ್ರಶ್ನೆಗೆ ನಮ್ಮ ಉತ್ತರ ಈ ರೀತಿ ಇದೆ. ಕಲರಾ ಒಂದು ಉಪಭೂತ, ಕೆಲವು ಸಮಯಗಳಲ್ಲಿ ಭೂಮಿಮೇಲೆ ಎಲ್ಲಾಕಡೆ ಹುಡುಕಿದರೂ ಕಲರಾ ಭೂತ (ರೋಗ) ಎಲ್ಲಿಯೂ ಕಾಣಿಸದು. ಆದರೆ ಕೆಲವು ಸಮಯಗಳಲ್ಲಿ ಭೂಮಿಮೇಲೆ ಅನೇಕಕಡೆ, ಅನೇಕ ರಾಷ್ಟಗಳಲ್ಲಿ, ಅನೇಕ ದೇಶಗಳಲ್ಲಿ, ಅನೇಕ ಖಂಡಗಳಲ್ಲಿ ಒಂದೇಬಾರಿ ಕಾಣಿಸುತ್ತದೆ. ಒಂದು ಕಡೆ ವಿಸ್ತರಿಸಿರುವ ಕಲರಾವನ್ನು ಒಂದು ಕಲರಾ ಭೂತವಾಗಿ ಲೆಕ್ಕಹಾಕಿದರೆ, ವಿವಿಧ ಕಡೆಗಳಲ್ಲಿ ವಿಸ್ತರಿಸಿರುವ ಕಲರಾವನ್ನು ವಿವಿಧ ಭೂತಗಳಾಗಿ ಲೆಕ್ಕಹಾಕಬೇಕಾಗಿದೆ. ಅಖಂಡವಾಗಿ ಒಂದು ಕಡೆ ಇರುವ ರೋಗವನ್ನು ಒಂದು ಭೂತವಾಗಿ ಲೆಕ್ಕಹಾಕಬಹುದು. ಖಂಡ ಖಂಡಗಳಾಗಿ ಕೆಲವು ಪ್ರದೇಶಗಳಲ್ಲಿ ವ್ಯಾಪಿಸಿದ ಕಲರಾವನ್ನು, ಬೇರೆಬೇರೆ ಕಲರಾ ಭೂತಗಳಾಗಿ ಪರಿಗಣಿಸಬೇಕು. ಒಂದೇ ದೇಶದಲ್ಲಿ ಐವತ್ತು ಮೈಲುಗಳ ದೂರ ಅಂತರವಿದ್ದು, ನಾಲ್ಕು ಕಡೆ ಕಲರಾ ಇದೆಯೆಂದುಕೊಳ್ಳೋಣ. ಆಗ ಒಂದಕ್ಕೊಂದು ಸಂಬಂಧವಿಲ್ಲದೆ ಐವತ್ತು ಮೈಲುಗಳ ದೂರದಲ್ಲಿ ಇರುವುದರಿಂದ, ಆ ದೇಶದಲ್ಲಿ ನಾಲ್ಕು ಕಲರಾ ಭೂತಗಳು,

ಆ ಸಮಯದಲ್ಲಿ ಇವೆಯೆಂದು ಹೇಳಬಹುದು. ಈ ವಿಧವಾಗಿ ಲೆಕ್ಕಹಾಕಿ ನೋಡಿದರೆ ಕಲರಾ ಭೂತ ಅಥವಾ ಕಲರಾ ರೋಗ ಒಂದಲ್ಲ ಎಷ್ಟೋ ಇವೆಯೆಂದು ತಿಳಿಯುತ್ತದೆ. ಹತ್ತಿ ಹಣ್ಣು ನೋಡಲು ಚೆನ್ನಾಗಿರುತ್ತದೆ ಆದರೆ ಹೊಟ್ಟೆ ಬಿಚ್ಚಿ ನೋಡಿದಾಗ ಹುಳುಗಳಿರುತ್ತವೆ. ಹಾಗೇ ಕಲರಾ ರೋಗ ಮನುಷ್ಯನ ಶರೀರದ ಮೇಲೆ ಕಾಣಿಸುವುದಿಲ್ಲ, ಶರೀರದೊಳಗೆ ಹೊಟ್ಟೆಯಲ್ಲಿ, ಕ್ರಿಮಿರೂಪದಲ್ಲಿ (ಹುಳ ರೂಪದಲ್ಲಿ) ವ್ಯಾಪಿಸಿ, ಕರಳುಗಳ ಮೇಲೆ ಹೆಚ್ಚಿನ ಪ್ರಭಾವ ತೋರಿಸಿ, ಮನುಷ್ಯನನ್ನು ಸಾಯಿಸುತ್ತದೆ. ಅದು ಮನುಷ್ಯನ ಮೇಲೆ ಕಲರಾದವೊಂದು ಮುಖ್ಯವಾದ ದಾಳಿ. ಒಂದು ಹತ್ತಿಹಣ್ಣು ಹೇಗಿರುತ್ತದೊ, ಸರಿಯಾಗಿ ಅಂತಹುದನ್ನೇ ಹತ್ತಿ ಹಣ್ಣು ಎನ್ನುತ್ತೇವೆ. ಅಂದರೆ ಒಂದು ಹತ್ತಿ ಹಣ್ಣಿಗು ಮತ್ತೊಂದು ಹತ್ತಿ ಹಣ್ಣಿಗು ಎಂತಹ ವ್ಯತ್ಯಾಸ ಇರುವುದಿಲ್ಲ. ಹಾಗೆ ಒಂದು ಕಲರಾ ರೋಗ ಮನುಷ್ಯನ ಮೇಲೆ ಹೇಗೆ ದಾಳಿ ಮಾಡುತ್ತದೆಯೊ, ಹಾಗೇ ಮತ್ತೊಂದು ಕಲರಾ ರೋಗವು ಸಹ ಅದೇ ವಿಧವಾಗಿ ದಾಳಿಮಾಡುವುದು. ಕಲರಾ ರೋಗಗಳು ಬೇರೆಬೇರೆಯಾಗಿದ್ದರೂ, ಎಲ್ಲವು ಒಂದೇ ಲಕ್ಷ್ಮಣಗಳನ್ನು ಹೊಂದಿರುತ್ತವೆ. ಆದರೆ ಕಲರಾ ರೋಗಗಳು ಭೂಮಿಮೇಲೆ ಎಷ್ಟು ಇವೆಯೊ ಸರಿಯಾಗಿ ಹೇಳಲಾರೆವು.

ಇಲ್ಲಿಯೂ ಸಹ ಮತ್ತೊಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! ಭೂಮಿ ಮೇಲೆ ಕೆಲವು ಸಮಯಗಳಲ್ಲಿ ಅಲ್ಲಲ್ಲಿ ಅನೇಕ ಕಡೆ, ಅನೇಕ ದೇಶಗಳಲ್ಲಿ ಕಾಣಿಸುವ ಕಲರಾರೋಗ, ಕೆಲವು ಸಮಯಗಳಲ್ಲಿ ಭೂಮಿಮೇಲೆ ಎಲ್ಲಿಯೂ ತನ್ನ ಗುರುತು ಕಾಣಿಸದಂತೆ ಹೋಗುತ್ತದೆ. ಆರು ತಿಂಗಳುಗಳಾಗಲಿ, ವರ್ಷವಾಗಲಿ, ಕೆಲವು ವರ್ಷಗಳಾಗಲಿ ಎಲ್ಲಿಯೂ ಇಲ್ಲದಂತೆ ಕಾಣಿಸದಂತೆ ಹೋದ ಕಲರಾ, ಮತ್ತೆ ಅಲ್ಲಲ್ಲಿ ಕಾಣಿಸಿ ಮನುಷ್ಯರನ್ನು ಸಾಯಿಸುತ್ತದೆ. ಸ್ವಲ್ಪಕಾಲ ಭೂಮಿಮೇಲೆ ಯಾವ ಪ್ರಾಂತದಲ್ಲಿಯು ಇಲ್ಲದ ಕಲರಾ ಭೂತವು (ಕಲರಾರೋಗ) ಭೂಮಿಮೇಲೆ ಕಾಣಿಸದ ಸಮಯಗಳಲ್ಲಿ ಏನಾಗಿರುತ್ತದೆ? ಮತ್ತೆ ಎಲ್ಲಿಂದ ಬರುತ್ತಿದೆ? ಎಂದು ನೀವು ಕೇಳಿದ ಈ ಪ್ರಶ್ನೆಗೆ ನಮ್ಮ ಸಮಾಧಾನ

ಏನೆಂದರೆ! ಪ್ರಭುತ್ವಕ್ಕೆ ಅಧಿಪತಿಯಾದ ರಾಜನ (ರಾಷ್ಟ್ರಪತಿಯ) ವೊಂದು ಆಜ್ಞೆಯಿಂದ ಕೆಲಸ ಮಾಡುವ ಸೈನ್ಯ ಹೊರಗಿನ ಪ್ರಜೆಗಳು ಪ್ರವೇಶಿಸದ ಮಿಲಿಟರಿ ಏರಿಯಾ ಎನ್ನುವ ಒಂದು ಪ್ರದೇಶದಲ್ಲಿ ಇರುವುದು. ಅವಶ್ಯ ಬಂದಾಗ ಅವರು ಹೊರಗೆ ಬಂದು ಅವರು ಮಾಡಬೇಕಾದ ವಿಧಿಗಳನ್ನು ನಿರ್ವಹಿಸಿ ಮತ್ತೆ ಅವರ ಜಾಗದೊಳಗೇ ಹೋಗುವರು. ಅದೇ ರೀತಿ ಕಲರಾ ಅನ್ನುವ ರೋಗವು ಸಹ ಒಬ್ಬ ಸೈನಿಕನೆ ಆದ್ದರಿಂದ ಕಲರಾವಾಗಲಿ, ಉಳಿದ ರೋಗಗಳೆನ್ನುವ ಸೈನ್ಯವಾಗಲಿ ಪ್ರಜೆಗಳಿಲ್ಲದ, ಪ್ರಜೆಗಳುಬಾರದ ನಿಷಿದ್ದ ಸ್ಥಳದಲ್ಲಿ ನಿವಾಸವಿರುತ್ತದೆ. ರಾಜ ಅಥವಾ ರಾಷ್ಟ್ರಪತಿ ಆರ್ಡರನ್ನು ಅನುಸರಿಸಿ ಸೈನ್ಯ ಹೊರಗಡೆ ಬಂದು ಕೆಲಸ ಮಾಡುವ ಹಾಗೆ, ದೈವ ನಿರ್ಣಯದ ಪ್ರಕಾರ ಕಲರಾ ಹೊರಗೆ ಪ್ರಜೆಗಳೊಳಗೆ ಬಂದು, ತನ್ನ ಕರ್ತವ್ಯವನ್ನು ತಾನು ಮಾಡುತ್ತಿದೆ. ಕೆಲಸ ಮುಗಿದ ತಕ್ಷಣವೆ ತನ್ನಂತಹ ಸೈನ್ಯವಿರುವ ಮಿಲಿಟರಿ ರೆಜಿಮೆಂಟ್ ಏರಿಯಾದೊಳಗೆ ಹೋಗಿ ಇರುತ್ತದೆ. ಮಿಲಟರಿ ರೆಜಿಮೆಂಟ್ ಇರುವ ಏರಿಯಾದೊಳಗೆ ಪ್ರಜೆಗಳು ಯಾರು ಹೋಗಬಾರದು. ಅಲ್ಲಿರುವ ಸೈನಿಕರು ಯಾವಾಗಲಾದರೂ ಹೊರಗೆ ಬರಬಹುದು. ಆದರೆ ಪ್ರಜೆಗಳು ಮಾತ್ರ ಎಂದಿಗೂ ಸೈನ್ಯವಿರುವ ಪ್ರದೇಶದೊಳಗೆ ಹೋಗಬಾರದು. ಆಗಿರುವಾಗ ಸೈನಿಕನು ಹೊರಗೆ ಬಂದಾಗಲೇ ಕಾಣಿಸುತ್ತಾನೆ. ತನ್ನ ಏರಿಯಾದಿಂದ ಹೊರಗೆ ಬಾರದಿರುವಾಗ ಕಾಣಿಸುವುದಿಲ್ಲ ಅಲ್ಲವೆ! ಹಾಗೆಯೇ ಪ್ರಜೆಗಳು ಭೂಗೋಳದಲ್ಲಿ ಇರುವಂತೆ, ದೇವರ ಸೈನ್ಯವಾದ ರೋಗಗಳು ಖಗೋಳದಲ್ಲಿವೆ. ಖಗೋಳದಲ್ಲಿರುವ ರೋಗಗಳು ಯಾರಿಗು ಕಾಣಿಸದಂತೆ ಹೋಗುವವು. ಖಗೋಳದಲ್ಲಿನ ಕಾಣಿಸದ ರೊಗಗಳು, ಭೂಗೋಳದ ಮೇಲೆ ಬಂದಾಗ ಮಾತ್ರವೆ ಕಾಣಿಸುವವು. ಭೂಮಿ ಮೇಲೆ ರೋಗ, ಅದರ ಕೆಲಸವನ್ನು ನೋಡಿದ ಪ್ರಜೆಗಳಿಗೆ, ರೋಗ ಮತ್ತೆ ಕಾಣಿಸದಂತೆ ಎಲ್ಲಿಗೆ ಹೋಗುತ್ತಿದೆಯೊ ತಿಳಿಯುವುದಿಲ್ಲ. ಮೇಘವು ಕರಗಿ ಹೋದ ಹಾಗೆ ಕಾಣಿಸದಂತೆ ಹೋಗುತ್ತದೆ. ಮತ್ತೆ ಮೇಘ ಚಿಕ್ಕದಾಗಿ ಹುಟ್ಟಿ ದೊಡ್ಡ ಆಕಾರವನ್ನು ಹೊಂದುವಂತೆ, ರೋಗವು ಸಹ ಹುಟ್ಟಿ ಕಾಣಿಸುತ್ತದೆ.

ಪ್ರಭುವಿನ ಅಧೀನದೊಳಗಿನ ಪ್ರಭುತ್ವದಲ್ಲಿ ಕೆಲಸಮಾಡುವ ಸೈನ್ಯವನ್ನಾಗಲಿ, ಒಬ್ಬ ಸೈನಿಕನನ್ನಾಗಲಿ, ಹೊರಗಿನ ಪ್ರಜೆಗಳು ಬಂಧಿಸಲಾರರು. ಹೊರಗಿನ ಪ್ರಜೆಗಳನ್ನು ಬಂಧಿಸುವುದಕ್ಕಾಗಲಿ, ಸಾಯಿಸುವುದಕ್ಕಾಗಲಿ ಸೈನ್ಯಕ್ಕೆ ಅಧಿಕಾರವಿರುತ್ತದೆ. ಆದ್ದರಿಂದ ಕಲರಾ ರೋಗವನ್ನು ಯಾರೂ ಬಂಧಿಸಲಾರರು. ಅಷ್ಟೇ ಅಲ್ಲದೆ ಕಲರಾ ರೋಗ ಪ್ರಜೆಗಳಲ್ಲಿ ಇರುವಾಗ ಮಾತ್ರವೆ ಕಾಣಿಸಿ, ಮತ್ತೆ ಕಾಣಿಸದಂತೆ ಎಲ್ಲಿಗೆ ಹೋಗುವುದು ಯಾರಿಗು ತಿಳಿಯದು, ಹಾಗೆ ಅದು ಎಲ್ಲಿಂದ ಬರುವುದು ಸಹ ತಿಳಿಯದು. ಒಂದು ಕಲರಾನೇ ಅಲ್ಲ, ಯಾವ ರೋಗವಾದರೂ ಎಲ್ಲಿಂದ ಬರುತ್ತದೊ ಯಾರಿಗು ತಿಳಿಯುವುದಿಲ್ಲ. ನಾನು ವಿಜ್ಞಾನಿಯೆಂದು ಹೇಳಿಕೊಳ್ಳುವ ಮನುಷ್ಯ, ಖಂಡಾಂತರ ಕ್ಷಿಪಣಿಗಳನ್ನು ತಯಾರುಮಾಡಿದ ಮನುಷ್ಯ, ಜೀವಕಣವನ್ನು ಸೃಷ್ಟಿಸಿದ್ದೇನೆಂದು ದೊಡ್ಡಸ್ತಿಕೆಯನ್ನು ತೋರಿಸಿಕೊಳ್ಳುವ ಮನುಷ್ಯ, ವಿವಿಧ ರಂಗಗಳಲ್ಲಿ ಕೆಲಸವನ್ನು ಮಾಡುವ ಕಂಪ್ಯೂಟರ್‌ಗಳನ್ನು ಕಂಡುಹಿಡಿದ ಮನುಷ್ಯ, ಖಗೋಳದಲ್ಲಿ ಪ್ರವೇಶ ಮಾಡಿ ಮೇಲಿರುವವುಗಳನ್ನು ಕುರಿತು ತಿಳಿದುಕೊಂಡಿದ್ದೇನೆಂದು ಹೇಳಿಕೊಳ್ಳುವ ಮನುಷ್ಯ, ದೇವರ್‍ಯಾರು, ಅವನ ಅಡ್ರಸ್ ಏನು? ಎಂದು ಪ್ರಶ್ನಿಸುವ ಮನುಷ್ಯನಿಗೆ, ಕೊನೆಗೆ ತನ್ನ ಶರೀರದೊಳಗೆ ಬರುವ ರೋಗವು ಎಲ್ಲಿಂದ ಬಂದಿದೆಯೆಂದು ತಿಳಿದಿಲ್ಲ. ತನ್ನ ಶರೀರದೊಳಗೆ ಬಂದ ಹೊಸ ರೋಗ ಎಲ್ಲಿಯದೊ ತಿಳಿಯದೆ, ಇದಕ್ಕಿಂತ ಮೊದಲು ಎಲ್ಲಿಯೂ ಇಲ್ಲದ ರೋಗ, ಹೇಗೆ ಹುಟ್ಟಿಬಂದಿದೆಯೊ ತಿಳಿಯದ ಮನುಷ್ಯ, ನಾನು ವಿಜ್ಞಾನಿಯೆಂದು ಹೇಳಿಕೊಳ್ಳುವುದು ಹೇಗಿದೆಯೆಂದರೆ! ಮುಖಕ್ಕೆ ಮಸಿಬಳಿದುಕೊಂಡ ಮನುಷ್ಯ, ತಾನು ವಿಕಾರವಾಗಿ ಕಾಣಿಸುತ್ತಿದ್ದರೂ, ನಾನು ಅಂದಗಾರನೆಂದು ಹೇಳಿಕೊಂಡಂತಿದೆ. ನನ್ನ ಮುಖಕ್ಕೆ ಮಸಿ ಇದೆಯೆಂದು ಮರೆತುಹೋಗಿ ನಾನು ಅಂದಗಾರನೆಂದು ಹೇಳಿಕೊಂಡಹಾಗೆ, ನಮ್ಮ ಶರೀರದಲ್ಲಿ ರೋಗವನ್ನು ಕುರಿತು ತಿಳಿಯದಿದ್ದರೂ ಅದನ್ನು ಮರೆತುಹೋಗಿ, ನಾನು ವಿಜ್ಞಾನಿ ಎಂದು ಅಂದುಕೊಳ್ಳುವುದು ಜ್ಞಾನವಾಗುತ್ತದಾ? ವಿಜ್ಞಾನವಾಗುತ್ತದಾ?

ಜೀವಕ್ರಿಮಿ ಸಮುದಾಯವಾದ ಕಲರಾ, ರೋಗವೆಂದು ಮನುಷ್ಯರಿಗೆ ತಿಳಿದರೂ ನಾವು ಅದನ್ನು ಒಂದು ಉಪಭೂತವೆಂದು ಲೆಕ್ಕಹಾಕುತ್ತೇವೆ. ಉಪಭೂತವಾದ ಕಲರಾ ರೋಗ ದೈವಜ್ಞಾನವನ್ನು ತಿಳಿದ ಯೋಗಿಗಳನ್ನು ಮಾತ್ರವೇ ಅಭಿಮಾನಿಸುತ್ತದೆಂದು ಮೊದಲೇ ಹೇಳಿಕೊಂಡಿದ್ದೇವೆ. ಯೋಗಿಗಳು, ಆತ್ಮವನ್ನು ಅಧ್ಯಯನ ಮಾಡಿದ ಆಧ್ಯಾತ್ಮಿಕರು, ಆದ್ದರಿಂದ ರೋಗ ಅವರ ಮಾತನ್ನು ಕೇಳುತ್ತದೆ. ಆದ್ದರಿಂದ ಪೂರ್ವವು ಒಬ್ಬ ಯೋಗಿ, ಕಲರಾ ರೋಗವನ್ನು ಈ ಊರಿನ ಒಳಗೆ ಬರಬೇಡವೆಂದು, ಊರಿಗೆ ನಾಲ್ಕು ಕಡೆ ಇರುವ ದಾರಿಗಳ ಹತ್ತಿರ ಅಡ್ಡವಾಗಿ ಗೆರೆಯನ್ನು ಗೀಚಿದನು. ಎರಡು ದಿನಗಳ ನಂತರ ಕಲರಾ ರೋಗ ಆ ಊರಿನೊಳಗೆ ಹೋಗಬೇಕೆಂಬ ಉದ್ದೇಶದಿಂದ ಒಂದು ದಾರಿಯಲ್ಲಿ ಹೋಗಿದೆ. ಹಾಗೆ ಹೋದ ಆ ಭೂತಕ್ಕೆ ಆ ದಾರಿಯಲ್ಲಿ ಯೋಗಿಯಿಂದ ಗೀಚಿದ ಗೆರೆ ಹೊಳೆಯುವಂತೆ ಕಾಣಿಸಿತು. ಕಲರಾ ಆ ದಾರಿಯಲ್ಲಿ ಹೋದ ಸಮಯಕ್ಕೆ, ಯೋಗಿ ಗೀಚಿದ ಗೆರೆ ಕಾಣಿಸದಂತೆ ಹೋದಾಗ, ಆತನ ಉದ್ದೇಶ ಗೆರೆಯರೂಪದಲ್ಲಿ ಪ್ರಕಾಶಿಸಿ ಕಲರಾ ಭೂತಕ್ಕೆ ಕಾಣಿಸಿತು. ಆಗ ಬಾಹ್ಯಕಣ್ಣಿಗೆ ಕಾಣಿಸದ ಕಲರಾ ಭೂತ, ಯೋಗಿಯವೊಂದು ಉದ್ದೇಶವನ್ನು ಸೂಕ್ಷ್ಮವಾಗಿಯೆ ಗ್ರಹಿಸಿ ಅಲ್ಲಿಂದ ಹಿಂತಿರುಗಿ ಬಂದಿದೆ. ಇದನ್ನು ಅನುಸರಿಸಿ ನೋಡಿದಾಗ ಕಲರಾ ಭೂತ ಯೋಗಿಯ ಮಾತನ್ನು ಗೆರೆದಾಟಲಿಲ್ಲವೆಂದು ತಿಳಿಯುತ್ತಿದೆ. ಇಲ್ಲಿ ನೀವು ನಮ್ಮನ್ನು ಒಂದು ಪ್ರಶ್ನೆ ಕೇಳಬಹುದು. "ಯಾರೊ ಗೆರೆ ಎಳೆದರೆ ಕಲರಾ ದಾಟಲಿಲ್ಲವೆಂದು ಹೇಳುತ್ತಿದ್ದಿರಲ್ಲ! ಆ ವಿಷಯವನ್ನು ನೀವು ಪ್ರತ್ಯಕ್ಷವಾಗಿ ನೋಡಿರುವುದು ಅಲ್ಲ ತಾನೆ! ಯಾರೊ ಹೇಳಿರುವುದನ್ನು ಕೇಳಿ ನೀವು ನಮಗೆ ಹೇಳಿದ್ದೀರೆಂದುಕೊಳ್ಳುತ್ತೇವೆ. ಆಗಿರುವಾಗ ನೀವು ಪ್ರತ್ಯಕ್ಷವಾಗಿ ನೋಡದಿರುವಾಗ ಅದನ್ನು ಸತ್ಯವೆಂದು ನಾವು ಹೇಗೆ ಅಂದುಕೊಳ್ಳಬೇಕು? ನೀವು ಹೇಳಿದ ಮಾತು ಸತ್ಯವೆಂದು ನೀವು ಅಂದುಕೊಂಡರೂ, ನಾವು ಅಂದುಕೊಳ್ಳುವುದಕ್ಕೆ ಆಧಾರ ಇಲ್ಲವಲ್ಲ" ಎಂದು ಸಂಶಯವನ್ನು ವ್ಯಕ್ತಪಡಿಸಬಹುದು.

ನಿಮ್ಮ ಸಂಶಯಕ್ಕೆ ನಮ್ಮ ಸಮಾಧಾನ ಹೀಗಿದೆ ನೋಡಿರಿ. ನಾನು ಮೊದಲೆ ನನ್ನ ಜೀವನ ಹೇತುವಾದ ಪದ್ಧತಿಯಲ್ಲಿ ಆರಂಭವಾಗಿದೆಯೆಂದು ಹೇಳಿದ್ದೇನೆ. ಯಾವ ವಿಷಯವನ್ನೂ ಮೂಡನಂಬಿಕೆಯಿಂದ ಹೇಳುವುದಿಲ್ಲ. ದೆವ್ವಗಳ ವಿಷಯಗಳಲ್ಲಿ ಹೇಳಿರುವವೆಲ್ಲ ಯಥಾರ್ಥ ಸಂಘಟನೆಗಳೆ! ಇಲ್ಲಿ ಭೂತಗಳ ವಿಷಯಗಳಲ್ಲಿ ಹೇಳಿರುವವೆಲ್ಲವು ಸಹ ನನ್ನ ಸ್ವಂತ ಅನುಭವದಿಂದ ಹೇಳಿರುವವೆ! ದೆವ್ವಗಳ ವಿಷಯಗಳಲ್ಲಿ ನಡೆದ ಯಥಾರ್ಥ ಸಂಘಟನೆಗಳಲ್ಲಿ ವಾಸ್ತವವನ್ನು ಹೇಳವುದು ತಪ್ಪಲಿಲ್ಲ. ಆದ್ದರಿಂದ ವಾಸ್ತವ ವಿಷಯಗಳನ್ನು ಎಲ್ಲವನ್ನು ಇಷ್ಟವಿಲ್ಲದಿದ್ದರೂ ಹೇಳಬೇಕಾಗಿ ಬಂದಿದೆ. ಅಲ್ಲಿ ನನಗೆ ಇಷ್ಟವಿಲ್ಲದ ವಿಷಯ ದೆವ್ವಗಳಿಗಿಂತ, ದೇವತೆಗಳಿಗಿಂತ, ಕ್ಷುದ್ರಶಕ್ತಿಗಳಿಗಿಂತ ನಾನು ದೊಡ್ಡವನೆಂದು ತಿಳಿದುಬಂದಿರುವುದು. ಆ ವಿಷಯಗಳನ್ನು ಹೇಳಿರುವುದರಿಂದ ಅವು ಸತ್ಯವೆ ಆದರೂ, ಆ ಸಂಘಟನೆಗಳಲ್ಲಿ ಹೆಚ್ಚಾಗಿ ನನ್ನ ಆಧಿಪತ್ಯವೆ ಕಾಣಿಸುತ್ತಿದೆ. ನಾನು ದೊಡ್ಡವನೆಂದು ಪ್ರಕಟಿಸಿಕೊಳ್ಳುವುದು ನನಗೆ ಸ್ವಲ್ಪವಾದರು ಇಷ್ಟವಿರುವುದಿಲ್ಲ. ಯಾರು ಪ್ರಶ್ನಿಸದಂತಹ ಯಥಾರ್ಥ ಸತ್ಯಗಳನ್ನು ಹೇಳಿದ್ದೇವೆ. ಭೂತಗಳ ವಿಷಯಗಳಲ್ಲಿ ನಿಮ್ಮ ಅವಗಾಹನೆಗಾಗಿ ಇತರರ ಬಳಿ ನಡೆದ ಸಂಘಟನೆಯನ್ನು ಹೇಳಿದ್ದೇನೆ. ಅದನ್ನು ಮೂಢನಂಬಿಕೆಯೆಂದು ಇತರರು ಎನ್ನುವುದಕ್ಕೆ ಅವಕಾಶವಿದೆ. ಆದ್ದರಿಂದ ದೆವ್ವಗಳ ವಿಷಯಗಳನ್ನು ಹೇಳಿದಹಾಗೆ, ಭೂತಗಳ ವಿಷಯಗಳಲ್ಲಿಯು ಸಹ ನನ್ನ ಬಳಿ ಯಥಾರ್ಥವಾಗಿ ನಡೆದ ಸಂಘಟನೆಗಳನ್ನೇ ವಿವರಿಸಿ ಹೇಳುತ್ತೇನೆ. ಆದ್ದರಿಂದ ಯಾರೂ ಮೂಢನಂಬಿಕೆ ಎನ್ನುವುದಕ್ಕೆ ಅವಕಾಶವಿರುವುದಿಲ್ಲ. ಈಗ ಹೇಳುವ ವಿಷಯ 1973ನೇ ವರ್ಷದಲ್ಲಿ ನಡೆದಿರುವುದು.

ಅನಂತಪುರದ ಜಿಲ್ಲೆಯಲ್ಲಿಯೇ ಗುತ್ತಿ ಎನ್ನುವ ಊರಿನ ಸಮೀಪದಲ್ಲಿ ಒಂದು ಹಳ್ಳಿಯಲ್ಲಿ ನನಗೆ ದೂರ ಸಂಬಂಧ ಬಂಧುಗಳಿದ್ದರು. 37 ವರ್ಷಗಳ ಕೆಳಗೆ ಒಂದು ದಿನ ಬಂಧುಗಳಿರುವ ಹಳ್ಳಿಗೆ ಹೋಗಬೇಕಾಯಿತು. ಆ ಊರಿನಲ್ಲಿ ಪಶುಗಳಿಗೆ ಕಾಲುಬಾಯಿ ಜ್ವರ ರೋಗ ಪ್ರಾರಂಭವಾಗಿದೆ. ಕಾಲುಬಾಯಿ ಜ್ವರ

ರೋಗ ಪಶುಗಳ ಕಾಲಿನ ಗಟ್ಟುಗಳಿಗೆ ಬಂದು, ಪಶುಗಳನ್ನು ಹತ್ತು ಹದಿನೈದು ದಿನಗಳವರೆಗೆ ಬಾಧೆಕೊಡುತ್ತದೆ. ಆ ರೋಗವಿರುವ ಹತ್ತು ಹದಿನೈದು ದಿನಗಳು ಪಶುಗಳು ನಡೆಯುವುದಕ್ಕೆ ಬಹಳ ಕಷ್ಟಪಟ್ಟು ನಡೆಯಲಾರದೆ ಭಾಧೆ ಪಡುತ್ತವೆ. ಕಾಲುಬಾಯಿ ರೋಗವು ಸಹ ಭೂತವೆ ಆಗುತ್ತದೆ. ಕಾಲುಬಾಯಿ ಭೂತ, ಪಶುಗಳ ಪಾಪವನ್ನು ಅನುಸರಿಸಿ ಆತ್ಮ ಆದೇಶಾನುಸಾರ ಪಶುಗಳನ್ನು ಹಿಂಸಿಸುತ್ತದೆ. ನಾನು ಅಲ್ಲಿಗೆ ಹೋಗುವುದಕ್ಕೆ ಒಂದು ಎರಡು ದಿನಗಳ ಮೊದಲು ಆ ಹಳ್ಳಿಯಲ್ಲಿ, ಆ ರೋಗ ಪ್ರವೇಶಿಸಿ ಕೆಲವು ಪಶುಗಳಲ್ಲಿ ಸೇರಿಹೋಗಿದೆ. ಕಾಲುಬಾಯಿ ರೋಗ ಕೆಲವು ಪಶುಗಳಿಗೆ ಬಂದಿದೆಯೆಂದು ಆ ಊರಿನಲ್ಲಿ ಎಲ್ಲರಿಗು ತಿಳಿದಿದೆ. ಮೊದಲು ಒಂದು ಎರಡು ಪಶುಗಳಿಂದ ಪ್ರಾರಂಭವಾದ ರೋಗ, ಊರಿನಲ್ಲಿನ ಪಶುಗಳೆಲ್ಲವುಗಳಿಗು ಕೆಲವೇ ದಿನಗಳಲ್ಲಿಯೇ ವ್ಯಾಪಿಸುವುದು. ಅದು ಅಂಟುರೋಗವಾದ್ದರಿಂದ ಎಲ್ಲ ಪಶುಗಳಿಗು ಹರಡುತ್ತದೆ. ರೋಗವಿರುವ ಪಶುವಿನ ಕಾಲಿನಮೇಲೆ ಕುಳಿತ ನೊಣ, ರೋಗವಿಲ್ಲದ ಪಶುವಿನ ಮೇಲೆ ಕುಳಿತರೆ ಆ ರೋಗ ನೊಣದ ಮುಖಾಂತರ, ಚೆನ್ನಾಗಿರುವ ಪಶುವನ್ನು ಸೇರಿ ಆ ಪಶುವು ಸಹ ರೋಗಗ್ರಸ್ತವಾಗುತ್ತದೆ. ಆ ವಿಧವಾಗಿ ಕಾಲುಬಾಯಿ ಅನ್ನುವ ಭೂತ ಅಥವಾ ರೋಗವೆನ್ನುವ ಅಂಟುವ್ಯಾಧಿ ಎಲ್ಲ ಪಶುಗಳಿಗು ಸೇರಿಹೋಗುವುದು. ನಾನು ಹೋದ ಬಂಧುಗಳ ಮನೆಯಲ್ಲಿ ಸುಮಾರು ಚಿಕ್ಕವು, ದೊಡ್ಡವು ಎಲ್ಲ ಹದಿನಾರು ಪಶುಗಳಿವೆ. ನಾನು ಹೋದ ದಿನ ಎಲ್ಲವು ಆರೋಗ್ಯವಾಗಿಯೇ ಇದ್ದವು. ನಾನು ಹೋದ ಮನೆಯವರು ನನ್ನನ್ನು ನೋಡಿ "ನಮ್ಮ ಮನೆಯಲ್ಲಿ ಇಷ್ಟು ಪಶುಗಳಿವೆ, ಕಾಲುಬಾಯಿ ರೋಗ ಊರಿನೊಳಗೆ ಬಂದಿದೆ. ಅದು ನಮ್ಮ ಪಶುಗಳಿಗು ಸಹ ಬರುತ್ತದೆ. ಅದು ಅಂಟು ರೋಗವಾದ್ದರಿಂದ ನಮ್ಮ ಪಶುಗಳಿಗು ಸಹ ಎರಡು ಮೂರು ದಿನಗಳಲ್ಲಿ ಅಂಟಿಕೊಳ್ಳುತ್ತದೆ. ಆ ರೋಗ ಬಾರದಂತೆ ಮೊದಲೆ ಔಷಧಗಳನ್ನು ಬಳಸಬಹುದಾ? ಆ ರೋಗ ಬಾರದಿರುವುದಕ್ಕೆ ಏನಾದರು ಔಷಧಗಳಿದ್ದರೆ ಹೇಳಿರಿ" ಎಂದು ಕೇಳಿದರು.

ನಾನು ಅಲ್ಲೋಪತಿ ಮತ್ತು ಹೋಮಿಯೊಪತಿ ಡಾಕ್ಟರ್ ಕೋರ್ಸ್‌ಗಳನ್ನು ಓದಿದ್ದೇನೆಂದು ಅವರಿಗೆ ಗೊತ್ತು. ಆದ್ದರಿಂದ ಅವರು ವೈದ್ಯವನ್ನು ಕುರಿತು ನನ್ನನ್ನು ಕೇಳಿದರು. ನನಗೆ ಅಲ್ಲೋಪತಿ, ಹೋಮಿಯೊಪತಿ ಮಾತ್ರವೆ ತಿಳಿದಿರುವುದೆಂದು ಅವರಿಗೆ ಗೊತ್ತಿದೆ, ಆದರೆ ಎಲ್ಲರಪತಿ ಸಹ ನನಗೆ ತಿಳಿದಿದೆಯೆಂದು ಅವರಿಗೆ ತಿಳಿದಿಲ್ಲ. ಇಲ್ಲಿ ಸ್ವಲ್ಪ ಜನ ಡಾಕ್ಟರುಗಳಿಗೆ ಅಲ್ಲೋಪತಿ ತಿಳಿದಿರುತ್ತದೆ, ಹೋಮಿಯೋಪತಿ ಅಂದರೆ ತಿಳಿದಿರುತ್ತದೆ ಆದರೆ ಎಲ್ಲರಪತಿ ಅಂದರೆ ಎಲ್ಲರಿಗು ಪತಿ ಎಂದು ಅರ್ಥ. ಎಲ್ಲರ ಪತಿಯನ್ನು ಕುರಿತು ತಿಳಿಯಬೇಕೆಂದರೆ ಆರನೆ ಶಾಸ್ತ್ರವಾದ ಭಗವದ್ಗೀತೆಯನ್ನು ಓದಿದರೆ ವಿವರವಾಗಿ ಎಲ್ಲರಪತಿಯನ್ನು ಕುರಿತು ಅರ್ಥವಾಗುತ್ತದೆ. ಅಲ್ಲೋಪತಿ ಓದಿ ಅದನ್ನು ಚೆನ್ನಾಗಿ ತಿಳಿದುಕೊಂಡರೆ ಒಂದು ವಿದವಾದ ವೈದ್ಯವನ್ನು ಮಾಡಬಹುದು. ಹೋಮಿಯೊಪತಿ ಓದಿ ಅದರಲ್ಲಿ ಪ್ರಾವೀಣ್ಯತೆಯನ್ನು ಸಂಪಾದಿಸಿಕೊಂಡರೆ, ಮತ್ತೊಂದು ವಿಧವಾದ ವೈದ್ಯವನ್ನು ಮಾಡಬಹುದು. ಎಲ್ಲರಪತಿ ಏನೊ ಓದಿ ಚೆನ್ನಾಗಿ ಅರ್ಥಮಾಡಿಕೊಂಡು ಗ್ರಹಿಸಿದರೆ, ಎಲ್ಲ ವಿಧಗಳ ವೈದ್ಯಗಳನ್ನು ಮಾಡಬಹುದು. ಎಲ್ಲರ ಪತಿಯನ್ನು ಕುರಿತು ವಿವರವಾಗಿರುವ ಭಗವದ್ಗೀತೆಯನ್ನು ಓದಿ ಅರ್ಥ ಮಾಡಿಕೊಂಡು ಅದರೊಳಗಿರುವುದನ್ನು ಚೆನ್ನಾಗಿ ಗ್ರಹಿಸಿ ಕೊಂಡಿದ್ದೇನೆ. ಆದ್ದರಿಂದ ಅಲ್ಲೋಪತಿ, ಹೋಮಿಯೋಪತಿಯೆ ಅಲ್ಲದೆ, ಎಲ್ಲರ ಪತಿಯನ್ನು ಸಹ ತಿಳಿದವನಾದ್ದರಿಂದ ಎಲ್ಲರಪತಿ ವೈದ್ಯವನ್ನು ಆಗ ಆ ಮನೆಯಲ್ಲಿನ ಪಶುಗಳಿಗೆ ಅವಶ್ಯವೆನಿಸಿತು. ಅವರು ಕೇಳಿರುವುದಕ್ಕೆ ಸಮಾಧಾನವಾಗಿ" ಪ್ರಸ್ತುತವಾಗಿ ಎಲ್ಲರಿಗು ತಿಳಿದ ವೈದ್ಯದ ಪ್ರಕಾರ ಕಾಲುಬಾಯಿ ವ್ಯಾಧಿ ಬಾರದಂತೆ ಮಾಡುವುದಕ್ಕೆ ಔಷಧಗಳಿಲ್ಲ. ರೋಗ ಬಂದ ನಂತರ ಅದು ಕಡಿಮೆಯಾಗುವುದಕ್ಕೆ ಅಲ್ಲೋಪತಿಯಲ್ಲಿ ಔಷಧಗಳಿವೆ. ಮೊದಲೇ ಬಾರದಂತೆ ಮಾಡುವುದಕ್ಕೆ ಅಲ್ಲೋಪತಿಯಲ್ಲಿ ಔಷಧಗಳಿಲ್ಲ. ಏಕೆಂದರೆ! ತುರಿಕೆ ಬಂದಾಗಲೇ ತುರಿಸಬೇಕು ಎನ್ನುವುದು ಅಲ್ಲೋಪತಿ ಸೂತ್ರ. ಆದ್ದರಿಂದ ಮೊದಲೆ ತುರಿಕೆ ಬಾರದಂತೆ ಮಾಡಿಕೊಳ್ಳುವ ವಿಧಾನ ಅಲ್ಲೋಪತಿಯಲ್ಲಿ ಇಲ್ಲ.

ಪ್ರಸ್ತುತ ಕಾಲದಲ್ಲಿ ಭೂಮಿಮೇಲೆ ಅಲ್ಲೋಪತಿ ವಿಧಾನದ ಡಾಕ್ಟರುಗಳು ಇದ್ದಾರೆ. ಆದರೆ ಎಲ್ಲರಪತಿ ವಿಧಾನದವೊಂದು ಡಾಕ್ಟರುಗಳು ಇಲ್ಲ. ನಾನು ಹೋದ ಹಳ್ಳಿಯಲ್ಲಿ ಪಶುಗಳ ಸಮಸ್ಯೆಯನ್ನು ಅಡ್ಡ ಇಟ್ಟುಕೊಂಡು, ಆ ಮನೆಯವರಿಗೆ ಜ್ಞಾನದವೊಂದು ಬೆಲೆಯನ್ನು ತಿಳಿಸುವುದಕ್ಕೆ ಎಲ್ಲರಪತಿ ವಿಧಾನದಿಂದ ಕಾಲುಬಾಯಿ ರೋಗ ಆ ಮನೆಯ ಪಶುಗಳಿಗೆ ಬಾರದಂತೆ ವೈದ್ಯ ಮಾಡಬೇಕೆಂದುಕೊಂಡೆವು. ಬೆಳಗ್ಗೆ ಏಳು ಗಂಟೆಗಳ ನಂತರ ಪಶುಗಳೆಲ್ಲವನ್ನು ಹೊರಗೆ ಹೊಡೆಯುವುದಕ್ಕಿಂತ ಮೊದಲೆ ಪಶುಗಳು ಕುಡಿಯುವ ನೀರಿನ ತೊಟ್ಟಿಯಲ್ಲಿ, ಎಲ್ಲ ಪಶುಗಳು ಕುಡಿಯುವುದಕ್ಕೆ ಸರಿಹೋಗುವಷ್ಟು ನೀರನ್ನು ಹಾಕಿಸಿದೆನು. ನಂತರ ಒಂದು ಗ್ಲಾಸಿನಲ್ಲಿ ಕುಡಿಯುವ ನೀರು ತೆಗೆದುಕೊಂಡು, ನನ್ನ ಬಲಗೈ ತೋರು ಬೆರಳನ್ನು ಆ ನೀರಿನಲ್ಲಿ ಅರ್ಧದವರೆಗು ಮುಳುಗಿಸಿ "ಈ ನೀರು ಕುಡಿದ ಪಶುಗಳಿಗೆ ಕಾಲುಬಾಯಿ ವ್ಯಾಧಿ ಬರಬಾರದು". ಎಂದು ಮನಸ್ಸಿನಲ್ಲಿ ಅಂದುಕೊಂಡು, ಆ ಗ್ಲಾಸು ನೀರನ್ನು ಪಶುಗಳು ಕುಡಿಯುವ ನೀರಿನ ತೊಟ್ಟಿಯಲ್ಲಿ ಬೆರೆಸಿ ಎಲ್ಲ ಪಶುಗಳಿಂದ ಆ ತೊಟ್ಟಿಯಲ್ಲಿನ ನೀರನ್ನು ಕುಡಿಸಿದೆವು. ಎಲ್ಲ ಪಶುಗಳು ನೀರು ಕುಡಿದ ನಂತರ ಪಶುಗಳೆಲ್ಲವನ್ನು ಹೊರಗೆ ಬಿಡಲಾಯಿತು. ಆಗಿನಿಂದ ಒಂದು ತಿಂಗಳ ಕಾಲ, ಕಾಲುಬಾಯಿ ವ್ಯಾಧಿ ಆ ಊರಿನಲ್ಲಿ ಎಲ್ಲ ಪಶುಗಳಿಗೆ ಬಾಧೆ ಕೊಟ್ಟರೂ, ಆ ಮನೆಯಲ್ಲಿನ ಪಶುಗಳಿಗೆ ಮಾತ್ರ ಬರಲಿಲ್ಲ. ಊರಿನಲ್ಲಿ ಎಲ್ಲ ಪಶುಗಳಿಗು ರೋಗ ಸೋಂಕಿರುವುದು, ಆ ಮನೆಯ ಪಶುಗಳಿಗೆ ಮಾತ್ರ ಆ ರೋಗ ಬಾರದೆ ಹೋಗಿರುವುದು, ಊರಿನವರಿಗೆ ಆಶ್ಚರ್ಯವನ್ನುಂಟು ಮಾಡಿತು. ಆದರೂ ನಾನು ಮಾಡಿದ ವಿಧಾನ ಯಾರಿಗೂ ಹೇಳಬಾರದೆಂದು ಆ ಮನೆಯವರಿಗೆ ಮೊದಲೆ ಹೇಳಿದ್ದೆನು. ಆದ್ದರಿಂದ ಆ ಮನೆಯವರು ಸಹ ಆ ವಿಷಯವನ್ನು ಯಾರಿಗು ಹೇಳಲಿಲ್ಲ. ಜ್ಞಾನ ಹೊರಗೆ ತಿಳಿಯಬೇಕೆಂದು ಅರ್ಜುನನು ಕೇಳದಿದ್ದರೂ ಕೃಷ್ಣನು ಸಂದರ್ಭ ಬಂದಿದೆ ಆದ್ದರಿಂದ ಜ್ಞಾನವನ್ನು ಹೇಳಿದ್ದಾನೆ. ಹಾಗೆ ಆ ಮನೆಯವರಿಗೆ ಜ್ಞಾನ ತಿಳಿಯಬೇಕೆಂದು ಅವರು ಜ್ಞಾನವನ್ನು ಕೇಳದಿದ್ದರು ಆ ಸಂದರ್ಭ ಬಂದಿದೆ ಯಾದ್ದರಿಂದ ಜ್ಞಾನ ಸಂಬಂಧ ವೈದ್ಯವನ್ನು ಮಾಡಿದೆನು. ದ್ವಾಪರಯುಗದಲ್ಲಿ

ಆ ದಿನ ಯುದ್ಧ ಮುಗಿದು ಹೋಗುತ್ತಲೆ ಕೃಷ್ಣನು ಹೇಳಿದ ಜ್ಞಾನವನ್ನು ಅರ್ಜುನನು ಮರೆತು ಹೋದಂತೆ, ಈ ಕಾಲದಲ್ಲಿ ಅವರ ಅಕ್ಕರೆ ತೀರಿದ ನಂತರ ನಾನು ಮಾಡಿದ ವೈದ್ಯವನ್ನು ಅವರು ಮರೆತುಹೋಗಿದ್ದಾರೆ. ಮೇಲಾಗಿ ನಾನು ಮಾಡಿರುವುದು ಮಂತ್ರವೈದ್ಯ ಅಂದುಕೊಂಡಿದ್ದಾರೆ, ನನ್ನನ್ನು ಮಂತ್ರಗಾರನೆಂದು ಅಂದುಕೊಂಡಿದ್ದಾರೆ.

ಯಾರು ಏನೆಂದುಕೊಂಡರೂ ನಾನು ಒಬ್ಬ ಯೋಗಿಯಾಗಿ ಕಾಲುಬಾಯಿ ರೋಗವನ್ನು ಪಶುಗಳು ಕುಡಿದ ನೀರಿನ ಮುಖಾಂತರ ಆದೇಶಿಸಿದೆನು, ನಾನು ಗ್ಲಾಸಿನಲ್ಲಿ ನೀರನ್ನು ತರಿಸಿಕೊಂಡಾಗ ಆ ನೀರಿನಲ್ಲಾಗಲಿ, ತೊಟ್ಟಿಯಲ್ಲಿನ ನೀರಿನಲ್ಲಾಗಲಿ ಏನು ಇಲ್ಲ. ಎಲ್ಲ ಸರ್ವಸಾಧಾರಣವಾಗಿ ಇರುವಂತಹವೆ. ಗ್ಲಾಸಿನಲ್ಲಿನ ನೀರಿನಲ್ಲಿ, ನನ್ನ ತೋರುಬೆರಳನ್ನು ಮುಳುಗಿಸಿದಾಗ ನಾನು ರೋಗಕ್ಕೆ ಕೊಟ್ಟ ಸಂಕಲ್ಪ ನೀರಿನಲ್ಲಿ ಸೇರಿಹೋಗಿದೆ. ನನ್ನ ತಲೆಯೊಳಗಿನ ಸಂಕಲ್ಪವು ಬ್ರಹ್ಮನಾಡಿ ಮುಖಾಂತರ ಪ್ರಯಾಣಿಸಿ ಬಲಗೈ ಕೊನೆಯವರೆಗು, ನರಗಳ ಮುಖಾಂತರ ಸೇರಿ ಹಸ್ತದೊಳಗಿನ ತೋರುಬೆರಳಿನಿಂದ ಗ್ಲಾಸಿನೊಳಗಿನ ನೀರಿನೊಳಗೆ ಸೇರಿದೆ. ಆ ನೀರನ್ನು ತೊಟ್ಟಿಯೊಳಗಿನ ನೀರಿನಲ್ಲಿ ಬೆರೆಸಿದರ ಮುಖಾಂತರ ತೊಟ್ಟಿಯೊಳಗಿನ ನೀರೆಲ್ಲಾ ನನ್ನ ಸಂಕಲ್ಪ ಆದೇಶ ವ್ಯಾಪಿಸಿ ಹೋಗಿದೆ. ಆ ನೀರನ್ನು ಕುಡಿದ ಪಶುಗಳ ಶರೀರದೊಳಗೆ, ನಾನು ಕಾಲುಬಾಯಿ ರೋಗಕ್ಕೆ ಹೇಳಿದ ಮಾತು ಸೇರಿಹೋಗಿದೆ. ಕಾಲುಬಾಯಿ ಕ್ರಿಮಿ ಆ ಪಶುಗಳ ಬಳಿಗೆ ಬಂದಾಗ, ಅಷ್ಟೊತ್ತಿಗೆ ಪಶುವಿನ ಶರೀರದೊಳಗಿರುವ ಸಂದೇಶ ಆ ಕ್ರಿಮಿಗೆ ಸೇರಿದಾಗ, ಆ ಕ್ರಿಮಿ ಮುಖಾಂತರ ಕಾಲುಬಾಯಿ ಭೂತಕ್ಕೆ ಸೇರಿದೆ. ಆಗ ರೋಗವೆನ್ನುವ ಆ ಭೂತ ನನ್ನ ಮಾತನ್ನು ಗೌರವಿಸಿ, ನನ್ನ ಸಂಕಲ್ಪವಿರುವ ಯಾವ ಪಶುವಿನೊಳಗು ಸೇರಬಾರದೆಂದುಕೊಂಡಿತು. ಹಾಗೆ ಆ ಭೂತ ಅಂದುಕೊಂಡಿರುವುದರಿಂದ, ಆ ರೋಗ ಕ್ರಿಮಿಗಳು ಆ ಪಶುಗಳನ್ನು ಬಿಟ್ಟು ಪಕ್ಕಕ್ಕೆ ಹೋಗುತ್ತಿದ್ದವು. ನಮಗೆ ಕಣ್ಣಿಗೆ ಕಾಣಿಸದ ಇಷ್ಟು ತತಂಗ ನಡೆದಿದೆ. ಆದ್ದರಿಂದ ಕಾಲುಬಾಯಿ ರೋಗ ಆ ಮನೆಯ ಪಶುಗಳಿಗೆ ಮಾತ್ರ ಬರಲಿಲ್ಲ.

ಒಂದು ತಿಂಗಳ ಕಾಲ ಕಾಲುಬಾಯಿ ರೋಗ, ಆ ಊರಿನಲ್ಲಿದ್ದು ನಂತರ ಎಲ್ಲ ಪಶುಗಳನ್ನು ಬಿಟ್ಟು ಹೋಗಿದೆ. ನಾನು ಮಾಡಿದ ವಿಧಾನ ಆಗ ಪ್ರತ್ಯಕ್ಷವಾಗಿ ಅಲ್ಲಿರುವವರಿಗೆ ಹೇಳಿದರೂ ಅವರ ತಲೆಗೇರಲಿಲ್ಲ. ಆದರೆ ನಾನು ಮಂತ್ರಗಳನ್ನು ಕುರಿತು ಹೇಳದಿದ್ದರೂ, ನನ್ನ ಮಂತ್ರದಿಂದ ಅವರ ಪಶುಗಳಿಗೆ ರೋಗ ಬರಲಿಲ್ಲವೆಂದುಕೊಂಡರು.

ಇಲ್ಲಿ ಒಂದು ವಿಚಿತ್ರ ನಡೆದಿದೆ. ಅದೇನೆಂದರೆ! ಆ ಊರಿನೊಳಗೆ ಬಂದ ಕಾಲುಬಾಯಿ ರೋಗ ಒಂದು ತಿಂಗಳಕಾಲದ ನಂತರ ಪೂರ್ತಿಯಾಗಿ ಹೋಗಿದೆಯೆಂದು ಹೇಳಿದ್ದೇವಲ್ಲವೆ! ಆ ರೋಗ ಹೋದ ನಂತರ ಸುಮಾರು ಒಂದು ತಿಂಗಳ ಕಾಲ ಆ ಊರಿನೊಳಗಿನ ಪಶುಗಳೆಲ್ಲ ಆರೋಗ್ಯವಾಗಿದ್ದವು. ಹಾಗೆ ಆರೋಗ್ಯವಾಗಿದ್ದ ತಿಂಗಳ ನಂತರ, ಮತ್ತೆ ಕಾಲುಬಾಯಿ ವ್ಯಾಧಿ ಆ ಊರಿನೊಳಗೆ ಬಂದು ಒಂದೊಂದು ಪಶುವು ಅನಾರೋಗ್ಯದಿಂದಿವೆ. ಎರಡನೆ ಬಾರಿ ಸುಮಾರು ಊರಿನೊಳಗಿನ ಪಶುಗಳೆಲ್ಲವುಗಳಿಗು ಆ ರೋಗ ಬಂದಿದೆ. ಆಗ ಮೊದಲು ರೋಗ ಬಾರದ ಆ ಮನೆಯ ಪಶುಗಳಿಗು ಸಹ ಕಾಲುಬಾಯಿ ಬಂದಿದೆ. ಹಾಗೆ ಬಂದ ರೋಗ ಕೆಲವು ದಿನಗಳಿದ್ದು ಹೋಗಿದೆ. ಆಗ ನನಗೆ ಬಂಧುಗಳಾಗಿರುವವರು ಬಂದು, ಆಗ ಬಾರದ ರೋಗ ಈಗ ಏಕೆ ಬಂದಿದೆ ಎಂದು ಕೇಳಿದರು. ಈ ಪ್ರಶ್ನೆ ಅವರಿಗೆ ಅಲ್ಲ, ಯಾರಿಗಾದರೂ ಬರುತ್ತದೆ. ಅದಕ್ಕೆ ನಮ್ಮ ಉತ್ತರ ಏನೆಂದರೆ! ಚಿಕ್ಕ ಉದಾಹರಣೆಯೊಂದಿಗೆ ಅರ್ಥವಾಗುವಂತೆ ವಿವರಿಸುತ್ತೇನೆ. ನಾನು ಮಲ್ಲಯ್ಯ ಅನ್ನುವ ಬಿಲ್‌ಕಲೆಕ್ಟರ್‌ಗೆ ಹಣಕೊಟ್ಟು ಒಂದು ಕೆಲಸವನ್ನು ಹೇಳಿದ್ದೇನೆ. ನಾನು ಹಣ ಕೊಟ್ಟಿದ್ದೇನೆನ್ನುವ ಗೌರವದಿಂದ ಆ ವ್ಯಕ್ತಿ ನನ್ನ ಕೆಲಸವನ್ನು ಮಾಡಿದ್ದಾನೆ. ನಂತರ ಆತನು ಹೋಗಿ ಆತನ ಸ್ಥಾನದೊಳಗೆ ಎಲ್ಲಯ್ಯ ಎನ್ನುವ ಬಿಲ್‌ಕಲೆಕ್ಟರ್ ಬಂದಿದ್ದಾನೆ. ಇಬ್ಬರು ಬಿಲ್‌ಕಲೆಕ್ಟರ್‌ಗಳೆ ಆಗಿದ್ದರೂ, ಇಬ್ಬರೂ ಒಂದೇ ಕೆಲಸವನ್ನು ಮಾಡಿದರೂ, ಎಲ್ಲಯ್ಯ ನನ್ನ ಕೆಲಸವನ್ನು ಮಾಡುವುದಿಲ್ಲ. ಮೊದಲು ನಮ್ಮ ಕೆಲಸ ಆಗಿದೆಯಲ್ಲ, ಈಗ ಏಕೆ ಆಗಲಿಲ್ಲವೆಂದರೆ, ಮೊದಲು ಇದ್ದವನು ಮಲ್ಲಯ್ಯ, ಮಲ್ಲಯ್ಯನೊಂದಿಗೆ

ನಾನು ಮಾತನಾಡಿ ಹಣ ಕೊಟ್ಟಿದ್ದೇನೆ. ಆದ್ದರಿಂದ ನನ್ನ ಕೆಲಸವನ್ನು ಮಾಡಿದ್ದನು. ನಂತರ ಬಂದ ಎಲ್ಲಯ್ಯನೊಂದಿಗೆ ನನಗೆ ಯಾವ ಸಂಬಂಧವಿಲ್ಲ, ನಾನು ಆತನಿಗೆ ಗೊತ್ತಿಲ್ಲ. ಆತನಿಗೆ ನಾನು ಯಾವ ಕೆಲಸವನ್ನು ಹೇಳಲಿಲ್ಲ. ಆಗಿರುವಾಗ ಎಲ್ಲಯ್ಯ ನನ್ನ ಕೆಲಸವನ್ನು ಏಕೆ ಮಾಡುತ್ತಾನೆ? ಯಾವ ಮಾತ್ರಕ್ಕು ಮಾಡುವುದಿಲ್ಲ. ಅದೇ ವಿಧವಾಗಿ ನಾನು ರೋಗವನ್ನು ಬರಬೇಡವೆಂದು ಆದೇಶಿಸಿರುವುದು ಮೊದಲು ಬಂದ ಕಾಲುಬಾಯಿ ರೋಗವನ್ನು ನಾನು ಕೊಟ್ಟ "ಜ್ಞಾನಶಕ್ತಿ" ಎನ್ನುವ ಆದೇಶಾನುಸಾರ ಆಗ ಆ ರೋಗ ಪ್ರವರ್ತಿಸಿದೆ. ನಾನು ಹೇಳಿದ ಕೆಲಸವನ್ನು ನೆರವೇರಿಸಿದೆ. ಅದರಿಂದ ಆಗ ಪಶುಗಳಿಗೆ ರೋಗ ಬರಲಿಲ್ಲ. ನಂತರ ಎರಡನೇ ಬಾರಿ ಬಂದಿರುವುದು ಕಾಲುಬಾಯಿ ರೋಗವೇ ಆದರೂ, ಎರಡನೇ ಬಾರಿ ಬಂದ ರೋಗಕ್ಕೆ ನಾನು ಯಾರೋ ತಿಳಿಯದು. ನನ್ನ ಆದೇಶವೇನೆಂದು, ಆ ರೋಗಕ್ಕೆ ನಾನು ಹೇಳಲಿಲ್ಲ. ಎರಡನೇ ಬಾರಿ ಬಂದ ರೋಗ, ಮೊದಲು ಬಂದ ರೋಗ ಎರಡೂ ಒಂದೇ ಕೆಲಸವನ್ನು ಮಾಡುತ್ತಾ, ಒಂದೇ ಹೆಸರು ಹೊಂದಿದ್ದರೂ, ನಾನು ಹೇಳಿರುವುದು ಮೊದಲನೆಯ ರೋಗಕ್ಕೇ ಆಗಲಿ, ಎರಡನೆಯ ಬಾರಿ ಬಂದಿರುವ ರೋಗಕ್ಕೆ ಅಲ್ಲ. ಆದ್ದರಿಂದ ಎರಡನೆ ಬಾರಿ ಬಂದ ಕಾಲುಬಾಯಿ ರೋಗ, ತನ್ನ ಕೆಲಸವನ್ನು ತಾನು ನಿರ್ವಹಿಸಿ ಎಲ್ಲ ಪಶುಗಳಿಗು ರೋಗ ಹರಡುವಂತೆ ಮಾಡಿದೆ. ಇದನ್ನು ಅನುಸರಿಸಿ ನೋಡಿದರೆ ಉಪಭೂತಗಳು ಅನೇಕ ಎಂದು ಹೇಳಿದ ಹಾಗೆ, ಒಂದೇ ಕೆಲಸ ವಿಧಾನವಿದ್ದರೂ, ಒಂದೇ ಹೆಸರಿರುವ ಉಪಭೂತಗಳು ಬೇರೆಯಾಗಿ ಇವೆಯೆಂದು ಮೇಲಿನ ಸಂಘಟನೆಯಿಂದ ತಿಳಿಯುತ್ತಿದೆ.

ಇದೆಲ್ಲಾ ಕೇಳಿದ ನಂತರ ಕೆಲವರು ಹೇತುವಾದಿಗಳಾಗಲಿ ಅಥವಾ ಕೆಲವರು ನಾಸ್ತಿಕವಾದಿಗಳಾಗಲಿ ಈ ವಿಧವಾಗಿ ಪ್ರಶ್ನಿಸಬಹುದು. ಅದೇನೆಂದರೆ! "ನಿಮ್ಮ ಆಜ್ಞೆಯಿಂದ ಅಥವಾ ನಿಮ್ಮ ಸಂಕಲ್ಪದಿಂದ ನೀವು ಹೇಳಿದಹಾಗೆ ರೋಗ ನಿಮ್ಮ ಮಾತು ಕೇಳಿದೆಯೆಂದು ಹೇಳಿದ್ದೀರ. ಆ ವಿಧವಾಗಿ ಪ್ರತ್ಯಕ್ಷವಾಗಿ ನಡೆದಿದೆಯೆಂದು ಹೇಳಿದ್ದೀರ. ಅಂತಹ ವಿಧಾನ ಎಲ್ಲಾದರೂ, ಯಾರ

ಬಳಿಯಾದರೂ ಭೂಮಿಮೇಲೆ ಇದ್ದರೆ ಅಥವಾ ನಿಮ್ಮ ಬಳಿಯಾದರೂ ಇದ್ದರೆ, ರೋಗವನ್ನು ನೀವು ಶಾಸಿಸಬಹುದು ಅಲ್ಲವೆ! ಇಷ್ಟು ಜನ ಡಾಕ್ಟರುಗಳು, ಆಸ್ಪತ್ರೆಗಳು ಅವಶ್ಯ ಇಲ್ಲವಲ್ಲ! ಕಟ್ಟುಕಥೆಗಳು ಹೇಳಿ ಪ್ರಜೆಗಳನ್ನು ಮೋಸ ಮಾಡುವುದು ಹೊರತು, ಇದರಲ್ಲಿ ಸತ್ಯವೇ ಇಲ್ಲವೆಂದು ನಾವೆನ್ನುತ್ತೇವೆ. ರೋಗವನ್ನು, ಔಷಧಗಳಿಲ್ಲದೆ ಮಂತ್ರಗಳಿಂದ ಗುಣಪಡಿಸಲಾರರು, ಮಾತುಗಳಿಂದಲೂ ಗುಣಪಡಿಸಲಾರರು. ನೀವು ಹೇಳಿದ ಮಾತುಗಳಿಂದ ರೋಗಗಳು ಗುಣವಾದರೆ, ನಿಮಗೆ ತಿಂಗಳಿಗೆ ಹತ್ತು ಲಕ್ಷ ರೂಪಾಯಿಗಳನ್ನು ಕೊಡುತ್ತೇವೆ. ನೀವು ಯಾವ ಕೆಲಸ ಮಾಡಿದರು ಅಷ್ಟು ಹಣ ಯಾರು ಕೊಡುವುದಿಲ್ಲ. ನಾವು ದೊಡ್ಡ ಮೊತ್ತ ಹತ್ತು ಲಕ್ಷಗಳು ಕೊಡುತ್ತೇವೆ, ಸುಮ್ಮನೆ ಕುಳಿತುಕೊಂಡು ಬರುವ ಪ್ರಜೆಗಳಿಗೆ ರೋಗಗಳು ಹೋಗುವಂತೆ ಹೇಳಿರಿ. ಈ ನಿಯಮಕ್ಕೆ ಒಪ್ಪಿಕೊಳ್ಳುತ್ತೀರಾ? ಅಥವಾ ನೀವು ಹೇಳಿರುವವೆಲ್ಲ ಭೂಟಕೆ, ಅಸತ್ಯವೆಂದು ಒಪ್ಪಿಕೊಳ್ಳುತ್ತೀರಾ" ಎಂದು ನಮಗೆ ಸವಾಲ್ ಬೀಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನನಗೆ ಅಲ್ಲೋಪತಿ ವೈದ್ಯ ಗೊತ್ತು, ಹೋಮಿಯೋಪತಿ ವೈದ್ಯವು ಗೊತ್ತು. ಎಲ್ಲರು ಮಾಡುವಂತೆ ನಾನು ಡಾಕ್ಟರು ವೃತ್ತಿಯನ್ನು ಮಾಡಿ ಹಣ ಸಂಪಾದಿಸಿಕೊಳ್ಳಬಹುದು. ಅಷ್ಟೇ ಅಲ್ಲದೆ ನಾನು ಜ್ಯೋತಿಷ್ಯ ಶಾಸ್ತ್ರವನ್ನು ಉತ್ತಮ ಪದ್ಧತಿಯಲ್ಲಿ ಬರೆದಿರುವವನು, ಅಂದರೆ ಈಗಿರುವ ಜ್ಯೋತಿಷ್ಯರಿಗಿಂತ ಜ್ಯೋತಿಷ್ಯ ಚೆನ್ನಾಗಿ ತಿಳಿದವನು. ಜ್ಯೋತಿಷ್ಯವನ್ನು ಎಲ್ಲರಿಗಿಂತ ಚೆನ್ನಾಗಿ ಹೇಳಿದರೆ ಎಷ್ಟಾದರೂ ಹಣ ಸಂಪಾದಿಸಬಹುದು. ಇವುಗಳೇ ಅಲ್ಲದೆ ಎಷ್ಟೋ ಕೆಲಸಗಳಲ್ಲಿ ನೈಪುಣ್ಯತೆ ಇರುವಂತವನು ಆದರೂ ನಾನು ಯಾವ ಕೆಲಸ ಮಾಡಲಿಲ್ಲ. ಜ್ಯೋತಿಷ್ಯ ತಿಳಿದರೂ ಜ್ಯೋತಿಷ್ಯವನ್ನು ಹೇಳಲಿಲ್ಲ, ಅಲ್ಲೋಪತಿ ವೈದ್ಯ ತಿಳಿದರೂ ಡಾಕ್ಟರ್ ವೃತ್ತಿ ಮಾಡಲಿಲ್ಲ. ನಮ್ಮ ತಂದೆ ರೈಲ್ವೇ ಸರ್ವೀಸ್‌ನಲ್ಲಿ ಸತ್ತುಹೋಗಿರುವುದರಿಂದ ನನಗೆ ರೈಲ್ವೇಯಲ್ಲಿ ನೌಕರಿ ಬಂದರೂ, ನಾನು ಆ ಉದ್ಯೋಗಕ್ಕೆ ಹೋಗಲಿಲ್ಲ. ಹಣಕ್ಕಾಗಿ ಆಸಿಸುವವನಾದರೆ, ಹಣ ಸಂಪಾದನೆಯ ಕೆಲಸ, ನಾನು ಯಾವುದು ಇಲ್ಲಿಯವರೆಗು ಮಾಡಲಿಲ್ಲ. ಯುಕ್ತವಯಸ್ಸಿನಲ್ಲಿ ಮಿಲಿಟರಿಯಲ್ಲಿ ಒಳ್ಳೆಯ

ಉದ್ಯೋಗವನ್ನು ಮಾಡುತ್ತಿದ್ದೆನು. ಆಗ ನನ್ನ ಮನಸ್ಸು ಆಧ್ಯಾತ್ಮಿಕದ ಕಡೆಗೆ ಮರಳಿದ ತಕ್ಷಣವೆ ಆ ಉದ್ಯೋಗವನ್ನು ಸಹ ಬಿಟ್ಟೆನು. ನಾನು ಇಲ್ಲಿಗೆ ನಲವತ್ತು ವರ್ಷಗಳಿಂದ ಆಧ್ಯಾತ್ಮಿಕದಲ್ಲಿ, ಎಷ್ಟೋ ಪರಿಶೋಧನೆ ಮಾಡಿ ಸ್ವಲ್ಪವನ್ನಾದರು ಕಲಿತುಕೊಂಡಿದ್ದೇನೆ. ಹಣದ ವಿಷಯಕ್ಕೆ ಬಂದರೆ ಅದು ಕರ್ಮವನ್ನು ಅನುಸರಿಸಿ ಬರುತ್ತದೆಂದು ನನಗೆ ಚೆನ್ನಾಗಿ ಗೊತ್ತು. ಎಂದಿಗೂ ನಾನು ಅದನ್ನು ಕುರಿತು ಚಿಂತಿಸಲಿಲ್ಲ, ನನ್ನ ಚಿಂತನೆಯೆಲ್ಲಾ ದೈವದ ಮೇಲೆಯೇ ಇದೆ.

ಇಲ್ಲಿ ನೀವು ಕೇಳಿದ ಪ್ರಶ್ನೆಗೆ ಉತ್ತರವನ್ನು ವಿವರವಾಗಿ ಹೇಳಬೇಕೆಂದರೆ, ಒಂದು ಉದಾಹರಣೆಯನ್ನು ನೋಡೋಣ. ಗರೀಬ್ ಎನ್ನುವ ಒಬ್ಬನು ಮಗ್ಗದ ಮೇಲೆ ಸೀರೆಗಳನ್ನು ನೇಯುತ್ತಿದ್ದಾನೆ. ತಿಂಗಳಿಗೆ ಹತ್ತು ಸೀರೆಗಳು ತಯಾರುಮಾಡಿ "ನವಾಬ್" ಎನ್ನುವ ಒಬ್ಬ ಧನಿಕನಾದ ವ್ಯಾಪಾರಸ್ತನಿಗೆ ಕೊಡುತ್ತಾನೆ. ಹಾಗೆ ಕೊಟ್ಟ ಸೀರೆಗಳಿಗೆ ಬದಲು ಸ್ವಲ್ಪ ಹಣವನ್ನು ಆ ಧನಿಕನು ಸೀರೆಗಳು ತಯಾರು ಮಾಡಿದವನಿಗೆ ಕೊಡುತ್ತಾನೆ. ನವಾಬ್ ಕೊಟ್ಟ ಹಣದಿಂದ ಗರೀಬ್ ಬದುಕುತ್ತಿದ್ದಾನೆ. ಗರೀಬ್ ಜೀವನ ಸುಗಮವಾಗಿ ಸಾಗಬೇಕೆಂದರೆ ನವಾಬನಿಗೆ ಸೀರೆಗಳು ನೆಯ್ದು ಕೊಡಬೇಕಾಗಿದೆ. ಆ ವಿಧವಾಗಿ ಗರೀಬ್ ನಿತ್ಯವು ಸೀರೆಗಳು ನೇಯುವುದನ್ನು ಮಾಡುತ್ತಿದ್ದಾನೆ. ಒಂದು ದಿನ ಬಟ್ಟೆಗಳಿಲ್ಲದೆ ಚಳಿಗೆ ಬಾಧೆಪಡುವ ನಸೀಬ್ ಅನ್ನುವವನನ್ನು ನೋಡಿ, ತನಗೆ ಬರುವ ಆದಾಯ ಸ್ವಲ್ಪ ಹೋದರೂ ಪರವಾಗಿಲ್ಲ, ಚಳಿಗೆ ಬಾಧೆಪಡುವವನ ಬಾಧೆಯನ್ನು ಒಂದು ಸೀರೆಕೊಟ್ಟು ತೀರಿಸಬೇಕೆಂದುಕೊಂಡನು. ತನ್ನ ಆದಾಯ ಹೋಗುತ್ತದೆ ಎಂದು ತಿಳಿದರೂ, ಎದುರಿಗಿರುವವನ ಬಾಧೆಯನ್ನು ಹೋಗಲಾಡಿಸುವುದಕ್ಕೆ ತನ್ನ ಆದಾಯವನ್ನು ಲೆಕ್ಕ ಮಾಡದೆ ಬಿಟ್ಟುಹಾಕಿ, ಒಂದು ಸೀರೆಯನ್ನು ಬಟ್ಟೆಗಳಿಲ್ಲದೆ ಚಳಿಗೆ ನಡುಗುತ್ತಿದ್ದ ನಸೀಬ್‌ಗೆ ಕೊಟ್ಟನು. ಅಲ್ಲಿಯವರೆಗು ಚಳಿಗೆ ನಡುಗುತ್ತಿದ್ದವನಿಗೆ, ಸೀರೆ ಲಭಿಸುತ್ತಲೆ ಚಳಿ ಬಾಧೆ ಹೋಗಿದೆ. ಸೀರೆಯನ್ನು ಹೊದ್ದುಕೊಂಡು ಹಾಯಾಗಿ ಇದ್ದಾನೆ. ನಸೀಬ್ ಎನ್ನುವವನ ನೋವು ನಿವಾರಣೆಗಾಗಿ ಗರೀಬ್ ಒಂದು ಸೀರೆಯ ಆದಾಯವನ್ನು ಕಳೆದುಕೊಂಡನು. ಗರೀಬ್ ಅನ್ನುವ ವ್ಯಕ್ತಿ, ನಸೀಬ್ ಎನ್ನುವ

ವ್ಯಕ್ತಿಗೆ ಸೀರೆ ಕೊಟ್ಟಿರುವುದರಿಂದ ನಸೀಬನಿಗೆ ಚಳಿಯ ಬಾಧೆ ಹೋಗಿದೆ, ಎಂದು ನೋಡಿದ ವ್ಯಕ್ತಿಗಳು ಹೇಳಿದರೆ, ಅದನ್ನು ಕೇಳಿದ ಕೆಲವರು ಮೊರಟು ವಾದಿಗಳು ಸೀರೆಯಿಂದ ಚಳಿಬಾಧೆ ಹೋಗದು, ದುಪ್ಪಡಿಯಿಂದಲೆ ಹೋಗುತ್ತದೆ. ಸೀರೆಯಿಂದ ಹೋಗುತ್ತದೆನ್ನುವುದು ಅಸತ್ಯ ಎಂದಿದ್ದಾರೆ. ಪ್ರತ್ಯಕ್ಷವಾಗಿ ನೋಡಿದ ವ್ಯಕ್ತಿಗಳು "ಸೀರೆಯಿಂದಲೆ ಆತನ ಚಳಿ ಬಾಧೆ ಹೋಗಿದೆ, ನಾವು ಪ್ರತ್ಯಕ್ಷವಾಗಿ ನೋಡಿದ್ದೇವೆ" ಎಂದು ಹೇಳಿದರು. ಆಗ ಮೊರಟುವಾದಿಗಳು ಹೀಗೆ ಅಂದರು. "ಬಟ್ಟೆಗಳು ಇಲ್ಲದೆ ಚಳಿಯಿಂದ ಭಾದೆಪಡುವವರು ದೇಶದಲ್ಲಿ ಬಹಳಜನ ಇದ್ದಾರೆ. ಅವರೆಲ್ಲರಿಗು ಪ್ರತಿ ದಿನ ಚಳಿ ಬಾಧೆಯಿಂದ ವಿಮುಕ್ತಿ ಮಾಡಿದರೆ, ನಾವು ತಿಂಗಳಿಗೆ ಹತ್ತು ಮೂಟೆಗಳು ವಜ್ರಗಳ ಕಲ್ಲುಗಳು ಕೊಡುತ್ತೇವೆ" ಎಂದರಂತೆ.

ಮೊರಟಾಗಿ ಮಾತನಾಡುವ ಮೋರಟುವಾದಿಗಳು ಹೇಳಿದ ವಿಷಯವನ್ನು ಕೆಲವರು ಗರೀಬ್‌ಗೆ ಹೇಳಿದ್ದಾರಂತೆ. ಆ ಮಾತಿಗೆ ಗರೀಬ್ ನಕ್ಕು ನಾನು ನವಾಬನಿಗೆ ಸೀರೆಗಳು ನೆಯ್ದು ಕೊಟ್ಟು ನಾನು ಪಟ್ಟ ಶ್ರಮಕ್ಕೆ ಕೂಲಿಯಾಗಿ ನವಾಬನಿಂದ ಸೀರೆಗೆ ನೂರು ರೂಪಾಯಿಗಳು ಹಣವನ್ನು ತೆಗೆದುಕೊಳ್ಳುತ್ತಿದ್ದೇನೆ. ಆ ಹಣದಿಂದ ನಾನು ಸುಖಃ ಜೀವನ ಸಾಗಿಸುತ್ತಿದ್ದೇನೆ. ನಾನು ಸೀರೆಗಳನ್ನು ತಯಾರುಮಾಡಿ ನವಾಬನಿಗೆ ಕೊಡದೆ ಹೋದರೆ, ನನಗೆ ನವಾಬ ಹಣ ಕೊಡುವುದಿಲ್ಲ ಆದ್ದರಿಂದ ನನ್ನ ಜೀವನ ಸುಖವಾಗಲ್ಲದೆ ಕಷ್ಟವಾಗಿ ಸಾಗುತ್ತದೆ. ಗರೀಬ್ ನೇಯ್ದ ನವಾಬನ ಸೀರೆ ಚಳಿಬಾಧೆಯನ್ನು ಹೋಗಲಾಡಿಸುವುದೆಂದು ಎಲ್ಲರಿಗು ತಿಳಿಸುವುದಕ್ಕೆ, ನಂತರ ಎದುರಿಗಿರುವವನ ಬಾಧೆಯನ್ನು ಹೋಗಲಾಡಿಸುವುದಕ್ಕೆ ಒಂದು ಸೀರೆ ಹೋದರೂ ಪರವಾಗಿಲ್ಲ, ಆ ಒಂದು ಸೀರೆಯಿಂದ ನನಗೆ ನೂರು ರೂಪಾಯಿಗಳೆ ಅಲ್ಲವೆ ನಷ್ಟ ಅಂದುಕೊಂಡು ಕೊಟ್ಟಿದ್ದೇನೆ. ದೇಶದಲ್ಲಿ ಎಷ್ಟೋ ಜನರು ಬಟ್ಟೆಗಳಿಲ್ಲದವರು ಇರುತ್ತಾರೆ. ಅವರೆಲ್ಲರಿಗು ಬಟ್ಟೆಗಳು ಕೊಡಬೇಕೆಂದರೆ ನಾನು ಉಪವಾಸ ವಿರಬೇಕು. ಹಸಿವಿನಿಂದ ಬಟ್ಟೆಗಳು ಇಲ್ಲದವರಿಗಿಂತ ನಾನೇ ಹೆಚ್ಚಾಗಿ ನೋವು

ಪಡಬೇಕಾಗಿ ಬರುತ್ತದೆ. (ತನಕು ಮಾಲಿನ ಧರ್ಮಮು ಮೊಟಿಕಿ ಚೇಟು) ಎಂದು ಹಿರಿಯರಂದಂತಾಗುತ್ತದೆ. ಮೇಲಾಗಿ ನಾನು ಸೀರೆಗಳನ್ನು ನಿತ್ಯವು ನೇಯ್ದು, ನಿತ್ಯವು ಬಟ್ಟೆಗಳಿಲ್ಲದವರಿಗೆ ಕೊಟ್ಟರೆ ಮೊರಟುವಾದಿಗಳು ನನಗೆ ಕೊಡುವುದು ಹತ್ತು ಮೂಟೆಗಳ ವಜ್ರಗಳ ಕಲ್ಲುಗಳು, ಅವುಗಳನ್ನು ತೆಗೆದುಕೊಂಡು ನಾನೇನುಮಾಡಬೇಕು. ಆ ವಜ್ರಗಳು ನನಗೆ ಉಪಯೋಗಪಡುವುದಿಲ್ಲ. ವಜ್ರಗಳನ್ನು ತೆಗೆದುಕೊಂಡು ಹೋಗಿ ಮಾರಿದರು ಯಾರು ತೆಗೆದುಕೊಳ್ಳುವುದಿಲ್ಲ. ಒಂದು ವೇಳೆ ಯಾರಾದರು ತೆಗೆದುಕೊಂಡರು, ಅವರ ಹಣವನ್ನು ನಮ್ಮ ಅಂಗಡಿಯಲ್ಲಿ ತೆಗೆದುಕೊಳ್ಳುವುದಿಲ್ಲ, ಸಾಮಾನುಗಳನ್ನು ಕೊಡುವುದಿಲ್ಲ. ಆದ್ದರಿಂದ ನಾನು ನೇಯ್ದು ಸೀರೆಗಳನ್ನು ಇತರರಿಗೆ ದಾನವಾಗಿ ಕೊಡುವುದೇಕೆ? ನಾನು ದಾನ ಕೊಟ್ಟರೆ ಯಾರೋ ನನಗೆ ಅವಶ್ಯಕ್ಕೆ ಬಾರದ ವಜ್ರಗಳು ಕೊಡುವುದೇಕೆ? ನಾನು ನೇಯ್ದ ಸೀರೆಯನ್ನು ನಮ್ಮ ನವಾಬ್‌ನಿಗೆ ಕೊಟ್ಟರೆ, ನಮ್ಮ ನವಾಬ ಕೊಡುವ ಹಣ ನನಗೆ ಸುಖವನ್ನು ಕೊಡುತ್ತವೆ. ಅದರಿಂದ ನವಾಬನಿಗೆ ನನಗೆ ಇರುವ ಸಂಬಂಧ ಕಿತ್ತುಹೋಗದಂತೆ ಇರಬೇಕೆಂದರೆ, ನನಗೆ ವಜ್ರಗಳು ಕೊಡುತ್ತೇವೆಂದರು ಅವುಗಳಿಗೆ ನಾನು ಆಸೆಪಡಬಾರದು. ನನಗೆ ನವಾಬ ತಿಂಗಳಿಗೆ ಕೊಡುವ ಸಾವಿರ ರೂಪಾಯಿಗಳೆ ಸುಖವನ್ನು ಕೊಡುತ್ತವೆ, ಇತರರು ಕೊಡುವ ವಜ್ರಗಳು ದುಃಖವನ್ನು ಕೊಡುತ್ತವೆ ಎಂದನು.

ಇದು ಉದಾಹರಣೆಗೆ ಹೇಳಿದ ವಿಷಯವಾದ್ದರಿಂದ, ಇದರೊಳಗಿನ ವಿಷಯಗಳನ್ನು ಅರ್ಥ ಮಾಡಿಕೊಳ್ಳಬೇಕಾದ ಕೆಲಸವಿದೆ. ಈ ಕಥೆಯನ್ನು ವಿವರಿಸಿಕೊಂಡು ನೋಡಿದರೆ, ಗರಿಬ್ ಅನ್ನುವ ನೇಕಾರ ಒಬ್ಬ ಯೋಗಿ ಎಂದು ಅಂದುಕೊಳ್ಳೋಣ. ಯೋಗಿ ಮಾಡುವ ಯೋಗವನ್ನು ಗರೀಬ್ ನೇಯುವ ಸೀರೆಗಳಂತೆ ಹೋಲಿಸಿಕೊಳ್ಳೋಣ. ಸೀರೆಗಳಿಂದ ಬರುವ ಹಣವನ್ನು ಯೋಗದಿಂದ ಸಿಗುವ ಜ್ಞಾನಶಕ್ತಿಯಾಗಿ ಲೆಕ್ಕಿಸಿಕೊಳ್ಳೋಣ. ಗರೀಬ್ ನೇಯ್ದ ಸೀರೆಗಳಿಗೆ ಹಣಕೊಡುವ ನವಾಬನನ್ನು ದೇವರೆಂದು ಲೆಕ್ಕಹಾಕಿಕೊಳ್ಳೋಣ. ಈಗ ಇದೆಲ್ಲವನ್ನು ಸೇರಿಸಿ ನೋಡಿದರೆ, ಒಬ್ಬ ಯೋಗಿ ತಾನು ನಿತ್ಯ ಯೋಗವನ್ನು

ಮಾಡುವುದರಿಂದ, ಆ ಯೋಗಕ್ಕೆ ಫಲವಾಗಿ ದೈವದಿಂದ ಯೋಗಿಗೆ ಜ್ಞಾನಶಕ್ತಿ ಅಥವಾ ಜ್ಞಾನಧನ ಅನ್ನುವುದು ದೊರಕುತ್ತದೆ. ನವಾಬ ಸೀರೆಗಳಿಗೆ ಕೊಡುವ ಹಣದಿಂದ ಗರೀಬ್ ಸುಖಜೀವನ ಸಾಗಿಸುತ್ತಿದ್ದಾನೆ. ಅಂದರೆ ಯೋಗಕ್ಕೆ ಬರುವ ಜ್ಞಾನಶಕ್ತಿಯಿಂದ ಯೋಗಿಯ ಕರ್ಮಗಳು ಸುಟ್ಟುಹೋಗುವವು, ಕರ್ಮಗಳನ್ನು ಯೋಗಿ ಅನುಭವಿಸುವುದಿಲ್ಲ, ಆದ್ದರಿಂದ ನವಾಬ್ ಕೊಡುವ ಹಣದಿಂದ ಗರೀಬ್ ಸುಖಜೀವನವನ್ನು ಸಾಗಿಸುತ್ತಿದ್ದಾನೆ ಎಂದು ಹೇಳಿದ್ದಾರೆ. ಗರೀಬ್ ಬಟ್ಟೆಗಳಿಲ್ಲದೆ ಚಳಿಗೆ ಬಾಧೆ ಬೀಳುವವನಿಗೆ ತಾನು ನೇಯ್ದ ಸೀರೆಯನ್ನು ಕೊಟ್ಟಿದ್ದಾನೆ, ಆದ್ದರಿಂದ ಅವನಿಗೆ ಚಳಿಬಾಧೆ ಹೋಗಿದೆ, ಅಂದರೆ ಯೋಗಿ, ರೋಗವನ್ನು ಅನುಭವಿಸುವವನ ಕರ್ಮವನ್ನು ತನ್ನವೊಂದು ಯೋಗದಿಂದ ಇಲ್ಲದಂತೆ ಮಾಡಿದ್ದಾನೆಂದು ಅರ್ಥ. ಕರ್ಮಗಳಿಂದ ನೋವು ಅನುಭವಿಸುವ ಕರ್ಮಜೀವಿಗಳು ದೇಶದಲ್ಲಿ ಎಷ್ಟೋ ಜನ ಇದ್ದಾರೆ. ಆದ್ದರಿಂದ ಅವರನ್ನು ಬಟ್ಟೆಗಳಿಲ್ಲದೆ ನೋವು ಅನುಭವಿಸುವವರು ಬಹಳ ಜನ ಇದ್ದಾರೆಂದು ಹೋಲಿಸಿ ಹೇಳಿದ್ದಾರೆ. ಬಟ್ಟೆಗಳು ಇಲ್ಲದವರಿಗೆಲ್ಲ ಬಟ್ಟೆಗಳು ಕೊಡಬೇಕೆಂದು ಹೇಳಿದ ಮೊರಟುವಾದಿಗಳನ್ನು ರೋಗ ಇರುವ ಅವರನ್ನೆಲ್ಲ ತಮ್ಮ ಶಕ್ತಿಯಿಂದ ಗುಣಪಡಿಸಬೇಕೆಂದು ಕೇಳಿದ ಹೇತುವಾದಿಗಳಂತೆ ಹೇಳಬಹುದು. ಔಷಧಗಳಿಲ್ಲದೆ, ಮಾತುಗಳಿಂದ ರೋಗಗಳನ್ನು ಇಲ್ಲದಂತೆ ಮಾಡಿದರೆ ವಜ್ರಗಳ ಮೂಟೆಗಳನ್ನು ಕೊಡುತ್ತೇವೆಂದಿದ್ದಾರಲ್ಲ! ಆ ವಜ್ರಗಳ ಮೂಟೆಯನ್ನು ಪ್ರಪಂಚ ಹಣವೆಂದು ಹೋಲಿಸಿ ಹೇಳಬಹುದು. ಪ್ರಪಂಚ ಹಣ ಯೋಗಿಗೆ ಮೋಕ್ಷ ಕೊಡುವುದಿಲ್ಲ. ಆದ್ದರಿಂದ ಗರೀಬ್ ಅವರ ವಜ್ರಗಳಿಂದ ನನಗೆ ಸುಖವಿಲ್ಲ, ನನ್ನ ಹಸಿವು ತೀರುವುದಿಲ್ಲ ಎಂದಿದ್ದಾನೆ.

ಈ ಕಥೆಯ ವೊಂದು ವಿವರವನ್ನು ಹೇಳಿಕೊಂಡರೆ ಒಬ್ಬ (ಗರೀಬ್ ಎಂಬ) ಯೋಗಿ ನಿತ್ಯವು ಯೋಗ ಮಾಡುವುದರಿಂದ ಯೋಗದವೊಂದು ಫಲ ಯೋಗಶಕ್ತಿ ಇಲ್ಲವೆ ಜ್ಞಾನಾಗ್ನಿ ದೈವದಿಂದ ದೊರಕುತ್ತದೆ. ಆ ವಿಧವಾಗಿ ಲಭಿಸಿದ ಜ್ಞಾನಾಗ್ನಿಯಿಂದ ತನ್ನ ಕರ್ಮಗಳನ್ನು ಸುಟ್ಟುಕೊಂಡು, ಯೋಗಿ

ಯಾವ ಕರ್ಮ ಅನುಭವಿಸದಂತೆ ಮಾಡಿಕೊಳ್ಳುವನು. ಯಾವನಾದರೂ ಬಾಧೆಪಡುತ್ತಿರುವಾಗ ಜ್ಞಾನಾಗ್ನಿಗೆ ಕರ್ಮಗಳನ್ನು ಸುಡುವ ಶಕ್ತಿ ಇದೆಯೆಂದು ನಿರೂಪಣೆಯಾಗಿ ತೋರಿಸುವುದಕ್ಕೆ ತನ್ನ ಜ್ಞಾನಾಗ್ನಿಯಿಂದ ಎದುರಿನವನ ಕರ್ಮವನ್ನು ಸುಟ್ಟು ಹಾಕುವನು. ಹಾಗೆ ಒಂದು ಬಾರಿ ಇತರರ ಕರ್ಮವನ್ನು ಸುಟ್ಟುಹಾಕಿದರು, ತನ್ನ ಅಗ್ನಿ ತನಗೆ ಉಪಯೋಗಪಡದೆ ಇತರರಿಗೆ ಉಪಯೋಗವಾಗುವುದರಿಂದ ಅಲ್ಲಿ ಸ್ವಲ್ಪ ಜ್ಞಾನಶಕ್ತಿಯನ್ನು ಯೋಗಿ ಕಳೆದುಕೊಂಡಂತೆ ಆಗುತ್ತದೆ. ಒಬ್ಬ ರೋಗಿಯವೊಂದು ರೋಗವನ್ನು, ತನ್ನ ಮಾತಿನಿಂದ ಆಜ್ಞಾಪಿಸಿದಾಗ ಅಲ್ಲಿ ನಮಗೆ ತಿಳಿಯದೆ ಯೋಗಿಯವೊಂದು ಯೋಗಶಕ್ತಿ ಇಲ್ಲವೆ ಜ್ಞಾನಾಗ್ನಿ ಸ್ವಲ್ಪ ನಷ್ಟವಾಗಿ ಹೋಗುತ್ತದೆ. ಒಬ್ಬ ರೋಗಿಯನ್ನು ರೋಗದಿಂದ ವಿಮುಕ್ತಿ ಮಾಡುವುದಕ್ಕೆ ಅವನ ಕರ್ಮವನ್ನು ಸುಟ್ಟುಹೋಗುವಂತೆ ಮಾಡಬೇಕು. ಹಾಗೆ ಮಾಡುವುದಕ್ಕೆ ಸ್ವಲ್ಪ ಅಗ್ನಿ ವೃಥಾ ಆಗಿ ಹೋಗುತ್ತಿರುವಾಗ, ಅನೇಕ ಜನ ರೋಗಿಗಳನ್ನು ಚೆನ್ನಾಗಿ ಮಾಡಬೇಕೆಂದರೆ ಯೋಗಿ ತನಗಿರುವ ಶಕ್ತಿಯೆಲ್ಲವನ್ನು ಕಳೆದುಕೊಳ್ಳುವನು. ಹಾಗೆ ಮಾಡುವುದು ಬೂದಿಯಲ್ಲಿ ಪನ್ನೀರನ್ನು ಹಾಕಿದಂತಾಗುತ್ತದೆ. ಅನೇಕ ಜನ ರೋಗಿಗಳನ್ನು ಯೋಗಿ ತನ್ನ ಮಾತಿನಿಂದ ಗುಣಪಡಿಸಿದರೆ ಹೇತುವಾದಿಗಳು ಕೊಡುವುದು ಕೆಲವು ಕೋಟಿ ರೂಪಾಯಿಗಳಾದರು ಅದು ಪ್ರಪಂಚ ಧನವೆ ಆಗುತ್ತದೆ. ಅವರು ಕೊಟ್ಟ ಅರ್ಧ ಗಂಟೆಯ ನಂತರ ಸತ್ತುಹೋದರು, ಅದು ಒಂದು ರೂಪಾಯಿ ಸಹ ಹಿಂದೆ ಬರುವುದಿಲ್ಲ. ಯೋಗಿಗೆ ಬೇಕಾಗಿರುವುದು ಜ್ಞಾನ ಧನ, ಪ್ರಪಂಚ ಧನವಲ್ಲ. ಆದ್ದರಿಂದ ಹೇತುವಾದಿಗಳು, ನಾಸ್ತಿಕವಾದಿಗಳು ಪ್ರಪಂಚ ಧನವನ್ನು ಆಸೆ ತೋರಿಸಿದರೆ ಅದಕ್ಕೆ ಆಸೆಪಟ್ಟು ಯೋಗಿಗಳು ಕೆಲಸ ಮಾಡುವುದಿಲ್ಲ. ಯೋಗಿಗಳ ಉದ್ದೇಶ, ಅವರ ಕೆಲಸ ಮೋಕ್ಷಕ್ಕಾಗಿ, ಜ್ಞಾನಶಕ್ತಿಗಾಗಿ ಇರುತ್ತದೆ. ಪ್ರಪಂಚ ಹೆಸರು ಪ್ರಖ್ಯಾತಿಗಳ ಮೇಲಾಗಲಿ, ಪ್ರಪಂಚ ಧನದ ಮೇಲಾಗಲಿ ಯಾವ ಮಾತ್ರವು ಇರುವುದಿಲ್ಲ. ಯೋಗಿಗಳು ಎಂದಿಗೂ ರೋಗಗಳನ್ನು ಗುಣಪಡಿಸುವ ವೈದ್ಯರು ಅಲ್ಲ. ಯೋಗಿಗಳಿಗೆ, ವೈದ್ಯರಿಗೆ ಎಷ್ಟೊ ವ್ಯತ್ಯಾಸವಿದೆ.

ಯೋಗಿಗಳು ವೈದ್ಯರ ಸ್ಥಾನಕ್ಕೆ ಇಳಿದು ಹೋಗುವುದಿಲ್ಲ. ಎಲ್ಲಾದರು ಯಾರ ರೋಗವನ್ನಾದರು ಅವರ ಬಾಯಿ ಮಾತಿನಿಂದಾಗಲಿ, ಕೈ ಸ್ಪರ್ಷದಿಂದಾಗಲಿ, ಕಣ್ಣಿನ ದೃಷ್ಠಿಯಿಂದಾಗಲಿ ಗುಣಪಡಿಸಿದರೆ ಅದು ಜ್ಞಾನಾಗ್ನಿಗೆ ಎಂತಹ ಶಕ್ತಿ ಇದೆಯೊ ತಿಳಿಸುವುದಕ್ಕೆ ಆಗಲಿ, ವೈದ್ಯವಲ್ಲವೆಂದು ತಿಳಿಯಬೇಕು.

ಪೂರ್ವದಲ್ಲಿ ಕೆಲವರು ಹಿರಿಯರು, ಯಾರ ರೋಗವನ್ನು ಇಲ್ಲದಂತೆ ಮಾಡಿದರೂ, ಅದು ವೈದ್ಯ ವಿಧಾನದಿಂದ ಅಲ್ಲದೆ ಜ್ಞಾನ ಪ್ರಚಾರ ವಿಧಾನದಿಂದಲೆ ಮಾಡಿದ್ದಾರೆ. ಒಬ್ಬ ಯೋಗಿ ಎಲ್ಲಾದರು ಒಂದು ರೋಗವನ್ನು ಹೋಗಲಾಡಿಸಿದರೆ, ಎರಡನೆ ಬಾರಿ ಅಂತಹ ಕೆಲಸವನ್ನು ಮಾಡುವುದಿಲ್ಲ. ಒಬ್ಬನಿಗೆ ರೋಗ ಹೋಗಿದೆಯೆಂದು ತಿಳಿದು, ಅಂತಹ ರೋಗಿಗಳು ಕೆಲವರು ಅತೀ ವಿನಯವನ್ನು ಪ್ರದರ್ಶಿಸುತ್ತಾ, ನಮಗೂ ಗುಣಪಡಿಸಿರೆಂದು ಬೇಡಿಕೊಂಡರೂ, ಯೋಗಿ ಅವರ ಅಭ್ಯರ್ಥನಗಳನ್ನು ಅಂಗೀಕರಿಸನು. ಯೋಗಿಯಾದವನು ಜ್ಞಾನಮಾರ್ಗದಿಂದ ತಪ್ಪಿ ಹೋಗದಂತೆ ಜಾಗ್ರತೆಯಿಂದ ನಡೆದುಕೊಳ್ಳುವನು. ಆದ್ದರಿಂದ ಯೋಗಿ, ರೋಗಿಯ ವಿಷಯಗಳ ಬಗ್ಗೆ ಗಮನ ಹರಿಸುವುದಿಲ್ಲ. ಹೇತುವಾದಿಗಳು ಲಕ್ಷ ಹಣ ಕೊಡುತ್ತೇವೆ ನಮಗೆ ಮಾಡಿ ತೋರಿಸಿರೆಂದರೆ, ಹಾಗೆ ತೋರಿಸುವುದಕ್ಕೆ ಅದು ಗಾರಡಿ ವಿದ್ಯೆಯಲ್ಲ. ದೇವರು ನಿರ್ಮಿಸಿದ ಕಾನೂನಿನ ಪ್ರಕಾರ ಪ್ರಕೃತಿ ಆಧೀನದಲ್ಲಿ ನಡೆಯುವ, ಜನನ ಮರಣಗಳಲ್ಲಾಗಲಿ, ಆರೋಗ್ಯ ಅನಾರೋಗ್ಯಗಳಲ್ಲಾಗಲಿ, ಸುಖ ದುಃಖಗಳಲ್ಲಾದರು ಯೋಗಿ ಎಂದಿಗೂ ತಲೆ ತೂರಿಸುವುದಿಲ್ಲ. ದೇವರ ಕಾನೂನಿನ ಪ್ರಕಾರ ಜ್ಞಾನಶಕ್ತಿಗೆ ಅಥವಾ ಜ್ಞಾನಾಗ್ನಿಗೆ ಕರ್ಮಗಳ ಮೇಲೆ ಇಂತಹ ಶಕ್ತಿ ಇದೆಯೆಂದು ತಿಳಿಸುವ ನಿಮಿತ್ತವಾಗಿ ಸಮಯವನ್ನು, ಸಂದರ್ಭವನ್ನು ನೋಡಿ ಅಪರೂಪವಾಗಿ ರೋಗಗಳ ವಿಷಯಗಳಲ್ಲಾಗಲಿ, ಮರಣ ವಿಷಯದಲ್ಲಾಗಲಿ, ದುಃಖಗಳ ವಿಷಯಗಳಲ್ಲಾಗಲಿ, ಯೋಗಿ ಜೋಕ್ಯ ಮಾಡಿಕೊಂಡು, ಜ್ಞಾನಶಕ್ತಿಯವೊಂದು ಬೆಲೆ ತಿಳಿಯುವಂತೆ ಮಾಡುವನು.

ರೋಗಗಳನ್ನು ಕುರಿತು ಇಲ್ಲಿಯವರೆಗೂ ಕೆಲವು ವಿಷಯಗಳನ್ನೇ ತಿಳಿದುಕೊಂಡಿದ್ದೇವೆ, ನಮಗೆ ತಿಳಿಯದ ವಿಷಯಗಳು ಇನ್ನೂ ಇವೆ. ರೋಗಗಳು ಭೂಮಿಮೇಲೆಯೆ ಮನುಷ್ಯರಲ್ಲಿಯು, ಜಂತುಗಳಲ್ಲಿಯು, ಪಕ್ಷಿಗಳಲ್ಲಿಯು, ಭೂಮಿಯಿಂದ ಹುಟ್ಟುವ ವೃಕ್ಷಗಳಲ್ಲಿಯು ಸೇರುವುದೇ ಅಲ್ಲದೆ, ಸಮುದ್ರ ಗರ್ಭದಲ್ಲಿರುವ ಅನೇಕ ಜೀವರಾಶಿಗಳನ್ನು ಬಾಧೆಪಡುವಂತೆ ಮಾಡುತ್ತಿವೆ, ಸಾಯಿಸುತ್ತಿವೆ. ರೋಗ ಜೀವಿಯೇ ಆದರೂ ರೋಗವನ್ನು, ಭೂತ ಎನ್ನುವ ಹೆಸರಿನಿಂದಲೆ ಕರೆಯುತ್ತಿದ್ದೇವೆ. ಭೂತ ಒಂದು ಜೀವಿ, ಮತ್ತೊಂದು ಜೀವಿಗೆ ನೋವುಕೊಡುವುದು, ಸಾಯಿಸುವುದನ್ನು ದೇವರು ರಚಿಸಿದ ಕಾನೂನೆಂದು ಹೇಳಬಹುದು. ಅದು ಎಲ್ಲಿ ನಡೆಯುತ್ತದೊ ಅದನ್ನೇ ಯಮಲೋಕ ಎನ್ನುತ್ತಿದ್ದೇವೆ. ಇದರ ಪ್ರಕಾರ ನಾವು ನಿವಾಸಿಸುವ ಭೂಮಂಡಲವೇ ಯಮಲೋಕ, ರೋಗಗಳೇ ಒಂದು ವಿಧವಾದ ಯಮಕಿಂಕರರು! ರೋಗಗಳೆ ಅಲ್ಲದೆ ಉಳಿದ ವಿಧಗಳಾದ ಯಮಕಿಂಕರರು ಸಹ ಇದ್ದಾರೆ. ಎರಡನೇ ವಿಧವಾದ ಯಮಕಿಂಕರರನ್ನು ಕುರಿತು ಹೇಳಿಕೊಂಡರೆ ರೋಗವಂತದ್ದೆ ಮೇಘವು ಸಹ ಒಂದು ಭೂತವೆ! ಒಂದು ರೋಗ ಭೂಮಿ ಮೇಲೆ ಸ್ವಲ್ಪ ಕಾಲ ಕಾಣಿಸಿ, ಸ್ವಲ್ಪಕಾಲ ಕಾಣಿಸದಂತೆ ಹೋಗುತ್ತದೆ. ಹಾಗೆ ಒಂದು ಮೇಘವು ಸಹ ಸ್ವಲ್ಪ ಕಾಲ ಕಾಣಿಸಿ, ಸ್ವಲ್ಪ ಕಾಲ ಕಾಣಿಸದಂತೆ ಹೋಗುವುದು. ರೋಗಕ್ಕು, ಮೇಘಕ್ಕು ಕೆಲವು ವಿಷಯಗಳಲ್ಲಿ ಹತ್ತಿರ ಹೋಲಿಕೆಗಳಿದ್ದರೂ ರೋಗಕ್ಕಿಂತ ಮೇಘ ಸ್ವಲ್ಪ ದೊಡ್ಡದೆಂದೇ ಹೇಳಬಹುದು. ಏಕೆಂದರೆ ರೋಗಕ್ಕೆ ವೈದ್ಯವಿದೆ. ವೈದ್ಯದಿಂದ ರೋಗವನ್ನು ಮನುಷ್ಯ ಗುಣಪಡಿಸಬಹುದು. ಆದರೆ ಮೇಘವು ವೈದ್ಯಕ್ಕಾಗಲಿ, ಮತ್ತು ಯಾವ ಪ್ರಪಂಚ ವಿಧಾನಕ್ಕಾಗಲಿ ಶರಣಾಗುವಂತದ್ದಲ್ಲ. ರೋಗ ತನ್ನ ಇರುವಿಕೆಯನ್ನು ತಿಳಿಯದೆ ನೂರು ಅಥವಾ ಎರಡುನೂರು ವರ್ಷಗಳಾದರು ಅಡಗಿ ಖಗೋಳದಲ್ಲಿ ನಿವಾಸಿಸುತ್ತದೆ. ಮೇಘಗಳು ರೋಗಗಳ ಹಾಗೆ ಅಷ್ಟು ದೀರ್ಘಕಾಲ ಕಾಣಿಸದಂತೆ ಹೋಗುವುದಿಲ್ಲ, ರೋಗ ಸ್ವಲ್ಪ ಪ್ರದೇಶದಲ್ಲಿ ವ್ಯಾಪಿಸುವುದಕ್ಕೆ ಕೆಲವು ದಿನಗಳ ಕಾಲ ಬೇಕಾಗುತ್ತದೆ. ಆದರೆ ಮೇಘವು

ಕೆಲವು ನಿಮಿಷಗಳಲ್ಲಿಯೇ ಸ್ವಲ್ಪ ಪ್ರದೇಶವೆಲ್ಲಾ ವ್ಯಾಪಿಸುವುದು. ಒಂದು ರೋಗ ಕೆಲವು ಕೋಟಿ ಕ್ರಿಮಿಗಳ ಸಮುದಾಯವೆಂದು ಹೇಳಿಕೊಂಡಿದ್ದೇವೆ. ಆ ಕ್ರಿಮಿಗಳನ್ನು ಮೈಕ್ರೊಸ್ಕೋಪುಗಳಿಂದ ಪ್ರತ್ಯಕ್ಷವಾಗಿ, ಸ್ಥೂಲವಾಗಿ ನೋಡಬಹುದು. ಆ ಕ್ರಿಮಿಗಳ ಆಕಾರವನ್ನು ಗುರುತಿಸಬಹುದು. ಆದರೆ ಮೇಘಗಳಿಗೆ ಅಂತಹ ಕ್ರಿಮಿಸಮುದಾಯವಿರುವುದಿಲ್ಲ. ಯಾವ ಸ್ಕೋಪುಗಳಿಂದ ಮೇಘಗಳಲ್ಲಿನ ಸ್ಥೂಲತ್ವವನ್ನು ನೋಡಲಾರೆವು. ರೋಗದ ಕೈಯಲ್ಲಿ ಬಿದ್ದ ಮನುಷ್ಯನನ್ನಾಗಲಿ, ಜಂತುವನ್ನಾಗಲಿ, ನೀರಿನಲ್ಲಿನ ಮೀನನ್ನಾಗಲಿ ನೋಡಬಹುದು. ಆದರೆ ಮೇಘದಕೈಯಲ್ಲಿ ಬಿದ್ದ ಮನುಷ್ಯನನ್ನಾಗಲಿ, ಜಂತುವನ್ನಾಗಲಿ, ಮೀನಾಗಲಿ ಯಾವುದು ಕಾಣಿಸದಂತೆ ಹೋಗುತ್ತದೆ. ಮೇಘವು ಬಿಟ್ಟಾಗ ಮತ್ತೆ ಕಾಣಿಸುತ್ತದೆ. ರೋಗಕ್ಕೆ ಕೆಲವು ಕೋಟಿ ಕ್ರಿಮಿಗಳಿದ್ದರೆ, ಮೇಘಕ್ಕೆ ಕೆಲವು ಕೋಟಿ ಕೈಗಳಿವೆ. ಹೀಗೆ ರೋಗಕ್ಕೂ, ಮೇಘಕ್ಕೂ ಎಷ್ಟೋ ವ್ಯತ್ಯಾಸಗಳಿವೆ. ಈಗ ರೋಗಕ್ಕಿಂತ ಎಲ್ಲ ವಿಧಗಳಲ್ಲಿ ದೊಡ್ಡದಾದ ಮೇಘವನ್ನು ಕುರಿತು ತಿಳಿದುಕೊಳ್ಳೋಣ.

ಮೇಘವು ಒಂದು ಭೂತ ಎನ್ನುವ ಮಾತು ಕೆಲವರಿಗೆ ವಿಚಿತ್ರವಾಗಿ, ವಿಡ್ಡೂರವಾಗಿ ಕಾಣಿಸಿದರೂ, ನಮ್ಮ ಮಾತು ನೂರಕ್ಕೆ ನೂರು ಪಾಲು ಸತ್ಯ. ಮೇಘ ಎನ್ನುವ ಭೂತ ಅಥವಾ ಜೀವಿಯು, ದೇವರ ಪರಿಪಾಲನಾ ವಿಭಾಗದೊಳಗಿನವನೇ ಆದ್ದರಿಂದ, ಮೇಘಕ್ಕೆ ಪ್ರಕೃತಿಯಿಂದ ಬರುವ ಆಜ್ಞೆಯನ್ನು ಆಚರಿಸುವುದು ಮೇಘದವೊಂದು ಕರ್ತವ್ಯ. ಪ್ರಕೃತಿಯಿಂದ ಬರುವ ಆಜ್ಞೆಯನ್ನು ಅನುಸರಿಸಿ ಮಾಡಬೇಕಾದ ಕೆಲಸ ಎಷ್ಟು ಭಯಂಕರವಾದುದಾದರೂ, ಎಷ್ಟು ಕ್ರೂರತ್ವದಿಂದ ಕೂಡಿಕೊಂಡಿರುವುದಾದರು ಮೇಘ ಮಾಡಿಯೆ ತೀರುತ್ತದೆ. ದೇವರ ಕಾನೂನನ್ನು ಅನುಸರಿಸಿ ಪ್ರಕೃತಿಯಿಂದ ಬರುವ ಪ್ರತಿ ಆಜ್ಞೆಯನ್ನು ನೆರವೇರಿಸುವುದು ಮೇಘದವೊಂದು ವಿಧಿ ವಿಧಾನ. ಭೂಮಿ ಮೇಲೆ ರೋಗಗಳು ಎಷ್ಟೋ ವಿಧಗಳಿದ್ದಂತೆ, ಖಗೋಳದಲ್ಲಿ ಸಹ ಮೇಘಗಳು ಎಷ್ಟೋ ವಿಧಗಳಿವೆ. ಬಹಳ ಜನರಿಗೆ ಮೇಘವೆಂದರೆ ಮಳೆ ಬರುವುದೆಂದು ಮಾತ್ರ ತಿಳಿದಿದೆ. ಮೇಘವು ಮಳೆ ತರುವುದೇ ಅಲ್ಲದೆ, ಉಳಿದ ಎಷ್ಟೋ ಕೆಲಸಗಳನ್ನು ಸಹ ಮಾಡುತ್ತಿದೆಯೆಂದು ತಿಳಿಯದು

ಆಕಾಶದಲ್ಲಿನ ಮೇಘಕ್ಕೆ ಒಂದು ರೂಪ ಇರುವುದಿಲ್ಲ. ಒಂದು ಮೇಘ ಅನೇಕ ರೂಪಗಳನ್ನು ಬದಲಾಯಿಸಿಕೊಳ್ಳುತ್ತದೆ. ಅಷ್ಟೇ ಅಲ್ಲದೆ ಮೇಘ ಬಿಳಿ, ಕಪ್ಪು, ಕೆಂಪು ಬಣ್ಣಗಳನ್ನು ಬದಲಾಯಿಸಿಕೊಳ್ಳುವುದು. ಮೇಘದವೊಂದು ಆಕಾರ ಯಾವ ಮಾತ್ರವು ಕಾಣಿಸದಂತೆ ಅದೃಶ್ಯವಾಗಿ ಹೋಗುವುದು. ಹಾಗೆ ಅದೃಶ್ಯವಾದ ಮೇಘವು ನಂತರ ಯಾವಾಗಾದರೂ, ಎಲ್ಲಾದರೂ ಕಾಣಿಸಬಹುದು. ಅದೃಶ್ಯದಲ್ಲಿರುವ ಮೇಘ, ಮೊದಲು ಚಿಕ್ಕ ಆಕಾರದಿಂದ ಅರ್ಧ ಅಂಗುಲ ಪರಿಮಾಣದಿಂದ ಪ್ರಾರಂಭವಾಗಿ ಸುಮಾರು 20 ಅಥವಾ 30 ಚದರ ಕಿಲೋಮೀಟರುಗಳ ವಿಸ್ತೀರ್ಣದವರೆಗು ತನ್ನ ಆಕಾರವನ್ನು ಬೆಳೆಸಿಕೊಳ್ಳುತ್ತದೆ. ಈ ವಿಧವಾಗಿ ಆಕಾರ ಬೆಳೆದ ಮೇಘವು, ಎಷ್ಟೋ ಬಲ ಇರುವಂತದ್ದಾಗಿ, ಎಷ್ಟೋ ಕೈಗಳು ಇರುವಂತದ್ದಾಗಿ ಇರುವುದು. ಕೆಲವು ಕೋಟಿ ಕೈಗಳಿರುವ ಮೇಘವು, ಪರಿಮಿತವಿಲ್ಲದ ಬಲವಿದ್ದು, ಎಷ್ಟು ಭಾರವನ್ನಾದರು ಹೊರುವ ಸಾಮರ್ಥ್ಯ ಹೊಂದಿದೆ. ಆಕಾಶದಲ್ಲಿ ಮೇಘಗಳು ಎಷ್ಟೋ ಇವೆ. ಒಂದೊಂದು ಮೇಘವು ಕೆಲವು ಲಕ್ಷಗಳ, ಕೆಲವು ಕೋಟಿ ಟನ್ನುಗಳ ತೂಕವನ್ನು ಹೋರುವಂತಹ ಶಕ್ತಿ ಹೊಂದಿದೆ. ಮೇಘ ಭೂಮಿಮೇಲೆ ನೀರನ್ನು ಸೂಕ್ಷ್ಮವಾಗಿ ಕಣ್ಣಿಗೆ ಕಾಣಿಸದಂತೆ ತೆಗೆದುಕೊಳ್ಳುತ್ತದೆ. ಎಲ್ಲಾದರು ಅಪರೂಪವಾಗಿ ಮನುಷ್ಯನ ಕಣ್ಣಿಗೆ ಕಾಣಿಸುವ ವಿಧವಾಗಿ ಸಹ ನೀರನ್ನು ಮೇಘವು ತೆಗೆದುಕೊಳ್ಳುವುದು. ಮೇಘವು ಒಂದು ನೀರನ್ನೆ ಅಲ್ಲದೆ ನೀರಿನೊಳಗಿನ ಮೀನುಗಳನ್ನು, ಆಮೆಗಳನ್ನು ಸಹ ಮೇಲಕ್ಕೆ ತೆಗೆದುಕೊಂಡು ಹೋಗಬಲ್ಲದು. ಕೆಲವು ಕಡೆ ಮನುಷ್ಯರನ್ನು, ಜಂತುಗಳನ್ನು ಮೇಲಕ್ಕೆ ತೆಗೆದುಕೊಂಡು ಹೋದಹಾಗೆ ಚರಿತ್ರೆ ಇದೆ. ಈ ಮಧ್ಯೆ ಕಾಲದಲ್ಲಿ 118 ಜನ ಮನುಷ್ಯರನ್ನು, ಕೆಲವು ಜಂತುಗಳನ್ನು ಪ್ರತ್ಯಕ್ಷವಾಗಿ ಮೇಲಕ್ಕೆ ತೆಗೆದುಕೊಂಡು ಹೋಗಿ ಅವರನ್ನು ಕೆಳಗೆ ಬೀಳಿಸಿರುವುದು, ಅವರು ಸತ್ತುಹೋಗಿರುವುದು ನಡೆದಂತೆ ಆಂಧ್ರ ಯೂನಿವರ್ಸಿಟಿಯಲ್ಲಿ ಮೇಘಗಳನ್ನು ಕುರಿತು ಪರಿಶೋಧನೆ ಮಾಡುವ ಒಬ್ಬ ಪ್ರೊಫೆಸರ್ ಹೇಳಿರುವುದನ್ನು ಕೇಳಿದ್ದೇವೆ. ಮೇಘಗಳಿಗೆ ಕಾಣಿಸದ ಎಷ್ಟೊ ಕೈಗಳಿರುವುದರಿಂದ ಯಾರನ್ನಾದರು, ಏನನ್ನಾದರು ಮೇಲಕ್ಕೆ ತೆಗೆದುಕೊಂಡು ಹೋಗಬಲ್ಲವು.

ಮೇಲಕ್ಕೆ ತೆಗೆದುಕೊಂಡು ಹೋದವರನ್ನು ಕ್ಷೇಮದಿಂದ ಭೂಮಿಮೇಲಕ್ಕೆ ತೆಗೆದುಕೊಂಡು ಬಂದು ಬಿಡಬಲ್ಲವು. ಇಲ್ಲದೆ ಹೋದರೆ ಮೇಲಿಂದ ಕೆಳಗೆ ಬೀಳಿಸಿ ಸಾಯಿಸಬಲ್ಲವು. ಮೇಘವು ನೀರಿನೊಂದಿಗೆ ಸಹ ಮೀನುಗಳನ್ನು ತೆಗೆದುಕೊಂಡು ಹೋದರೆ ಅವುಗಳನ್ನು ಕ್ಷೇಮವಾಗಿ, ಒಂದು ಮೀನಿಗು ಸಹ ಏಟುತಗಲದಂತೆ ಭೂಮಿಗೆ ಹತ್ತಿರವಾಗಿ ತೆಗೆದುಕೊಂಡು ಬಂದು ಬಿಡುತ್ತವೆ. ಮೇಲಿಂದ ಕೆಳಗೆ ಬಿದ್ದಂತೆ ನಮಗೆ ಪ್ರತ್ಯಕ್ಷವಾಗಿ ಕಾಣಿಸಿದರೂ ಮೀನುಗಳು ಸತ್ತುಹೋಗದಂತೆ ಕೆಳಗೆ ಬೀಳುತ್ತವೆ.

ಮೇಘವು ಕೆಲವು ಸಮಯಗಳಲ್ಲಿ ಅಪರೂಪವಾಗಿ ನಮಗೆ ಕಾಣಿಸುವ ವಿಧವಾಗಿ ಭೂಮಿಮೇಲೆಯಿಂದ ಏನನ್ನಾದರು ತೆಗೆದುಕೊಂಡು ಹೋಗಬಲ್ಲದು. ಉದಾಹರಣೆಗೆ ಸ್ಥೂಲವಾಗಿ ಕಾಣಸುವ ಮೀನುಗಳನ್ನು ನೀರಿನೊಂದಿಗೆ ಸಹ ಮೇಘವು ಮೇಲಕ್ಕೆ ತೆಗೆದುಕೊಂಡು ಹೋದಾಗ ಮೇಘದವೊಂದು ಕೈಗಳಲ್ಲಿ ನೀರು, ಮೀನುಗಳು ಎಲ್ಲ ಇರುವವು. ಮೇಘದ ವೊಂದು ಕೈಗಳು ಯಾರಿಗು ಕಾಣಿಸುವುದಿಲ್ಲ. ಆದ್ದರಿಂದ ಮೇಘದ ಕೈಗಳೊಳಗೆ ಹೋದ ನೀರಾಗಲಿ, ಮೀನುಗಳಾಗಲಿ ಕಾಣಿಸದಂತೆ ಹೋಗುವವು. ಮೇಘ ತೆಗೆದುಕೊಂಡು ಹೋದ ನೀರಾಗಲಿ, ಮೀನುಗಳಾಗಲಿ, ಆಮೆಗಳಾಗಲಿ ಮೇಲೆ ಮೇಘಗಳಲ್ಲಿ ಅದೃಶ್ಯವಾಗಿ ಯಾರಿಗು ಕಾಣಿಸದಂತೆ ಇರುತ್ತವೆ. ಆದ್ದರಿಂದ ಒಂದು ಮೇಘದಲ್ಲಿ ಎಷ್ಟು ನೀರಿರುವುದು ಯಾರು ಹೇಳಲಾರರು. ಹಾಗೇ ಇನ್ನೂ ಏನಾದರು ಮೇಘದಲ್ಲಿದ್ದರೂ ಅದು ಸಹ ತಿಳಿದುಬರದೆ ಅದೃಶ್ಯರೂಪದಲ್ಲಿ ಇರುವುದು. ಅದೃಶ್ಯರೂಪದಲ್ಲಿರುವ ಮೀನುಗಳನ್ನು ಒಂದು ದಿನವಾಗಲಿ, ಅದಕ್ಕಿಂತ ಹೆಚ್ಚಿನ ಕಾಲವಾಗಲಿ ಮೇಘವು ತನ್ನ ಕೈಗಳಲ್ಲಿ ಇಟ್ಟುಕೊಳ್ಳುತ್ತದೆ. ಆದರೂ ಅಷ್ಟುಕಾಲ ಇಟ್ಟುಕೊಳ್ಳುವ ಅವಶ್ಯ ಮೇಘಕ್ಕೆ ಇಲ್ಲ. ಮೇಘವು ತನ್ನ ಕೈಯಲ್ಲಿ ಇಟ್ಟುಕೊಂಡಿರುವವನ್ನು ಕೆಲವು ಕಿಲೋಮೀಟರುಗಳ ದೂರದವರೆಗು ತೆಗೆದುಕೊಂಡು ಹೋಗಿ, ಎಲ್ಲಿ ಬಿಡಬೇಕೆನ್ನುವ ನಿರ್ಣಯವಿರುತ್ತದೊ ಅಲ್ಲೇ ಬಿಡುವುದು. ಕೆಲವು ಮೀನುಗಳನ್ನಾಗಲಿ, ಕೆಲವು ಜಂತುಗಳನ್ನಾಗಲಿ

ಆಫ್ರಿಕಾಖಂಡದಿಂದ ಏಷ್ಯಾ ಖಂಡಕ್ಕೆ, ಏಷ್ಯಾ ಖಂಡದಿಂದ ಯೂರೋಪ್ ಖಂಡಕ್ಕೆ ತೆಗೆದುಕೊಂಡು ಹೋಗಬಲ್ಲದು. ಕೆಲವು ಸಾವಿರ ಕಿಲೋಮೀಟರುಗಳ ದೂರ ಮೇಲೆ ಆಕಾಶದಲ್ಲಿ ಪ್ರಯಾಣಿಸುವ ಮೇಘವು, ಒಂದು ಖಂಡದಿಂದ ಮತ್ತೊಂದು ಖಂಡಕ್ಕೆ ಸೇರುತ್ತಿದೆ. ಜಂತುಗಳನ್ನು ಒಂದು ಖಂಡದಿಂದ ಮತ್ತೊಂದು ಖಂಡದವರೆಗು, ಒಂದು ಪ್ರಾಂತದಿಂದ ಮತ್ತೊಂದು ಪ್ರಾಂತದವರೆಗು ತೆಗೆದುಕೊಂಡು ಹೋಗಬಲ್ಲದು. ಆಕಾಶದಲ್ಲಿ ಮೇಘದಲ್ಲಿ ಕಾಣಿಸದಂತಿರುವ ಮೀನುಗಳಾಗಲಿ, ಆಮೆಗಳಾಗಲಿ, ಹಾವುಗಳಾಗಲಿ ಮೇಘವು ಮಳೆಯನ್ನು ಸುರಿಯುವಾಗ ಅವುಗಳನ್ನು ಕೆಳಗೆ ಬಿಡುವುದು. ಕಾಣಿಸದ ಮೇಘದ ಕೈಗಳು ಮೀನುಗಳು ಮೊದಲಾದವುಗಳನ್ನು ಕೆಳಗೆ ತೆಗೆದುಕೊಂಡು ಬಂದಾಗ, ಸುಮಾರು ನೂರು ಅಡಿಗಳ ಮೇಲಿಂದ ಮೀನುಗಳು ಮೊದಲಾದವುಗಳು ದೃಶ್ಯರೂಪವಾಗಿ ಕಾಣಿಸುವುದು ಪ್ರಾರಂಭವಾಗುತ್ತದೆ.

ಮೇಘವು ಒಂದು ನೀರನ್ನೇ ಅಲ್ಲದೆ, ನೀರಿನೊಂದಿಗೆ ಸಹ ಮೀನುಗಳನ್ನು, ಆಮೆಗಳನ್ನು ಹಾವುಗಳನ್ನು ತೆಗೆದುಕೊಂಡು ಹೋಗಿ ಮತ್ತೊಂದು ಪ್ರಾಂತದಲ್ಲಿ, ಮತ್ತೊಂದು ದೇಶದಲ್ಲಿ ಬಿಡುವುದರಿಂದ ಅಲ್ಲಿಗೆ ಅವು ಮೇಘದಿಂದ ರವಾನೆ ಆಗಿರುವವೆಂದು ಹೇಳಬಹುದು. ಹಾಗೆ ರವಾನೆ ಮಾಡಿರುವುದರಿಂದ ಅಲ್ಲಿಲ್ಲದ ಮೀನುಗಳ ಜಾತಿಯಾಗಲಿ, ಆಮೆಗಳ ಜಾತಿಯಾಗಲಿ, ಹಾವುಗಳ ಜಾತಿಯಾಗಲಿ ಹೊಸದಾಗಿ ಅಲ್ಲಿಯು ಸಹ ಕಾಣಿಸುತ್ತವೆ. ಉದಾಹರಣೆಗೆ ಒಂದು ದಿನ ವಾರ್ತಾ ಪತ್ರಿಕೆಯಲ್ಲಿ ಅಪರೂಪವಾದ ನಕ್ಷತ್ರ ಆಮೆ ಕರ್ನೂಲು ಜಿಲ್ಲೆ 'ಅವುಕು' ಪ್ರಾಂತದಲ್ಲಿ ಕಾಣಿಸಿದೆ ಎಂದು ಬರೆದಿದ್ದಾರೆ. ನಕ್ಷತ್ರ ಆಮೆ ಜಾತಿ ನಮ್ಮ ಭಾರತ ದೇಶದಲ್ಲಿ ಎಲ್ಲೂ ಇಲ್ಲವೆಂದು, ಆ ಜಾತಿ ಆಮೆ ಆಫ್ರಿಕಾ ಖಂಡದಲ್ಲಿ ಇದೆಯೆಂದು, ಈ ದೇಶದಲ್ಲಿ ಇಲ್ಲದ ಆಮೆ ಜಾತಿ, ಕರ್ನೂಲು ಜಿಲ್ಲೆ ಅವುಕು ಪ್ರಾಂತದಲ್ಲಿ ಕಾಣಿಸುವುದು ಆಶ್ಚರ್ಯವೆಂದು ಬರೆದಿದ್ದಾರೆ. ನಾಲ್ಕೈದು ಚಿಕ್ಕ ನಕ್ಷತ್ರ ಆಮೆಗಳು ಕಾಣಿಸಿರುವಂತೆ ಬರೆದಿದ್ದರು. ನಕ್ಷತ್ರ ಆಮೆಗಳ ಫೋಟೊ ಸಹ ಅದರಲ್ಲಿ ಮುದ್ರಿಸಿದ್ದಾರೆ. ಆ ದಿನ ಎಲ್ಲರಿಗು ಅದು

ಆಶ್ಚರ್ಯಕರವಾದ ವಾರ್ತೆ ಆಗಿರುವಾಗ, ಅದನ್ನು ಅಲ್ಲಿಗೇ ಬಿಟ್ಟುಹಾಕಿದ್ದಾರೆ. ಪ್ರತಿಯೊಂದಕ್ಕು ಕಾಣಿಸುವ ನಿರೂಪಣೆಬೇಕೆಂದು ವಾದಿಸುವ ಹೇತುವಾದಿಗಳು, ಪ್ರತ್ಯಕ್ಷವಾಗಿ ಬರೆದ ವಾರ್ತೆಯನ್ನು, ಮುದ್ರಿಸಿದ್ದ ಆಮೆಯ ಚಿತ್ರವನ್ನು ನೋಡಿ, ಇದು ಅಸತ್ಯ. ಇಲ್ಲಿಲ್ಲದ ಜಾತಿ ಹೇಗೆ ಬಂದಿದೆ ಎಂದು ಏಕೆ ಪ್ರಶ್ನಿಸದೆ ಹೋಗಿದ್ದಾರೊ? ಮೇಧಾವಿಗಳಾಗಲಿ, ಸಾಮಾನ್ಯರಾಗಲಿ ಹೇತುವಾದಿಗಳಾಗಲಿ ಆ ವಾರ್ತೆಯನ್ನು ನೋಡಿದ ನಂತರ ದೇಶದಲ್ಲಿ ಎಲ್ಲಿಯು ಇಲ್ಲದ ಜಾತಿ ಇದ್ದಕ್ಕಿದ್ದಂತೆ ಇಲ್ಲಿ ಹೇಗೆ ಕಾಣಿಸಿದೆ? ಎಂದು ಪ್ರಶ್ನಿಸಿಕೊಳ್ಳದೆ ಹೋಗಿದ್ದಾರೆ. ಅದನ್ನು ಕುರಿತು ಆಲೋಚಿಸದೆ ಹೋಗಿದ್ದಾರೆ. ಮೇಧಾವಿಗಳ ಆಲೋಚನೆಗು ಸಹ ಅವು ಇಲ್ಲದ ಪ್ರಾಂತದೊಳಗೆ ಹೇಗೆ ಬಂದಿವೆಯೊ, ಯಾವ ವಿಧಾನದ ಮೂಲಕ ಬಂದಿವೆಯೊ ಸಹ ತಿಳಿದಿಲ್ಲ. ಅದರ ಹಿಂದಿರುವ ಸತ್ಯವನ್ನು ತಿಳಿದರೆ ಮೇಘಗಳಿಂದ ಬಂದಿವೆಯೆಂದು ಯಾರಾದರೂ ಒಪ್ಪಿಕೊಳ್ಳದೆ ತಪ್ಪುವುದಿಲ್ಲ.

ಒಂದು ಆಮೆಗಳನ್ನೇ ಅಲ್ಲದೆ, ಕೆಲವು ಜಾತಿಗಳ ಹಾವುಗಳನ್ನು, ಕೆಲವು ಜಾತಿಗಳ ಮೀನುಗಳನ್ನು ಸಹ ತಂದು, ಮತ್ತೊಂದು ದೇಶದಲ್ಲಿ, ಮತ್ತೊಂದು ಪ್ರಾಂತದಲ್ಲಿ ಬಿಡುತ್ತಿವೆ. ಆದ್ದರಿಂದ ಮಳೆ ಸುರಿಯುವಾಗ ಮಳೆಯೊಂದಿಗೆ ಸಹ ಹಾವುಗಳು ಬೀಳುವುದು, ಮೀನುಗಳು ಬೀಳುವುದು, ಆಮೆಗಳು ಬೀಳುವುದನ್ನು ಕೆಲವರು ಪ್ರತ್ಯಕ್ಷವಾಗಿ ನೋಡಿರುವವರಿದ್ದಾರೆ. ಹಾಗೆ ಮೇಘಗಳು ಪ್ರತ್ಯಕ್ಷವಾಗಿ ನೀರನ್ನು, ನೀರಿನೊಂದಿಗೆ ಸಹ ಮೀನುಗಳನ್ನು, ಕಪ್ಪೆಗಳನ್ನು ಒಂದು ಕೆರೆಯಿಂದ ತೆಗೆದುಕೊಳ್ಳುವುದನ್ನು ಕೆಲವರು ಪ್ರತ್ಯಕ್ಷವಾಗಿ ನೋಡಿದ್ದಾರೆ. ಒಂದು ಕೆರೆಯಿಂದ ನೀರನ್ನೆಲ್ಲವನ್ನು ಮೇಘವು ಹೀರಿಕೊಳ್ಳುವುದನ್ನು ಫೋಟೋದೊಂದಿಗೆ ಸಹ ವಾರ್ತೆಯನ್ನು ಪ್ರಚಾರ ಮಾಡಿರುವುದು ಸಹ ನಡೆದಿದೆ. ಈ ಮಧ್ಯೆಕಾಲದಲ್ಲಿ ಮೇಘವು ನೀರನ್ನು ತೆಗೆದುಕೊಳ್ಳುತ್ತಿರುವ ಪ್ರತ್ಯಕ್ಷದೃಶ್ಯವೆಂದು ಟಿ.ವಿಗಳಲ್ಲಿಯು ಸಹ ಪ್ರಸಾರ ಮಾಡಿ ತೋರಿಸಿದ್ದಾರೆ. ಮೇಘವು ಅಪರೂಪವಾಗಿ ದೃಶ್ಯರೂಪದಲ್ಲಿ ಕಾಣಿಸುವ ವಿಧವಾಗಿ ಎಲ್ಲೊ ಒಂದು ಕಡೆ ನೀರನ್ನು ಪ್ರಜೆಗಳಿಗೆ ಹತ್ತಿರವಾಗಿರುವ ಕೆರೆಯಿಂದ

ತೆಗೆದುಕೊಳ್ಳುತ್ತಿದೆ. ಹಾಗೆ ಮಾಡುವುದರಿಂದ ಮೇಘಗಳು ನೀರನ್ನು ಈ ವಿಧದಲ್ಲಿ ತೆಗೆದುಕೊಳ್ಳುತ್ತಿವೆಯೆಂದು ಪ್ರಜೆಗಳಿಗೆ ತಿಳಿಯಬೇಕೆಂದು ದೇವರೇ ಆ ವಿಧದಲ್ಲಿ ಮಾಡಿಸಿದ್ದಾನೆಂದು ಅರ್ಥವಾಗುತ್ತಿದೆ. ನಾವು ತಿಳಿದುಕೊಳ್ಳುವುದಕ್ಕೆ ಆಧಾರವಾಗಿ ಎಲ್ಲೋ ಒಂದು ಕಡೆ ಇರುವ ಸತ್ಯವನ್ನು, ನಮಗೆ ಕಾಣಿಸುವ ವಿಧದಲ್ಲಿ ತೋರಿಸಿದರೂ ಮನುಷ್ಯ ಅದನ್ನು ಅರ್ಥಮಾಡಿಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ಈಗ ಇರುವ ಸತ್ಯವನ್ನು ಬಿಚ್ಚಿ ಹೇಳಿದರೂ, ವಿಜ್ಞಾನಿಗಳೆಂದುಕೊಂಡವರು ಕೆಲವರು ನಮ್ಮ ಮಾತುಗಳನ್ನು ಹಾಸ್ಯಾಸ್ಪದವಾಗಿ ತೆಗೆದುಕೊಳ್ಳುತ್ತಿದ್ದಾರೆ. ನಮ್ಮ ಮಾತನ್ನು ಅಸತ್ಯ ಎನ್ನುತ್ತಿದ್ದಾರೆ. ಮನುಷ್ಯರಿಗೆ ಯಾವ ವಿಧವಾಗಿ ತಿಳಿಯದ ಕೆಲವು ವಿಷಯಗಳನ್ನು, ಕೆಲವರು ಯಾವ ವಿಧವಾಗಿಯು ನಂಬದ ವಿಷಯಗಳನ್ನು, ದೇವರು ಪ್ರತ್ಯಕ್ಷವಾಗಿ ಎಲ್ಲೋ ಒಂದು ಕಡೆ ತೋರಿಸುವನು. ಅಲ್ಲಿಗೂ ಸತ್ಯವನ್ನು ಗ್ರಹಿಸಲಾಗದ ಮನುಷ್ಯರು ವಿಜ್ಞಾನಿಗಳಾಗುತ್ತಾರಾ? ಮೇಧಾವಿಗಳಾಗುತ್ತಾರಾ?

ಮೇಘಗಳು ನೀರನ್ನಾಗಲಿ, ನೀರಿನೊಂದಿಗೆ ಸಹ ಕೆಲವು ಜೀವರಾಶಿಗಳನ್ನಾಗಲಿ ತೆಗೆದುಕೊಂಡು ಹೋಗುವವೆಂಬ ಸತ್ಯ ಯಾರಿಗು ತಿಳಿದಿಲ್ಲವಾದ್ದರಿಂದ, ಕೆಲವು ಸಂವತ್ಸರಗಳಿಗೆ ಒಂದುಬಾರಿ, ಎಲ್ಲೋ ಒಂದು ಕಡೆ ಪ್ರತ್ಯಕ್ಷವಾಗಿ ಕಾಣಿಸುವಂತೆ ದೇವರು ಮಾಡಿಸಿದ್ದಾನೆ. ಇದರ ಹಾಗೆಯೇ ಪುನರ್ಜನ್ಮ ವಿಷಯವು ಸಹ! ಇದು ಸತ್ಯ ಎಂದು ಹೇಳುವುದಕ್ಕೆ ಎಂತಹ ಆಧಾರ ಇಲ್ಲವಾದ್ದರಿಂದ ಅದನ್ನು ಸಹ ಕೆಲವು ಸಂವತ್ಸರಗಳಿಗೆ ಒಂದು ಬಾರಿ ಎಲ್ಲೋ ಒಂದು ಕಡೆ ಎಲ್ಲರಿಗೂ ತಿಳಿಯುವಂತೆ, ಸ್ವಲ್ಪ ಕಾಲ ಮಾತ್ರ ಹಿಂದಿನ ಜನ್ಮ ಜ್ಞಾಪಕ ಬಂದವರನ್ನು ದೇವರು ಕಾಣಿಸುವಂತೆ ಮಾಡುತ್ತಿದ್ದಾನೆ. ಪ್ರತ್ಯಕ್ಷವಾಗಿ ಹಿಂದಿನ ಜನ್ಮ ವಿಷಯಗಳನ್ನು ಹೇಳುವುದೇ ಅಲ್ಲದೆ, ತೋರಿಸುವುದು ನಡೆದಾಗಲು ಸಹ ವಿಜ್ಞಾನಿಗಳು, ಮೇಧಾವಿಗಳು ಎನ್ನುವವರು ಕೆಲವರು, ಕಾಣಿಸುವ ಸತ್ಯವನ್ನು ಗ್ರಹಿಸಿಕೊಳ್ಳದ ಸ್ಥಿತಿಯಲ್ಲಿದ್ದು, ಸತ್ಯವನ್ನು ಮೂಢನಂಬಿಕೆ ಎನ್ನುತ್ತಿದ್ದಾರೆ. ಅಂತವರು ಪ್ರಪಂಚ ವಿಧಾನದಲ್ಲಿ ಎಷ್ಟು ದೊಡ್ಡ ಮೇಧಾವಿಗಳು,

ವಿಜ್ಞಾನಿಗಳು ಆದರೂ, ಪರಮಾತ್ಮ ವಿಧಾನದಲ್ಲಿ ಅವರ ಬುದ್ಧಿ, ಕಾಣಿಸುವುದನ್ನು ಸಹ ಗ್ರಹಿಸಿಕೊಳ್ಳಲಾಗದ ಬಲಹೀನ ಸ್ಥಿತಿಯಲ್ಲಿ ಇದೆಯೆಂದು ತಿಳಿಯುತ್ತಿದೆ. ಒಂದು ವಿಧದಲ್ಲಿ ಪ್ರಪಂಚ ವಿಧಾನದಲ್ಲಿ ಮೇಧಾವಿಗಳಲ್ಲದಂತಹ ಸಾಮಾನ್ಯ ಪ್ರಜೆಗಳೆ, ದೇವರ ವಿಧಾನವನ್ನು ಅರ್ಥಮಾಡಿಕೊಳ್ಳುವ ಬುದ್ಧಿಬಲ ಹೊಂದಿದ್ದಾರೆಂದು ಹೇಳಬಹುದು. ಇಂತಹ ಎರಡು ವಿಧಗಳ ಮನುಷ್ಯರೆ ಅಲ್ಲದೆ, ಮೂರನೇ ವಿಧದ ಮನುಷ್ಯರು ಸಹ ಬಹಳ ಅಪರೂಪವಾಗಿ ಇದ್ದಾರೆ. ಅವರು ಇತ್ತ ಪ್ರಪಂಚ ವಿಧಾನದಲ್ಲಿಯು ಮೇಧಾವಿಗಳೇ, ಅತ್ತ ಪರಮಾತ್ಮ ವಿಧಾನದಲ್ಲಿಯು ಮೆಧಾವಿಗಳೇ ಆಗಿದ್ದಾರೆ. ಪ್ರಪಂಚ ವಿಷಯದಲ್ಲಿ ಮೇಧಾವಿಗಳಾದ ಒಂದು ವಿಧದವರು ಭೂಮಿಮೇಲೆ ಕೆಲವರೇ ಇರುವಾಗ ಪ್ರಪಂಚದಲ್ಲಿ ಮೇಧಸ್ಸು ಇಲ್ಲದ ಎರಡನೇ ವಿಧದವರು, ಭೂಮಿ ಮೇಲೆ ಹೆಚ್ಚಾಗಿ ಇದ್ದಾರೆ. ಇನ್ನು ಪ್ರಪಂಚ ವಿಷಯದಲ್ಲಿಯು, ಪರವಾತ್ಮ ವಿಷಯದಲ್ಲಿಯು ಎರಡು ವಿಧಗಳ ಮೇಧಾವಿಗಳಾದ ಮೂರನೇ ವಿಧದವರು ಭೂಮಿಮೇಲೆ ಬಹು ಅಪರೂಪವಾಗಿ ಇದ್ದಾರೆ. ಈ ಮೂರು ವಿಧಗಳ ಮನುಷ್ಯರಲ್ಲಿ ದೈವಜ್ಞಾನದ ಪ್ರಕಾರ ನೋಡಿದರೆ, ಅಪರೂಪವಾಗಿರುವ ಮೂರನೇ ವಿಧದವರು ಉತ್ತಮರು, ಹೆಚ್ಚಾಗಿರುವ ಎರಡನೇ ವಿಧದವರು ಮಧ್ಯಮರು, ಕಡಿಮೆಯಾಗಿರುವ ಒಂದನೇ ವಿಧದವರು ಅಧಮರೆಂದು ಹೇಳಬಹುದು.

ದೇವರ ಜ್ಞಾನದಲ್ಲಿ ಅಧಮರಾಗಿ, ಪ್ರಪಂಚ ಜ್ಞಾನದಲ್ಲಿ ಮೇಧಾವಿಗಳಾದವರು, ಸಮುದ್ರದ ನೀರು ಆವಿಯಾಗಿ ಮೇಲಕ್ಕೆಹೋಗಿ ಮೇಘವಾಗಿ ಏರ್ಪಡುತ್ತಿದೆಯೆಂದು ಹೇಳುತ್ತಿದ್ದಾರೆ. ಬೇಸಿಗೆ ಕಾಲದಲ್ಲಿ ಸೂರ್ಯನ ಶಾಖಕ್ಕೆ ಸಮುದ್ರದ ಮೇಲಿನ ನೀರು ಆವಿಯಾಗಿ ಹೋಗುತ್ತದೆಂದು ಪ್ರಪಂಚ ವಿಜ್ಞಾನಿಗಳು ಹೇಳುತ್ತಿದ್ದಾರೆ. ಆದರೂ ನಾವು ಆ ಮಾತನ್ನು ವಿಶ್ವಸಿಸುತ್ತಿಲ್ಲ ಏಕೆಂದರೆ! ಒಂದು ಲೋಹವನ್ನು ಕರಗಿಸುವುದಕ್ಕೆ ಎಷ್ಟು ಶಾಖ, ಅವಶ್ಯವಾಗುತ್ತದೊ, ಅದನ್ನು ಮೆಲ್ಟಿಂಗ್ ಪಾಯಿಂಟ್ ಡಿಗ್ರಿಗಳು ಎಂದು ಎನ್ನುತ್ತಾರೆ. ಸೀಸವನ್ನು (ಲೆಡ್‌ನ್ನು) ಕರಗಿಸುವುದಕ್ಕೆ ಎಷ್ಟು ಶಾಖ ಅವಶ್ಯವೊ,

ಅದಕ್ಕಿಂತ ಹೆಚ್ಚು ಶಾಖ ರಾಗಿ ಲೋಹವನ್ನು (ಕಾಪರ್) ಕರಗಿಸುವುದಕ್ಕೆ ಅವಶ್ಯವಾಗುತ್ತದೆ. ಇದನ್ನು ಅನುಸರಿಸಿ ನೋಡಿದರೆ ಸೀಸ ಒಂದು ಉಷ್ಣೋಗ್ರತೆಯ ಬಳಿ, ರಾಗಿ ಮತ್ತೊಂದು ಉಷ್ಣೋಗ್ರತೆಯ ಬಳಿ ಕರಗುತ್ತಿರುವುದರಿಂದ ಸೀಸಕ್ಕೆ, ರಾಗಿಗೆ ಮೆಲ್ಟಿಂಗ್ ಪಾಯಿಂಟ್ಸ್ ಡಿಗ್ರಿಗಳು ಬೇರೆ ಬೇರೆಯಾಗಿವೆಯೆಂದು ತಿಳಿದಿದೆ. ಹಾಗೇ ನೀರು ಆವಿಯಾಗುವುದಕ್ಕೆ ಎಷ್ಟು ಶಾಖ ಅವಶ್ಯವೊ, ಆ ಶಾಖವನ್ನು ಬಾಯಿಲಿಂಗ್ ಪಾಯಿಂಟ್ ಡಿಗ್ರಿಗಳು ಎನ್ನುತ್ತಾರೆ. ಈಗ ನಮಗೆ ಅವಶ್ಯವಾದದ್ದು ನೀರಿನ ವಿಷಯ. ಆದ್ದರಿಂದ ನೀರಿನ ವಿಷಯವನ್ನು ನೋಡಿದರೆ ನೀರು ನೂರು (100) ಸೆಂಟಿಗ್ರೇಡ್ ಡಿಗ್ರಿಗಳ ಹತ್ತಿರ ಕುದ್ದು ಆವಿಯಾಗುತ್ತದೆ. ಆದ್ದರಿಂದ ನೀರಿನವೊಂದು ಬಾಯಿಲಿಂಗ್ ಪಾಯಿಂಟ್ ಡಿಗ್ರಿಗಳು ನೂರು ಸೆಂಟಿಗ್ರೇಟ್ ಉಷ್ಣೋಗ್ರತೆ ಎಂದು ಹೇಳಬಹುದು. ನಮ್ಮ ಮನೆಯಲ್ಲಿ ಒಂದು ಪಾತ್ರೆಯಲ್ಲಿ ನೀರನ್ನು ತುಂಬಿ, ಒಲೆ ಮೇಲೆ ಇಟ್ಟು ನೂರು ಡಿಗ್ರಿಗಳವರೆಗು ಕಾಯಿಸಿದರೆ ಆಗ ನೀರು ಕಾದು ಆವಿಯಾಗುತ್ತದೆಂದು ಎಲ್ಲರಿಗು ಗೊತ್ತು. ಆಕಾಶದಲ್ಲಿ ಸೂರ್ಯನ ಶಾಖದಿಂದ ಸಮುದ್ರದ ನೀರು ಆವಿಯಾಗಿ, ಮೇಲಕ್ಕೆ ಹೋಗಿ ಮೇಘಗಳು ಏರ್ಪಡುತ್ತಿವೆಯೆಂದು ಬಹಳ ಜನ ಹೇಳುವ ಮಾತುಗಳಲ್ಲಿ ಸತ್ಯ ಇಲ್ಲವೆಂದು ತಿಳಿಯುತ್ತಿದೆ. ಸಮುದ್ರದ ನೀರು ಆವಿಯಾಗುವುದಕ್ಕೆ ನೂರು ಡಿಗ್ರಿಗಳ ಶಾಖ ಅವಶ್ಯವಲ್ಲವೆ! ಅಷ್ಟು ಶಾಖ ಸೂರ್ಯನಿಂದ ಬರಲಿಲ್ಲ. ಸೂರ್ಯನಿಂದ ಬರುವ ಶಾಖ ಬೇಸಿಗೆಕಾಲದಲ್ಲಿ 40 ರಿಂದ 45 ಡಿಗ್ರಿಗಳವರೆಗು ಇರುತ್ತದೆ. ಯಾವಾಗಲಾದರು ಅಪರೂಪಕ್ಕೆ 50 ಡಿಗ್ರಿಗಳವರೆಗು ಇರಬಹುದು. ನೀರು ಆವಿ ಆಗುವುದಕ್ಕೆ ನೂರು ಸೆಂಟಿಗ್ರೇಡ್ ಡಿಗ್ರಿಗಳ ಉಷ್ಣೋಗ್ರತೆ ಅವಶ್ಯವಾದಾಗ, ಸೂರ್ಯನಿಂದ ಬರುವ 40 ಅಥವಾ 45 ಡಿಗ್ರಿಗಳ ಉಷ್ಣೋಗ್ರತೆಗೆ ನೀರು ಆವಿಯಾಗಿಹೋಗುವ ಪ್ರಸಕ್ತಿಯೇ ಇಲ್ಲ. ಆದ್ದರಿಂದ ಸೂರ್ಯನಿಂದ ನೀರು ಆವಿಯಾಗಿ ಹೋಗುತ್ತದೆಂದು, ಇಲ್ಲಿಯವರೆಗು ನಾವು ಕೇಳಿದ ಅಥವಾ ಓದಿಕೊಂಡ ವಿಷಯ ಪೂರ್ತಿ ಅಸತ್ಯವೆಂದು ತಿಳಿಯುತ್ತಿದೆ.

ಇಷ್ಟು ಹೇಳಿದರೂ "ಇಲ್ಲ! ಸಮುದ್ರದ ನೀರೇ ಆವಿಯಾಗಿ ಮೇಘವಾಗಿ ತಯಾರಾಗುತ್ತದೆ. ಆ ಮೇಘಕ್ಕೆ ತಣ್ಣನೆಯ ಗಾಳಿ ತಾಕಿದಾಗ ಮೇಘಗಳಲ್ಲಿ ಆವಿಯರೂಪದಲ್ಲಿರುವ ನೀರು ತಣ್ಣನೆಯ ಗಾಳಿಗೆ, ನೀರಾಗಿ ಬದಲಾವಣೆ ಹೊಂದಿ ಮಳೆ ಬೀಳುತ್ತದೆಂದು" ಮೊರಟಾಗಿ ವಾದಿಸುವವರಿರಬಹುದು. ಅಂತವರನ್ನು ನಾವು ಅನೇಕ ಪ್ರಶ್ನೆಗಳು ಕೇಳಬೇಕಾಗಿ ಬರುತ್ತದೆ. ಆ ಪ್ರಶ್ನೆಗಳಿಗೆ ಅವರು ಮೊರಟಾಗಿ, ಉತ್ತರವಲ್ಲದ್ದನ್ನು ಹೇಳುವುದು ಹೊರತು ಬೇರೆ ಮಾರ್ಗವಿಲ್ಲ. ಸಮುದ್ರದಲ್ಲಿನ ನೀರಾಗಲಿ, ಒಂದು ಡ್ಯಾಮ್‌ನಲ್ಲಿನ ನೀರಾಗಲಿ, ಚಿಕ್ಕ ಕೆರೆಯಲ್ಲಿನ ನೀರಾಗಲಿ ಎಲ್ಲ ನೀರೇ ಆಗುತ್ತದೆ. ಎಲ್ಲವುಗಳಿಗು ನೂರು ಡಿಗ್ರಿಗಳ ಸೆಂಟಿಗ್ರೇಡ್ ಉಷ್ಣೋಗ್ರತೆ ಬಾಯಿಲಿಂಗ್ ಪಾಯಿಂಟ್ ಆಗುತ್ತದೆ. ಆಗಿರುವಾಗ ಚಿಕ್ಕ ಕೆರೆಯಲ್ಲಾಗಲಿ, ದೊಡ್ಡ ಡ್ಯಾಮ್‌ನಲ್ಲಾಗಲಿ, ಅಪಾರವಾದ ಸಮುದ್ರದಲ್ಲಾಗಲಿ ನೀರು ಕುದ್ದು ಆವಿಯಾಗುವುದು ಯಾರಾದರು ನೋಡಿದ್ದೀರಾ? ಯಾರೂ ನೋಡಿಲ್ಲ, ಅದು ಎಲ್ಲಿಯು ನಡೆದಿಲ್ಲ. ಸೂರ್ಯನಿಂದ ನೂರು ಸೆಂಟಿಗ್ರೇಡ್ ಡಿಗ್ರಿಗಳ ಶಾಖ ಬಾರದಿರುವಾಗ, ನೀರು ಆವಿಯಾಗುವುದಕ್ಕೆ ಅವಕಾಶವಿಲ್ಲವೆಂದು ಯಾರಾದರು ಹೇಳಬಹುದು. ನೀರು ಭೂಮಿಯೊಳಗೆ ಇಂಗಿಹೋಗಬಹುದು. ಆದರೆ ಆಕಾಶದೊಳಕ್ಕೆ ಆವಿಯಾಗಿ ಹೋಗುವುದಿಲ್ಲ. ಹಾಗೆ ಗಾಳಿಯೊಳಗೆ ನೀರು ಸೇರಿ ಗಾಳಿಯಲ್ಲಿ ತೇವ ಏರ್ಪಡುತ್ತದೆ. ಆದರೆ ನೀರು ಆವಿಯಾಗಿ ಗಾಳಿಯಲ್ಲಿ ಬೆರೆತು ಹೋಗಲಿಲ್ಲ. ಬಂಡೆಗಳ ಮೇಲೆ ನೀರಾಗಲಿ, ತೇವವಾಗಲಿ ಗಾಳಿಗೆ ಆರಿಹೋಗುತ್ತದೆ, ಆದರೆ ಆವಿಯಾಗಿ ಹೋಗುವುದಿಲ್ಲ. ಒದ್ದೆಬಟ್ಟೆಗಳಲ್ಲಿನ ತೇವ ಗಾಳಿಯೊಳಗೆ ಆರಿಹೋಗುತ್ತದೆ, ಆದರೆ ಆವಿಯಾಗಿ ಹೋಗದು. ಏರ್ ಕೂಲರ್‌ನೊಳಗಿನ ನೀರು ಫ್ಯಾನ್ ಗಾಳಿಗೆ ಆರಿ ಹೋಗುತ್ತದೆ, ಆದರೆ ಆವಿಯಾಗಿ ಹೋಗುವುದಿಲ್ಲ. ಹೀಗೆ ನೀರು ಆರಿಹೋಗುವುದಕ್ಕು, ಆವಿಯಾಗಿ ಹೋಗುವುದಕ್ಕು ವ್ಯತ್ಯಾಸ ತಿಳಿಯದ ಕೆಲವರು ನೀರು ಆವಿಯಾಗಿ ಮೇಘಗಳಂತೆ ಬದಲಾಗಿ ಹೋಗುತ್ತದೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಯಾರು ಏನೆಂದುಕೊಂಡರು ಮೇಘಗಳು

ನೀರನ್ನು, ನೀರಿನೊಂದಿಗೆ ಕೆಲವನ್ನು ತೆಗೆದುಕೊಳ್ಳುತ್ತದೆಂದು ಹೇಳುವುದಕ್ಕೆ ಆಧಾರವಾಗಿ ವಾರ್ತಾಪತ್ರಿಕೆಯಲ್ಲಿ ಬಂದ ಸಮಾಚಾರವನ್ನು ಕೆಳಗೆ ಕೊಡುತ್ತಿದ್ದೇವೆ ನೋಡಿರಿ.

## ಮೀನುಗಳ ಮಳೆ... ಸುರಿದ ಕಪ್ಪೆಗಳು

*(ಈನಾಡು ಹೈದರಾಬಾದ್ ಭಾನುವಾರ 25 ಜುಲೈ 2010, 28 ನೆ ಪುಟದಲ್ಲಿ)*

(ಮಳೆ ಯೊಂದಿಗೆ ಆಲಿಕಲ್ಲುಗಳು ಬಿದ್ದರೆ ಸಂಭ್ರಮ ಪಡುತ್ತಾರೆ... ಮತ್ತು ಮೀನುಗಳು, ಕಪ್ಪೆಗಳು ಸಹ ಬಿದ್ದರೆ? ಅವುಗಳೆ ಅಲ್ಲ ನಾಣ್ಯಗಳು, ಪಿಜ್ಜಾಗಳು ಸಹ ಬಿದ್ದಿರುವ ಸಂಗತಿ ಗೊತ್ತಾ? ಅವುಗಳೆ ವಿಚಿತ್ರ ಮಳೆಗಳು!)

⏩ ಅಮೆರಿಕಾದಲ್ಲಿನ ಅಲಬಾಮಾ ರಾಷ್ಟ್ರದಲ್ಲಿ ಒಂದು ಕುಟುಂಬವೆಲ್ಲ ಸೇರಿ ಕಾರಿನಲ್ಲಿ ಹೋಗುತ್ತಿದ್ದಾರೆ. ಅಕಸ್ಮಾತಾಗಿ ಆಕಾಶದಲ್ಲಿ ಒಂದು ಕಡೆ ಕಪ್ಪನೆಯ ಮೋಡಗಳು ಆವರಿಸಿಕೊಂಡು ಮಳೆ ಬಿದ್ದಿದೆ. ಅದರೊಂದಿಗೆ ದಬದಬವೆನ್ನುತ್ತಾ ಮೀನುಗಳು ಸುರಿದಿವೆ! ಮೇಲಾಗಿ ಅವು ಬದುಕಿರುವವೆ!!

⏩ ಸೆರ್ಬಿಯಾ ದೇಶದಲ್ಲಿ 2005 ರಲ್ಲಿ ಕೆಲವು ಪ್ರಾಂತಗಳಲ್ಲಿನ ಪ್ರಜೆಗಳು ಹಠಾತ್ತಾಗಿ ಮನೆಯೊಳಗೆ ಓಡಿದ್ದಾರೆ. ಯಾಕೆ ಗೊತ್ತಾ? ಆಲಿಕಲ್ಲುಗಳ ಹಾಗೆ ಚಿಕ್ಕ ಕಪ್ಪೆಗಳು ಬೀಳಲು ಪ್ರಾರಂಭಿಸಿದವು!

⏩ ಪ್ರಪಂಚ ವ್ಯಾಪ್ತವಾಗಿ ಅನೇಕ ಕಡೆ ವಿಚಿತ್ರ ಮಳೆಗಳು ಸುರಿದ ಸಂದರ್ಭ ಗಳು ಎಷ್ಟೋ ಇವೆ. ಇವುಗಳನ್ನೇ "ಆಡ್ ರೆಯಿನ್ಸ್" "ಸ್ಟ್ರೇಂಜ್ ರೆಯಿನ್ಸ್" ಎನ್ನುತ್ತಾರೆ. ಯಾಸಿಡ್ ಮಳೆಗಳು, ಕೆಂಪು ಬಣ್ಣದಲ್ಲಿ ಸುರಿಯುವ ಮಳೆಗಳು ಸಹ ಈ ಗುಂಪಿಗೆ ಬರುತ್ತವೆ. ಆದರೆ ಮೊಸಳೆಗಳು, ಪಿಜ್ಜಾಗಳು, ಕಾಸುಗಳು ಸಹ ಸುರಿದ ಸಂದರ್ಭಗಳು ಇವೆ. ಬಲವಾದ ಸುಳಿಗಾಳಿಗಳು ಏರ್ಪಟ್ಟಾಗ ಅವು ಯಾವ ಕೆರೆಯಲ್ಲಿನ ನೀರನ್ನೊ ಹೀರಿಕೊಳ್ಳುತ್ತವೆಂದು, ಆ ಗಾಳಿ ಚೆಲ್ಲಾಪಿಲ್ಲೆಯಾಗಿ ಅದರಲ್ಲಿನ ಮೀನುಗಳೆಲ್ಲ ಮಳೆಯಂತೆ ಸುರಿಯುವ ಅವಕಾಶ

ಇದೆಯೆಂದು ಹೇಳುತ್ತಾರೆ. ಏನಾದರು ಇಂತಹ ವಿಚಿತ್ರ ಮಳೆಗಳ ಕುರಿತು ಮಳೆಗಾಲದಲ್ಲಿ ತಿಳಿದುಕೊಳ್ಳುವುದು ಆಸಕ್ತಿದಾಯಕ.

⏩ ಅರ್ಜೆಂಟೈನಾದಲ್ಲಿನ ಒಂದು ಪ್ರಾಂತದಲ್ಲಿ 2007 ಏಪ್ರಿಲ್ 6 ರಂದು ಸಾಲಿಳ್ಳ ಮಳೆ ಸುರಿದಿದೆ. ಆ ಮಳೆಯನ್ನು ಒಬ್ಬಾತನು ಫೋಟೊ ಸಹ ತೆಗೆದಿದ್ದಾನೆ!

⏩ ನಮ್ಮ ದೇಶದಲ್ಲಿ ಕೇರಳದಲ್ಲಿ 2001 ರಲ್ಲಿ ಕೆಂಪುಬಣ್ಣದ ಮಳೆ ಸುರಿದಿದೆ. ಅದನ್ನು "ಬ್ಲಡ್ ರೆಯಿನ್" ಎಂದು ಕರೆದಿದ್ದಾರೆ.

⏩ ಗುಜರಾತ್‌ನ ಬಾನ್‌ವಾಡ್‌ನಲ್ಲಿ, 2009 ಅಕ್ಟೋಬರ್ 24 ರಂದು ಮೀನುಗಳ ಮಳೆ ಸುರಿದಿದೆ.

⏩ ಕಾಲಿಫೋರ್ನಿಯಾದಲ್ಲಿ 1869 ಆಗಸ್ಟ್ 1 ರಂದು ಯಾವುದೊ ಜಂತುಗಳಿಗೆ ಸೇರಿದ ಶರೀರ ಭಾಗಗಳು ಸುರಿದಿವೆ.

⏩ ಇಂಗ್ಲೆಂಡ್‌ನಲ್ಲಿ 1894 ರಲ್ಲಿ ಜೆಲ್ಲಿಫಿಷ್‌ಗಳು ಬಿದ್ದಿವೆ.

⏩ ಇಂಗ್ಲೆಂಡ್‌ನಲ್ಲಿ 1881 ರಲ್ಲಿ (ಹಾರ್ಮಿಟ್ ಹೇಡಿಗಳು) ನೂರರವರೆಗು ಬಿದ್ದಿವೆ.

⏩ ಕಾಲರಾಡ್ ಪ್ರಾಂತದಲ್ಲಿ 1982 ರಿಂದ 86ರವರೆಗು ಪ್ರತಿ ವರ್ಷ ಮೆಕ್ಕೆಜೋಳದ ತೆನೆಗಳು ಬಿದ್ದಿವೆ.

⏩ ಇಂಗ್ಲೆಂಡ್‌ನಲ್ಲಿನ ಮಾಂಚೆಸ್ಟರ್‌ನಲ್ಲಿ 1982 ಮೇ 28 ರಲ್ಲಿ ನಾಣ್ಯಗಳ ಮಳೆ ಬಿದ್ದಿದೆ. ರಷ್ಯಾದಲ್ಲಿ ಮೆರ್ಬರಿ ಗ್ರಾಮದಲ್ಲಿ ಸಹ ಕಾಸುಗಳು ಬಿದ್ದಿವೆ.

⏩ ಅಮೆರಿಕಾದಲ್ಲಿನ ಸಿಲ್ವರ್‌ಟೌನ್‌ನಲ್ಲಿ 1877 ರಲ್ಲಿ ಒಂದು ಸಾರಿ ಮೊಸಳೆಗಳ ಮಳೆ ಬಂದಿದೆ. ಒಂದೊಂದು ಮೊಸಳೆ 12 ಅಂಗುಲಗಳ ಉದ್ದವಿದೆ.

⏩ ಮಾಂಟ್ರಿಯಲ್ ಅನ್ನುವ ಊರಿನಲ್ಲಿ 1857 ರಲ್ಲಿ ಹಲ್ಲಿಗಳ ಮಳೆ ಬಿದ್ದಿದೆ.

⏩ ಆಫ್ರಿಕಾದಲ್ಲಿ ಒಬ್ಬನ ಕಾರಿನ ಮೇಲೆ ದಬ್ಬೆಂದು ದೊಡ್ಡ ಪಿಜ್ಜಾ ಬಿದ್ದಿದೆ.

⏩ ಹೊಂಡುರಸ್ ದೇಶದಲ್ಲಿ ಪ್ರತಿ ವರ್ಷ ಮೇ – ಜುಲೈ ತಿಂಗಳುಗಳ ನಡುವೆ ಮೀನುಗಳ ಮಳೆ ಬರುತ್ತಿದೆ. ಅವುಗಳನ್ನು ಅಡುಗೆ ಮಾಡಿಕೊಂಡು ಸಹ ತಿನ್ನುತ್ತಾರೆ.

ಪ್ರತ್ಯಕ್ಷವಾಗಿ ಕೆಳಗೆ ಬಿದ್ದ ಇಷ್ಟು ವಸ್ತುಗಳು ಆವಿಯಾಗಿ ಹೋಗಲಿಲ್ಲವಲ್ಲ! ನೀರನ್ನು ಶಾಖದಿಂದ ಆವಿ ಮಾಡಿ, ಆ ಆವಿಯನ್ನು ತಣ್ಣಗೆ ಮಾಡಿ ಮತ್ತೆ ನೀರಾಗುವಂತೆ ಪ್ರಯೋಗಶಾಲೆಯಲ್ಲಿ ಮಾಡಿ ತೋರಿಸಬಹುದು. ಅದೇ ವಿಧದಲ್ಲಿ ಸಮುದ್ರದ ನೀರು ಆವಿಯಾಗಿ ಮೇಘರೂಪದಲ್ಲಿ ಇರುವಾಗ, ತಣ್ಣನೆಯ ಗಾಳಿ ತಗಲುವುದರಿಂದ ಆವಿ ಮತ್ತೆ ನೀರಾಗಿ, ಮಳೆ ಬರುವುದು ನಡೆಯುತ್ತಿದೆಯೆಂದು ಕೆಲವರು ಹೇಳಿದರೂ, ನೀರು ಆವಿಯಾಗಿ, ಆವಿ ತಣ್ಣಗಾಗಿ ನೀರಾಗುತ್ತದೆನ್ನುವ ಸೂತ್ರ ಹೇಳಿದರೂ, ಆ ವಿಧಾನವನ್ನು ಪ್ರಯೋಗ ಮಾಡಿ, ತೋರಿಸಿದರೂ, ಆ ಸೂತ್ರ ಸಾರಾಯಿಯನ್ನು ತಯಾರು ಮಾಡಿಕೊಳ್ಳುವುದಕ್ಕೆ ಉಪಯೋಗಪಡುತ್ತದೆ, ಆದರೆ ಮಳೆ ಬರುವುದಕ್ಕೆ ಉಪಯೋಗಪಡುವುದಿಲ್ಲ. ಕೆಲವರು ಅವರಿಗೆ ತಿಳಿದ ಸೂತ್ರದ ಪ್ರಕಾರ, ಮೇಘಮದನ ಮಾಡಿ ಮಳೆಯನ್ನು ಸುರಿಸುತ್ತೇವೆಂದು ಪ್ರಯತ್ನ ಮಾಡಿದರೂ, ಮೇಘಮದನದಿಂದಲು ಸಹ ಮಳೆ ಬರುತ್ತದೆಂದು ನಿರೂಪಣೆಗೆ ಬರಲಿಲ್ಲ. ಮೇಘಮದನ ಮಾಡಿದರೂ, ಮಳೆ ಬಾರದ ಸಂದರ್ಭಗಳಿವೆಯೆಂದು ಇದೆಲ್ಲವನ್ನು ಗಮನಿಸಿದರೆ, ಮೇಘಗಳು ನಮ್ಮ ಇಷ್ಟ ಪ್ರಕಾರ ಕೆಲಸ ಮಾಡುವುದಿಲ್ಲವೆಂದು, ದೇವರ ಇಷ್ಟ ಪ್ರಕಾರ ಕೆಲಸ ಮಾಡುತ್ತವೆಂದು ತಿಳಿದುಬರುತ್ತಿದೆ.

ಮೇಘವು ಮಳೆಸುರಿದಾಗ ಬರುವ ನೀರು, ಕೆಲವು ಲಕ್ಷಗಳ ಕೆರೆಗಳು ತುಂಬುವಷ್ಟು ಇರುತ್ತವೆ. ಮಳೆಬಂದ ನೀರು ಹಳ್ಳಗಳಾಗಿ ಹರಿಯುತ್ತದೆ.

ಭೂಮಿಯೊಳಕ್ಕೆ ಸ್ವಲ್ಪ ನೀರು ಇಂಗಿಹೋದರೂ, ಸ್ವಲ್ಪ ನೀರು ಹೊಲದಲ್ಲಿ ಅಗಲವಾದ ತಗ್ಗುಗಳಲ್ಲಿ ನಿಂತುಕೊಂಡರು, ಕೊನೆಗೆ ಸಮುದ್ರದವರೆಗು ಮಳೆನೀರು ಹರಿಯುತ್ತಿದೆಯೆಂದರೆ ಎಷ್ಟು ನೀರು ಮೇಲೆಹೋಗಿ ಇರಬೇಕೋ ನೀವೇ ಲೆಕ್ಕ ಹಾಕಿಕೊಳ್ಳಿ. ಅಷ್ಟು ನೀರು ಆವಿಯ ರೂಪದಲ್ಲಿ ಮೇಲಕ್ಕೆ ಸೇರಿವೆಯೆಂದು ಹೇಳುವುದಕ್ಕೆ ಅವಕಾಶವಿಲ್ಲ. ಕೊನೆಗೆ ಒಂದು ಲೀಟರು ನೀರು ಸಹ ಸೂರ್ಯರಶ್ಮಿಯ ಮೂಲಕ ಆವಿಯಾಗಿ ಮೇಲಕ್ಕೆ ಹೋಗಿವೆಯೆನ್ನುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ನಾವು ಹೇಳುವುದು ಏನೆಂದರೆ! ಮೇಘವು ಜೀವವಿರುವ ಭೂತವು. ಅದು ಇನ್ನೊಬ್ಬರ ಆಜ್ಞೆಗೆ ಒಳಪಟ್ಟು ಕೆಲಸ ಮಾಡುತ್ತಿದೆ. ತನಗೆ ಬರುವ ಆಜ್ಞೆ ಪ್ರಕಾರ, ಭೂಮಿಮೇಲೆ ಇರುವ ನೀರನ್ನು ಕಣ್ಣಿಗೆ ಕಾಣಿಸದಂತೆ ಸೂಕ್ಷ್ಮವಾಗಿ ಮೇಲಕ್ಕೆ ತೆಗೆದುಕೊಳ್ಳುತ್ತಿದೆ. ಮೇಘದೊಳಗಿನ ನೀರು ಆವಿಯುರೂಪದಲ್ಲಿ ಬಂದಿರುವಂತದ್ದಲ್ಲ, ಮೇಘವು ಸ್ವತಃವಾಗಿ ತೆಗೆದುಕೊಂಡಿರುವುದೆಯೆಂದು ತಿಳಿದುಕೊಳ್ಳಬೇಕು. ಇತ್ತ ಪ್ರಪಂಚ ಜ್ಞಾನ, ಅತ್ತ ದೈವಜ್ಞಾನ ತಿಳಿದ ಮೇಧಾವಿಗಳಾದ ಮೂರನೇ ವಿಧದವರು ಹೇಳುವ ಪ್ರಕಾರ, ದೇವರ ಪಾಲನೆಯಲ್ಲಿ ಮೇಘಗಳು ಮುಖ್ಯಪಾತ್ರವನ್ನು ವಹಿಸುತ್ತಿವೆ. ಮನುಷ್ಯರು ಬದುಕುವುದಕ್ಕೆ ಕುಡಿಯುವ ನೀರನ್ನು, ಆಹಾರ ಧಾನ್ಯಗಳು ಬೆಳೆಯುವುದಕ್ಕೆ ಬೇಕಾದ ನೀರನ್ನು, ಮನುಷ್ಯನಿಗೆ ಜೀವನಾಧಾರವಾಗಿ ಪ್ರತಿ ಜಾಗದಲ್ಲಿ ಉಪಯೋಗಪಡುವ ನೀರನ್ನು ಒದಗಿಸುವುದು ಮೇಘಗಳ ವೊಂದು ಮುಖ್ಯ ಕರ್ತವ್ಯ. ಮನುಷ್ಯರು ಮಾಡಿಕೊಂಡ ಪಾಪಪುಣ್ಯದ ಪ್ರಕಾರ, ಅವರಿಗೆ ಬೆಳೆಗಳು ಬೆಳೆಯಬೇಕೆಂದರೂ, ಭೂಮಿ ಸಾರಾಂಶದಿಂದ ಇರಬೇಕೆಂದರೂ, ಮೇಘಗಳ ಮಳೆಯ ಮೇಲೆ ಆಧಾರಪಟ್ಟಿರುತ್ತದೆ. ಅಷ್ಟೇ ಅಲ್ಲದೆ ಮನುಷ್ಯರನ್ನು ಪ್ರವಾಹಗಳಿಂದ ಹಿಂಸಿಸುವುದಕ್ಕಾಗಲಿ, ಸಾಯಿಸುವುದಕ್ಕಾಗಲಿ ಮೇಘಗಳದ್ದೇ ಮುಖ್ಯಪಾತ್ರ!

ದೇವರ ಪಾಲನೆಯಲ್ಲಿ ಸೇವಕರಾಗಿ, ದೈವತ್ವದವೊಂದು ಹಿರಿಮೆಯನ್ನು ತಿಳಿದ ಮೇಘಗಳು, ಈಗಿನ ಕಾಲದಲ್ಲಿ ಅಜ್ಞಾನದಲ್ಲಿ ಮುಳುಗಿಹೋಗಿ,

ದೈವತ್ವವನ್ನು ಪೂರ್ತಿಯಾಗಿ ಮರೆತುಹೋದ ಮನುಷ್ಯರನ್ನೂ, ಜ್ಞಾನಿಗಳನ್ನು ದೈವ ಜ್ಞಾನವಿರುವ ಗ್ರಂಥಗಳನ್ನು ಗೌರವಿಸದ ವ್ಯಕ್ತಿಗಳನ್ನು, ಪ್ರಪಂಚ ಧನವಾದ ಹಣದ ಮುಂದೆ ದೇವರನ್ನು ಸಹ ಲೆಕ್ಕ ಹಾಕದ ಮಾನವರನ್ನು, ಕಾಣಿಕೆಗಳು, ಮುಡುಪುಗಳು ಕೊಟ್ಟರೆ ದೇವರು ಸಹ ತಮ್ಮ ಕೆಲಸವನ್ನು ಮಾಡುತ್ತಾನೆ ಎಂದುಕೊಳ್ಳುವ ವ್ಯಾಪಾರ ದೃಷ್ಟಿಯಿರುವ ಮನುಷ್ಯರನ್ನು ನೋಡಿದ ಮೇಘಗಳು ತಮ್ಮ ದೇವರ ರಾಜ್ಯದಲ್ಲಿ ಇದ್ದು ದೇವರನ್ನು ಗೌರವಿಸದವರ ಮೇಲೆ ಬೇಸರಗೊಂಡಿವೆ. ಆದ್ದರಿಂದ ಮನುಷ್ಯರ ಪಾಪ ಸರದಿಗೆ ಬಂದಾಗ, ಮನುಷ್ಯರನ್ನು ಹಿಂಸಿಸುತ್ತಿವೆ. ಚಿಕ್ಕ ಉದಾಹರಣೆ ಪ್ರಕಾರ ನೋಡಿದರೆ, ಒಂದು ಪ್ರವಾಹ ಬಂದು ಊರೆಲ್ಲಾ ಜಲಮಯವಾಗಿ ಹೋಗಿ ತಿಂಡಿಕಾಳುಗಳಾಗಲಿ, ತೊಡುವ ಬಟ್ಟೆಗಳಾಗಲಿ ಕೈಗೆ ಸಿಗದಂತೆ ಹೋದಾಗ, ತಮಗೆ ಇಡಿಕೆ ಅನ್ನ ಸಹ ಸಿಗದಾಗ, ತಮ್ಮ ಮಕ್ಕಳು ಅಸಿವಿನಿಂದ ಅಳುತ್ತಾ ಇದ್ದರೆ, ತಮಗೆ ಆಹಾರವಿಲ್ಲದ ಕಾರಣ ಶರೀರದಲ್ಲಿನ ಶಕ್ತಿ ಇಲ್ಲದಂತೆ ಹೋಗುತ್ತಿರುವಾಗ, ಈ ಪ್ರವಾಹ ಎಷ್ಟು ಕೆಲಸ ಮಾಡಿದೆಯೆಂದು ಬಾಧೆ ಪಡುತ್ತಿರುವಾಗ ಮೇಘವು ಅದೇ ಪ್ರಾಂತದಲ್ಲಿ ಮಳೆಯನ್ನು ಪ್ರಾರಂಭಿಸಿದರೆ, ಇನ್ನು ಮಳೆಬೇಡ, ಮಳೆ ಬಂದರೆ ನಮ್ಮ ಪ್ರಾಣಗಳು ಹೋಗುತ್ತವೆ, ನಮ್ಮನ್ನು ಕಾಪಾಡೆಂದು ದೇವರನ್ನು ಪ್ರಾರ್ಥಿಸಿದರೂ, ಇಷ್ಟುಕಾಲ ಹಣವಲ್ಲದೆ ದೇವರೇ ನೆನಪಿಗೆ ಬಾರದ ನಿಮಗೆ ಆಪತ್ತಿನ ಸಮಯದಲ್ಲಿ ಮಾತ್ರ ದೇವರು ನೆನಪಿಗೆ ಬರುತ್ತಾನಾ? ಎಂದು ಮೇಘಗಳು ಮಳೆಸುರಿಸಿ, ನೀರಿನಲ್ಲಿ ಮುಳುಗಿಹೋಗುವ ಪರಿಸ್ಥಿತಿಯನ್ನು ತರುತ್ತವೆ. ಕೆಲವು ಪ್ರಾಂತಗಳಲ್ಲಿ ನೀರಿನಿಂದ ಹೊರಬೀಳದಂತೆ ಸಾಯುವಹಾಗೆ ಮಾಡುತ್ತಿವೆ. ಕೆಲವರ ಮನೆಗಳನ್ನು ಮಳೆಯಿಂದ ಕೂಲಿಕೊಂಡು ಹೋಗುವಂತೆ ಮಾಡಿ, ಮನೆಯವರನ್ನೆಲ್ಲ ದಯೆದಾಕ್ಷಿಣ್ಯ ಇಲ್ಲದಂತೆ ಸಾಯಿಸಿ ಹಾಕುತ್ತಿವೆ. ಇವೆಲ್ಲವು ದೇವರಿಗೆ ತಿಳಿಯದಂತೆ ನಡೆಯುವುದಿಲ್ಲ. ದೇವರಿಗೆ ಗೊತ್ತಾದರೂ, ನನ್ನ ಪಾಲನೆ ಚೆನ್ನಾಗಿ ಸಾಗುತ್ತಿದೆಯೆಂದುಕೊಳ್ಳುತ್ತಾನೆ, ನನ್ನ ಸೈನ್ಯ ಚೆನ್ನಾಗಿ ಕೆಲಸ ಮಾಡುತ್ತಿದೆಯೆಂದು ಅಂದುಕೊಳ್ಳುತ್ತಾನೆ. ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. “ಪ್ರಾಣಾಪಾಯ ಸ್ಥಿತಿಯಲ್ಲಿ ತಮ್ಮ ಪ್ರಾಣಗಳು

ಹೋಗುತ್ತವೆನ್ನುವ ಭಯದಿಂದ ದೇವರನ್ನು ಬೇಡಿಕೊಂಡರೆ ದೀನ ಸ್ಥಿತಿಯಲ್ಲಿರುವವರನ್ನು ನೋಡಿ ದೇವರಿಗೆ ಸ್ವಲ್ಪವಾದರು ದಯೆ ಬರುವುದಿಲ್ಲವೆ? ತಮ್ಮ ಸೈನಿಕನು ಮಾಡುವ ಭೀಭತ್ಸವನ್ನು ಮಾಡಬೇಡವೆಂದು, ತಮ್ಮ ಸೈನಿಕನಾದ ಮೇಘಕ್ಕೆ ಹೇಳುವುದಿಲ್ಲವೆ?" ಎಂದು ಕೇಳಬಹುದು. ಅದಕ್ಕೆ ದೇವರು ಈ ವಿಧವಾಗಿ ಸಮಾಧಾನ ಹೇಳಬಹುದೆಂದು ಅಂದುಕೊಳ್ಳುತ್ತೇನೆ. "ನನ್ನನ್ನು ಭಕ್ತಿಯಿಂದ ಬೇಡಿಕೊಳ್ಳಬೇಕೆಂದು ಭಗವದ್ಗೀತೆಯಲ್ಲಿ ಹೇಳಿದ್ದೇನೆ ಆದರೆ, ಭಯದಿಂದ ಬೇಡಿಕೊಳ್ಳಬೇಕೆಂದು ನಾನು ಎಲ್ಲಿಯು ಹೇಳಲಿಲ್ಲ. ಭಯ ಪರಧರ್ಮವೆಂದು ಅದು ನನ್ನ ಧರ್ಮವೆ ಅಲ್ಲವೆಂದು, ಅದು ನಿಮಗೆ ಅಜ್ಞಾನವನ್ನೇ ಕೊಡುತ್ತದೆಂದು, ಪರಧರ್ಮವಾದ ಭಯಕ್ಕಿಂತ, ಸ್ವಧರ್ಮದಲ್ಲಿ ಮರಣವಾದರು ಒಳ್ಳೆಯದೆ ಎಂದು ಭಗವದ್ಗೀತೆಯಲ್ಲಿ ಕರ್ಮಯೋಗದಲ್ಲಿ 35 ನೇ ಶ್ಲೋಕದಲ್ಲಿ ಹೇಳಿದ್ದೇನೆಂದು ಮರೆಯಬೇಡ. ನಿನಗೆ ಅಭಿಷೇಕಗಳು ಮಾಡಿಸಿದ್ದೇನೆ? ಎಲೆ ಪೂಜೆಗಳು ಕಟ್ಟಿಸಿದ್ದೇನೆ? ಸಾವಿರ ಖರ್ಚು ಮಾಡಿ ಕುಂಕುಮಾರ್ಚನೆಗಳು, ಲಕ್ಷಗಳು ಖರ್ಚುಮಾಡಿ ತುಳಸಿ ಅರ್ಚನೆಗಳು, ಕೋಟಿ ಖರ್ಚು ಮಾಡಿ ಆಭರಣಗಳು, ಕಿರೀಟಗಳು ಮಾಡಿಸಿದ್ದೇನೆ? ನಮ್ಮ ಮೇಲೆ ಸ್ವಲ್ಪವಾದರು ದಯೆಬಾರದೆ? ನಮ್ಮನ್ನು ಕಾಪಾಡೆಯಾ? ಎಂದು ಕೆಲವರು ಅನ್ನುತ್ತಿದ್ದಾರೆ.

ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ನಾನು ಗುಣರಹಿತನೆಂದು ಗೀತೆಯಲ್ಲಿ ಹೇಳಿದ್ದೇನೆ. ನನಗೆ ಗುಣಗಳೇ ಇಲ್ಲದಿರುವಾಗ, ದಯಾಗುಣ ಹೇಗೆ ಬರುತ್ತದೆ? ಆದ್ದರಿಂದ ನನಗೆ ದಯೆಯಿಲ್ಲ. ನನ್ನ ಹಾಗೆ ನನ್ನ ಸೇವಕನಾದ ಮೇಘಕ್ಕು ದಯೆಯಿಲ್ಲ. ಎಲೆ ಪೂಜೆಗಳು, ಅರ್ಚನೆಗಳು, ಅಭಿಷೇಕಗಳು ಮಾಡಿಸಿದ್ದೇನೆಂದು ಕೇಳುವವರಿದ್ದಾರೆ. ಆ ಮಾತನ್ನು ನಾನು ಒಪ್ಪಿಕೊಳ್ಳುತ್ತೇನೆ. ನೀವು ಸಾವಿರ, ಲಕ್ಷಗಳು ಖರ್ಚು ಇಟ್ಟು ನನಗೆ ಅರ್ಚನೆಗಳು ಮಾಡಿಸುವಾಗ, ದೇವರು ಸರ್ವವ್ಯಾಪಿ ಸರ್ವಾಂತರ್ಯಾಮಿ ಎಂದು ಅಂದುಕೊಳ್ಳದೆ, ನಾನು ಗುಡಿಯಲ್ಲಿ ಮಾತ್ರ ಇರುವವನಂತೆ, ನನ್ನ ಎದುರುಗಡೆ ನಿಂತಿರುವವನು,

ಯಾವನೊ ಸಹ ತಿಳಿಯದ ಕುರುಡನಂತೆ ನನ್ನನ್ನು ಲೆಕ್ಕಹಾಕಿ, ನಾನು ಇಂತವನೆಂದು, ನಿನಗೆ ಪೂಜೆ ಮಾಡಿಸುತ್ತಿದ್ದೇನೆಂದು ನನಗೆ ತಿಳಿಯುವ ಹಾಗೆ, ನನ್ನದು ಇಂತಹ ವಂಶ, ಇಂತಹ ಗೋತ್ರ, ಇಂತಹ ನಾಮಧೇಯ ಎಂದು ನಿಮ್ಮ ಅಡ್ರಸ್ ಪೂಜಾರಿಯಿಂದ ಹೇಳಿಸುತ್ತೀರಾ? ಆಗಿರುವಾಗ ನೀನು ಯಾರೋ ತಿಳಿಯದ ನಾನು, ನಿನ್ನನ್ನು ರಕ್ಷಿಸುವುದಕ್ಕೆ ನೀನು ಕರೆದಾಗಲೆ ಬರಬೇಕೆಂದರೆ ಆಗುವುದಿಲ್ಲ. ಏಕೆ ಆಗುವುದಿಲ್ಲವೆಂದರೆ, ನಿನ್ನಹಾಗೆ ಬಹಳ ಜನ ಅಡ್ರಸ್‌ಗಳು ಹೇಳಿ ಹೋಗಿದ್ದಾರಲ್ಲ! ನಿನಗೆ ಪ್ರವಾಹ ಬಂದಾಗ, ನಿನಗಿಂತ ನೂರು ರೂಪಾಯಿಗಳು ಹೆಚ್ಚಿಗೆ ಖರ್ಚು ಮಾಡಿ ಪೂಜೆ ಮಾಡಿದವನ ಕೊಂಪೆ ಒತ್ತಿಕೊಂಡು ಅವನು ಕರೆಯುತ್ತಿದ್ದಾನೆ. ಅದೇ ಸಮಯದಲ್ಲಿಯೆ ಕೋಟಿಗಳು ಖರ್ಚು ಮಾಡಿ ಕಿರೀಟ ಮಾಡಿಸಿದವನು ಹೊಟ್ಟೆನೋವಿನಿಂದ ಬಾಧೆಪಡುತ್ತಾ ನನ್ನನ್ನು ಕಾಪಾಡು ಎನ್ನುತ್ತಿದ್ದಾನೆ. ಆಗಿರುವಾಗ ಯಾವನು ಹೆಚ್ಚಿನ ಖರ್ಚು ಇಟ್ಟಿದ್ದಾನೆಂದು ನಾನು ಸಹ ಲೆಕ್ಕ ನೋಡಿಕೊಂಡು ಕಡಿಮೆ ಖರ್ಚು ಇಟ್ಟವರನ್ನು ಬಿಟ್ಟು, ಹೆಚ್ಚಿನ ಖರ್ಚು ಇಟ್ಟವನ ಹತ್ತಿರಕ್ಕೆ ಹೋಗಬೇಕೆಂದರೆ ಅವನ ಅಡ್ರಸ್ ಹುಡುಕುತ್ತಾ ಹೋಗಬೇಕು. ಹೆಚ್ಚು ಕಡಿಮೆಗಳ ಲೆಕ್ಕ ನೋಡಿಕೊಂಡು ಹೋಗುವುದಕ್ಕೆ ಸ್ವಲ್ಪ ಸಮಯ, ಅವನು ಹೇಳಿದ ಅಡ್ರಸ್ ಹುಡುಕುತ್ತಾ ಹೋಗುವುದಕ್ಕೆ ಸ್ವಲ್ಪ ಸಮಯ ವೃಥಾ ಆಗುತ್ತದಲ್ಲವೆ! ಹಾಗೆ ಹುಡುಕುತ್ತಾ ಹೋದರು ಅವನು ಹೇಳಿದ ಅಡ್ರಸ್, ಗೋತ್ರ, ಹೆಸರು ಮಾತ್ರ ಇದೆ, ಮನೆನಂಬರು ಪೂಜಾರಿಗೆ ಹೇಳಿಲ್ಲ. ನಾನು ಗೋತ್ರ, ಹೆಸರನ್ನು ಹಿಡಿದುಕೊಂಡು ಹೋದರೆ ಅದೇ ಹೆಸರು, ಅದೇ ಗೋತ್ರ ಇರುವವರು ಹತ್ತು ಜನ ಇರುವಂತೆ ತಿಳಿದಿದೆ. ಮನೆನೆಂಬರ್ ಇಲ್ಲವಾದ್ದರಿಂದ ಅದೇ ಹೆಸರು, ಅದೇ ಗೋತ್ರವಿರುವ ಹತ್ತು ಜನರಲ್ಲಿ ಯಾವನಿಗೆ ಹೊಟ್ಟೆನೋವು ಇದೆಯೋ ಹೇಗೆ ತಿಳಿಯುತ್ತದೆ? ಹತ್ತು ಜನರಲ್ಲಿ ಯಾವನು ಕರೆದಿದ್ದಾನೊ ತಿಳಿಯದೆ ಹಿಂದಕ್ಕೆ ಬಂದಿದ್ದೇನೆ. ಆಗ ನೀವು ಅಡ್ರಸ್ ಹೇಳಿದರೂ, ಪೂರ್ತಿ ಮನೆನಂಬರೊಂದಿಗೆ ಸಹ ಹೇಳದೆ ಹೋಗಿರುವುದರಿಂದ, ನಾನು ಕೊನೆಗೆ ಹೊಟ್ಟೆನೋವು ಬಂದವನ ಹತ್ತಿರಕ್ಕೆ ಹೋಗಲಾರದೆ ಹೋದೆನು.

ನೀವು ನನ್ನನ್ನು ಕುರುಡನಂತೆ ಅಂದುಕೊಳ್ಳದೆ, ಸರ್ವವ್ಯಾಪಿಯಂತೆ ಲೆಕ್ಕಹಾಕಿ, ಆ ದಿನ ಗೋತ್ರ, ಹೆಸರು ಹೇಳದಂತೆ ಪೂಜೆ ಮಾಡಿದ್ದರೆ ಈ ದಿನ ನಾನು ಸಹ ಸುಲಭವಾಗಿ ನಿನ್ನಹತ್ತಿರವೇ ಇರುತ್ತಿದ್ದೆನು, ಹಾಗಲ್ಲದೆ ನನಗೆ ನಿಮ್ಮ ಅಡ್ರಸ್ ಹೇಳಿ ನನ್ನನ್ನು ಅವಮಾನಪಡಿಸುತ್ತಿದ್ದೀರ. ಅಂತಹ ನಿಮ್ಮನ್ನು ನಾನೇಕೆ ಕಾಪಾಡಬೇಕು? ನೀವು ಪೂಜೆ ಮಾಡಿದರೆ ಕಾಪಾಡುತ್ತೇನೆಂದು ನಾನು ಎಲ್ಲಿಯು ಹೇಳಿಲ್ಲ. ನನ್ನನ್ನು ಅರ್ಥದೊಂದಿಗೆ ಆರಾಧಿಸಿದರೆ ಅದರಿಂದ ಜ್ಞಾನ ಲಭಿಸುತ್ತದೆಂದು, ಜ್ಞಾನದಿಂದ ನಿಮ್ಮ ಕರ್ಮಗಳು ಹೋಗುವವೆಂದು, ಅದರಿಂದ ನೀವು ರಕ್ಷಿಸಲ್ಪಡುತ್ತೀರೆಂದು ಗೀತೆಯಲ್ಲಿ ಹೇಳಿದ್ದೇನೆ ಆದರೆ, ಅರ್ಥವಿಲ್ಲದ ಪೂಜೆಗಳು ಮಾಡಿದರೆ ನಿಮ್ಮನ್ನು ಕಾಪಾಡುತ್ತೇನೆಂದು ಹೇಳಿಲ್ಲ. ಆದ್ದರಿಂದ ನೀವು ಅರ್ಥ ತಿಳಿದು ಆರಾಧನೆಗಳು ಮಾಡಿರಿ. ಅರ್ಥ ತಿಳಿದು ಮಾಡಿದರೆ ಜ್ಞಾನಶಕ್ತಿ ಹೊಂದಿ ಅದರಿಂದ ನೀವು ಕಾಪಾಡಲ್ಪಡುತ್ತೀರ. ಆದರೆ ನನ್ನಿಂದ ಯಾರೂ ಕಾಪಾಡಲ್ಪಡುವುದಿಲ್ಲ. ನಾನು ಇಟ್ಟಿರುವ ಕಾನೂನಿನ ಪ್ರಕಾರ ನನ್ನ ಮೇಘಗಳು ಕೆಲಸವನ್ನು ಮಾಡುತ್ತಿವೆ. ಮೇಘಗಳು ಯಾರನ್ನು ಹಿಂಸಿಸಿದರೂ, ಸಾಯಿಸಿದರೂ ಅದು ನನ್ನ ಪಾಲನೆಯೊಳಗಿನ ಕಾನೂನುರೀತ್ಯ ನಡೆದಿರುವುದೇ ಆಗಲೀ ಬೇರೆಯಲ್ಲ.

ಮೇಘಗಳು ದ್ರವಪದಾರ್ಥವಾದ ನೀರಿನ ಮಳೆಯನ್ನಲ್ಲದೇ, ಘನ ಪದಾರ್ಥವಾದ ಮಂಜು ಅಥವಾ ಐಸ್ ತುಂಡುಗಳನ್ನಾಗಲಿ, ದೊಡ್ಡ ಮಂಜುಗಡ್ಡೆಗಳನ್ನಾಗಲಿ, ಮಂಜು ಪುಡಿಯನ್ನಾಗಲಿ ತಂದು ಕೆಳಗೆ ಹಾಕುವುದು ನಡೆಯುತ್ತಿದೆ. ಹೆಚ್ಚಾಗಿ ಶೀತಲ ಪ್ರಾಂತದಲ್ಲಿ ಮಂಜು ಪುಡಿ ಮೇಘಗಳಿಂದ ಬೀಳುತ್ತದೆ. ಉಷ್ಣ ಪ್ರಾಂತಗಳಲ್ಲಿ ಮಳೆಗಾಲದಲ್ಲಿ ಚಿಕ್ಕ ಚಿಕ್ಕ ಮಂಜಿನ ತುಣುಕುಗಳು ಬೀಳುತ್ತಿರುತ್ತವೆ. ಯಾವಾಗಲಾದರು ಅಪರೂಪವಾಗಿ ದೊಡ್ಡ ದೊಡ್ಡ ಮಂಜಿನ ಬಂಡೆಗಳು ಕೆಳಕ್ಕೆ ಬೀಳುವುದು ಸಹ ನಡೆಯುತ್ತಿದೆ. ಈ ಮಧ್ಯೆ ಕಾಲದಲ್ಲಿ ಮಂಜಿನ ತುಣುಕುಗಳ ಮಳೆ ಅಥವಾ ಆಲಿಕಲ್ಲುಗಳ ಮಳೆ ಹೆಚ್ಚಾಗಿ ಸುರಿದಿದೆ. ಮಳೆಯೊಂದಿಗೆ ಆಲಿಕಲ್ಲು ಮಂಜಿನ ತುಣುಕುಗಳು ಬೀಳುವುದನ್ನು ಆಲಿಕಲ್ಲುಗಳ

ಮಳೆ ಅನ್ನುತ್ತೇವೆ. ಆಲಿಕಲ್ಲುಗಳ ಮಳೆ ಬೀಳುವುದರಿಂದ ಬಾಳೆ ತೋಟಗಳು, ಪಪ್ಪಾಯಿ ತೋಟಗಳು ಹೆಚ್ಚಾಗಿ ನಷ್ಟ ಹೊಂದಿವೆ. ಅದರಿಂದ ರೈತರು ನಷ್ಟಹೋಗಿದ್ದಾರೆ. ಮೇಘದಿಂದ ಎಸೆದ ಮಂಜಿನ ತುಣುಕುಗಳು ಬುಲ್ಲೆಟ್‌ನಂತೆ (ಬಂದೂಕಿನ ಗುಂಡಿನ ಹಾಗೆ) ಬಾಳೆ ಗೊನೆಗಳನ್ನು ತಾಕಿದ್ದರಿಂದ ಬಾಳೆಕಾಯಿಗಳು ರಂಧ್ರಗಳು ಬಿದ್ದು ಸೀಳಿ ಹೋಗಿವೆ. ಹಾಗೆ ಪಪ್ಪಾಯಿ ಕಾಯಿಗಳು ರಂಧ್ರಗಳು ಬಿದ್ದುಹೋಗಿವೆ. ಹಸಿ ಬಾಳೆಕಾಯಿಗಳು, ಹಸಿ ಪಪ್ಪಾಯಿ ಕಾಯಿಗಳು ಗಟ್ಟಿಯಾಗಿದ್ದರು, ವೇಗವಾಗಿ ಬಂದು ತಗುಲಿದ ಆಲಿಕಲ್ಲುಗಳಿಂದ ಕಲ್ಲುಗಳಂತೆ ಗಟ್ಟಿಯಾಗಿದ್ದ ಕಾಯಿಗಳು ಸಹ ರಂಧ್ರಗಳು ಬಿದ್ದುಹೋಗಿವೆ. ಈ ವಿಧವಾಗಿ ಮಂಜಿನ ತುಣುಕುಗಳ ಮಳೆಯಿಂದ ಎಷ್ಟೋ ಬೆಳೆಗಳು ಪೂರ್ತಿಯಾಗಿ ನಾಶವಾಗಿ ರೈತರು ನಷ್ಟಹೋಗಿ, ನಾನಾ ಕಷ್ಟಗಳು ಪಡುವುದೇ ಅಲ್ಲದೆ ಸಾಲಗಳನ್ನು ತೀರಿಸಲಾರದೆ, ಆತ್ಮ ಹತ್ಯೆಗಳು ಮಾಡಿಕೊಳ್ಳುವಂತೆ ಮೇಘಗಳು ಮಾಡುತ್ತಿವೆ. ಈ ವರ್ಷ ಕರ್ನೂಲ್ ಜಿಲ್ಲೆಯಲ್ಲಿ ಸ್ಪೀಡ್ ಆಗಿ ಹೋಗುವ ಬಸ್ಸಿನ ಮೇಲೆ ಆಲಿಕಲ್ಲುಗಳ ಮಳೆ ಬಂದಿರುವುದರಿಂದ ಬಸ್ಸಿನ ಕನ್ನಡಿಗಳು ಒಡೆದು ಒಳಗಿನ ಪ್ರಯಾಣಿಕರಿಗೆ ಗಾಯಗಳಾಗಿ, ಆಸ್ಪತ್ರೆಗೆ ಹೋದಂತೆ ಟಿ.ವಿ.ಯಲ್ಲಿ ವಾರ್ತೆಯನ್ನು ನೋಡಿದ್ದೇನೆ. ಈ ವಿಧವಾಗಿ ಮೇಘಗಳು ಮಳೆಗಳು, ಪ್ರವಾಹ ರೂಪದಲ್ಲಿಯೆ ಅಲ್ಲದೆ, ಮಂಜು ತುಫಾನ್ ರೂಪದಲ್ಲಿಯು ಸಹ ಮನುಷ್ಯರನ್ನು ಕಷ್ಟಗಳ ಪಾಲು ಮಾಡುತ್ತಿವೆ. ಮಂಜು ಸುರಿಯುವುದರಿಂದ ಚಿಕ್ಕದಾರಿಗಳು, ದೊಡ್ಡ ರಹದಾರಿಗಳು ಊತುಕೊಂಡು ಕಾಣಿಸದಂತೆ ಹೋಗುವುದರಿಂದ, ರಸ್ತೆ ಮೇಲೆ ಹೋಗುವ ರವಾನೆ ವ್ಯವಸ್ಥೆಯೆಲ್ಲಾ ಸ್ಥಂಬಿಸಿ ಹೋಗುತ್ತದೆ. ಮನೆಗಳ ಮೇಲಿನ ಹೊದಿಕೆಗಳ ಮೇಲೆ ಮಂಜು ಬೀಳುವುದರಿಂದ ಮೇಲಿನ ಹೊದಿಕೆಗಳು ತೂಕದಿಂದ ಕೂಲಿಕೊಂಡು ಹೋಗುತ್ತಿವೆ. ಮಂಜಿನ ಪುಡಿ ಎಡಬಿಡದೆ ಸುರಿಯುವುದರಿಂದ ಮನೆಗಳು, ವಾಹನಗಳು, ರಸ್ತೆಗಳು, ಚಿಕ್ಕ ಚಿಕ್ಕ ಗಿಡಗಳು ಎಲ್ಲ ಮುಳುಗಿ ಹೋಗುತ್ತವೆ. ಆದ್ದರಿಂದ ಆ ಪ್ರಾಂತದ ಪ್ರಜೆಗಳು ಬೀಳುವ ಅವಸ್ಥೆಗಳು ವರ್ಣನಾತೀತ!

ತನ್ನ ಆಕಾರನ್ನು, ಪರಿಮಾಣವನ್ನು ಬದಲಾಯಿಸಿಕೊಳ್ಳುವ ಮೇಘಗಳು, ಕೆಲವು ಚದರ ಕಿಲೋಮೀಟರುಗಳ ಪರಿಧಿವರೆಗು ಆಕಾಶದಲ್ಲಿ ವಿಸ್ತರಿಸಿ ಕೊಂಡಿರುತ್ತವೆ. ಹಾಗೆ ವಿಸ್ತರಿಸಿಕೊಂಡ ಮೇಘಗಳ ಪರಿಧಿಯೊಳಗೆ ವಿಮಾನ ಗಳಾಗಲಿ, ಹೆಲಿಕ್ಯಾಪ್ಟರುಗಳಾಗಲಿ ಬಂದರೆ, ಕೆಲವನ್ನು ಏನು ಮಾಡದೆ ಬಿಟ್ಟು ಹಾಕುತ್ತವೆ. ಕೆಲವನ್ನು ಮಾತ್ರ, ತನ್ನ ಕೈಗಳಿಂದ ವಿಮಾನಗಳನ್ನು ಸಹ ಕೆಳಕ್ಕೆ ನೂಕುವುದರಿಂದ ವಿಮಾನಗಳನ್ನು ನಡೆಸುವವರಿಗೆ ವಿಮಾನ ಕಂಟ್ರೋಲ್ ಆಗದೆ ಏನು ನಡೆಯುತ್ತಿದೆಯೆಂದು ಪೈಲೆಟ್‌ಗಳಿಗೆ ಅರ್ಥವಾಗದೆ ಹೋಗುತ್ತದೆ. ಅವರು ಎಚ್ಚೆತ್ತುಕೊಳ್ಳುವುದರೊಳಗೆ ವಿಮಾನ ಕೆಳಗೆ ಬಿದ್ದು ಅಪಘಾತ ನಡೆದು ಹೋಗುತ್ತದೆ. ಈ ಮಧ್ಯೆ ಕಾಲದಲ್ಲಿ ಮೇಘಗಳು ವಿಮಾನಗಳನ್ನು ಕೆಳಕ್ಕೆ ತಳ್ಳುವುದು ಅಲ್ಲಲ್ಲಿ ನಡೆದಿದೆ. ಅಷ್ಟೇ ಅಲ್ಲದೆ ಆಂಧ್ರಪ್ರದೇಶದ ಮುಖ್ಯಮಂತ್ರಿ ರಾಜಶೇಖರ ರೆಡ್ಡಿ ಯವರು ಪ್ರಯಾಣಿಸುತ್ತಿದ್ದ ಹೆಲಿಕ್ಯಾಫ್ಟರ್ ಸಹ ಮೇಘಗಳಿಂದಲೆ ಅಪಘಾತಕ್ಕೆ ಗುರಿಯಾಗಿದೆಯೆಂದು, ಮೇಘಗಳು ಕೆಳಕ್ಕೆ ತಳ್ಳಿರುವುದರಿಂದ ಹೆಲಿಕ್ಯಾಪ್ಟರ್ ವೇಗವಾಗಿ ಕೆಳಕ್ಕೆ ಬಂದು ಭೂಮಿಗೆ ಬಡಿದುಕೊಂಡಿದೆಯೆಂದು ಪರಿಶೋಧನೆಯಲ್ಲಿಯೆ ತೇಲಿದೆ. ಅಷ್ಟೇ ಅಲ್ಲದೆ ಆಂಧ್ರ ಯೂನಿವರ್ಸಿಟಿಯಲ್ಲಿ ಮೇಘಗಳನ್ನು ಕುರಿತು ರೀಸರ್ಚ್ ಮಾಡುವ ಪ್ರೊಫೆಸರ್ "ಕ್ಯೂಮಲ್ ನಿಂಬಸ್" ಮೇಘಗಳು ಅಪಾಯಕರವಾದವುಗಳೆಂದು, ಅವು ವಿಮಾನಗಳನ್ನು ಸಹಿತ ಕೆಳಕ್ಕೆ ತಳ್ಳುವಂತಹುಗಳೆಂದು ಅವುಗಳನ್ನೆ ರಾಕ್ಷಸ ಮೇಘಗಳನ್ನುತ್ತೇವೆಂದು ನ್ಯೂಸ್ ಪೇಪರ್‌ನಲ್ಲಿ ಪ್ರಕಟಿಸಿದ್ದಾರೆ.

ಮೇಘಗಳು ಮಳೆಗಳ, ಪ್ರವಾಹಗಳ ರೂಪದಲ್ಲಿಯೇ ಅಲ್ಲದೆ, ಆಲಿಕಲ್ಲುಗಳ ಮಳೆಯರೂಪದಲ್ಲಿ, ಮಂಜಿನಪುಡಿ ತುಫಾನ್ ರೂಪದಲ್ಲಿಯೋ, ಆಕಾಶದಲ್ಲಿ ಕ್ಯೂಮುಲ್‌ನಿಂಬಸ್ ಮೇಘಗಳ ರೂಪದಲ್ಲಿ ಮನುಷ್ಯರನ್ನು ಎಷ್ಟೊ ಕಷ್ಟಗಳ ಪಾಲು ಮಾಡುತ್ತಿವೆ. ಅಷ್ಟೇ ಅಲ್ಲದೆ ಕೆಲವು ವಿದೇಶಗಳಲ್ಲಿ ಸುಳಿಮೇಘಗಳ ರೂಪದಲ್ಲಿ ಸಹ ವಿಜೃಂಭಿಸುತ್ತವೆ. ವಿದೇಶಗಳಲ್ಲಿ ಸುಳಿಮೇಘಗಳನ್ನು ಬಹುಶ ನ್ಯಾಷನಲ್ ಜಿಯೊಗ್ರಫಿ ಟಿ.ವಿ. ಛಾನಲ್‌ಗಳಲ್ಲಾಗಲಿ,

ಡಿಸ್ಕವರಿ ಛಾನಲ್‌ಗಳಲ್ಲಾಗಲಿ ನೋಡಬಹುದು. ಬಹಳ ಜನ ಸುಳಿಮೇಘಗಳನ್ನು, ಸುಳಿಗಾಳಿಯಂತೆ ಅಂದುಕೊಳ್ಳುವುದು ನಡೆಯುತ್ತಿದೆ. ಆದರೆ ಅದು ಸುಳಿಗಾಳಿ ಅಲ್ಲ, ಗಾಳಿಯ ಹಾಗೆ ಕೆಲಸ ಮಾಡುವುದರಿಂದ ಸುಳಿಮೇಘಗಳನ್ನು ಸುಳಿ ಗಾಳಿಯಂತೆ ಬಹಳ ಜನ ತಪ್ಪಾಗಿ ಅಂದುಕೊಳ್ಳುವುದು ನಡೆಯುತ್ತಿದೆ. ಸುಳಿ ಮೇಘವನ್ನು ಕುರಿತು ಹೇಳಿಕೊಂಡರೆ ಆಕಾಶದಲ್ಲಿ ಅದೃಶ್ಯವಾಗಿರುವ ಸುಳಿಮೇಘವು ದೃಶ್ಯರೂಪದೊಳಗೆ ಬದಲಾಗಿ, ಹತ್ತರಿಂದ ಇಪ್ಪತ್ತು ಎಕರೆಗಳ ವಿಸ್ತೀರ್ಣವಾಗಿ ವಿಸ್ತರಿಸಿ ಅಲ್ಲಿಂದ ಕೆಳಕ್ಕೆ ವ್ಯಾಪಿಸುವುದು. ಮೇಲೆ ಹತ್ತು ಎಕರೆಗಳ ವಿಸ್ತೀರ್ಣವಿರುವ ಮೇಘವು ಕೆಳಕ್ಕೆ ಬರುವ ಹೊತ್ತಿಗೆ ಸುಮಾರು ನಾಲ್ಕರಷ್ಟು ವಿಸ್ತೀರ್ಣವಾಗಿ ತಯಾರಾಗುತ್ತದೆ. ಮೇಲೆ ಹತ್ತು ಎಕರೆಗಳ ವಿಸ್ತೀರ್ಣದಂತೆ ಕಾಣಸುತ್ತಾ, ಕೆಳಕ್ಕೆ ವಿಸ್ತೀರ್ಣವ್ಯಾಸ ಕಡಿಮೆಯಾಗುತ್ತಾ ಭೂಮಿ ಮೇಲೆ ಬರುವ ಹೊತ್ತಿಗೆ ಎರಡು ಅಥವಾ ಎರಡೂವರೆ ಎಕರೆಗಳ ವಿಸ್ತೀರ್ಣದಂತೆ ಇರುವುದು. ಮೇಲೆ ಅಗಲವಾಗಿ ಕಾಣಿಸುತ್ತಿರುವ ಮೇಘವು ಕೆಳಗೆ ಭೂಮಿಮೇಲೆ ಆಕಾರ ಕಡಿಮೆ ಅಗಲವಾಗಿ ಕಾಣಿಸುವುದು. ಹಾಗೆ ಕಾಣಿಸುವ ಆಕಾರ ಮುಂದಕ್ಕೆ ಚಲಿಸುತ್ತಾ ಬರುತ್ತಿರುತ್ತದೆ, ಗಂಟೆಗೆ ಹತ್ತರಿಂದ ಇಪ್ಪತ್ತು ಕಿಲೋಮೀಟರುಗಳ ವೇಗದಿಂದ ಸುಳಿಮೇಘ ಮುಂದಕ್ಕೆ ಚಲಿಸುತ್ತಾ ಹೋಗುತ್ತಿರುತ್ತದೆ. ಹಾಗೆ ಚಲಿಸುತ್ತಿರುವ ಮೇಘವು, ಕೆಲವು ಊರುಗಳ ಮೇಲೆ ಪ್ರಯಾಣಿಸುವುದು ನಡೆಯುತ್ತಿದೆ.

ಸುಳಿಮೇಘವು ಮೇಲಿಂದ ಕೆಳಗೆ ಭೂಮಿವರೆಗು ಇರುತ್ತದಲ್ಲವೆ! ಕೆಳಗೆ ಭೂಮಿಯನ್ನು ತಾಕಿದಕೊನೆ, ಎರಡು ಮೂರು ಎಕರೆಗಳ ವಿಸ್ತೀರ್ಣವಾಗಿದ್ದೂ ವೇಗವಾಗಿ ಸುಳಿ ತಿರುಗುತ್ತಿರುತ್ತದೆ. ಮೇಘವು ಕೆಳಗಿನಕೊನೆ, ಸುಳಿ ತಿರುಗುವುದರಿಂದ ಭೂಮಿಮೇಲೆ ಏನಿದ್ದರೂ, ಅದು ಮೇಘದವೊಂದು ಬಲಕ್ಕೆ ಸಹಿಸಿಕೊಳ್ಳಲಾಗದೆ ಮೇಘದ ಜೊತೆಗೆ ತಿರುಗುತ್ತಾ ಮೇಲಕ್ಕೆ ಎಗರುವುದು, ಹಾಗೆ ಸುಳಿ ಮೇಘದಲ್ಲಿ ಸಿಲುಕಿಕೊಂಡ, ಚಿಕ್ಕ ಚಿಕ್ಕ ಕಾರುಗಳು ಸಹ ಗಿರ್ರೆಂದು ತಿರುಗುತ್ತಾ ಮೇಲಕ್ಕೆ ಎದ್ದು, ಸುಳಿ ವ್ಯಾಸದವೊಂದು ಅಂಚಿನ ಹತ್ತಿರದಿಂದ

ಬಿಸಾಡಲ್ಪಡುತ್ತಿದೆ. ಉದಾಹರಣೆಗೆ ಕೋಳಿ ಫಾರಮ್‌ನ್ನು ನಿರ್ವಹಿಸುವ ಕಬ್ಬಿಣದ ಸೀಟುಗಳ ಷಡ್ ಆಗಲಿ, ಸಿಮೆಂಟ್ ಸೀಟುಗಳ ಷಡ್ ಆಗಲಿ ಸುಳಿಮೇಘವು ಪ್ರಯಾಣಿಸುವ ದಾರಿಯಲ್ಲಿ ಇದೆಯೆಂದುಕೊಳ್ಳೋಣ. ಸುಳಿ ಮೇಘ ಆ ಷಡ್‌ಗಳ ಮೇಲಕ್ಕೆ ಬರುತ್ತಲೆ, ಮೇಘವು ಸುಳಿ ತಿರುಗುವ ವೇಗಕ್ಕು ಮತ್ತು ಬಲಕ್ಕು, ಷಡ್‌ಮೇಲೆ ಇರುವ ಸೀಟುಗಳು ಮೇಲಕ್ಕೆ ಎದ್ದು ಮೇಘದಲ್ಲಿ ತೇಲಿಹೊಗುತ್ತಾ, ಸುಳಿ ತಿರುಗುತ್ತಾ ಬಿಸಾಡಿದಂತೆ ದೂರದಲ್ಲಿ ಬೀಳುತ್ತವೆ. ಮೇಘವು ಚಲಿಸಿ ಹೋಗುವಕಾಲದಿ ದಾರಿಯಲ್ಲಿರುವ ಯಾವುವಾದರು ತೇಲುವ ವಸ್ತುಗಳಿಂದ, ತೂಕದ ವಸ್ತುಗಳವರೆಗು ಕಿತ್ತು ತಿರುವಿ ಬಿಸಾಡುವುದು ನಡೆಯುತ್ತಿರುತ್ತದೆ. ಸುಳಿ ಮೇಘವು ಎಲ್ಲಿಗೆ ಬಂದರೂ ವಿಧ್ವಂಸ ನಡೆದಂತೆ ಆಗುತ್ತದೆ. ಆ ಮೇಘವನ್ನು ದೂರದಿಂದ ಗಮನಿಸಿದ ಮನುಷ್ಯರು, ಅದರಲ್ಲಿ ಸಿಲುಕಿಕೊಳ್ಳದೆ ಮನೆಗಳನ್ನು ಬಿಟ್ಟು ಓಡಿಹೋಗುವರು. ಆ ಮೇಘದಲ್ಲಿ ಸಿಲುಕಿಕೊಂಡ ಪಶುಗಳು ಸಹ ನೂರು ಅಡಿಗಳು ಮೇಲಕ್ಕೆದ್ದು, ಮೇಘದಲ್ಲಿ ಗಿರ್ರೆಂದು ತಿರುಗುವುದನ್ನು ಟಿ.ವಿ ಛಾನಲ್‌ಗಳಲ್ಲಿ ನೋಡಲಾಗಿದೆ. ಒಂದು ಊರಿನಮೇಲೆ ಆ ಮೇಘವು ಪ್ರಯಾಣಿಸಿ ಹೋದ ನಂತರ, ಆ ಊರನ್ನು ನೋಡಿದರೆ ಪೊರಕೆಯಿಂದ ಗುಡಿಸಿದ ಹಾಗೆ ಮೇಲ್ ಹೊದಿಕೆಗಳು ಬಿದ್ದು ಹೋದ ಮನೆಗಳು, ಚೆಲ್ಲಾ ಪಿಲ್ಲಿಯಾಗಿ ಬಿದ್ದ ವಾಹನಗಳು ಮೊದಲಾದವುಗಳು ಭಯಂಕರವಾಗಿ ಕಾಣಿಸುವವು. ನಿನ್ನೆಯ ದಿನ ಒಂದು ದೇಶದಲ್ಲಿ ಸುಳಿಮೇಘ ಪ್ರಯಾಣಿಸುವುದನ್ನು ಟಿ.ವಿ. ಛಾನಲ್‌ನಲ್ಲಿ ನೋಡಿದ್ದೇನೆ. ಅದು ಪ್ರಯಾಣಿಸದ ಮೊದಲು ವಿಮಾನಗಳನ್ನು ರಿಪೇರು ಮಾಡುವ ದೊಡ್ಡ ಷಡ್‌ಗಳನ್ನು ದೂರದಿಂದ ತೋರಿಸಿದರು. ಆ ಮೇಘವು ಆ ಷಡ್‌ಮೇಲೆ ಬಂದಾಗ, ಮೇಲಿನ ಹೊದಿಕೆಗಳು ಸುಳಿ ತಿರುಗುತ್ತಾ, ಮೇಘದಲ್ಲಿ ಎದ್ದು ಹೋಗುವುದು. ಗಿರ್ರೆಂದು ತಿರುಗುತ್ತಾ ದೂರದಲ್ಲಿ ಮೇಲಿಂದ ಬಿಸಾಡಿದ ಹಾಗೆ ಬಿದ್ದು ಹೋಗುವುದನ್ನು ಪ್ರತ್ಯಕ್ಷವಾಗಿ ಕಾಣಿಸುತ್ತಾ ಇದೆ. ಸುಳಿಮೇಘವು ಆ ಪ್ರಾಂತವನ್ನು ದಾಟಿಹೋದ ನಂತರ ಅಲ್ಲಿಗೆ ಹೋಗಿ ಆ ದೃಶ್ಯಗಳನ್ನು ತೋರಿಸಿದಾಗ ಷಡ್‌ಗಳಲ್ಲಿ ನಿಂತಿರುವ ವಿಮಾನಗಳ ರೆಕ್ಕೆಗಳು ಮುರಿದು

ಹೋಗಿವೆ. ಕೆಲವು ವಿಮಾನಗಳು ಪಕ್ಕಕ್ಕೆ ತಿರುಗಿ ಬಿದ್ದಿವೆ. ನೋಡುವುದಕ್ಕೆ ಯಾರಾದರು ದೊಡ್ಡ ರೌಡಿಗುಂಪು ಕೆಲವು ನೂರು ಜನ ರೌಡಿಗಳ ಗುಂಪು ಬಂದು ವಿಧ್ವಂಸ ಮಾಡಿದಂತೆ, ಎಲ್ಲವನ್ನು ಹೊಡೆದು ಹಾಕಿದಂತೆ ಕಾಣಿಸುತ್ತದೆ. ಸುಳಿಮೇಘವು ಗಾಳಿ ಸುಳಿ ತಿರುಗಿದ ಹಾಗೆ, ಗಾಳಿಯಲ್ಲಿ ವಸ್ತುಗಳು ಎದ್ದುಹೋದಹಾಗೆ, ತೇಲಿ ಹೋದ ಹಾಗೆ ಮಾಡುತ್ತಿದೆ. ಆದ್ದರಿಂದ ವಾಸ್ತವಕ್ಕೆ ಅದು ಮೇಘವೆ ಆದರೂ, ಬಹಳ ಜನ ಅದನ್ನು ಸುಳಿಗಾಳಿ ಎಂದು ಅಂದುಕೊಳ್ಳುವುದು ನಡೆಯುತ್ತಿದೆ.

ಮೇಘ ಎನ್ನುವುದು ಒಂದೇ ಆದರೂ ಮಾನವನು ಮಾಡಿಕೊಂಡ ಪಾಪವನ್ನು ಅನುಸರಿಸಿ ಅದು ಐದು ವಿಧಗಳಾಗಿ ಕೆಲಸವನ್ನು ಮಾಡುತ್ತಾ ಐದು ವಿಧಗಳ ಹೆಸರುಗಳನ್ನು ಹೊಂದಿದೆ. 1. ಮಳೆಯನ್ನು ಸುರಿಸುವಾಗ ಮಳೆ ಮೇಘ ಎನ್ನುತ್ತೇವೆ. 2. ಮಂಜಿನ ತುಣುಕುಗಳು ಬೀಳುವಾಗ ಆಲಿಕಲ್ಲುಗಳ ಮೇಘ ಎನ್ನುತ್ತೇವೆ. 3. ಪುಡಿ ಮಂಜು ಬೀಳುವಾಗ ಮಂಜಿನ ಮೇಘ ಎನ್ನುತ್ತೇವೆ. 4. ವಿಮಾನಗಳನ್ನು ತಳ್ಳುವಾಗ ಮಬ್ಬಿನಮೇಘ ಎಂದು ನಾವು ಕರೆಯುತ್ತೇವೆ. ಶಾಸ್ತ್ರಜ್ಞರು ರಾಕ್ಷಸ ಮೇಘ ಅಥವಾ ಕ್ಯುಮುಲೊನಿಂಬಸ್ ಮೇಘ ಎಂದು ಕರೆಯುತ್ತಾರೆ. 5. ಸುಳಿಗಾಳಿಯಂತೆ ಪ್ರಯಾಣಿಸುತ್ತ ದೊರಕಿದ ವಸ್ತುಗಳೆಲ್ಲವನ್ನು ಮೇಲಕ್ಕೆ ಎತ್ತಿ ಬಿಸಾಡುವ ಮೇಘವನ್ನು ಸುಳಿಮೇಘ ಎನ್ನುತ್ತೇವೆ. ಐದು ವಿಧಗಳ ಹೆಸರುಗಳು ಹೊಂದಿ ಐದು ವಿಧಗಳಾಗಿ ಮೇಘವು, ಮನುಷ್ಯರನ್ನು ಚಿತ್ರಹಿಂಸೆಗಳ ಪಾಲು ಮಾಡುವುದೆ ಅಲ್ಲದೆ ಘೋರವಾಗಿ ಮನುಷ್ಯರನ್ನು ಸಾಯಿಸಿಹಾಕುತ್ತಿದೆ. ಎಲ್ಲೋ ಯಮಲೋಕವಿದೆಯೆಂದು ಹೇಳಿಕೊಳ್ಳುವುದು ಹೊರತು ಅದನ್ನು ಯಾರು ನೋಡಲಿಲ್ಲ. ಆದರೆ ನಾವು ಇಲ್ಲಿಯೇ ಯಮಲೋಕವಿದೆಯೆಂದು ಹೇಳಿದರೂ, ವಾಸ್ತವವನ್ನು ಯಾರೂ ಗ್ರಹಿಸದೆ ಇದ್ದಾರೆ. ಯಮಲೋಕದಲ್ಲಿ ಮನುಷ್ಯನ ಪಾಪ ಚಿತ್ರಗುಪ್ತನಿಂದ ಲೆಕ್ಕಹಾಕಲ್ಪಟ್ಟು ಚಿತ್ರಗುಪ್ತನು ಹೇಳಿದ ಲೀಸ್ಟಿನ ಪ್ರಕಾರ ಅನುಭವಿಸಬೇಕಾಗಿದೆ. ಅದನ್ನು ಅನುಭವಿಸುವಂತೆ ಮಾಡುವವರು ಯಮಕಿಂಕರರು. ಯಮಧರ್ಮರಾಜನ

ರಾಜ್ಯದಲ್ಲಿ, ಯಮಕಿಂಕರರಿಂದ, ಪಾಪಿಗಳಾದ ಪ್ರಜೆಗಳನ್ನು ಪಾಲಿಸುವುದು ನಡೆಯುತ್ತಿದೆ.

ಪೂರ್ವದಲ್ಲಿ ವ್ಯಾಸನು ಯಮಲೋಕ ಎನ್ನುವುದನ್ನು ಗರುಡ ಪುರಾಣದಲ್ಲಿ ಹೇಳಿದರೂ, ಈಗ ಪ್ರಬೋಧಾನಂದ ಯೋಗೀಶ್ವರರು ಯಮಲೋಕ ಎನ್ನುವುದು ಬ್ರಹ್ಮವಿದ್ಯಾಶಾಸ್ತ್ರದಲ್ಲಿ ಇದೆಯೆಂದು ಹೇಳಿದರೂ, ಯಮಲೋಕವನ್ನು ಪರಿಶೀಲಿಸಿದರೆ ಮೂರು ಮುಖ್ಯವಾದ ಭಾಗಗಳು ತಿಳಿಯುತ್ತಿವೆ. ಒಂದು ಯಮಧರ್ಮರಾಜ, ಎರಡನೆಯದು ಯಮಕಿಂಖರರು, ಮೂರು ಪ್ರಜೆಗಳು ಅಥವಾ ಜೀವಿಗಳು. ಅದನ್ನೇ ಒಂದು ಪ್ರಭು, ಎರಡನೆಯದು ಪಾಲಕರು, ಮೂರನೆಯದು ಪಾಲಿಸಲ್ಪಡುವವರು ಎಂದು ಅನ್ನಬಹುದು. ಇಲ್ಲಿ ಪ್ರಭು ಯಾರು? ಪಾಲಕರು ಯಾರು? ಪಾಲಿಸಲ್ಪಡುವವರು ಯಾರು ಎಂದು ಪ್ರಶ್ನಿಸಿಕೊಂಡಂತಾದರೆ, ಪ್ರಭು ಯಮಧರ್ಮರಾಜ, ಪಾಲಕರು ಯಮಕಿಂಕರರು, ಪಾಲಿಸಲ್ಪಡುವವರು ಜೀವಿಗಳು ಎಂದು ಹೇಳಬಹುದು. ಯಮ ಧರ್ಮರಾಜ, ಯಮಕಿಂಕರರು ಎನ್ನುವ ಹೆಸರುಗಳಲ್ಲಿ ಎರಡರಲ್ಲಿ "ಯಮ" ಎನ್ನುವ ಪದವನ್ನು ತೆಗೆದುಹಾಕಿದರೆ, ಉಳಿಯುವುದು ಮೊದಲು ಧರ್ಮರಾಜ, ನಂತರ ಕಿಂಕರರು. ಕಿಂಕರರು ಎಂದರೆ ಸೈನಿಕರು ಎಂದು ಹೇಳಬಹುದು. ಮತ್ತು ಸೇವಕರು ಎಂದು ಹೇಳಬಹುದು. ಸೇವಕರಾಗಲಿ, ಸೈನಿಕರಾಗಲಿ, ರಾಜನ ಕೆಳಗೆ ರಾಜನ ಅಧೀನದಲ್ಲಿ ಕೆಲಸ ಮಾಡುವವರು ಆಗಿರುವಾಗ ರಾಜ, ಕಿಂಕರರು ಎಂದರೆ ಸರಿಹೋಗುತ್ತದೆ. ಆದರೆ ರಾಜನ ಮುಂದೆ "ಧರ್ಮ" ಎನ್ನುವ ಪದ ಒಂದು ಪ್ರತ್ಯೇಕವಾಗಿ ಇದೆ. ಯಾವ ದೇಶದಲ್ಲಿಯಾದರು, ಯಾವ ರಾಜ್ಯದಲ್ಲಿಯಾದರು ರಾಜ ಇರುತ್ತಾನೆ. ರಾಜ ಎನ್ನುವ ಪದದ ಮುಂದೆ ಏನು ಇರುವುದಿಲ್ಲ. ಆದರೆ ಇಲ್ಲಿ ರಾಜನ ಮುಂದೆ "ಧರ್ಮ" ಎನ್ನುವ ಪ್ರತ್ಯೇಕವಾದ ಪದ ಏಕಿದೆ ಎಂದು ಯೋಚಿಸಬೇಕಾದ ಅವಶ್ಯವಿದೆ. "ಧರ್ಮ" ಎನ್ನುವ ಪದಕ್ಕೆ ಹತ್ತಿರವಾಗಿ ಸರಿಹೋಗುವ ಪದ "ನಿಬಂಧನೆ". ನಿಬಂಧನೆ ಎಂದರೆ ಬಂಧವಿಲ್ಲದ್ದು (ಬಂಧಿಸಲ್ಪಡದಿರುವುದು)

ಎಂದು ಅರ್ಥ. ಪ್ರಪಂಚದಲ್ಲಿನ ಬಂಧನಗಳಿಗೆಲ್ಲ ದೊಡ್ಡ ಬಂಧ "ಕರ್ಮಬಂಧ" ಕರ್ಮದಿಂದ ಬಂಧಿಸಲ್ಪಡದಿರುವವನು ಅಥವಾ ಕರ್ಮಬಂಧ ಇಲ್ಲದವನು ದೇವರನ್ನು ಹೊರತು ಬೇರೆ ಯಾರೂ ಇಲ್ಲ. ಆದ್ದರಿಂದ ದೇವರನ್ನು ರಾಜ ಎಂದು ಹೇಳಿದಾಗ ಆತನು ಎಲ್ಲರ ರಾಜನಂತವನಲ್ಲ, ಈ ರಾಜ ಪ್ರತ್ಯೇಕವಾದವನೆಂದು ಹೇಳುತ್ತಾ, ಆ ಪ್ರತ್ಯೇಕತೆ ಏನೊ ಎಲ್ಲರಿಗು ತಿಳಿಯುವ ಹಾಗೆ "ಧರ್ಮರಾಜ" ಎಂದಿದ್ದಾರೆ. ಗರುಡ ಪುರಾಣದಲ್ಲಿ ವ್ಯಾಸನು ಹೇಳಿದ ಯಮಧರ್ಮರಾಜ, ಎಲ್ಲೋ ಯಾರೂ ನೋಡದ ಯಮಲೋಕದಲ್ಲಿ ಇರುತ್ತಾನೆ. ಬ್ರಹ್ಮವಿದ್ಯೆಯಲ್ಲಿ ನಾವು ಹೇಳುವ ಯಮಧರ್ಮರಾಜ ನಮಗೆ ಕಾಣಿಸುವ ವಿಶ್ವದಲ್ಲಿಯೆ ಇದ್ದಾನೆ. ವ್ಯಾಸನು ಹೇಳಿದ ಗರುಡ ಪುರಾಣದಲ್ಲಿನ ಯಮಧರ್ಮರಾಜನನ್ನು ಕುರಿತು ತಿಳಿದುಕೊಂಡರೆ ಕಾಲಕ್ಷೇಪ ಆಗುತ್ತದೆ. ನಾವು ಹೇಳುವ ಯಮಧರ್ಮರಾಜನನ್ನು ಕುರಿತು ತಿಳಿದುಕೊಂಡರೆ ಕರ್ಮಕ್ಷೇಪವಾಗುತ್ತದೆ.

ಈಗ ನಮಗೆ ಕರ್ಮಕ್ಷೇಪವ (ಕರ್ಮನಾಶನವ)ನ್ನು ಕುರಿತಾದ ಯಮಧರ್ಮರಾಜನನ್ನು ಕುರಿತು ತಿಳಿದುಕೊಳ್ಳುವುದೇ ಮುಖ್ಯ. ಒಂದು ರಾಜ್ಯದಲ್ಲಿ ರಾಜ, ರಾಜನ ಕೆಳಗೆ ಕೆಲಸಮಾಡುವ ಸೈನಿಕರಾದ ಸೇವಕರಿರುತ್ತಾರೆ. ಇಲ್ಲಿ ನಾವು ಹೇಳಿಕೊಳ್ಳುವ ರಾಜ ಪ್ರತ್ಯೇಕತೆ ಹೊಂದಿದ್ದಾನೆ. ಆದ್ದರಿಂದ ರಾಜನನ್ನು ಧರ್ಮರಾಜ ಎನ್ನಲಾಗಿದೆ. ಇನ್ನೂ ಗಮನಿಸಿದರೆ ಧರ್ಮರಾಜನಿಗೆ ಮುಂದೆ ಮತ್ತು ಕಿಂಕರರಿಗೆ ಮುಂದೆ "ಯಮ" ಎನ್ನುವ ಪದವಿದೆ. ಇತ್ತ ಧರ್ಮರಾಜನ ಮುಂದೆ ಅತ್ತ ಕಿಂಕರರ ಮುಂದೆ ಇರುವುದರಲ್ಲಿ ಏನು ವಿಶೇಷವಿದೆಯೆಂದು ಯೋಚಿಸಿ ನೋಡಿದರೆ ಸ್ವಲ್ಪಮಟ್ಟಿಗೆ ಅರ್ಥವಾಗುತ್ತಿದೆ. ಅದೇನೆಂದರೆ! ಯಮ ಎಂದರೆ ದೊಡ್ಡದು ಎಂದು, ಹಿರಿಯ ಎಂದೂ ಹೇಳಬಹುದು. ಇದರ ಪ್ರಕಾರ ಯಮಧರ್ಮರಾಜ ಎಂದರೆ ದೊಡ್ಡ ಧರ್ಮರಾಜ ಎಂದು ಅರ್ಥ. ಹಾಗೆ ಯಮಕಿಂಕರರು ಎಂದರೆ ದೊಡ್ಡ ಕಿಂಕರರು ಎಂದು ಅರ್ಥ. ಎಲ್ಲದಕ್ಕಿಂತ ಮೀರಿದ ದೊಡ್ಡದು ಯವುದಾದರೆ ಇದೆಯೋ ಅದರ ಮುಂದೆ "ಯಮ"

ಎನ್ನುವ ಪದವನ್ನು ಬಳಸಬಹುದು. ವಿಶ್ವದಲ್ಲಿ ದೇವರಿಗಿಂತ ಮೀರಿದ ರಾಜ ಆಗಲಿ, ಭೂತಗಳಿಗಿಂತ ಮೀರಿದ ಕಿಂಕರರಾಗಲಿ ಇಲ್ಲ. ಆದ್ದರಿಂದ ದೇವರನ್ನು ಯಮಧರ್ಮರಾಜ ಎಂದು, ಭೂತಗಳನ್ನು ಯಮಕಿಂಕರರೆಂದು ಹೇಳಲಾಗಿದೆ. ಯಮ ಎಂದರೆ ದೊಡ್ಡದು ಎಂದಾಗ, ನಿಯಮ ಎಂದರೆ ಚಿಕ್ಕದೆಂದು ಅರ್ಥ. ಆದ್ದರಿಂದ ದೇವರನ್ನು ಯಮ ಇರುವವನೆಂದು, ನಿಯಮ ಇಲ್ಲದವನೆಂದು ಹೇಳಬಹುದು. ಆದ್ದರಿಂದ ಕೆಲವು ಕಡೆ ದೇವರನ್ನು ನಿಯಮನಿಷ್ಠೆ ಇಲ್ಲದವನೆಂದು ಹೇಳಿದ್ದಾರೆ. ಹಾಗೇ ಭೂತಗಳನ್ನು ನಿಯಮ ಇಲ್ಲದವುಗಳೆಂದು ಹೇಳಬಹುದು,

ವಿಶ್ವದಲ್ಲಿ ಬಲದಲ್ಲಾಗಲಿ, ಕೆಲಸಗಳು ಮಾಡುವುದರಲ್ಲಾಗಲಿ ಭೂತಗಳಿಗಿಂತ ಮೀರಿರುವವು ಇಲ್ಲ. ಆದ್ದರಿಂದ ಮಹಾಭೂತಗಳನ್ನಾಗಲಿ, ಸ್ವಲ್ಪಭೂತಗಳನ್ನಾಗಲಿ, ಉಪಭೂತಗಳನ್ನಾಗಲಿ ಯಮಕಿಂಕರರು ಎಂದು ಅನ್ನಬಹುದು. ಅನೇಕ ಉಪಭೂತಗಳಲ್ಲಿ, ಒಂದಾನೊಂದು ಆದ ಮೇಘ ಎನ್ನುವ ಭೂತ ಎಷ್ಟು ದೊಡ್ಡದೊ, ಎಷ್ಟು ದೊಡ್ಡ ಬಲವಿರುವುದೊ ಹೇಳಿಕೊಂಡಿದ್ದೇವೆ. ಮೇಘ ಎನ್ನುವ ಭೂತಕ್ಕೆ ಕೆಲವು ಕೋಟಿ ಕೈಗಳಿವೆಯೆಂದು, ಆ ಕೈಗಳಿಗೆ ಬಲ ಲೆಕ್ಕವಿಲ್ಲದಷ್ಟು ಇದೆಯೆಂದು ಸಹ ಹೇಳಿದ್ದೇವೆ. ಯಮಕಿಂಕರರು ಅಂದಾಗ ಮೇಘಕ್ಕು ಸಹ "ಯಮ" ಎನ್ನುವ ಪದ ಅನ್ವಯಿಸುತ್ತದೆ. ಆದ್ದರಿಂದ ಮೇಘವನ್ನು ಮೀರಿದ ಬಲ, ಭೂಮಿಮೇಲೆ ಯಾವ ಜೀವರಾಶಿಗೆ ಇಲ್ಲವೆಂದು ಹೇಳಬಹುದು. ಮೇಘಕ್ಕಿರುವ ಬಲ ಯಾವ ಜೀವರಾಶಿಗೆ ಇಲ್ಲವೆಂದಾಗ, ಯಾವ ಜೀವರಾಶಿಗೆ ಉಪಯೋಗಪಡದ ಬಲ ಮೇಘಕ್ಕೆ ಉಪಯೋಗ ಪಟ್ಟಿದೆಯೆಂದು ಹೇಳಬಹುದು. ಉದಾಹರಣೆಗೆ ಹೋದ ವರ್ಷ ಚೈನಾದಲ್ಲಿ, ಒಂದು ಪ್ರಾಂತದಲ್ಲಿ ಅರವತ್ತು (60) ಲಕ್ಷಗಳ ಟನ್ನುಗಳ ಪುಡಿ ಮಂಜು ಸುರಿದಿದೆಯೆಂದು, ಮತ್ತೊಂದು ಕಡೆ ಎಂಬತ್ತು (80) ಲಕ್ಷ ಟನ್ನುಗಳ ಪುಡಿ ಮಂಜು ಸುರಿದಿದೆಯೆಂದು ವಾರ್ತೆಗಳಲ್ಲಿ ಹೇಳುವುದು, ತೋರಿಸುವುದು ನಡೆದಿದೆ, ಎರಡು ಪ್ರಾಂತಗಳಲ್ಲಿ ಸುರಿದ ಮಂಜಿನವೊಂದು ತೂಕವನ್ನು ನೋಡಿದರೆ, 140 ಲಕ್ಷಗಳ ಟನ್ನುಗಳು! ಇದನ್ನು ಅನುಸರಿಸಿ ನೋಡಿದರೆ

ಮೇಘಗಳ ಕೈಗಳಿಗೆ ಎಷ್ಟು ಬಲವಿದೆಯೊ ಹೇಳಲಾರೆವು. ಒಂದು ಲಾರಿಗೆ ಹತ್ತು ಟನ್ನು ತೂಕವನ್ನು ಹಾಕುತ್ತೇವೆ. ಆ ಲೆಕ್ಕ ಪ್ರಕಾರ ಮೇಘವು ಸುರಿದ ಪುಡಿಮಂಜು 14 ಲಕ್ಷ ಲಾರಿಗಳಿಗೆ ತುಂಬಬಹುದು. ಇದನ್ನು ಅನುಸರಿಸಿ ನೋಡಿದರೆ ಉಪಭೂತವಾದ ಮೇಘವನ್ನು ಯಮಕಿಂಕರನೆಂದು ಅನ್ನಬಹುದು.

ಯಮಲೋಕದಲ್ಲಿ ಯಮಕಿಂಕರರ ಬಾಧೆ ಇರುತ್ತದೆಂದು, ಅದು ಸತ್ತುಹೋದ ನಂತರ ಯಮಲೋಕದಲ್ಲಿ ಏರ್ಪಡುತ್ತದೆಂದು ಕೆಲವರು ಹಿಂದೂಗಳು ಹೇಳುತ್ತಿದ್ದಾರೆ. ಇತರ ಮತದವರು ಕೆಲವರು, ಪ್ರಳಯಾಂತದವರೆಗು ಸತ್ತುಹೋದವರು ಸಮಾಧಿಗಳಲ್ಲಿಯೇ ಇರುತ್ತಾರೆಂದು, ಅಲ್ಲಿಯವರೆಗು ಪುನರ್ಜನ್ಮಗಳು ಇಲ್ಲವೆಂದು, ಮನುಷ್ಯ ಒಂದುಬಾರಿ ಹುಟ್ಟಿ ಒಂದೇಬಾರಿಗೆ ಸತ್ತುಹೋಗುತ್ತಾನೆಂದು, ಪ್ರಳಯ ಅಂತ್ಯದಲ್ಲಿ ದೇವರು ಅಲ್ಲಿಯವರೆಗು ಸತ್ತುಹೋಗಿ ಸಮಾಧಿಗಳಲ್ಲಿ ಇರುವವರೆಲ್ಲರನ್ನು ಎಬ್ಬಿಸಿ ಅವರು ಮಾಡಿದ ಪಾಪಗಳನ್ನು ವಿಚಾರಿಸಿ, ಅವರ ಪಾಪಗಳಿಗೆ ತಕ್ಕಹಾಗೆ ನರಕಕ್ಕೆ ಕಳುಹಿಸುವನೆಂದು ಹೇಳುತ್ತಿದ್ದಾರೆ. ಯಾರಿಗೆ ತಿಳಿದಿರುವುದು ಅವರು ಹೇಳಿಕೊಂಡರೂ, ನಡೆಯುತ್ತಿರುವ ಸತ್ಯ ಏನೆಂದು ನೋಡಿದರೆ, ಎಲ್ಲರಿಗು ತಿಳಿದಿರುವುದಕ್ಕಿಂತ, ಅವರು ಹೇಳಿಕೊಳ್ಳುವುದಕ್ಕಿಂತ, ನರಕ ವಿಭಿನ್ನವಾಗಿ ಇದೆಯೆಂದು ಹೇಳಬಹುದು. ಎಲ್ಲ ಮತಗಳ ಮನುಷ್ಯರಿಗೆ ದೇವರು ಅಥವಾ ಯಮಧರ್ಮರಾಜ ಒಬ್ಬನೇ ಆದರೆ, ಮನುಷ್ಯರೆಲ್ಲರಿಗು ಯಮಕಿಂಕರರು ಮಹಾ, ಸ್ವಲ್ಪ, ಉಪಭೂತಗಳೆಂದೆ ಹೇಳಬಹುದು. ಸತ್ತುಹೋದ ನಂತರ ಎಂದು ಹೇಳುವ ಹಿಂದೂಮತದಲ್ಲಿನ ಕೆಲವರ ಮಾತುಗಳು, ಯುಗಾಂತ ಅಥವಾ ಪ್ರಳಯದಲ್ಲಿ ಎಂದು ಹೇಳುವ ಇತರೆ ಮತಸ್ಥರ ಮಾತುಗಳು, ನರಕ, ಸ್ವರ್ಗ ಪ್ರತ್ಯೇಕಲೋಕಗಳೆಂದು ಅವು ಎಲ್ಲೋ ಮೇಲೆ ಇವೆಯೆಂದು ಹೇಳುವ ಎಲ್ಲ ಮತಗಳ ವಾದನೆಗಳನ್ನು ನೋಡಿದರೆ, ಮಾಯೆ ಅಥವಾ ಸಾತಾನ್ (ಸೈತಾನ್) ಎನ್ನುವುದು ಮನುಷ್ಯರಿಗೆ ಸತ್ಯ ತಿಳಿಯದಂತೆ ಹೇಗೆ ಮಾಡಿದೆಯೊ, ಎಷ್ಟು ಬಲದಿಂದ ಅವರ ಪ್ರಜ್ಞೆಯನ್ನು ಇಲ್ಲದಂತೆ ಮಾಡಿದೆಯೋ ಅರ್ಥವಾಗುತ್ತದೆ. ಮಾಯೆ ತನ್ನ ಫಥಕವನ್ನು

ಮನುಷ್ಯರಲ್ಲಿ, ಮನುಷ್ಯರಿಂದ ಹೇಗೆ ನಂಬಿಸಿದೆಯೊ ಅರ್ಥವಾಗುತ್ತಿದೆ. ಮಾಯೆ ಯಾರಿಂದ ತನ್ನ ಕಡೆ ಮನುಷ್ಯರನ್ನು ಮರಳಿಸಿಕೊಳ್ಳಬೇಕೊ, ಹಾಗೆ ಅವರಿಂದಲೆ ಮರಳಿಸಿಕೊಂಡಿದೆ. ಹಾಗೆ ಭವಿಷ್ಯತ್ತಿನಲ್ಲಿ ತನ್ನ ಮಾಯೆಯಿಂದ ಯಾವ ಮತಸ್ಥನು ಸಹ ಹೊರಬೀಳದಂತೆ, ತನಗೆ ತಿಳಿದಿರುವುದೆ ಸತ್ಯವೆಂದು ನಂಬಿ, ಕೊನೆಗೆ ದೇವರು ಹೇಳಿದರೂ, ದೇವರ ಮಾತನ್ನು ಸಹ ನಂಬದಂತೆ ಅವರ ತಲೆಯಲ್ಲಿ ಬದಲಾವಣೆ ಬಾರದಂತೆ, ಮನುಷ್ಯರಿಂದಲೆ ತನ್ನ ಬೋಧನೆಯನ್ನು ಮನುಷ್ಯರಿಗೆ ಏರಿಸಿದೆ. ಆದ್ದರಿಂದ ಯಮಲೋಕ, ಸ್ವರ್ಗಲೋಕ ಇಲ್ಲಿಯೇ ಇವೆಯೆಂದು ನಾವು ಹೇಳಿದರೂ, ಯಾರೂ ಕೇಳದ ಸ್ಥಿತಿಯಲ್ಲಿದ್ದಾರೆ. ದೇವರ ಮಾತನ್ನೇ ಕೇಳದವರು ನಮ್ಮಂತವರು ಹೇಳುವ ಮಾತನ್ನು ಕೇಳುತ್ತಾರೆನ್ನುವ ನಂಬಿಕೆ ಇಲ್ಲ. ಆದ್ದರಿಂದ ನಾವು ಎಷ್ಟು ಹೇಳಿದರೂ ಕೇಳದೆ ಸ್ವರ್ಗ, ನರಕ ಮೇಲೆ ಇವೆಯೆಂದು ನಮಗೆ ತಿರುಗಿ ಹೇಳುತ್ತಿದ್ದಾರೆ. ಯಾರು ಯಾವ ನಂಬಿಕೆ ಮೇಲಾದರು ಇರಬಹುದು. ಆದರೆ ಅವರು ನಂಬಿದ ನಂಬಿಕೆ, ಮೂಢನಂಬಿಕೆಯಾ ಅಥವಾ ಸರಿಯಾದ ನಂಬಿಕೆಯಾ ಎಂದು ನೋಡಿಕೊಳ್ಳಬೇಕಾಗಿರುವಾಗ, ಹಾಗೆ ಯಾರೂ ಮಾಡುತ್ತಿಲ್ಲ. ಅವರು ನಂಬುತ್ತಿರುವ ಸ್ವರ್ಗವನ್ನಾಗಲಿ, ನರಕವನ್ನಾಗಲಿ ಯಾರಾದರು ನೋಡಿದಿರಾ ಎಂದು ಹುಡುಕಿದರೂ, ಹಾಗೆ ನೋಡಿದವರು ಯಾರೂ ಇಲ್ಲ. ಹಾಗೆ ನೋಡದೆ ಹೋದರು ಒಂದು ವೇಳೆ ಅವರು ಹೇಳುವುದು ಶಾಸ್ತ್ರಬದ್ಧವಾ ಎಂದರೂ, ಹಾಗೆ ಶಾಸ್ತ್ರಕ್ಕೆ ಸಂಬಂಧಿಸಿದ ವಿಷಯವೆನ್ನುವುದಕ್ಕು ಸಹ ಅವಕಾಶವಿಲ್ಲ. ಇತ್ತ ಶಾಸ್ತ್ರಬದ್ಧವು ಅಲ್ಲದೆ, ಅತ್ತ ಯಾರೂ ನೋಡದೆ, ಯಾರೂ ಸಹ ಯಾವಮಾತ್ರಕ್ಕು ಅನುಭವಿಸದೆ, ಸ್ವರ್ಗಕ್ಕು ನರಕಕ್ಕು ನಡುವೆ ದೂರವೆಷ್ಟಿದೆಯೊ ತಿಳಿಯದೆ, ನೀನು ಪ್ರಸ್ತುತ ಅವುಗಳಿಗೆ ಎಷ್ಟು ದೂರದಲ್ಲಿ ಇದ್ದೀಯೊ ತಿಳಿಯದೆ, ಎಲ್ಲ ತಿಳಿದವನಂತೆ ಸ್ವರ್ಗವಿದೆ, ನರಕವಿದೆ. ಎರಡು ಮೇಲೆ ಇವೆಯೆಂದರೆ ನಾವು ಕುರುಡರಂತೆ ನಂಬಬೇಕಾ? ಹೇತುವಾದ ಪ್ರಶ್ನೆಗಳಿಗೆ ನಿಂತುಕೊಂಡು ಉತ್ತರಕೊಟ್ಟಾಗ, ಹೇಳುವ ವಿಷಯ ಶಾಸ್ತ್ರಬದ್ದವಾದಾಗ ಅದನ್ನು ವಿಶ್ವಾಸಿ

ಸಬಹುದು. ಆದರೆ ಅಸತ್ಯವಾದದ್ದನ್ನು ಜ್ಞಾನಿಗಳಾದವರು ಯಾರು ವಿಶ್ವಾಸಿಸುವುದಿಲ್ಲ.

ಭೂಮಿಮೇಲೆಯೆ ಪ್ರತ್ಯಕ್ಷ ಸ್ವರ್ಗ, ಪ್ರತ್ಯಕ್ಷ ನರಕ ಎರಡು ಇವೆ. ಸ್ವರ್ಗ ನರಕಗಳು ಎರಡೂ ಪಕ್ಕ ಪಕ್ಕದಲ್ಲೆ ಇವೆ. ಉದಾಹರಣೆಗೆ ಒಬ್ಬನು ರಂಭಗಿಂತ ಸುಂದರವಾದ ಹುಡುಗಿಯನ್ನು ನೋಡಿದ್ದಾನೆ. ಅವನು ಆ ಹುಡುಗಿಯನ್ನು ನೋಡಿದಾಗಿನಿಂದ ಆ ಹುಡಿಗಿಯೊಂದಿಗೆ ಸ್ನೇಹ ಮಾಡಬೇಕೆಂದು, ಆಕೆಯೊಂದಿಗೆ ಶರೀರ ಸುಖವನ್ನು ಅನುಭವಿಸಬೇಕೆಂದು ಕಳವಳಪಡುತ್ತಿದ್ದನು ಆದರೆ ಕೆಲವೇ ದಿನಗಳಿಗೆ ಆಕೆಯೊಂದಿಗೆ ಸ್ನೇಹ ಏರ್ಪಟ್ಟಿದೆ. ನಂತರ ಕೆಲವೆ ದಿನಗಳಿಗೆ ಎಲ್ಲ ವಿಧಗಳಲ್ಲಿ ಆತನ ಮಾತು ಕೇಳುವ ಸ್ಥಿತಿಗೆ ಆಕೆ ಬಂದಿದ್ದಾಳೆ. ಅಂತಹ ಅನುಕೂಲ ವಾತಾವರಣವನ್ನು ಗ್ರಹಿಸಿದ ಆತನು, ಆ ಹುಡುಗಿಗೆ ತನ್ನ ಕೋರಿಕೆಯನ್ನು ತಿಳಿಸಿದನು. ಆತನ ಕೋರಿಕೆಯನ್ನು ಕೇಳಿದ ಹುಡುಗಿ, ಯಾವ ಅಡಚಣೆಯನ್ನು ಹೇಳದೆ ನಕ್ಕು ಸುಮ್ಮನಿದ್ದಳು. ಆಗ ಆತನಿಗೆ ಗ್ರೀನ್ ಸಿಗ್ನಲ್ ಬಂದಂತಾಗಿದೆ. ಇದೆಲ್ಲಾ ಆತನಿಗೆ ಸಂತೋಷವನ್ನುಂಟು ಮಾಡಿದೆ. ಕೊನೆಗೆ ಒಂದು ದಿನ ಆ ಹುಡುಗಿಯೊಂದಿಗೆ ಶರೀರ ಸುಖವನ್ನು ಅನುಭವಿಸುತ್ತಾ, ಸಂತೋಷವನ್ನು ಹೊಂದುತ್ತಾ, ನನ್ನಂತಹ ಅದೃಷ್ಟಶಾಲಿ ಯಾರು ಇಲ್ಲೆಂದುಕೊಂಡನಂತೆ. ಇದೆಲ್ಲವನ್ನು ಚೆನ್ನಾಗಿ ಆಲೋಚನೆ ಮಾಡಿದರೆ, ಸ್ವರ್ಗ ಸುಖವನ್ನು ಆತನು ಅನುಭವಿಸುತ್ತಿದ್ದಾನೆಂದು ಹೇಳಬಹುದು. ಅದು ಪ್ರತ್ಯಕ್ಷವಾಗಿ ಕಾಣಿಸುತ್ತಿರುವ ಮತ್ತು ಪ್ರತ್ಯಕ್ಷವಾಗಿ ಅನುಭವಿಸುತ್ತಿರುವ ಸ್ವರ್ಗ. **(ಸ್ವರ್ಗ, ನರಕ ಮನುಷ್ಯನಿಗೆ ಬಹಳ ಹತ್ತಿರವಾಗಿವೆಯೆನ್ನುವುದಕ್ಕು ಸಹ ನಿದರ್ಶನವಿದೆ)**. ಆ ವಿಧದಲ್ಲಿ ಆತನು ಸಂತೋಷವನ್ನು ಹೊಂದುತ್ತಾ ನಾಲ್ಕು ದಿನಗಳು ಸುಖಗಳಲ್ಲಿಯೆ ತೇಲಾಡಿದ್ದಾನೆ. ನಾಲ್ಕನೆ ದಿನ ಹುಡುಗಿಯೊಂದಿಗೆ ಆತನು ಶಾರೀರಕ ಸುಖದಲ್ಲಿ ಸೇರಿರುವಾಗ, ಹುಡುಗಿಯ ಸೋದರ ಮಾವ ನೋಡಿದನು. ಅಕ್ಕನ ಮಗಳು ಅಂದವಾಗಿ ಇದ್ದಾಳೆಂದು, ಮದುವೆ ಮಾಡಿಕೊಳ್ಳಬೇಕೆಂದು ಕೊಂಡ ಸೋದರ ಮಾವನಿಗೆ ಅಪರಿಮಿತವಾದ ಕೋಪಬಂದು ತಕ್ಷಣವೆ

ಒಂದು ಕಡೆ ಸೇರಿರುವ ಅವರಿಬ್ಬರನ್ನು ಹಿಡಿದುಕೊಂಡನು. ಆ ಹುಡುಗಿ, ಅಮ್ಮನ ತಮ್ಮನನ್ನು ನೋಡಿ ಪ್ಲೇಟು ಬದಲಾಯಿಸಿ, ಈತ ಯಾರೋ ನನಗೆ ಗೊತ್ತಿಲ್ಲ, ನನ್ನನ್ನು ಬಲವಂತವಾಗಿ ಅತ್ಯಾಚಾರ ಮಾಡುತ್ತಿದ್ದಾನೆಂದು ಪ್ರಿಯಕರನ ಮೇಲೆ ಸುಳ್ಳು ಹೇಳಿದಳು. ಅಲ್ಲಿಯವರೆಗು ಅಂದವಾದ ಪ್ರಿಯತಮೆ ಯೊಂದಿಗೆ ಸ್ವರ್ಗ ಸುಖಗಳನ್ನು ಅನುಭವಿಸಿದ ಪ್ರಿಯಕರನಿಗೆ ಒಂದೆಬಾರಿಗೆ ಸ್ವರ್ಗ ಸೀನ್ ಹೋಗಿ, ನರಕದ ಸೀನ್ ಪ್ರಾರಂಭವಾಯಿತು. ಆ ಸಮಯಕ್ಕೆ ಆತನಿಗೆ ಪಾಪ ಪಾಲಿಗೆ ಬಂದಿದೆ. ಆ ಹುಡುಗಿಯ ಸೋದರ ಮಾವ ಆತನನ್ನು ತನ್ನ ಇಷ್ಟಬಂದಂತೆ ಹೊಡೆದು, ಪೊಲೀಸ್ ಸ್ಟೇಷನ್‌ಗೆ ಕರೆದುಕೊಂಡು ಹೋದನು. ಪೊಲೀಸ್‌ಸ್ಟೇಷನ್ ಹೊರಗೆ ಇರುವವರೆಗು, ಆಕೆಯ ಸೋದರ ಮಾವ ಆತನಿಗೆ ಯಮಭಟನಾಗಿ ಹೊಡೆದನು. ಪೊಲೀಸ್‌ಸ್ಟೇಷನ್‌ಗೆ ಹೋದ ನಂತರ ಪೊಲೀಸ್‌ನವರು ಯಮಭಟರಾಗಿ ಥಳಿಸಿದರು. ನಂತರ ರೇಪ್‌ಕೇಸ್ ನಮೂದಿಸಿ ಸಬ್ ಜೈಲಿಗೆ ಕಳುಹಿಸಿದರು. ತಿಂಗಳಿಗೆ ಬೆಯಿಲ್ ಬಂದು ಆತನು ಹೊರಗೆ ಬಂದನು. ಅದಕ್ಕು ಮೊದಲ ತಿಂಗಳಲ್ಲಿ ಸಂತೋಷದಿಂದ, ಸುಖದಿಂದ, ಕಾಲಕಳೆದಿದ್ದನು. ಆದ್ದರಿಂದ ಅದನ್ನು ಸ್ವರ್ಗಸುಖ ಎನ್ನಬಹುದು. ತಿಂಗಳ ನಂತರ ತಕ್ಷಣವೆ ನರಕ ಪ್ರಾರಂಭವಾಗಿ, ತಿಂಗಳಕಾಲದವರೆಗು ಶರೀರಬಾಧೆಗಳು, ಮಾನಸಿಕ ಕಷ್ಟಗಳು ಅನುಭವಿಸಿದ್ದಾನೆ. ಆದ್ದರಿಂದ ಅದನ್ನು ನರಕ ಎನ್ನಬಹುದು. ಈ ಸಂಘಟನೆ ಸ್ವರ್ಗ, ನರಕ ಭೂಮಿ ಮೇಲೆಯೇ ಇದೆಯೆನ್ನುವುದಕ್ಕೆ ಮತ್ತು ಸ್ವರ್ಗ ನರಕಕ್ಕೆ ಬಹಳ ದೂರವಿಲ್ಲ, ಎರಡು ಹತ್ತಿರ ಹತ್ತಿರವಾಗಿಯೆ ಇವೆಯೆನ್ನುವುದಕ್ಕೆ ನಿದರ್ಶನವಾಗಿದೆ.

ಉದಾಹರಣೆಯಾಗಿ ಹೇಳಿದ ಮೇಲಿನ ಸಂಘಟನೆಯಲ್ಲಿ, ಯಮ ಕಿಂಕರರ ಪಾತ್ರ ಭೂತಗಳಿಗೆ ಇಲ್ಲವೆ? ಮನುಷ್ಯರನ್ನೆ ಆ ಸಮಯಕ್ಕೆ ಯಮಕಿಂಕರರಾಗಿ ಹೋಲಿಸಿ ಹೇಳಿದ್ದಾರೆ? ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ನಿಮಗೆ ಅರ್ಥವಾಗುವುದಕ್ಕೆ ಕಾಣಿಸುವ ಮನುಷ್ಯರನ್ನೆ ಯಮಭಟರಾಗಿ ಹೇಳಿದ್ದೇವೆ. ಮೇಲಕ್ಕೆ ಕಾಣಿಸುವ ಮನುಷ್ಯರನ್ನು, ಆಡಿಸುವ

ಸ್ವಲ್ಪ ಭೂತಗಳು ಶರೀರದೊಳಗೆ ಇವೆ. ಅವುಗಳ ಪಾತ್ರ ಕಾಣಿಸುವುದಿಲ್ಲ. ಸ್ವಲ್ಪ ಭೂತಗಳು ಮನುಷ್ಯರನ್ನು ಬಾಧಿಸುವುದಕ್ಕಾಗಲಿ, ಸುಖಕೊಡುವುದಕ್ಕಾಗಲಿ ಅಧಿಕಾರ ಹೊಂದಿವೆಯೆಂದು ಮೊದಲೆ ಹೇಳಿದ್ದೇವೆ. "ನಾನಾ ರೂಪೇಣ ಕಾಲಕಿಂಕರಃ" ಎನ್ನುವ ವಾಕ್ಯದಲ್ಲಿ ಅನೇಕ ರೂಪಗಳಲ್ಲಿ ದೇವರ ಸೈನ್ಯವಿರುತ್ತದೆ. ಮೊದಲು ಯುವತಿ, ಯುವಕನ ಶರೀರದಲ್ಲಿನ ಸ್ವಲ್ಪಭೂತಗಳ ಪಾತ್ರದಿಂದ ಯುವತಿ, ಯುವಕ ಸ್ವರ್ಗ ಸುಖವನ್ನು ಅನುಭವಿಸಿದರು. ನಂತರ ಅವೇ ಸ್ವಲ್ಪ ಭೂತಗಳೆ, ಯುವತಿಯನ್ನು ಮಾತು ಬದಲಾಯಿಸುವಂತೆ ಮಾಡಿ, ಯುವಕನನ್ನು ದೋಷಿಯಂತೆ ನಿಲ್ಲಿಸಿವೆ. ಹುಡುಗಿಯ ಮಾವನ ಶರೀರದೊಳಗಿನಿಂದ ಆತನನ್ನು, ಆ ಸಮಯಕ್ಕೇ ಅಲ್ಲಿಗೆ ಕರೆದುಕೊಂಡುಬಂದು, ಆತನಿಗೆ ತೋರಿಸಬೇಕಾದ ದೃಶ್ಯವನ್ನು ತೋರಿಸಿ, ಆ ಸಮಯಕ್ಕೆ ಹುಡುಗಿಯ ಮಾವನನ್ನು, ಕಾಣಿಸುವ ಯಮಕಿಂಕರನಂತೆ ಬದಲಾಯಿಸಿವೆ. ನಂತರ ಪೊಲೀಸ್‌ಸ್ಟೇಷನ್‌ನಲ್ಲಿ ಪೊಲೀಸರನ್ನು ಯಮಕಿಂಕರರಂತೆ ಬದಲಾಯಿಸಿವೆ. ಕಾಣಿಸಿದರು, ಕಾಣಿಸದೆ ಹೋದರು ಈ ಸಂಘಟನೆಯಲ್ಲಿ ಸ್ವಲ್ಪಭೂತಗಳ ಪಾತ್ರ ಇದೆ ಅವುಗಳೆ ಒಬ್ಬನಿಗೆ ಸ್ವಲ್ಪಕಾಲ ಸ್ವರ್ಗವನ್ನು ತೋರಿಸಿವೆ, ತಕ್ಷಣವೆ ಸ್ವಲ್ಪ ಕಾಲ ನರಕವನ್ನು ಸಹ ತೋರಿಸಿವೆ.

ಸ್ವರ್ಗ, ನರಕ ವಿಷಯದಲ್ಲಿ ಕೆಲವು ಸಮಯಗಳಲ್ಲಿ ಸ್ವತಃವಾಗಿ ಮಹಾಭೂತಗಳು ಕೆಲಸ ಮಾಡುವವು, ಹಾಗೆ ಕೆಲವು ಸಮಯಗಳಲ್ಲಿ ಸ್ವಲ್ಪಭೂತಗಳು ಕೆಲಸ ಮಾಡುವವು. ಇನ್ನೂ ಕೆಲವು ಸಮಯಗಳಲ್ಲಿ ಉಪಭೂತಗಳು ಕೆಲಸ ಮಾಡುವವು. ಅಷ್ಟೇ ಅಲ್ಲದೆ ದೈವ ಜ್ಞಾನವನ್ನು ತಿಳಿದ ದೊಡ್ಡ ದೊಡ್ಡ ಗ್ರಹಗಳು ಸಹ ಕೆಲವು ಜ್ಞಾನಿಗಳ ಬಗ್ಗೆ ಅಜ್ಞಾನಿಗಳ ಬಗ್ಗೆ ಒಳ್ಳೆಯದಾಗಿ, ಕೆಟ್ಟದಾಗಿ, ಮಿತ್ರರಾಗಿ, ಶತ್ರುಗಳಾಗಿ ಕೆಲಸ ಮಾಡುತ್ತಿವೆ. ಪ್ರಪಂಚ ಸಂಬಂಧ ಪಾಪಪುಣ್ಯಗಳನ್ನು ಭೂತಗಳು ಮೂರು ವಿಧಗಳಾಗಿದ್ದು ಪಾಲಿಸಿದರೆ, ದೈವಸಂಬಂಧ ಪಾಪಪುಣ್ಯಗಳನ್ನು ಮೂರು ವಿಧಗಳ ಭೂತಗಳೆ ಅಲ್ಲದೆ ಕೆಲವು ವಿಧಗಳ ಜೀವಿಗಳಾದ ಗ್ರಹಗಳು ಸಹ ದೇವರ ಪಕ್ಷದಲ್ಲಿ ನಿಂತು,

ದೇವರ ಸೈನಿಕರಾಗಿಯೆ ಕೆಲಸ ಮಾಡುತ್ತಿವೆ. ದೈಸಂಬಂಧ ಪಾಪಪುಣ್ಯಗಳನ್ನು ಸಹ ಮನುಷ್ಯ ಸಂಪಾದಿಸಿಕೊಳ್ಳುತ್ತಿದ್ದಾನೆ. ದೇವರನ್ನು ದೂಷಿಸಿದರೆ ಭಯಂಕರವಾದ ಪಾಪ ಬರುತ್ತದೆ. ದೇವರನ್ನು ಪೂಜಿಸಿದರೆ ಮೋಕ್ಷ ಬರುತ್ತದೆ. ದೇವತೆಗಳನ್ನು ಆರಾಧಿಸಿದರೆ ಪುಣ್ಯ ಬರುತ್ತದೆ. ದೇವರ ಬಗ್ಗೆ ಬಂದ ಪಾಪವನ್ನಾಗಲಿ, ದೇವತೆಗಳಿಂದ ಬರುವ ಪುಣ್ಯವನ್ನಾಗಲಿ ಜಾರಿಗೆ ಮಾಡುವುದರಲ್ಲಿ ಜ್ಞಾನವಿರುವ ಜೀವ ಗ್ರಹಗಳು ಕೆಲವು ಭೂತಗಳ ಹಾಗೆ ಕೆಲಸ ಮಾಡುತ್ತ, ತಾವು ಸಹ ದೇವರ ಸೇವೆ ಮಾಡುವವರಂತೆ ಪ್ರವರ್ತಿಸುತ್ತಿವೆ. ಜೀವಗ್ರಹಗಳು ಕೆಲವು ಖಗೋಳದಲ್ಲಿ ಸೂಕ್ಷ್ಮವಾಗಿ ತಿರುಗುತ್ತಾ, ಅವಕಾಶ ಬಂದಾಗ ದೇವರ ಸೇವೆ ಮಾಡುತ್ತಿವೆ. ಅಂತಹ ಗ್ರಹಗಳು ತಮ್ಮ ಜೀವನದಲ್ಲಿ ಇನ್ನೂ ಉನ್ನತಸ್ಥಾನದ ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸುತ್ತಿವೆ. ಆದ್ದರಿಂದ ದೈವಜ್ಞಾನವನ್ನು ತಿಳಿದವರಿಗೆ ಹೆಚ್ಚಿನ ಗೌರವವನ್ನು ಕೊಡುತ್ತಿವೆ. ಅಜ್ಞಾನಿಗಳನ್ನು ಕಷ್ಟಗಳ ಪಾಲು ಮಾಡುತ್ತಿವೆ. ಇಂತಹ ಜೀವಗ್ರಹಗಳು ಸ್ಥೂಲಶರೀರ ಇಲ್ಲದವುಗಳಂತಾಗಿ, ಸೂಕ್ಷ್ಮ ಶರೀರದಿಂದ ಖಗೋಳದಲ್ಲಿ ಇವೆಯೆನ್ನುವ ವಿಷಯ ಯಾರ ಊಹೆಗು ಸಿಗುವುದಿಲ್ಲ. ಈಗ ಯಾರ ಊಹೆಗು ಸಿಗದಿರುವಾಗ, ನಿನಗೆ ಹೇಗೆ ತಿಳಿದಿದೆ ಎಂದು ತಕ್ಷಣವೆ ಯಾರಾದರು ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ಸಮಾಧಾನ ಏನೆಂದರೆ! ಈಗ ಈ ಸಮಾಚಾರವನ್ನು ಬರೆಯುವುದು ನಾನಲ್ಲ. "ನಾವು" ಬರೆಯುತ್ತಿದ್ದೇವೆಂದು ಹೇಳುತ್ತಿದ್ದೇವೆ. ಈ ಪುಸ್ತಕ ಬರೆಯುವುದರಲ್ಲಿ ಮುಖ್ಯವಾದ ಪಾತ್ರ ನನ್ನ ಶರೀರದೊಳಗಿನ ಆತ್ಮದ್ದು. ಆತ್ಮ ಆಡಿಸಿದರೆ ಶರೀರ ಆಡುತ್ತಿದೆ. ಆದ್ದರಿಂದ ಮೇಲ್ನೋಟಕ್ಕೆ ನಾನು ಬರೆದಂತೆ ನಿಮಗೆ ಕಾಣಿಸುತ್ತದೆ. ಆದರೆ ನೀವು ಓದುತ್ತಿರುವಾಗ ವಿಷಯ ನಿಮಗೆ ಅರ್ಥವಾದಂತೆ, ಈ ಸಮಾಚಾರ ಶರೀರದವೊಂದು ಕೈಯಿಂದ ಆತ್ಮ ಬರೆಯಿಸುವಾಗ ಮೊದಲು ಆ ವಿಷಯ ನನಗೆ ತಿಳಿಯುತ್ತಿದೆ.ಅಷ್ಟೇ ಹೊರತು ಬರಹ ಬರೆಯುವುದಕ್ಕಿಂತ ಮೊದಲು ನನಗೂ ಸಹ ತಿಳಿಯದು. ನನಗೆ ತಿಳಿಯದ ವಿಷಯ ನಾನೇ ಬರೆದಹಾಗೆ ಮೇಲ್ನೋಟಕ್ಕೆ ನಿಮಗೆ ಕಾಣಿಸಿದರೂ, ವಾಸ್ತವವಾಗಿ ಬರೆಯಿಸುವುದು ಆತ್ಮ ಎಂದು ತಿಳಿಯಬೇಕು. ಇದು ನನ್ನ

ಊಹೆಗು ಸಹ ಸಿಗದ ವಿಷಯವೆ, ಆದ್ದರಿಂದ ಆತ್ಮ ಸ್ವತಃವಾಗಿ ಯಾರಿಗು ತಿಳಿಯದೆಂದು ಧೈರ್ಯವಾಗಿ ಹೇಳುತ್ತಿದೆ. ನಮಗೆ ತಿಳಿಯದ ವಿಷಯವನ್ನು ತಿಳಿದಿಲ್ಲವೆಂದು ನಾವು ಒಪ್ಪಿಕೊಳ್ಳುವುದರಲ್ಲಿ ತಪ್ಪು ಇಲ್ವಲ್ಲಾ! ಅದಕ್ಕೆ ನನಗೆ ತಿಳಿದಿಲ್ಲವೆಂದು ಧೈರ್ಯವಾಗಿ ನಾನು ಒಪ್ಪಿಕೊಳ್ಳುತ್ತಿದ್ದೇನೆ.

ಜೀವಗ್ರಹಗಳು ಭೂತಗಳ ಗುಂಪಿಗೆ ಸೇರದೇ ಇದ್ದರೂ ದೈವಧರ್ಮಗಳ ಬಗ್ಗೆ ಆಸಕ್ತಿಯಿಂದಿದ್ದು, ಜ್ಞಾನಿಗಳಿಗೆ ಅನುಕೂಲವಾಗಿ, ಅಜ್ಞಾನಿಗಳಿಗೆ ವಿರುದ್ಧವಾಗಿ ಕೆಲಸ ಮಾಡುತ್ತಿವೆ. ಉದಾಹರಣೆಗೆ ಒಂದು ಕುಟುಂಬ ಅಜ್ಞಾನದಿಂದಿದ್ದು, ಜ್ಞಾನದ ಮೇಲೆ ಸ್ವಲ್ಪವಾದರು ಆಸಕ್ತಿ ಇಲ್ಲದವರಾಗಿ ದೇವದೇವನಾದ ಪರಮಾತ್ಮನನ್ನು ಬಿಟ್ಟು, ದೇವತೆಗಳನ್ನು ಸಹ ಸೃಷ್ಟಿಸಿದ ದೇವರನ್ನು ಮರೆತು ಅನ್ಯದೇವತೆ ಆರಾಧನೆ ಮಾಡುವುದರಲ್ಲಿ ಆಸಕ್ತಿ ಇರುವವರಾಗಿ, 300 ಕಿಲೋಮೀಟರುಗಳು ದೂರದಲ್ಲಿರುವ ಒಂದು ದೇವತೆಯನ್ನು ಪೂಜೆ ಮಾಡುವುದಕ್ಕೆ, ಕಾಣಿಕೆಗಳನ್ನು ಸಲ್ಲಿಸುವುದಕ್ಕೆ, ಕೋರಿಕೆಗಳನ್ನು ಕೋರುವುದಕ್ಕೆ ಜೀಪಿನಲ್ಲಿ ಹೊರಟು ಹೋದರು. ಖಗೋಳದಲ್ಲಿ ದೇವರ ಜ್ಞಾನವನ್ನು ತಿಳಿದುಕೊಂಡು, ದೇವರಿಗಾಗಿಯೆ ಕೆಲಸ ಮಾಡಬೇಕೆನ್ನುವ ಉದ್ದೇಶದಿಂದಿರುವ ಜೀವಗ್ರಹಗಳಲ್ಲಿ ಒಂದು ಗ್ರಹವು ಆ ಕುಟುಂಬವನ್ನು, ಅವರ ಉದ್ದೇಶವನ್ನು, ಅವರ ಪ್ರಯಾಣವನ್ನು ಗ್ರಹಿಸಿದೆ, ಅವರು ತಮ್ಮನ್ನು ಹುಟ್ಟಿಸಿದ ದೇವರನ್ನು ಬಿಟ್ಟು ಕೋರಿಕೆಗಳಿಗಾಗಿ ಅನ್ಯದೇವತೆಯನ್ನು ಪೂಜಿಸುವುದು, ದೂರದಲ್ಲಿದ್ದರು, ಶ್ರಮವಾದರೂ, ಹಣ ಖರ್ಚಾದರು ಎಲ್ಲವನ್ನು ಸಹಿಸಿಕೊಂಡು ಹೋಗುವುದು, ಆ ಗ್ರಹಕ್ಕೆ ಇಷ್ಟವಾಗಲಿಲ್ಲ. ಅವರು ದೇವತೆಹತ್ತಿರಕ್ಕೆ ಹೊರಡುವ ಮುನ್ನ ಒಂದು ತಿಂಗಳ ಕೆಳಗೆ ದೈವಜ್ಞಾನವನ್ನು ಪ್ರಚಾರ ಮಾಡುವವರು ಭಗವದ್ಗೀತೆ ಗ್ರಂಥವನ್ನು ಪ್ರಚಾರ ಮಾಡುತ್ತಾ, ಅವರ ಮನೆಗೆ ಹತ್ತಿರಕ್ಕೆ ಬಂದು ಭಗವದ್ಗೀತೆಯನ್ನು ತೆಗೆದುಕೊಂಡು ಓದಿರಿ ಎಂದು ಹೇಳಿದರೆ, ಅವರು ನಾವು ಜ್ಞಾನವನ್ನು ತಿಳಿದುಕೊಳ್ಳುವ ನಿಮಿತ್ತವಾಗಿ ಶ್ರಮಪಟ್ಟು, ದೇವರ ಸೇವೆ ಮಾಡುತ್ತಾ, ನಮ್ಮ ಮನೆಯವರೆಗು ಭಗವದ್ಗೀತೆಯನ್ನು ತಂದಿದ್ದಾರೆ ಅಲ್ಲವೆ! ಎಂದು

ಅವರನ್ನು ಗೌರವಿಸಿ ಮಾತನಾಡಿಸದೆ, ನಮ್ಮ ಹತ್ತಿರ ಇಂತವುಗಳು ಬಹಳ ಇವೆ, ಉಚಿತವಾಗಿ ಆದರೆ ಕೊಡಿ, ಹಣಕ್ಕಾದರೆ ಬೇಡ ಎಂದರು. ಆ ಮಾತಿಗೆ ಗೀತೆಯನ್ನು ಪ್ರಚಾರ ಮಾಡುವವರು ಹೀಗೆ "ನಾವು ನಮ್ಮ ಮನೆಯ ಹತ್ತಿರ ಕೆಲಸಗಳನ್ನು ಬಿಟ್ಟು ಕೆಲವು ದಿನಗಳು ದೇವರ ಸೇವೆ ಮಾಡಬೇಕೆಂದು ಬಂದಿದ್ದೇವೆ. ಈ ಗ್ರಂಥ ಕೇವಲ ಎರಡು ನೂರು ರೂಪಾಯಿಗಳು ಮಾತ್ರ, ಎರಡು ನೂರನ್ನು ಈ ಗೀತೆಗೆ ಇಟ್ಟರೆ ನಿಮಗೆ ಎಷ್ಟೋ ಜ್ಞಾನವಿಷಯಗಳು ತಿಳಿಯುತ್ತವೆ" ಎಂದು ಹೇಳಿದರೆ ನಮಗೆ ಗೀತೆಯಿಂದ ಕೆಲಸವೆ ಇಲ್ಲ, ನಮಗೆ ಓದಿಕೊಳ್ಳುವಷ್ಟು ತಾಳ್ಮೆ ಇಲ್ಲ ಎಂದು ಹೇಳುವುದೆ ಅಲ್ಲದೆ ಗೀತೆಯನ್ನು, ಗೀತೆಯನ್ನು ಪ್ರಚಾರ ಮಾಡುವವರನ್ನು ಹೀನವಾಗಿ ಮಾತನಾಡಿರುವುದನ್ನು, ಆ ಸಮಯದಲ್ಲಿ ಅಲ್ಲೇ ಇದ್ದ ಗ್ರಹ ಕೇಳಿ ಅವರ ಮೇಲೆ ಕೋಪ ತಂದುಕೊಂಡಿದೆ. ಆಗಿನಿಂದ ಅವರ ಮೇಲೆ ನಿಘಾ ಇಟ್ಟುಕೊಂಡ ಗ್ರಹ, ಅವರು ದೇವತಾ ಪೂಜೆಗಾಗಿ ಪ್ರಯಾಣ ಮಾಡುವುದನ್ನು ಗ್ರಹಿಸಿದೆ.

ಜ್ಞಾನತಿಳಿದ ಮನುಷ್ಯನಿಗೆ ಮತ್ತೊಬ್ಬ ಅಜ್ಞಾನಿಯ ಮಾತುಗಳು ಚೇಷ್ಟೆಗಳು ಹೇಗೆ ಇಷ್ಟವಾಗುವುದಿಲ್ಲವೊ, ಹಾಗೆ ದೈವ ಜ್ಞಾನದ ಮೇಲೆ ಆಸಕ್ತಿಯಿದ್ದು, ಜ್ಞಾನ ತಿಳಿದಿರುವ ಗ್ರಹಕ್ಕೆ, ಅಜ್ಞಾನಿಗಳಾದ ಆ ಕುಟುಂಬದ ಮಾತುಗಳು, ಕೆಲಸಗಳು ಇಷ್ಟವಾಗದೆ ಹೋಗಿರುವುದಲ್ಲದೆ, ಅವರು ಭಗವದ್ಗೀತೆ ಬಗ್ಗೆ ಮಾತನಾಡಿದ ಮಾತುಗಳಿಗೆ ಜ್ಞಾನಿಗಳ ಬಗ್ಗೆ ಅಗೌರವದಿಂದ ಪ್ರವರ್ತಿಸಿರುವುದಕ್ಕೆ ಪೂರ್ತಿ ಕೋಪ ಬಂದಿದೆ. ಗ್ರಹವು ಜೀವಜಾತಿಗೆ ಸೇರಿದೆ, ಆದ್ದರಿಂದ ಗುಣಗಳಿವೆಯೆಂದು ಮರೆಯಬಾರದು. ಜ್ಞಾನವೆಂದರೆ ಗೌರವವಿಲ್ಲದ ಆ ಕುಟುಂಬದ ಮೇಲೆ ತನ್ನ ಕೋಪವನ್ನು ತೀರಿಸಿಕೊಳ್ಳಲು ಅವಕಾಶಕ್ಕಾಗಿ ನೋಡುತ್ತಿರುವ ಸಮಯದಲ್ಲಿ, ಅವರ ದೇವತಾ ಪ್ರಯಾಣ ಕಾಣಿಸಿತು. ಅವರು ಅವರಂದುಕೊಂಡ ದೇವತೆ ಬಳಿಗೆ ಹೋಗಿ, ತಮ್ಮ ಹರಕೆಯನ್ನು ಸಲ್ಲಿಸಿಕೊಂಡು, ಹೊಸ ಕೋರಿಕೆಗಳನ್ನು ಕೋರಿಕೊಂಡು, ತಿರುಗು ಪ್ರಯಾಣ ಮಾಡುತ್ತಿರುವ ಸಮಯದಲ್ಲಿ ಅವರನ್ನೇ ಹಿಂಬಾಲಿಸುತ್ತಿದ್ದ ಗ್ರಹ, ಅವರ ವಾಹನವನ್ನು

ಅಪಘಾತಕ್ಕೆ ಗುರಿಯಾಗುವಂತೆ ಮಾಡಿದೆ. ವಾಹನದಲ್ಲಿ ಹತ್ತುಜನ ಪ್ರಯಾಣ ಮಾಡುತ್ತಿರುವಾಗ ಅದರಲ್ಲಿ ಎಂಟುಜನ ಸ್ಥಳದಲ್ಲೇ ಸತ್ತುಹೋದರೆ, ಇಬ್ಬರಿಗೆ ತೀವ್ರವಾದ ಗಾಯಗಳಾಗಿವೆ. ದೇವತೆಗಳಿಗಾಗಿ ಹೋಗುವುದೆ ಗ್ರಹಗಳಿಗೆ ಸರಿಹೋಗುವುದಿಲ್ಲ. ಅಷ್ಟೇ ಅಲ್ಲದೆ ಅವರು ಗೀತೆಯನ್ನು, ಗೀತಾ ಪ್ರಚಾರಕರನ್ನು ಗೌರವಿಸದೆ ಹೋಗಿರುವುದು ಮತ್ತಷ್ಟು ಕೋಪಕ್ಕೆ ಕಾರಣವಾಗಿದೆ. ಆದ್ದರಿಂದ ಎಂಟು ಜನ ಸತ್ತುಹೋಗಿದ್ದಾರೆ ಇಬ್ಬರಿಗೆ ತೀವ್ರವಾದ ಗಾಯಗಳಾಗಿವೆ. ಎಲ್ಲರಿಗು ದೊಡ್ಡವನಾದ ದೇವರನ್ನು ಬಿಟ್ಟು, ಚಿಲ್ಲರೆ ದೇವತೆಗಳನ್ನು ಮುಗಿಯುವುದು ಗ್ರಹಗಳಿಗೆ ಸರಿಹೋಗುವುದಿಲ್ಲವೆಂದು ಈ ಸಂಘಟನೆಯಿಂದ ತಿಳಿಯುತ್ತಿದೆ.

ಇಂದೂ ಸಾಂಪ್ರದಾಯಗಳು ಬಹಳದೊಡ್ಡವು. ಅವುಗಳಲ್ಲಿ ಮದುವೆ ಸಾಂಪ್ರದಾಯ ಬಹಳ ಮುಖ್ಯವಾದದ್ದು. ಮದುವೆ ಕಾರ್ಯದಲ್ಲಿ ಮಾಡುವ ಕೆಲಸಗಳೆಲ್ಲವುಗಳಿಗು ದೈವಜ್ಞಾನ ಮುಡಿಹಾಕಲ್ಪಟ್ಟಿದೆ. ಆದರೆ ಈಗಿನ ಸಮಾಜದಲ್ಲಿ ಮದುವೆ ಜ್ಞಾನಸಂಬಂಧವಾದದ್ದೆಂದು ಯಾರಿಗು ತಿಳಿದಿಲ್ಲ. ಆದ್ದರಿಂದ ಯಾರ ಇಷ್ಟಾನುಸಾರ ಅವರು ಮಾಡುತ್ತಿದ್ದಾರೆ. ಜೀವನದಲ್ಲಿ ಜ್ಞಾನಕ್ಕೆ ಮುಖದ್ವಾರವಾದ ಮದುವೆಯನ್ನು, ಜ್ಞಾನ ಸಂಬಂಧವಾಗಲ್ಲದೆ ತಮ್ಮ ತಮ್ಮ ಆರ್ಭಟಗಳನ್ನು ಪ್ರದರ್ಶಿಸಿಕೊಳ್ಳುವಂತೆ ಮಾಡುತ್ತಿದ್ದಾರೆ. ಯಾರ ಮದುವೆಗಳಲ್ಲಾಗಲಿ ಜ್ಞಾನ ಕಣ್ಣಿಗೆ ಕಾಣಿಸದಂತಾಗಿದೆ. ಆದ್ದರಿಂದ ಮದುವೆ ವಿಷಯದಲ್ಲಿ ದೇವತೆಗಳ ವಿಷಯಕ್ಕಿಂತ ಹೆಚ್ಚಿನ ಕೋಪದಿಂದ ಖಗೋಳದಲ್ಲಿನ ಗ್ರಹಗಳಿದ್ದಾರೆ. ಎಲ್ಲಾದರು ಮದುವೆ ವಿಷಯವಾಗಲಿ, ಮದುವೆ ದೃಶ್ಯವಾಗಲಿ ಗ್ರಹಗಳ ಕಣ್ಣಿಗೆ ಬಿದ್ದರೆ ಮದುವೆಯವರನ್ನು ಹಿಂಬಾಲಿಸಿ, ಅವರಿಗೆ ಯಾವುದೊ ಒಂದು ವಿಧವಾಗಿ ಅಪಘಾತ ಆಗುವಂತೆ ಮಾಡುತ್ತಿವೆ. ಗ್ರಹಗಳಿಗೆ ತಿಳಿಯದ ಮದುವೆ ಇದ್ದರೆ ಪರವಾಗಿಲ್ಲ, ಆ ಮದುವೆಯವರು ಅಪಘಾತದಿಂದ ತಪ್ಪಿಸಿಕೊಂಡಂತೆ, ಮದುವೆಯ ಮೊದಲ ಕಾರ್ಯ ನಿಶ್ಚಿತಾರ್ಥ, ಮದುವೆ, ಮಾಮನೆ ವರೆಗು ಯಾವಾಗ ಗ್ರಹಗಳಿಗೆ ತಿಳಿದರೂ ಅಪಾಯ ತಪ್ಪುವುದಿಲ್ಲ. ಆದ್ದರಿಂದಲೆ ಪ್ರಸ್ತುತಕಾಲದಲ್ಲಿ ಮದುವೆ ವಾಹನಗಳು ಹೆಚ್ಚಾಗಿ ಅಪಘಾತಕ್ಕೆ

ಗುರಿಯಾಗುತ್ತಿವೆ. ಮದುವೆ ವಾಹನಗಳ ಅಪಘಾತ, ಮದುವೆ ಮನೆಯಲ್ಲಿ ಅಪಾಯ, ದೇವತೆಗಳ ಬಳಿಗೆ ಹೋಗುವ ವಾಹನಗಳು, ದೇವತಾ ಕ್ಷೇತ್ರಗಳಲ್ಲಿ ಅಪಾಯಗಳು, ಕಳೆದ ಮೂವತ್ತು ಸಂವತ್ಸರಗಳಿಂದ ಹೆಚ್ಚಾಗಿ, ಈಗಿನ ಕಾಲದವರೆಗು ತೀವ್ರಸ್ಥಾನಕ್ಕೆ ಸೇರಿಕೊಂಡಿವೆ. ಹಾಗೆ ಏಕೆ ನಡೆಯುತ್ತಿವೆಯೆಂದರೆ! ದೇವತೆಗಳು ಬೇರೆ ದೇವರು ಬೇರೆಯೆಂದು, ಮದುವೆ ಪೂರ್ತಿಮಟ್ಟದ ದೈವಜ್ಞಾನವೆಂದು ಕಳೆದ ಮೂವತ್ತು ವರ್ಷಗಳಿಂದ ಉನ್ನತ ಜ್ಞಾನವನ್ನು ಹೇಳಲಾಗುತ್ತಿದೆ. ಗ್ರಹಗಳು ಕೆಲವು ಸಂವತ್ಸರಗಳಿಂದ ಉನ್ನತ ಜ್ಞಾನವನ್ನು ತಿಳಿದುಕೊಳ್ಳುತ್ತಿವೆ ಆದ್ದರಿಂದ, ಆಗಿನಿಂದ ಅಪಾಯಗಳು ಆಗುವುದಕ್ಕೆ ಪ್ರಾರಂಭವಾಗಿವೆ. ಪ್ರಸ್ತುತಕಾಲಕ್ಕೆ, ಉನ್ನತ ಜ್ಞಾನವನ್ನು ತಿಳಿದುಕೊಳ್ಳುವ ಗ್ರಹಗಳ ಸಂಖ್ಯೆ ಹೆಚ್ಚಾಗಿದೆ. ಆದ್ದರಿಂದ ಅಪಘಾತಗಳ ಸಂಖ್ಯೆ ಹೆಚ್ಚಾಗಿದೆ. ನಾನು ಹೇಳುವುದು ಸತ್ಯವೊ, ಅಸತ್ಯವೊ ಅನ್ನುವುದಕ್ಕೆ ನೀವು ಈಗಿನಿಂದ ಧ್ಯಾಸ ಇಟ್ಟು ನೋಡಿರಿ, ಎಲ್ಲಾದರು ಅಪಘಾತ ನಡೆದಿದೆಯೆಂದರೆ, ಅದು ಮದುವೆದಾದರು ಇರುತ್ತದೆ ಅಥವಾ ದೇವತೆಗಳ ಯಾತ್ರೆಯಾದರು ಇರುತ್ತದೆ. ಈ ಅಪಘಾತಗಳ ಹಿಂದೆ ಗ್ರಹಗಳ ಹಸ್ತವಿದೆಯೆಂದು ಯಾರಿಗೂ ತಿಳಿದಿಲ್ಲ.

ದೈವಜ್ಞಾನವನ್ನು ತಿಳಿದ ಗ್ರಹಗಳು, ಭೂತಗಳ ಸ್ಥಾನದಲ್ಲಿ ಕರ್ಮಗಳ ಪಾಲನೆ ಮಾಡದಿದ್ದರೂ, ದೈವವಿಷಯದಲ್ಲಿ ಮಾತ್ರ ಅಜ್ಞಾನದಿಂದ ಪ್ರವರ್ತಿಸುವವರನ್ನು ಶಿಕ್ಷಿಸುತ್ತಿವೆ. ಇಲ್ಲೊಂದು ಪ್ರಶ್ನೆ ಯಾರಾದರು ಕೇಳಬಹುದು. "ಗ್ರಹಗಳು ಜೀವಜಾತಿಗೆ ಸೇರಿರುವವು ಅಲ್ಲವೆ! ಗ್ರಹಗಳಿಗೆ ಗುಣಗಳಾದ ಕೋಪವಿರುವಾಗ, ಕೋಪದ ಪ್ರಕಾರ ಇತರರನ್ನು ಅಪಾಯಗಳಿಗೆ ಗುರಿಮಾಡಿ ಸಾಯಿಸುವುದು, ಗಾಯಗಳ ಪಾಲುಮಾಡಿ ಬಾಧೆ ಇಡುವುದರಿಂದ ಗ್ರಹಗಳಿಗು ಸಹ ಪಾಪ ಬರುತ್ತದಲ್ಲವೆ!" ಹಾಗೆ ಕೇಳಿದರೆ ಅದಕ್ಕೆ ಉತ್ತರವಾಗಿ ಹೀಗೆ ಹೇಳಬಹುದು. ಗ್ರಹಗಳು ಜ್ಞಾನ ತಿಳಿದವುಗಳು ಅವು ಕರ್ಮಯೋಗ ಪದ್ಧತಿಯಲ್ಲಿ ಕಾರ್ಯಗಳನ್ನು ಮಾಡುವುದರಿಂದ ಗ್ರಹಗಳಿಗೆ ಪಾಪ ಅಂಟುವುದಿಲ್ಲ. ಗ್ರಹಗಳೆಲ್ಲ ಭಗವದ್ಗೀತೆ ಪ್ರಕಾರ ಜ್ಞಾನ ತಿಳಿದು, ದೈವ ವಿಷಯದಲ್ಲಿಯೇ ಮನುಷ್ಯರ

ಮೇಲೆ ಕೋಪದಿಂದ ಪ್ರವರ್ತಿಸುತ್ತಿವೆ. ಅಜ್ಞಾನಿಗಳನ್ನು ಹಿಂಸಿಸುವ ಗ್ರಹಗಳು, ಜ್ಞಾನಿಗಳನ್ನು ಗೌರವಿಸುತ್ತಿವೆ. ಗ್ರಹಗಳು ತಮ್ಮನ್ನು ಹೇಗೆ ಗೌರವಿಸುತ್ತಿವೆಯೆಂದು ಜ್ಞಾನಿಗಳಿಗೆ ಕಾಣಿಸುವುದಿಲ್ಲ. ಆದ್ದರಿಂದ ಜ್ಞಾನಿಗಳಿಗು ಸಹ ಗ್ರಹಗಳ ಕೆಲಸಗಳು ತಿಳಿಯುವುದಿಲ್ಲ. ಜ್ಞಾನಿಗಳಿಗೆ ತಿಳಿಯದಿರುವುದು ನಿನಗೆ ಹೇಗೆ ತಿಳಿದಿದೆಯೆಂದು ನೀವು ಪ್ರಶ್ನಿಸಬಹುದು. ಅದಕ್ಕೆ ನನ್ನ ಸಮಾಧಾನ ನಾನು ಜ್ಞಾನಿ ಅಲ್ಲ! ನಾನು ಕೇವಲ ಯೋಗಿ, ಯೋಗೀಶ್ವರನು. ಆದ್ದರಿಂದ ಗ್ರಹಗಳ ವಿಷಯ ನಮಗೆ ತಿಳಿದಿದೆ. ಆದ್ದರಿಂದ ಪ್ರಬೋಧಾಶ್ರಮ ನಿಯಮಾವಳಿಯಲ್ಲಿ ದೊಡ್ಡ ಬೋರ್ಡು ಮೇಲೆ **"ನಮ್ಮ ಹತ್ತಿರಕ್ಕೆ ಖಗೋಳದಲ್ಲಿರುವ ದೊಡ್ಡ ಶಕ್ತಿ ಇರುವ ಗ್ರಹಗಳು ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಬರುತ್ತಿರುತ್ತಾರೆ. ಆದ್ದರಿಂದ ಇಲ್ಲಿಗೆ ಬರುವವರು ಕೆಟ್ಟ ಉದ್ದೇಶದಿಂದ ಬರಬೇಡಿ. ಒಂದುವೇಳೆ ಕೆಟ್ಟ ಉದ್ದೇಶದಿಂದ ಬಂದರೆ ಗ್ರಹಗಳಿಂದ ನಿಮಗೆ ಕಷ್ಟ ನಷ್ಟ ಜರುಗಬಹುದು"** ಎಂದು ಬರೆದಿಟ್ಟಿದ್ದೇವೆ. ಮೂವತ್ತು ವರ್ಷಗಳಿಂದ ನಮಗೆ ಕಾಣಿಸದಂತೆ, ನಮ್ಮ ಬಳಿಗೆ ಬಂದು ಕಾಣಿಸದ ಗ್ರಹಗಳು, ದೊಡ್ಡ ದೊಡ್ಡ ಮಹರ್ಷಿಗಳು ಜ್ಞಾನವನ್ನು ಕೇಳಿ ಹೋಗುತ್ತಿದ್ದಾರೆ. ಆದ್ದರಿಂದ ಪ್ರಸ್ತುತ ಕಾಲದಲ್ಲಿ ಅಜ್ಞಾನಿಗಳಿಗೆ ತಿಳಿಯದೆ ಅಪಾಯಗಳು ನಡೆಯುತ್ತಿವೆ. ನನ್ನನ್ನು ಒಬ್ಬ ಯೋಗಿಯಂತೆ ಗ್ರಹಗಳು ಗೌರವಿಸುತ್ತಿವೆ, ಆದ್ದರಿಂದ ನನ್ನನ್ನು ಯಾರಾದರು ನಿಂದನೆಮಾಡುವಾಗ, ಯಾವ ಗ್ರಹವು ಅಲ್ಲಿ ಇಲ್ಲದಿದ್ದರೆ ಪರವಾಗಿಲ್ಲ, ಒಂದುವೇಳೆ ಯಾವ ಗ್ರಹವಾದರು ನನ್ನನ್ನು ನಿಂದಿಸುವಾಗ ನೋಡಿದರೆ, ಆತನನ್ನು ಸಾಮಾನ್ಯವಾಗಿ ಬಿಡುವುದಿಲ್ಲ. ಇದು ಸತ್ಯವೆನ್ನುವುದಕ್ಕೆ ಚಿಕ್ಕ ಉದಾಹರಣೆಯಾಗಿ ಒಂದು ಸಂಘಟನೆಯನ್ನು ವಿವರಿಸುತ್ತೇವೆ.

ಧರ್ಮವರಂ (ಅನಂತಪುರ ಜಿಲ್ಲೆ)ನಲ್ಲಿ ಆಚಾರಿ ಕುಲಕ್ಕೆ ಸೇರಿದ 35 ವರ್ಷಗಳ ವಯಸ್ಸಿರುವ ವ್ಯಕ್ತಿ, ಇಸ್ಲಾಮ್ ಮತಕ್ಕೆ ಸೇರಿದ ವ್ಯಕ್ತಿಯೊಂದಿಗೆ ಮಾತನಾಡುತ್ತ "ನೀವು ದೊಡ್ಡ ಜ್ಞಾನಿಯಂತೆ ಹೇಳಿಕೊಳ್ಳುವ ಪ್ರಬೋಧಾನಂದ ಯೋಗೀಶ್ವರರನ್ನು ಬೈದರೆ ಒಳ್ಳೆಯದಲ್ಲ ಎಂದು ಅನ್ನುತ್ತಿರುತ್ತೀರಲ್ಲ! ಆದರೆ ನಾನು ಈಗ ನಿನ್ನ ಮುಂದೆಯೇ ಬೈಯ್ಯುತ್ತೇನೆ ನನಗೆ ಏನಾಗುತ್ತದೊ

ನೋಡುತ್ತೇನೆ" ಎಂದು ಅನವಶ್ಯಕವಾಗಿ ದೂಷಣೆ ಮಾಡಿ ಬೆಂಗಳೂರಿಗೆ ಹೋದನು. ಆತನ ಬಾವಮೈದನನ ಮದುವೆಯಲ್ಲಿ ನಾವು ಹೇಳಿದ "ಜ್ಞಾನ ಸಂಪ್ರದಾಯ" ಪ್ರಕಾರ ಮದುವೆ ಮಾಡಿಕೊಳ್ಳಬೇಕೆಂದು ಬಾವಮೈದನನ ಅಣ್ಣ ಹೇಳಿದರೆ, ಅದೆಲ್ಲಾ ಬೇಡ ಎಲ್ಲರು ಹೇಗೆ ಮಾಡಿದರೆ ಹಾಗೆ ಮಾಡೋಣ ಎಂದು ಗಲಾಟೆ ಇಟ್ಟುಕೊಂಡ ಆತನು, ಮದುವೆಯೆಲ್ಲಾ ಮುಗಿದುಹೋದ ನಂತರ ಮದುಮಗಳ ಮನೆಗೆ ಹೋಗುವಾಗ, ಅಜ್ಞಾನಿಯಾದ ಆತನು ನಮ್ಮನ್ನು ದೂಷಿಸಿದ ನಂತರ ಹದಿನೈದು ನಿಮಿಷಗಳಿಗೇ ಮದುವೆಯವರ ಜೊತೆಗೆ ಬೆಂಗಳೂರಿಗೆ ಹೋದನು. ಹಾಗೆ ಆತನು ದೂಷಣೆ ಮಾಡುವಾಗ ಅಲ್ಲಿ ಯಾವ ಗ್ರಹ ಇಲ್ಲದಿದ್ದರೆ ಆತನಿಗೆ ಏನು ಆಗುತ್ತಿರಲಿಲ್ಲ. ಆದರೆ ಆತನು ದೂಷಿಸಿದ ಸಮಯದಲ್ಲಿ ನಮ್ಮನ್ನು ಅಭಿಮಾನಿಸುವ ಗ್ರಹ, ಅಲ್ಲಿರುವುದರಿಂದ ಆತನ ಮಾತುಗಳೆಲ್ಲವನ್ನು ಆ ಗ್ರಹವು ಕೇಳಿಸಿಕೊಂಡಿದೆ. ಆಗ ಆ ಗ್ರಹಕ್ಕೆ ಕೋಪ ಬಂದಿದೆ. ಆತನನ್ನು ಬಿಡಬಾರದೆಂದುಕೊಂಡು ಆತನನ್ನು ಹಿಂಬಾಲಿಸಿತು. ಮರುದಿನ ಮರು ಪ್ರಯಾಣದಲ್ಲಿ ಬೆಂಗಳೂರು ಬಸ್‌ಸ್ಟಾಂಡಿನಲ್ಲಿ ಬಸ್ಸು ಅತ್ತಿ ಕುಳಿತುಕೊಂಡ ಆತನನ್ನು ಹಿಂಬಾಲಿಸಿದ ಗ್ರಹ ಸಾಯಿಸಿದೆ. ಆತನು ಕುಳಿತುಕೊಂಡವನು ಕುಳಿತುಕೊಂಡಹಾಗೆ ಸತ್ತು ಹೋಗಿದ್ದಾನೆ. ಆತನು ಸತ್ತುಹೋಗಿದ್ದಾನೆಂದು ಗಮನಿಸಿದ ಪಕ್ಕದ ಪ್ಯಾಸೆಂಜರ್ಸ್ ಬಸ್ಸನ್ನು ನಿಲ್ಲಿಸಿ, ಹತ್ತಿರದಲ್ಲಿದ್ದ ಆಸ್ಪತ್ರೆಗೆ ತೆಗೆದುಕೊಂಡು ಹೋದರು. ಅಷ್ಟೊತ್ತಿಗೆ ಆತನು ಸತ್ತುಹೋಗಿದ್ದಾನೆಂದು ಡಾಕ್ಟರುಗಳು ಹೇಳಿದರು. ಗುಂಡಿಗೆ ನಿಂತು ಸತ್ತುಹೋಗಿದ್ದಾನೆಂದು ಡಾಕ್ಟರುಗಳು ಹೇಳಿದರು. ಹಾರ್ಟ್ ಫೆಯಿಲ್ ಆದರೆ, ಇದ್ದಕ್ಕಿದ್ದು ಸತ್ತುಹೋಗುವುದು ವಾಸ್ತವವೆ ಆದರೆ, ಹಾಗೆ ಮಲ, ಮೂತ್ರ ವಿಸರ್ಜನೆ ಬಟ್ಟೆಗಳಲ್ಲಿಯೆ ಆಗುವುದಿಲ್ಲ. ಬಸ್ ಸ್ಟಾಂಡಿನಲ್ಲಿ ಬಸ್ಸು ಅತ್ತುವ ಮೊದಲು ನಾನು ಈಗ ಬೈಯ್ಯುತ್ತಿದ್ದೇನೆ ನನಗೆ ಏನಾಗುತ್ತದೊ ನೋಡೋಣ, ಎಂದಿರುವ ಆತನು ಮರುದಿನ ಅದೇ ಸಮಯಕ್ಕೆ ಸತ್ತುಹೋಗಿರುವುದರಿಂದ ಗ್ರಹಗಳೇ ಆತನನ್ನು ಸಾಯಿಸಿವೆಯೆಂದು ಅರ್ಥವಾಗುತ್ತಿದೆ. ಇಂತಹ

ಸಂಘಟನೆಗಳು ಬಹಳ ನಡೆದಿವೆ. ಆದ್ದರಿಂದ ಗ್ರಹಗಳು ಒಂದು ಜ್ಞಾನದ ವಿಷಯದಲ್ಲಿಯೆ ಹೆಚ್ಚಿನ ಕೆಲಸ ಮಾಡುತ್ತಿವೆಯೆಂದು ತಿಳಿಯುತ್ತಿದೆ.

ಈ ವಿಧವಾಗಿ ಎಲ್ಲವನ್ನು ಲೆಕ್ಕಹಾಕಿ ನೋಡಿದರೆ, ಮಾನವನ ಪಾಪ ಪುಣ್ಯಗಳನ್ನು ಮೂರು ವಿಧಗಳ ಭೂತಗಳು, ಒಂದು ವಿಧದ ಗ್ರಹಗಳು ಅನುಭವಿಸುವಂತೆ ಮಾಡುತ್ತಿವೆಯೆಂದು ತಿಳಿಯುತ್ತಿದೆ. ಈ ಗ್ರಂಥದಲ್ಲಿ ಹೇಳಿದ ದೆವ್ವಗಳಾಗಲಿ, ಭೂತಗಳಾಗಲಿ, ಗ್ರಹಗಳಾಗಲಿ ಎಲ್ಲ ಜೀವಿಗಳೆ ಆದರೂ ದೆವ್ವಗಳು ಬೇರೆ, ಭೂತಗಳು ಬೇರೆ, ಗ್ರಹಗಳು ಬೇರೆ ಬೇರೆ ಯೆಂದು ಅರ್ಥವಾಗಿದೆ. ದೆವ್ವಗಳಿಂದ ನಡೆಯುವ ಕೆಲಸಗಳಿಗಿಂತ, ಗ್ರಹಗಳಿಂದ ನಡೆಯುವ ಕೆಲಸಗಳು ಉತ್ತಮವಾದವು. ದೆವ್ವಗಳು ಅಜ್ಞಾನದಿಂದ ಕೆಲಸ ಮಾಡುತ್ತವೆ. ಆದ್ದರಿಂದ ಅವುಗಳಿಗೆ ಕರ್ಮ ಅಂಟುತ್ತದೆ. ಗ್ರಹಗಳು ಜ್ಞಾನದಿಂದ ಕೆಲಸ ಮಾಡುತ್ತವೆ. ಆದ್ದರಿಂದ ಗ್ರಹಗಳಿಗೆ ಕರ್ಮ ಅಂಟುವುದಿಲ್ಲ. ಇನ್ನು ಮೂರು ವಿಧಗಳ ಭೂತಗಳು ಕೆಲಸ ಮಾಡಿದರೂ, ಅವುಗಳಿಗೆ ಗುಣಗಳಾಗಲಿ, ಉದ್ದೇಶಗಳಾಗಲಿ ಇಲ್ಲವಾದ್ದರಿಂದ ಭೂತಗಳು ಕರ್ಮಕ್ಕೆ ಅತೀತವಾದವುಗಳೆಂದು ಹೇಳಬಹುದು. ಮಾನವನು ಅಜ್ಞಾನಿಯಾಗಿ ಇರುವವರೆಗು ಕರ್ಮಗಳು ಬರುತ್ತಿರುತ್ತವೆ. ಕರ್ಮಗಳು ಬೆಳೆಯುವ ಕಾಲದಿ ಭೂತಗಳ ಕೆಲಸ ಹೆಚ್ಚಾಗುತ್ತದೆ. ಮನುಷ್ಯ ದೈವತ್ವವನ್ನು ಲೆಕ್ಕ ಮಾಡದವರೆಗೂ, ಜ್ಞಾನ ಮಾರ್ಗದಲ್ಲಿ ಪ್ರಯಾಣಿಸದವರೆಗೂ, ಮುಕ್ತಿ ಸ್ಥಾನವನ್ನು ಅನ್ವೇಷಿಸದವರೆಗೂ, ಮನುಷ್ಯ ಅನೇಕ ಉಪದ್ರವಗಳನ್ನು, ಅನೇಕ ಕಷ್ಟಗಳನ್ನು ಎದುರಿಸಬೇಕಾಗಿರುತ್ತದೆ. ಈಗಿನ ಕಾಲದಲ್ಲಿ ಚಿಕ್ಕಂದಿನಿಂದ ಓದಿಕೊಂಡು ಪ್ರಪಂಚ ಜ್ಞಾನದ ಮೇಲೆ ಪ್ರವೀಣರಾಗುತ್ತಿದ್ದಾರೆ, ಆದರೆ ಪರಮಾತ್ಮ ಜ್ಞಾನ ಎಂದರೆ ಏನೋ ತಿಳಿಯದ ಸ್ಥಿತಿಯಲ್ಲಿದ್ದು, ದೈವತ್ವವನ್ನು ಇಲ್ಲ ಎನ್ನುತ್ತಿದ್ದಾರೆ. ದೈವಜ್ಞಾನ ಇರುವವರನ್ನು ಸ್ವಲ್ಪವಾದರು ಗೌರವಿಸದೆ ಕೀಳು ಭಾವನೆಯಿಂದ ನೋಡುತ್ತಿದ್ದಾರೆ. ಪೂರ್ವಕಾಲಕ್ಕಿಂತ ಪ್ರಸ್ತುತಕಾಲದಲ್ಲಿ ಅಜ್ಞಾನ ಹೆಚ್ಚಾಗಿ, ಪಾಪ ಸಂಪಾದನೆ ಹೆಚ್ಚಾಗಿದೆ. ಪಾಪ ಪರಿಹಾರ ಆಗಬೇಕೆಂದರೆ, ಭೂತಗಳು, ಗ್ರಹಗಳು ವಿಜೃಂಭಿಸಿ ಕೆಲಸ ಮಾಡುತ್ತಿವೆ. ಆದ್ದರಿಂದ

ಪೂರ್ವಕಾಲದಲ್ಲಿ ಇಲ್ಲದ ರೋಗಗಳು ಹೊಸ ಹೊಸವು ಹುಟ್ಟಿಕೊಳ್ಳುತ್ತಿವೆ. ಪೂರ್ವದಲ್ಲಿಲ್ಲದ ಸುನಾಮಿ ಮೊದಲಾದ ಪ್ರಕೃತಿ ವೈಪರಿತ್ಯಗಳು ಬರುತ್ತಿವೆ.

ಮನುಷ್ಯರು ವಿಜ್ಞಾನ ಎನ್ನುವ ಹೆಸರಿನಿಂದ ಅಜ್ಞಾನದೊಳಗೆ ಹೋಗುತ್ತಿದ್ದಾರೆ. ದೈವತ್ವವನ್ನು ಪೂರ್ತಿ ಮರೆತುಹೋಗಿದ್ದಾರೆ. ಹಣ ಇದ್ದರೆ ಸಾಕು ಹಾಯಾಗಿ ಬದುಕಬಹುದು. ಅಂದುಕೊಳ್ಳುತ್ತಿದ್ದಾರೆ. ಹಣಕ್ಕಾಗಿ ಓದಿಕೊಳ್ಳುತ್ತಿದ್ದಾರೆ. ಹಣಕ್ಕಾಗಿಯೆ ಉದ್ಯೋಗಗಳು ಮಾಡುತ್ತಿದ್ದಾರೆ. ಆದರೆ ವಿಜೃಂಭಿಸುವ ರೋಗಗಳನ್ನಾಗಲಿ, ಹೆಚ್ಚುವ ಪ್ರಕೃತಿ ವಿಕೋಪಗಳನ್ನಾಗಲಿ, ಹಣ ತಡೆಗಟ್ಟುವುದಿಲ್ಲವೆಂದು ಮನುಷ್ಯನಿಗೆ ತಿಳಿಯುತ್ತಿಲ್ಲ. ನಾವು ಮಾಡಿಕೊಂಡ ಪಾಪಗಳನ್ನು ಭೂಮಿಮೇಲೆಯೇ ಅನುಭವಿಸುತ್ತಿದ್ದೇವೆಂದು ಅರ್ಥವಾಗುತ್ತಿಲ್ಲ. ಮುಖ್ಯವಾಗಿ ಯಾವ ಪಾಪಕ್ಕೆ ಏನು ಶಿಕ್ಷೆ ಬೀಳುತ್ತದೆಂದು ಯಾವ ಮನುಷ್ಯನಿಗು ತಿಳಿದಿಲ್ಲ. ಹಾಗೆ ಯಾವ ಪಾಪ ಯಾವಾಗ ಅನುಭವಿಸುತ್ತೇವೊ ತಿಳಿದಿಲ್ಲ. ಅಷ್ಟೇ ಅಲ್ಲದೆ ಮಾಡಿಕೊಂಡಿರುವುದೆಲ್ಲಾ ಇಲ್ಲಿಯೇ ಅನುಭವಿಸುತ್ತೇವೆಂದು ಸಹ ತಿಳಿದಿಲ್ಲ. ಒಂದು ಪಾಪಕ್ಕಾಗಲಿ, ಪುಣ್ಯಕ್ಕಾಗಲಿ ಯಾವ ಅನುಭವವನ್ನು ಹೊಂದುತ್ತೇವೊ, ಯಾವಾಗ ಹೊಂದುತ್ತೇವೊ ಎಲ್ಲಿ ಹೊಂದುತ್ತೇವೊ ತಿಳಿಯದ ಸ್ಥಿತಿಯಲ್ಲಿ ಮಾನವನು ಇದ್ದು ಹೋಗಿರುವುದರಿಂದ, ನಡೆಯುತ್ತಿರುವುದೆ ಸತ್ಯ, ನಡೆಯಬೇಕಾಗಿರುವುದು ಅಸತ್ಯ ಎನ್ನುವ ವಾದನೆಯಲ್ಲಿ ಮನುಷ್ಯ ಉಳಿದಿದ್ದಾನೆ. ವರ್ತಮಾನದಲ್ಲಿ ಒಬ್ಬ ಮಾನಸಿಕ ರೋಗಿ ಇದ್ದಾನೆಂದುಕೊಳ್ಳೋಣ ಅದು ಸತ್ಯ. ಆದರೆ ಆತನು ಹಾಗೆ ಇರುವುದಕ್ಕೆ ಕಾರಣವೇನು ಎಂದು ಅದರ ಹಿಂದೆ ಇರುವ ಸತ್ಯವನ್ನಾಗಲಿ, ಮುಂದೆ ನಡೆಯಬೇಕಾಗಿರುವ ಸತ್ಯವನ್ನಾಗಲಿ ಮನುಷ್ಯ ಹುಡುಕುವಂತಿಲ್ಲ. ಪ್ರಪಂಚದಲ್ಲಿ ಹುಡುಕಿದರೆ ಒಬ್ಬ ದೇವರನ್ನು ಹೊರತು ಎಲ್ಲ ದೊರಕುತ್ತದೆ. ಶ್ರದ್ಧೆಯಿಂದ ದೇವರ ಜ್ಞಾನವನ್ನೆ ತಿಳಿದುಕೊಳ್ಳಬಹುದು. ಆಗಿರುವಾಗ ಒಬ್ಬ ಮಾನಸಿಕ ರೋಗಿಯ ವಿಷಯವಾಗಲಿ, ಅಂಗವೈಕಲ್ಯ ವಿರುವವನ ಪಾಪವನ್ನು ಕುರಿತಾಗಲಿ, ಔಷಧಗಳಿಗೆ, ಮಂತ್ರಗಳಿಗೆ, ಮಾತುಗಳಿಗೆ ಶರಣಾಗದ ರೋಗವನ್ನು ಕುರಿತಾಗಲಿ ನಮಗೆ ಶ್ರದ್ಧೆಯಿದ್ದರೆ ತಿಳಿದುಕೊಳ್ಳಬಹುದು.

ಈ ದಿನದ ಮಾನವರಲ್ಲಿ ಕೆಲವರು ಸ್ವರ್ಗಸುಖಗಳನ್ನು, ಕೆಲವರು ನರಕ ಬಾಧೆಗಳನ್ನು ಭೂಮಿಮೇಲೆಯೆ ಅನುಭವಿಸುತ್ತಿದ್ದಾರೆ. ಭೂಮಿಯನ್ನು ಬಿಟ್ಟು ಯಾರೂ ಎಲ್ಲಿಗೆ ಹೋಗಲಾರರು. ಭೂಮಿ ಮೇಲೆ ಒಂದು ಜಾಗದಲ್ಲಿ ಒಬ್ಬನು ಸತ್ತುಹೋದರೆ. ಅವನು ಅದೇ ಕ್ಷಣವೆ ಭೂಮಿಮೇಲೆಯೆ ಹುಟ್ಟುತ್ತಿದ್ದಾನೆ. ಆಗಿರುವಾಗ ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಹೇಳಿಕೊಂಡರೆ ನೀನು ಈಗಿನ ಕಾಲದ ಮನುಷ್ಯನಲ್ಲ. ಕೃತ ಯುಗದಿಂದ ಇದೇ ಭೂಮಿ ಮೇಲೆ ಇರುತ್ತಿದ್ದೀಯ! ಆದರೆ ಈ ಜನ್ಮ ವಿಷಯ ಮಾತ್ರ ಜ್ಞಾಪಕದಲ್ಲಿರುವುದರಿಂದ ಹಿಂದಿರುವ ನಿನ್ನ ಸಮಾಚಾರವು ನಿನಗೆ ತಿಳಿದಿಲ್ಲ. ಹಿಂದಿನ ಜನ್ಮಗಳಲ್ಲಿ ಅನೇಕ ಸುಖಗಳನ್ನು ಅನೇಕ ದುಃಖಗಳನ್ನು ಅನುಭವಿಸಿದ ಮನುಷ್ಯ, ಪ್ರಸ್ತುತ ಜನ್ಮದಲ್ಲಿ ಅವುಗಳೆಲ್ಲವನ್ನು ಮರೆತುಹೋಗಿ ಈಗ ನಡೆಯುತ್ತಿರುವುದು ಮಾತ್ರ ಸತ್ಯವೆಂದುಕೊಳ್ಳುತ್ತಾನೆ. ಈಗ ಬದುಕುತ್ತಿರುವ ಜೀವನದಲ್ಲಿನ ಕಷ್ಟಸುಖಗಳಿಗೆ, ಹಿಂದಿನ ಜನ್ಮಗಳ ಪಾಪಪುಣ್ಯಗಳೆ ಕಾರಣವೆನ್ನುವ ಜ್ಞಾಪಕವನ್ನು, ಜ್ಞಾನವನ್ನು ಕಳೆದುಕೊಂಡಿದ್ದಾನೆ. ಈ ದಿನ ಮನುಷ್ಯ ಬದುಕುತ್ತಿರುವ ಜೀವನದಲ್ಲಿನ ಕಷ್ಟಸುಖಗಳಿಗೆ ಕಾರಣ ಪ್ರಸ್ತುತವಿರುವ ಹಣವೇ ಅಂದುಕೊಳ್ಳುತ್ತಿದ್ದಾನೆ. ಮನುಷ್ಯನಿಗೆ ಎಲ್ಲ ವಿಧಗಳಲ್ಲಿ ದೊಡ್ಡದಾಗಿ ಕಾಣಿಸುತ್ತಿರುವುದು ಹಣ! ಮನುಷ್ಯನ ಮನಸ್ಸಿನಲ್ಲಿ ದೇವರ ಸ್ಥಾನಕ್ಕಿಂತ ಮೀರಿದ ಸ್ಥಾನ ಹಣಕ್ಕಿದೆ. ಆದ್ದರಿಂದ ಮೊದಲು ಅದನ್ನು ಸಂಪಾದಿಸುವುದಕ್ಕೇ ಹೆಚ್ಚಿನ ಅವಕಾಶ ಕೊಡುತ್ತಿದ್ದಾನೆ. ಹಾಗೆ ತನ್ನ ಮೆದುಳನ್ನೆಲ್ಲ ಹಣ ಸಂಪಾದನೆಗೇ ವಿನಿಯೋಗಿಸಿದರೂ, ತೃಪ್ತಿ ಆಗುವಷ್ಟು ಸಂಪಾದಿಸಲಾಗದೆ ಹೋಗುತ್ತಿದ್ದಾನೆ. ಕೆಲವರಾದರೆ ತೃಪ್ತಿಯನ್ನು ಬದಿಗಿಟ್ಟು ಸ್ವಲ್ಪವಾದರು ಸಂಪಾದಿಸಿಕೊಳ್ಳದೆ ಹೋಗುತ್ತಿದ್ದಾರೆ. ಹಣ ಸಂಪಾದನೆಗು ಸಹ ಕರ್ಮವೇ ಕಾರಣವೆಂದು ಅವರಿಗೆ ತಿಳಿದಿಲ್ಲ. ಇಂತಹ ತಿಳಿಯದ ಸ್ಥಿತಿಯಲ್ಲಿ ತಿಳುವಳಿಕೆ ಇರುವವರು ಸಹ ಜೀವಿಸುತ್ತಿದ್ದಾರೆ. ಇವರ ಜೀವನಗಳಲ್ಲಿನ ಕರ್ಮಗಳನ್ನು ಪಾಲಿಸುವುದಕ್ಕೆ ಭೂತಗಳು, ಗ್ರಹಗಳು ಕೆಲಸ ಮಾಡುತ್ತಿವೆ. ಭೂತಗಳು, ಗ್ರಹಗಳು ಈದಿನ ಭೂಮಿ ಮೇಲೆ ಮನುಷ್ಯ ಬಾಧೆ ಬೀಳುವ ನೋವುಗಳೆಲ್ಲವುಗಳಿಗು ಕಾರಣವಾಗಿವೆ.

ಭೂಕಂಪಗಳಾಗಲಿ, ಸುನಾಮಿಗಳಾಗಲಿ, ಪ್ರವಾಹಗಳಾಗಲಿ, ಅಗ್ನಿಪರ್ವತಗಳಾಗಲಿ, ಉಷ್ಣದಗಾಳಿಗಳಾಗಲಿ ಮಂಜಿನ ತುಫಾನುಗಳಾಗಲಿ ಆಲಿಕಲ್ಲುಗಳ ಮಳೆಯಾಗಲಿ, ಅನೇಕ ರೋಗಗಳಾಗಲಿ ಹೊಸದಾಗಿ ಹುಟ್ಟಿಬರುವ ಹೊಸ ರೋಗವಾಗಲಿ, ಇತ್ತ ಶರೀರದಲ್ಲಾಗಲಿ, ಅತ್ತ ಹೊರಗಾಗಲಿ ಆಗುವ ಉಪದ್ರವಗಳೆಲ್ಲವುಗಳಿಗು ಕಾರಣ, ಮನುಷ್ಯ ತಾನ್ಯಾರೊ, ತನ್ನನ್ಯಾರು ನಡೆಸುತ್ತಿದ್ದಾರೊ ತಿಳಿಯದೆ ಇರುವುದು ಮತ್ತು ವಿಶ್ವವೆಲ್ಲವನ್ನು ನಡೆಸುವ ದೇವರನ್ನು ಕುರಿತಿರುವ ಜ್ಞಾನವನ್ನು ತಿಳಿದುಕೊಳ್ಳದೆ ಇರುವುದು. ಯಾವ ದಿನವಾದರೆ ಮನುಷ್ಯ ತನ್ನ ಸ್ಥಿತಿಯನ್ನು ತಾನು ತಿಳಿದುಕೊಂಡು ತಾನು ಏನೂ ಮಾಡದ ಜೀವಾತ್ಮನೇ ಎಂದು, ತನ್ನನ್ನು ನಡೆಸುವ ಆತ್ಮ ಮತ್ತೊಂದು ಇದೆಯೆಂದು, ತನ್ನನ್ನು ನಡೆಸುವ ಆತ್ಮವನ್ನು ಸಹ ನಡೆಸುವುದು ಪರಮಾತ್ಮನೆಂದು, ಮೋಕ್ಷವನ್ನು ಹೊಂದುವವರೆಗು, ಈ ಪ್ರಪಂಚದಲ್ಲಿ ಯುಗಗಳ ಪರ್ಯಂತರ ಮನುಷ್ಯ ಕಷ್ಟ ಸುಖಗಳನ್ನು ಅನುಭವಿಸುತ್ತ ಇರಬೇಕಾಗಿದೆ. ಪರಮಾತ್ಮನನ್ನು ತಿಳಿಯದವರೆಗೂ ಜೀವಾತ್ಮನಿಗೆ ಜನ್ಮಗಳಿಂದ ಬಿಡುಗಡೆ ಇಲ್ಲ. ಪರಮಾತ್ಮನನ್ನು ತಿಳಿಯಬೇಕೆಂದರೆ ಆತನ ಪ್ರಭುತ್ವವನ್ನು, ಆ ಪ್ರಭುತ್ವದಲ್ಲಿನ ಪಾಲಕರನ್ನು, ಪಾಲಕರಿಂದ ಪಾಲಿಸಲ್ಪಡುವವರನ್ನು ಮೊದಲು ತಿಳಿಯಬೇಕು. ಪಾಲಕರನ್ನು ತಿಳಿದು ಅವರ ಅನುಮತಿ ಪಡೆದರೆ ರಾಜನನ್ನು ನೋಡಬಹುದು. ಹಾಗೆ ಮಹಾಭೂತಗಳನ್ನು, ಸ್ವಲ್ಪಭೂತಗಳನ್ನು, ಉಪಭೂತಗಳನ್ನು ಗ್ರಹಗಳನ್ನು ತಿಳಿದುಕೊಂಡು ಅವರ ಮೂಲಕ ದೇವರ ಹತ್ತಿರಕ್ಕೆ ಹೋಗಬಹುದು. ಆದ್ದರಿಂದ ಈ ಗ್ರಂಥದಲ್ಲಿ ಮೊದಲು ದೆವ್ವಗಳನ್ನು ಕುರಿತು ಹೇಳಿ ಕೊನೆಗೆ ಭೂತಗಳವರೆಗು ತಂದು ಗ್ರಹಗಳಿಂದ ಮುಗಿಸುತ್ತಿದ್ದೇವೆ.

# ಸಮಾಪ್ತಿ

# ಕೊನೆಯ ಮಾತು

ದೆವ್ವಗಳ ಹಾಗೂ ಭೂತಗಳ ಯಥಾರ್ಥ ಸಂಘಟನೆಗಳು ಎಂಬ ಈ ಗ್ರಂಥದಲ್ಲಿ ಬರೆದಿರುವವೆಲ್ಲ ಸತ್ಯಗಳೆ. ಆದ್ದರಿಂದ ಈ ಗ್ರಂಥದ ಹೆಸರಿನಲ್ಲಿ ಯಥಾರ್ಥ ಎಂಬ ಪದವನ್ನು ಇಡಬೇಕಾಗಿ ಬಂದಿದೆ. ಸತ್ಯದಿಂದ ಕೂಡಿಕೊಂಡ ನಡೆದ ಸಂಘಟನೆಗಳು ಇರುವುದರಿಂದ, ಯಥಾರ್ಥ ಸಂಘಟನೆಗಳು ಎಂದು ಹೇಳಬೇಕಾಗಿ ಬಂದಿದೆ. ಇಲ್ಲಿಯವರೆಗು ನಾವು ಬರೆದ ಗ್ರಂಥಗಳಲ್ಲಿ, ನನ್ನ ದೊಡ್ಡಸ್ತಿಕೆಯನ್ನು ಕುರಿತು ಎಲ್ಲಿಯು ಹೇಳಿಲ್ಲ. ನಮ್ಮ ಬರವಣಿಗೆಯಲ್ಲಿ ಕೇವಲ ಶಾಸ್ತ್ರಬದ್ಧವಾದ ಜ್ಞಾನ ಮಾತ್ರ ಇರುತ್ತಿತ್ತು. ಆದರೆ ಇಲ್ಲಿ ತಪ್ಪದೇ ಹೇಳಬೇಕಾದ ವಿಷಯಗಳಲ್ಲಿ ಸ್ವಲ್ಪ ನಮ್ಮ ದೊಡ್ಡಸ್ತಿಕೆ ಹೊರಬಿದ್ದಿದೆ. ನಮ್ಮನ್ನು ಕುರಿತು ನಾವು ಹೇಳಿಕೊಳ್ಳುವುದು ನನಗೆ ಇಷ್ಟವಿಲ್ಲದಿದ್ದರು ತಪ್ಪದೆ ಹೇಳಬೇಕಾಗಿ ಬಂದಿದೆ. ಈ ಗ್ರಂಥದಲ್ಲಿನ ವಿಷಯಗಳನ್ನು ಓದಿದ ನಂತರ, ದೆವ್ವಗಳ ಬಾಧೆಗಳಿರುವವರು ನಮ್ಮ ಬಳಿಗೆ ಬಂದು ತೋರಿಸಿಕೊಳ್ಳಬೇಕೆಂದು, ನಮ್ಮ ಬಳಿಗೆ ಬಂದರೆ ಸುಲಭವಾಗಿ ಅವುಗಳ ಬಾಧೆ ಹೋಗುತ್ತದೆಂದು ಅಂದುಕೊಳ್ಳಬಹುದು. ಆದರೆ ಮುಖ್ಯವಾಗಿ ಅಂತವರು ಮೊದಲು ತಿಳಿದುಕೊಳ್ಳಬೇಕಾಗಿರುವುದು ಏನೆಂದರೆ! ನಾನು ದೆವ್ವಗಳನ್ನು ಕುರಿತು ಪರಿಶೋಧನೆ ಮಾಡುವಾಗ ನಡೆದ ಸಂಘಟನೆಗಳನ್ನು ಕುರಿತು ಬರೆದಿದ್ದೇನೆ. ಆ ಕಾಲ ಕಳೆದು ಹೋಗಿ ಸುಮಾರು ಮೂವತ್ತೈದು (35) ವರ್ಷಗಳು ಆಗುತ್ತದೆ. ಆ ದಿನ ನನ್ನ ವಯಸ್ಸು ಕೇವಲ ಇಪ್ಪತ್ತೈದು (25) ವರ್ಷಗಳೆ. ಅಂದಿಗು, ಇಂದಿಗು ನನ್ನ ಶರೀರದಲ್ಲಿ ಎಷ್ಟೋ ಬದಲಾವಣೆಗಳು ನಡೆದಿವೆ. ಈಗ ಶಾರೀರಕವಾಗಿ ಮತ್ತು ಮಾನಸಿಕವಾಗಿ ಎಲ್ಲ ವಿಧಗಳಲ್ಲಿ ಹಿಂದೆ ಬಿದ್ದಿದ್ದೇನೆ. ಆದಿನವಿದ್ದ ಜ್ಞಾನಶಕ್ತಿಯಾಗಲಿ, ಶರೀರ ಶಕ್ತಿಯಾಗಲಿ ಈಗ ಇಲ್ಲ. ಆದ್ದರಿಂದ ಯಾರಾದರು ನನ್ನ ಬಳಿಗೆ ಬಂದರೂ, ನಾನು ಏನು ಮಾಡಲಾಗದ ಸ್ಥಿತಿಯಲ್ಲಿ ಇದ್ದೇನೆಂದು ಮೊದಲೇ ಹೇಳಿಕೊಳ್ಳುತ್ತಿದ್ದೇನೆ. ನಾನು ದೆವ್ವಗಳನ್ನು ಕುರಿತು ಪರಿಶೋಧನೆ ಮಾಡುವ ಸಮಯದಲ್ಲಿ ಸಹ, ಇತರರ ಬಾಧೆಗಳನ್ನು ನಿವಾರಿಸುವುದಕ್ಕೆ ಮಾಡಲಿಲ್ಲ. ಆ ದಿನ, ಈದಿನ ದೈವಜ್ಞಾನವನ್ನು ಪ್ರಜೆಗಳಿಗೆ ಒದಗಿಸುವುದೇ ನನ್ನ ಮುಖ್ಯ

ಉದ್ದೇಶ ಹೊರತು, ಬೇರೆ ಯಾವ ವಿಧದಲ್ಲಿ ನಾನು ಯಾರಿಗು ಉಪಯೋಗ ಪಡುವವನಲ್ಲ. ನನಗೆ ಅಂತಹ ಶಕ್ತಿ ಇಲ್ಲವೆಂದು ಮೊದಲೆ ತಿಳಿಸುತ್ತಿದ್ದೇನೆ.

ಈ ಗ್ರಂಥದಲ್ಲಿ ಹೇತುವಾದಿಗಳನ್ನು, ನಾಸ್ತಿಕವಾದಿಗಳನ್ನು ಹೆಚ್ಚಾಗಿ ವಿಮರ್ಶಿಸಿ ಬರೆದಂತೆ ಕಾಣಿಸುತ್ತದೆ. ನಾನು ಮುಖ್ಯವಾಗಿ ವಿಮರ್ಶಿಸಿರುವುದು ನಾಸ್ತಿಕವಾದಿಗಳನ್ನೇ ಎಂದು ಹೇಳುತ್ತಿದ್ದೇನೆ. ಹೇತುವಾದಿಗಳೆಂದುಕೊಳ್ಳುತ್ತ ಹೇತುವಾದವೆಂದರೆ ಏನೋ ತಿಳಿಯದೆ, ನಾಸ್ತಿಕವಾದವನ್ನೇ ಬುನಾದಿಯಾಗಿ ಮಾಡಿಕೊಂಡು ಮಾತನಾಡುವ ಹೇತುವಾದಿಗಳೆಂದುಕೊಂಡವರನ್ನು ವಿಮರ್ಶಿಸಿದ್ದೇನೆ. ನಿಜವಾದ ಹೇತುವಾದವನ್ನು ನಾನು ಎಂದಿಗು ವಿಮರ್ಶಿಸಲಿಲ್ಲ. ಏಕೆಂದರೆ ನಾನು ಸಹ ಸ್ವಚ್ಛವಾದ ಹೇತುವಾದಿ. ಹೇತುವಾದದಿಂದ ಪ್ರಶ್ನೆಗಳು ಬಂದಾಗಲೆ ಅದಕ್ಕೆ ಜ್ಞಾನ ಉತ್ತರ ಕೊಡಬಲ್ಲದು. ಆಗಲೇ ದೈವಜ್ಞಾನ ಹೊರಬೀಳುತ್ತದೆ. ನಮ್ಮ ಬರಹದಲ್ಲಿ ಮಧ್ಯೆ ಮಧ್ಯೆದಲ್ಲಿ ಪ್ರಶ್ನೆಗಳಿರುತ್ತವೆ. ಆ ಪ್ರಶ್ನೆಗಳನ್ನು ನಾನೇ ಪ್ರಶ್ನಿಸಿ ಉತ್ತರ ಹೇಳಲಾಗಿದೆ. ಜ್ಞಾನ ಹೇಳುತ್ತಿರುವಾಗ ಎಲ್ಲಾದರು ಪ್ರಶ್ನೆಗೆ ಅವಕಾಶವಿದ್ದರೆ, ಯಾರಿಗು ಆ ಪ್ರಶ್ನೆ ಯೋಚನೆಗೆ ಬಾರದಿದ್ದರೂ, ನಾನೇ ಆ ಪ್ರಶ್ನೆಯನ್ನು ಕೇಳಿ, ಅದಕ್ಕೆ ಉತ್ತರವನ್ನು ಸಹ ಹೇಳಿದ ನಂತರವೆ, ಉಳಿದ ವಿಷಯಗಳನ್ನು ಬರೆಯಲಾಗಿದೆ. ಈ ಒಂದು ಗ್ರಂಥದಲ್ಲಿಯೆ ಅಲ್ಲದೆ ನಮ್ಮ ರಚನೆಗಳೆಲ್ಲವುಗಳಲ್ಲಿಯು ಇದೆ ವಿಧಾನವಿರುತ್ತದೆ.

ನಿಜವಾದ ಹೇತುವಾದ ಸತ್ಯಕ್ಕೆ ಕಾರಣವಾಗಿದೆ. ಆದ್ದರಿಂದ ಅಸಲಾದ ಹೇತುವಾದವನ್ನು ಸತ್ಯವಾದ ಎಂದು ಅನ್ನಬಹುದು. ನನ್ನದು ಸಹ ಸತ್ಯವಾದ. ಆದ್ದರಿಂದ ಕೆಲವು ಕಡೆ ನಾಸ್ತಿಕವಾದಿಗಳನ್ನು, ಕೆಲವು ಕಡೆ ಮೇಧಾವಿಗಳನ್ನು, ಕೆಲವು ಕಡೆ ಶಾಸ್ತ್ರಜ್ಞರನ್ನು, ಕೆಲವು ಕಡೆ ಭಕ್ತರನ್ನು, ಕೆಲವು ಕಡೆ ಸ್ವಾಮಿಗಳನ್ನು ವಿಮರ್ಶಿಸಬೇಕಾಗಿ ಬಂದಿದೆ. ಸತ್ಯವಾದದ ಪ್ರಕಾರ ಮಾತನಾಡುವಾಗ ಅಸತ್ಯವಾದಿಗಳು ಯಾರಿದ್ದರೂ, ಅವರನ್ನು ವಿಮರ್ಶಿಸದೆ ತಪ್ಪುವುದಿಲ್ಲ, ಅವರ ಮಾತುಗಳನ್ನು ಅಸತ್ಯಗಳೆಂದು ಹೇಳದೆ ತಪ್ಪುವುದಿಲ್ಲ. ಆದ್ದರಿಂದ ಈ ಗ್ರಂಥದಲ್ಲಿನ ಮಾತುಗಳು ಯಾರಿಗಾದರು ಬಾಧೆಯನ್ನು ಉಂಟುಮಾಡಿದ್ದರೆ, ವಿವೇಕದಿಂದ

ಅವರು ಅರ್ಥಮಾಡಿಕೊಳ್ಳುತ್ತಾರೆಂದು ಕೋರುತ್ತೇನೆ. ಎಲ್ಲರನ್ನು ವಿಮರ್ಶಿಸುವುದು ನನ್ನ ಕೆಲಸವಲ್ಲ, ಎಲ್ಲಾ ನಿಜವನ್ನು ಹೇಳುವುದೇ ನನ್ನ ಕೆಲಸ. ಈ ಗ್ರಂಥದಲ್ಲಿ ನನ್ನ ಮಾತುಗಳು ಯಾರನ್ನಾದರು ವಿಮರ್ಶಿಸಿದ್ದರೆ ಅವರು ಸತ್ಯವನ್ನು ತಿಳಿದುಕೊಂಡು, ಜ್ಞಾನ ಮಾರ್ಗದಲ್ಲಿ ಮುಂದಕ್ಕೆ ಹೋಗುವುದಕ್ಕೆ ನನ್ನ ವಿಮರ್ಶೆಗಳನ್ನು ತೆಗೆದುಕೊಳ್ಳಬೇಕೆಂದು, ಅಷ್ಟೇ ಹೊರತು ನನ್ನ ಮಾತುಗಳನ್ನು ಅನರ್ಥವಾಗಿ ಅರ್ಥ ಮಾಡಿಕೊಳ್ಳಬಾರದೆಂದು ಕೋರುತ್ತಿದ್ದೇನೆ.

ಈದಿನ ಮನುಷ್ಯರಲ್ಲಿ ದೈವಭಕ್ತಿಯಾಗಲಿ, ದೈವಜ್ಞಾನವಾಗಲಿ ಪೂರ್ತಿಯಾಗಿ ಇಲ್ಲದಂತೆ ಹೋಗಿದೆ. ಹಿಂದೂಮತದಲ್ಲಿ ಪೂರ್ವಕ್ಕಿಂತ ಹೆಚ್ಚಿನ ದೇವಾಲಯಗಳು ಈ ಕಾಲದಲ್ಲಿ ತಯಾರಾಗಿದ್ದರು, ಪೂರ್ವಕ್ಕಿಂತ ಆರಾಧನೆಗಳು, ಅರ್ಚನೆಗಳು ಹೆಚ್ಚಾದರು, ಅವೆಲ್ಲವು ಮನುಷ್ಯನನ್ನು ದೈವತ್ವದಕಡೆ ಕಳುಹಿಸದೆ ಪಕ್ಕದ ದಾರಿಯಲ್ಲಿ ನಡೆಸುತ್ತವೆ. ಇನ್ನು ಇತರೆ ಮತಗಳಿಗೆ ಬಂದರೆ ಅಲ್ಲಿ ಅವರು ದೇವರ ಮೇಲಿನ ದೃಷ್ಟಿಗಿಂತ, ಮತವನ್ನು ವಿಸ್ತರಣೆ ಮಾಡುವುದರಲ್ಲಿಯೇ ಹೆಚ್ಚಿನ ದೃಷ್ಟಿಯನ್ನು ಹರಿಸುತ್ತಾರೆ. ತಮ್ಮ ಮತವನ್ನು ವಿಸ್ತರಣೆ ಮಾಡುವ ನಿಮಿತ್ತ, ಇತರೆ ಮತಗಳನ್ನು ಕಡಿಮೆಯಾಗಿ ಲೆಕ್ಕಹಾಕುವುದು, ಅದರಲ್ಲಿ ಹೇಳಲಾದ ದೈವತ್ವವನ್ನು ಸಹ ಕಡಿಮೆಯಾಗಿ ಹೇಳುವುದು ನಡೆಯುತ್ತಿದೆ. ಹಾಗೆ ಮಾಡುವುದರಿಂದ ತಮಗೆ ತಿಳಿಯದೆ, ದೈವದೂಷಣೆಗೆ ಪಾಲ್ಗೊಂಡವರಾಗುತ್ತಾರೆ. ಸರ್ವ ಪ್ರಪಂಚಕ್ಕು ಸೃಷ್ಟಿಕರ್ತನಾದ ದೇವರು ಎಲ್ಲರಿಗು ಅಧಿಪತಿಯಾಗಿರುವಾಗ, ನಮ್ಮ ಮತದಲ್ಲಿನ ದೇವರೇ ನಿಜವಾದ ದೇವರು, ಉಳಿದ ಮತಗಳಲ್ಲಿ ಹೇಳಲಾದ ದೇವರು, ದೇವರೇ ಅಲ್ಲ ಎನ್ನುವುದರಿಂದ, ಆ ಮಾತು ಎಷ್ಟು ತಪ್ಪಾಗುತ್ತದೊ ಅವರಿಗೆ ಅರ್ಥವಾಗಿಲ್ಲ. ಎಲ್ಲ ಮತಗಳಲ್ಲಿಯು ದೇವರ ವಿಷಯದಲ್ಲಿ ನಿಮ್ಮ ದೇವರು, ನಮ್ಮ ದೇವರು ಅನ್ನುವ ಭಾವನೆಯಿರುವುದರಿಂದ ಮನುಷ್ಯರು ದೇವರನ್ನು ಕಡಿಮೆಯಾಗಿ ಲೆಕ್ಕಹಾಕಿದಂತಾಗಿದೆ. ವಿಶ್ವಕ್ಕೆಲ್ಲಾ ದೇವರು ದೊಡ್ಡವನಾದಾಗ, ಪ್ರತಿ ಮನುಷ್ಯನೊಂದಿಗೆ ದೇವರಿಗೆ ಸಂಬಂಧವಿರುವಾಗ, ಪ್ರತಿ ಮನುಷ್ಯ ದೇವರ ಕಡೆ ಹೋಗುವುದಕ್ಕೆ ಪ್ರಯತ್ನಿಸಬೇಕು. ಆದರೆ ಪ್ರತಿ

ಮನುಷ್ಯ ಮತದ ಕಡೆಗೆ ಹೋಗುವುದಕ್ಕೆ ಪ್ರಯತ್ನಿಸುತ್ತಿದ್ದಾನೆ. ದೇವರು ಮತಗಳಿಗೆ ಅತೀತನು. ಒಂದು ಮತಕ್ಕೂ ಸಂಬಂಧಿಸಿದವನಲ್ಲ. ಎಲ್ಲ ಮತಗಳ ಮನುಷ್ಯರಿಗೆ ಅಧಿಪತಿಯಾದವನು ದೇವರು. ಮನುಷ್ಯನಲ್ಲಿ ಮತ ಭಾವವಿದ್ದರೆ, ದೈವತ್ವ ಮನುಷ್ಯನಿಗೆ ದೂರವಾಗುತ್ತದೆ. ಏಕೆಂದರೆ ಮತಗಳಿಗೆ ದೇವರು ಅತೀತನಾಗಿರುವುದರಿಂದ, ಮತಾತೀತ ಭಾವವಿರುವವನ ಪಕ್ಕದಲ್ಲಿ ದೇವರಿರುವನು. ಮತ ಎಂದರೆ ಮೌಢ್ಯದಿಂದ ಕೂಡಿಕೊಂಡಿರುವುದೆಂದು ಅರ್ಥ. ಆದ್ದರಿಂದ ಮನುಷ್ಯನ ಮತ, ದೇವರ ಪಥಕ್ಕೆ ಆತಂಕವಾಗಿದೆಯೆಂದು ಅರ್ಥವಾಗುತ್ತಿದೆ. ಜ್ಞಾನದೃಷ್ಠಿಯಿಂದ ನೋಡಿದರೆ ಪ್ರತಿ ಮತವು ದೇವರ ವಿಧಾನದಲ್ಲಿ ಮನುಷ್ಯನನ್ನು ಪಕ್ಕದಾರಿ ಇಡಿಸುತ್ತದೆ. ಆದ್ದರಿಂದ ಮತವು ಮೌಢ್ಯದಿಂದ ಕೂಡಿಕೊಂಡಿದೆಯೆಂದು ಹೇಳುತ್ತಿದ್ದೇವೆ.

ಮತ ದೇವರ ಜ್ಞಾನವನ್ನು ತಿಳಿಸುತ್ತದೆಂದು ಎಲ್ಲರೂ ಅಂದುಕೊಳ್ಳಬಹುದು. ಹಾಗೆ ತಿಳಿಸಿದರೆ, ಯಾವ ಮತದಲ್ಲಿಯು ಮೌಢ್ಯವಿರುವುದಿಲ್ಲ. ಆದರೆ ಹಾಗೆ ಯಾವ ಮತವು ಹೇಳುವುದಿಲ್ಲ. ಮತ ಎನ್ನುವುದು ಯಾವುದಾದರಾಗಲಿ ದೇವರ ಸ್ಪಷ್ಠವಾದ ವಿಧಾನವನ್ನು ತಿಳಿಸದಂತೆ, ಮತ ತನ್ನವೊಂದು ವಿಧಾನವನ್ನು ಮನುಷ್ಯರ ಮೇಲೆ ತಿದ್ದುತ್ತಿದೆ. ಆದ್ದರಿಂದ ಯಾವ ಮನುಷ್ಯನನ್ನು ನೋಡಿದರು, ಇವನು ಇಂತದ್ದೇ ಮತದವನು ಎಂದು ಗುರುತಿಸುವುದಕ್ಕೆ ಅವಕಾಶವಿರುವಂತೆ ಅವನ ಮತ, ಅವನನ್ನು ಹಾಗೆ ಕಾಣುವಂತೆ ಮಾಡುತ್ತಿದೆ. ಆದರೆ ಯಾವ ಮನುಷ್ಯನನ್ನು ನೋಡಿದರೂ ಇವನು ದೈವಜ್ಞಾನಿ ಎಂದು ತಿಳಿಯುವುದಕ್ಕೆ ಅವಕಾಶವಿಲ್ಲದೆ, ಮತ ಅವನನ್ನು ಮುಚ್ಚಿಹಾಕಿ ಇಂತಹ ಮತದವನೆಂದು ತಿಳಿಯುವಂತೆ ಮಾಡಿದೆ. ಪ್ರತಿ ಮತವು ಮನುಷ್ಯನ ಮೇಲೆ ತನ್ನದೇ ಆದ ಮುದ್ರೆಯನ್ನು ಹಾಕಿ, ದೇವರ ವಿಧಾನವನ್ನು ಕುರಿತು ತಿಳಿದುಕೊಳ್ಳುವ ಅವಕಾಶವೆ ಇಲ್ಲದಂತೆ ಮಾಡುತ್ತಿದೆ. ಉದಾಹರಣೆಗೆ ಸ್ವರ್ಗ, ನರಕಗಳ ವಿಷಯವನ್ನು ತೆಗೆದುಕೊಳ್ಳೋಣ. ಪ್ರತಿ ಮತವು ಸ್ವರ್ಗ, ನರಕಗಳನ್ನು ಕುರಿತು ಹೇಳಿ ನಮ್ಮ ಮಾತುಗಳೇ ನಿಮಗೆ ಶಿರೋಧಾರ್ಯ ಎನ್ನುವಂತೆ ಮಾಡಿವೆ. ಆದ್ದರಿಂದ ಮನುಷ್ಯ ಅವನ ಮತದಲ್ಲಿ ಹೇಳಿದಂತೆ

ಸ್ವರ್ಗ, ನರಕಗಳಿವೆಯೆಂದು ಅಂದುಕೊಳ್ಳುತ್ತಿದ್ದಾನೆ. ಆ ವಿಧಾನವನ್ನೇ ಉಳಿದವರಿಗು ಸಹ ಹೇಳುತ್ತಿದ್ದಾನೆ. ನಾನು ಹೇಳುವುದು ವಾಸ್ತವವಾ? ಎಂದು ಯಾವ ಮನುಷ್ಯ ತನ್ನನ್ನು ತಾನು ಪ್ರಶ್ನಿಸಿಕೊಳ್ಳುತ್ತಿಲ್ಲ. ಹಾಗೆ ಪ್ರಶ್ನಿಸಿಕೊಂಡರೆ, ಆ ಪ್ರಶ್ನೆಗಳು ಹೀಗೆ ಇರುತ್ತವೆ. ಹಿಂದೂಮತದಲ್ಲಿ ಹೇಳಿದ ಸ್ವರ್ಗ, ನರಕ ಎಲ್ಲಿವೆ? ಎಲ್ಲೋ ಮೇಲೆ ಇವೆಯೆನ್ನುವವರು ಅವುಗಳನ್ನು ನೋಡಿದ್ದಾರಾ? ನಕರದಲ್ಲಿ ಮನುಷ್ಯನನ್ನು ಬಾಧೆ ಇಡುವವರು ಯಾರು? ಅವರು ಹೇಗಿರುತ್ತಾರೆ? ಒಬ್ಬ ಮನುಷ್ಯನಿಗೆ ಶಿಕ್ಷೆ ಹಾಕುವುದಕ್ಕೆ ಒಬ್ಬನಿಗೆ ಇಬ್ಬರಾದರು ಬೇಕು. ಹಾಗೆ ನೋಡಿದರೆ ಮನುಷ್ಯರಿಗಿಂತ ಶಿಕ್ಷಿಸುವವರ ಸಂಖ್ಯೆಯೇ ಹೆಚ್ಚಾಗಿ ಇರಬೇಕು. ಅಂತಹವರಿಗೆ ಕೂಳು, ಬಟ್ಟೆ ಎಲ್ಲಿಂದ ಬರುತ್ತವೆ? ಅವರಿಗೆ ವೇತನಗಳನ್ನು ಯಾರು ಕೊಡುತ್ತಾರೆ? ಸ್ವರ್ಗದೊಳಗೆ ಹೋದವನಿಗೆ ರಂಭೆ, ಊರ್ವಶಿ ಮೊದಲಾದವರ ಸಾನ್ನಿಹಿತ್ಯಸಂಪರ್ಕ ಲಭಿಸುತ್ತದೆಂದು ಅನ್ನುತ್ತಾರೆ. ಅದು ನಿಜವೆ? ನಿಜವಾದರೆ ಸ್ವರ್ಗದಲ್ಲಿರುವ ರಂಭೆ, ಊರ್ವಶಿಯರು ಒಬ್ಬೊಬ್ಬರೆ ಅಲ್ಲವೆ! ಮನುಷ್ಯರೊಂದಿಗೆ ಅವರು ಸನ್ನಿಹಿತವಾಗಿ ಇರಬೇಕೆಂದರೆ ಸ್ವರ್ಗಕ್ಕೆ ಹೋದ ಮನುಷ್ಯರು ತಿಂಗಳುಗಳು, ಸಂವತ್ಸರಗಳು ಕಾದುಕೊಂಡು ಕ್ಯೂನಲ್ಲಿ ನಿಂತುಕೊಳ್ಳಬೇಕಲ್ಲ! ಎಲ್ಲರಿಗು ರಂಭೆ ಬೇಕೆಂದರೆ, ಕಾದುಕೊಂಡು ಇರುವುದಕ್ಕೆ ಎಷ್ಟು ಕಾಲ ಬೇಕಾಗುತ್ತದೆ? ಹೀಗೆ ಹೇಳಿಕೊಳ್ಳುತ್ತಾ ಹೋದರೆ, ನೂರು ಪ್ರಶ್ನೆಗಳಿಗೆ ಮೇಲಾಗಿಯೆ ಬರುತ್ತವೆ. ಇತರೆ ಮತಗಳಲ್ಲಿ ಅವರು ಹೇಳುವುದು ನೋಡಿದರೆ, ಸ್ವರ್ಗಕ್ಕೆ ಹೋದವನಿಗೆ, ಸರೋವರಗಳಿರುವ ಉದ್ಯಾನವನಗಳಲ್ಲಿ ತಣ್ಣನೆಯ ಗಾಳಿಯಲ್ಲಿ, ಅಂದವಾದ ಹೆಂಗಸರೊಂದಿಗೆ ಸುಖವಾಗಿ ಇರುವಂತೆ ದೇವರು ಮಾಡುತ್ತಾನೆಂದು ಅನ್ನುತ್ತಿರುತ್ತಾರೆ. ಹಾಗೆ ಸ್ವರ್ಗಕ್ಕೆ ಹೋದ ಪ್ರತಿಯೊಬ್ಬನಿಗು ಅಂದವಾದ ನಾಲ್ವರು ಹೆಂಗಸರನ್ನು ಆತನಿಗೆ ಕೊಟ್ಟರೂ, ಅಲ್ಲಿಗೆ ಹೋದವರೆಲ್ಲರಿಗು ಎಷ್ಟು ಜನ ಹೆಂಗಸರು ಬೇಕಾಗುತ್ತಾರೆ? ಗಂಡಸನು ಸ್ವರ್ಗಕ್ಕೆ ಹೋದರೆ ಅಲ್ಲಿ ಆತನನ್ನು ಸುಖಪಡಿಸುವುದಕ್ಕೆ ಅಂದವಾದ ಪ್ರದೇಶ, ಅಂದವಾದ ಸ್ತ್ರೀಯರು ಇರುತ್ತಾರೆ. ಒಂದುವೇಳೆ ಹೆಂಗಸರು ಸ್ವರ್ಗಕ್ಕೆ ಹೋದರೆ ಅವರು ಸುಖಪಡುವುದಕ್ಕೆ ಅಂದವಾದ ಪ್ರದೇಶವಿರುತ್ತದೆ, ಆದರೆ ಅಂದವಾದ ಪುರುಷರು ಇರುತ್ತಾರಾ?

ಸ್ವರ್ಗ ಹೆಂಗಸರಿಗೆ ಇರುವುದಿಲ್ಲವೆ? ಪುರುಷರಿಗೆ ಮಾತ್ರವೆ ಇರುತ್ತದಾ? ಪುರುಷರಿಗೆ ಮಾತ್ರವೆ ಸ್ವರ್ಗವೆಂದರೆ, ದೇವರು ಹೆಂಗಸರಿಗೆ ಅನ್ಯಾಯ ಮಾಡಿದಂತೆ ಅಲ್ಲವೆ? ಅದರಿಂದ ದೇವರು ಎಲ್ಲರಿಗು ಸಮಾನವಲ್ಲ ಅಲ್ಲವೆ? ಹೀಗೆ ಅನೇಕ ಪ್ರಶ್ನೆಗಳು ಬರಬಹುದು. ಹೀಗೆ ಪ್ರಶ್ನೆಗಳು ಹಾಕಿಕೊಂಡು ನೋಡಿದರೆ, ದೇವರ ಪಾತ್ರಕ್ಕೆ ಬೆಲೆ ಇಲ್ಲದಂತೆ ಹೋಗುತ್ತದೆ. ಪ್ರಶ್ನಿಸಿಕೊಳ್ಳದೆ ಹೋದರೆ ಮೂಢನಂಬಿಕೆಯಾಗಿ ದೇವರ ವಿಧಾನವನ್ನು ತಿಳಿದುಕೊಳ್ಳದವರಾಗಿ ಹೋಗುತ್ತೇವೆ. ಆದ್ದರಿಂದ ಮನುಷ್ಯ ಸ್ವರ್ಗ, ನರಕಗಳ ವಿಷಯದಲ್ಲಿ ದೇವರ ವಾಸ್ತವ ವಿಧಾನವನ್ನು ತಿಳಿದುಕೊಳ್ಳುವಂತೆ, ಪ್ರತಿ ಪ್ರಶ್ನೆಗು ಉತ್ತರ ದೊರಕುವಂತೆ ಈ ಗ್ರಂಥದಲ್ಲಿ ಬರೆಯಲಾಗಿದೆ. ದೇವರ ವಿಧಾನವನ್ನು ಮನುಷ್ಯ ತಿಳಿದುಕೊಳ್ಳುವವರೆಗೂ ದೇವರನ್ನು ಮನುಷ್ಯ ಗುರುತಿಸಲಾರನು. ಆದ್ದರಿಂದ ಸರ್ವ ಸೃಷ್ಟಿಗೆ ಅಧಿಪತಿಯಾದ ದೇವರ ಪ್ರಭುತ್ವವನ್ನು ಕುರಿತು ಇದರಲ್ಲಿ ಸಂಪೂರ್ಣವಾಗಿ ಬರೆಯಲಾಗಿದೆ. ದೇವರ ಪ್ರಭುತ್ವ ಮತ್ತು ಪರಿಪಾಲನಾ ವಿಧಾನವನ್ನು ತಿಳಿದುಕೊಂಡರೆ, ಎಲ್ಲ ಮತದವರ ಸಂಶಯಗಳು ನಿವಾರಣೆ ಆಗುತ್ತವೆ. ಹಾಗಲ್ಲದೆ ಬರೆದ ನಮ್ಮನ್ನು ಅಸೂಯೆದಿಂದ ನೋಡಿದರು, ಅವರು ದೈವದೂಷಣೆಯ ಪಾಪವನ್ನು ಹೊಂದಬೇಕಾಗಿಬರುತ್ತದೆ. ಇದರಲ್ಲಿ ಹೇಳಿದ ಸಮಾಚಾರವನ್ನು ನನ್ನ ಹಿಂದೆ ಇರುವವನು ಹೇಳಿದ್ದಾನೆ. ಆದ್ದರಿಂದ ನೀವು ನನ್ನನ್ನು ದೂಷಿಸಿದರು, ಆ ದೂಷಣೆ ನೇರವಾಗಿ ನನ್ನ ಹಿಂದೆ ಇರುವವನಿಗೆ ಸೇರುತ್ತದೆ. ಆದ್ದರಿಂದ ನೀವು ನಮ್ಮ ಮಾತನ್ನು ನಂಬದೆಹೋದರೂ ಪರವಾಗಿಲ್ಲ. ದೈವದೂಷಣೆಗೆ ಪಾತ್ರರಾಗಬೇಡಿ. ದೈವದೂಷಣೆಯ ಪಾಪ ಕ್ಷಮಿಸಲ್ಪಡದೆ, ಎರಡು ಯುಗಗಳು ಅನುಭವಿಸಬೇಕಾಗಿ ಬರುತ್ತದೆ. ನೀವು ದೇವರ ಬಗ್ಗೆ ಸತ್ಯವನ್ನು ತಿಳಿದುಕೊಳ್ಳಿ, ಸತ್ಯವನ್ನೇ ಇತರರಿಗೆ ಹೇಳಿ. ಹಾಗೆ ಮಾಡಿದರೆ ಅದು ದೇವರ ಸೇವೆ ಆಗುತ್ತದೆ. ನೀವು ಸಹ ದೇವರ ಸೇವಕರಾಗಬೇಕೆಂದು ಕೋರುತ್ತಿದ್ದೇವೆ.

ಇಂತಿ

**ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಮುಖ್ಯವಿಷಯ

ಈ ಗ್ರಂಥವನ್ನೆಲ್ಲಾ ಕೊನೆಯವರೆಗು ಓದಿದವರಿಗೆ ದೇವರು, ದೇವರವೊಂದು ಕಾನೂನು, ಪರಿಪಾಲನೆ ಅರ್ಥವಾಗಿರುತ್ತದೆ. ಅಂತಹವರು ಈಗಿನಿಂದಲಾದರು ಮಾಯದ ಕಡೆ ಹೋಗದಂತೆ, ದೇವರ ಕಡೆಗೆ ಹೋಗುವುದಕ್ಕೆ, ಕಳೆದ ಜನ್ಮಗಳಲ್ಲಿ ನಾವು ಮಾಡಿಕೊಂಡ ಪಾಪ (ಕರ್ಮ)ಗಳಿಂದ ಹೊರಬೀಳುವುದಕ್ಕೆ, ಸುಲಭವಾದ ಉಪಾಯವನ್ನು ಹೇಳಬಯಸುತ್ತೇವೆ. ಆ ಉಪಾಯವನ್ನು ಸಹ ಆರನೆ ಶಾಸ್ತ್ರವಾದ ಬ್ರಹ್ಮವಿದ್ಯಾಶಾಸ್ತ್ರದಲ್ಲಿರುವ ಆಧಾರದಿಂದಲೇ ಹೇಳುತ್ತಿದ್ದೇನೆ. ಒಬ್ಬ ಮನುಷ್ಯ ಮೃತ್ಯುಕೂಪ, ನರಕಕೂಪವಾದ ಪ್ರಪಂಚವನ್ನು ಬಿಟ್ಟು ಪರಮಾತ್ಮನಾದ ದೇವರ ಬಳಿಗೆ ಸೇರಬೇಕೆಂದರೆ, ಪ್ರಸ್ತುತ ಭಕ್ತಿ ಗುಂಪಿಗೆ ಸೇರಿರುವವು ಮತ್ತು ಎಲ್ಲರು ಆಚರಿಸುವವು ಆದ ವ್ರತ ಕ್ರತುಗಳು, ಯಜ್ಞಯಾಗಾದಿಗಳು, ವೇದಾಧ್ಯಯನಗಳು, ವೇದ ಮಂತ್ರಗಳನ್ನು ಓದುವುದರಿಂದ ಮಾಡುವ ಆರಾಧನೆಗಳು, ಪ್ರಪಂಚದಲ್ಲಿನ ದಾನಗಳಾದ ಗೋದಾನ, ಭೂದಾನ, ಅನ್ನದಾನ, ಧನದಾನ ಮೊದಲಾದ ದಾನಗಳು, ಚಿಕ್ಕ ಧ್ಯಾನದಿಂದ ದೊಡ್ಡ ತಪಸ್ಸುಗಳು ಮೊದಲಾದವುಗಳೆಲ್ಲವು ದೇವರನ್ನು ಸೇರುವುದಕ್ಕೆ ಕೆಲಸಕ್ಕೆ ಬಾರವು. ಈ ವಿಧಾನಗಳು ದೇವರನ್ನು ತಿಳಿದುಕೊಳ್ಳುವುದಕ್ಕೆ ಕೆಲಸಕ್ಕೆ ಬರುವುದಿಲ್ಲ. ಈ ವಿಧಾನಗಳಿಂದ ದೇವರನ್ನು ತಿಳಿಯುವುದಕ್ಕೆ ಶಕ್ಯವಲ್ಲ ಎಂದು ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗ ಎನ್ನುವ ಅಧ್ಯಾಯದಲ್ಲಿ 48ನೇ ಶ್ಲೋಕದಲ್ಲಿ ಮತ್ತು 53ನೇ ಶ್ಲೋಕದಲ್ಲಿ ಭಗವಂತನೇ ಸ್ವತಃವಾಗಿ ಹೇಳಿದ್ದಾನೆ. ಪ್ರಸ್ತುತ ಕಾಲದಲ್ಲಿ ಭಕ್ತಿ ಅನ್ನುವುದು ಯಾರಿಗಾದರೂ ಇದ್ದರೆ, ಅದು ಮೇಲೆ ಹೇಳಿದ ವಿಧಾನದಲ್ಲಿಯೇ ಇರುತ್ತದೆ. ಆಗಿರುವಾಗ ಅವರು ಭಕ್ತಿ ವಿಧಾನದಲ್ಲಿ ಪಟ್ಟ ಶ್ರಮ, ಖರ್ಚು ಎಲ್ಲವೂ ವ್ಯರ್ಥವೆಂದು ಹೇಳಬಹುದು. ಇದು ನನ್ನ ಮಾತಲ್ಲ ಗೀತೆಯಲ್ಲಿ ಭಗವಂತನ ಮಾತೆಂದು ನೆನಪಿಟ್ಟುಕೊಳ್ಳಬೇಕು.

ನಾವು ಮಾಡುವ ಪೂಜೆಗಳು, ಅರ್ಚನೆಗಳು, ಯಜ್ಞಗಳು, ಹರಕೆಗಳು, ಮುಡುಪುಗಳು ಎಲ್ಲ ವೃಥಾ ಆದರೆ ಇನ್ನು ಸರಿಯಾದ ಮಾರ್ಗಯಾವುದು

ಎಂದು ಯಾರಾದರು ಕೇಳಬಹುದು. ಅದಕ್ಕೆ ಸಮಾಧಾನ ಭಗವದ್ಗೀತೆಯಲ್ಲಿಯೇ ಇದೆ. ದೇವರನ್ನು ತಿಳಿಯಬೇಕೆಂದರೆ, ದೇವರ ಬಳಿಗೆ ಸೇರಬೇಕೆಂದರೆ "ಯೋಗ" ಎನ್ನುವ ಮಾರ್ಗವನ್ನು ಹೊರತು ಬೇರೆ ಮಾರ್ಗವಿಲ್ಲ. **ಯೋಗ** ಎನ್ನುವುದು ಧ್ಯಾನಗಳು, ತಪಸ್ಸುಗಳಿಗಿಂತ, ಯಜ್ಞಗಳಿಗಿಂತ, ದಾನಗಳಿಗಿಂತ ಪ್ರತ್ಯೇಕವಾದದ್ದು. ಭಗವದ್ಗೀತೆಯಲ್ಲಿ ಭಗವಂತನು ಯೋಗ ಎರಡು ವಿಧಗಳಾಗಿ ಇದೆಯೆಂದು ಒಂದು **ಕರ್ಮಯೋಗ,** ಎರಡು **ಬ್ರಹ್ಮಯೋಗ** ಎಂದು ಹೇಳಿ ಅವುಗಳ ಆಚರಣೆಯನ್ನು ಸಹ ಹೇಳಿದ್ದಾನೆ. ಈ ಎರಡು ಯೋಗ ವಿಧಾನಗಳು ಮನುಷ್ಯನನ್ನು ದೇವರ ಬಳಿಗೆ ಸೇರಿಸುವಂತವುಗಳು. ಕರ್ಮ, ಬ್ರಹ್ಮ ಅನ್ನುವ ಎರಡು ಯೋಗಗಳನ್ನು ತಿಳಿದುಕೊಂಡರೆ ಅವು ಪ್ರಸ್ತುತವಿರುವ ಭಕ್ತಿ ವಿಧಾನಗಳಿಗಿಂತ ಸುಲಭವಾದವೆ. ಅರ್ಚನೆಗಳು, ಯಜ್ಞಗಳು, ತಪಸ್ಸುಗಳಿಗಿಂತ ಸುಲಭವಾದವುಗಳೇ ಅಲ್ಲದೆ, ಯಾವ ಖರ್ಚು, ಶ್ರಮ ಇಲ್ಲದವುಗಳೆಂದು ಹೇಳಬಹುದು. ಯೋಗಗಳಲ್ಲಿ ಕರ್ಮಯೋಗದಿಂದ ನಮ್ಮಲ್ಲಿನ ಅಹಂನ್ನು ಅಡಗಿಸಿಕೊಳ್ಳುವುದೆ ನಾವು ಮಾಡಬೇಕಾದ ಕೆಲಸ. ಇದರಲ್ಲಿ ಪೈಸಾ ಖರ್ಚು ಇರುವುದಿಲ್ಲ. ಇನ್ನು ಬ್ರಹ್ಮಯೋಗದಲ್ಲಿ ನಮ್ಮಲ್ಲಿನ ಮನಸ್ಸನ್ನು ಅಡಗಿಸಿಕೊಳ್ಳುವುದೇ ಕೆಲಸವಾಗಿದೆ. ಇದರಲ್ಲಿ ಸಹ ಯಾವ ಖರ್ಚು ಇಲ್ಲ. ಶರೀರದಲ್ಲಿ ಅಹಂನ್ನು, ಮನಸ್ಸನ್ನು ನಿಲ್ಲಿಸುವುದು ಅಭ್ಯಾಸದ ಮೇಲೆ ಆಧಾರಪಟ್ಟಿರುತ್ತದೆ. ಅಭ್ಯಾಸ ಶ್ರದ್ಧೆಯಿಂದ ಲಭ್ಯವಾಗುತ್ತದೆ. ಕೊನೆಗೆ ಶ್ರದ್ಧೆಯು ಸಹ ಕಷ್ಟ, ಖರ್ಚು ಇಲ್ಲದ್ದು ಯಾವ ಕಷ್ಟ, ಖರ್ಚು ಇಲ್ಲದ ಸುಲಭವಾದ ವಿಧಾನವನ್ನು ಭಗವಂತನು ಹೇಳಿದರೆ, ಅಂತವುಗಳನ್ನು ಬಿಟ್ಟು, ವ್ಯಯ ಪ್ರಯಾಸಗಳಿಂದ ಕೂಡಿಕೊಂಡ ಭಕ್ತಿಯನ್ನೆ ಮನುಷ್ಯ ಆಚರಿಸುತ್ತಿದ್ದಾನೆ. ಕಷ್ಟ, ಖರ್ಚಿನಿಂದ ಕೂಡಿಕೊಂಡ ಕೆಲಸವಾದ ಭಕ್ತಿ ವಿಧಾನದಲ್ಲಿ ಒಂದನ್ನು ಉದಾಹರಣೆಗೆ ಹೇಳಿಕೊಳ್ಳೋಣ.

ಒಬ್ಬ ವ್ಯಕ್ತಿ ತಿರುಪತಿ ವೆಂಕಟೇಶ್ವರ ಸ್ವಾಮಿಗೆ ವ್ಯಾಪಾರದಲ್ಲಿ ಲಾಭಬಂದರೆ ಅದರಲ್ಲಿ ಹತ್ತರಷ್ಟು ನಿನ್ನ ಹುಂಡಿಯಲ್ಲಿ ಹಾಕುತ್ತೇನೆಂದು ಹರಕೆ ಮಾಡಿಕೊಂಡನು.

ವರ್ಷದ ನಂತರ ತನ್ನ ವ್ಯಾಪಾರದಲ್ಲಿ ಸ್ವಲ್ಪ ಲಾಭ ಕಾಣಿಸಿದಾಗ, ವೆಂಕಟೇಶ್ವರಸ್ವಾಮಿಗೆ ಹರಕೆ ಮಾಡಿಕೊಂಡ ಹಾಗೆ ಬಂದ ಲಾಭದಲ್ಲಿ ಹತ್ತರಷ್ಟು, ತಿರುಪತಿಗೆ ಹೋಗಿ ವೆಂಕಟೇಶ್ವರ ಸ್ವಾಮಿ ಹುಂಡಿಯಲ್ಲಿ ಹಾಕಿಬಂದನು. ಅಲ್ಲಿಗೆ ಹೋಗಿ, ಒಂದು ಲಕ್ಷರೂಪಾಯಿಗಳನ್ನು ಹುಂಡಿಯಲ್ಲಿ ಹಾಕಿ ಬರುವುದಕ್ಕೆ, ಒಟ್ಟು ಆರು ದಿನಗಳ ಕಾಲ ಬೇಕಾಗಿದೆ. ವೆಂಕಟೇಶ್ವರಸ್ವಾಮಿ ದರ್ಶನಕ್ಕೆ ಸಾಲಿನಲ್ಲಿ ಎರಡು ದಿನಗಳು ನಿಂತುಕೊಳ್ಳಬೇಕಾಗಿತ್ತು. ತನ್ನ ಊರಿನಲ್ಲಿ ಹೊರಟಾಗಿನಿಂದ ಒಂದುಕಡೆ ಕಷ್ಟ, ಒಂದು ಕಡೆ ಖರ್ಚು ಎರಡೂ ತಗುಲಿಕೊಂಡಿವೆ. ಹಾಗೆ ಮೊದಲು ವ್ಯಾಪಾರ ಪ್ರಾರಂಭಿಸಿದಾಗ ಪ್ರಾರಂಭಿಸಿದ ಭಕ್ತಿ, ವ್ಯಾಪಾರ ಬೆಳೆಯುತ್ತಾ ಲಾಭ ಬರುವುದರಿಂದ ವೆಂಕಟೇಶ್ವರಸ್ವಾಮಿಯೆ ನನಗೆ ಹಣಕೊಡುತ್ತಿದ್ದಾನೆಂದು, ಆತನಿಂದಲೆ ನನ್ನ ವ್ಯಾಪಾರ ಅಭಿವೃದ್ಧಿ ಆಗುತ್ತಿದೆಯೆಂದುಕೊಂಡ ಆ ಭಕ್ತನು, ಪ್ರತಿ ವರ್ಷವೂ ಬೆಟ್ಟಕ್ಕೆ ಹೋಗಿ ಗುಂಡುಹೊಡೆಸಿಕೊಂಡು ಮುಡುಪುಗಳನ್ನು ಸಲ್ಲಿಸಿ ಬರುತ್ತಿದ್ದನು. ಆತನು ಮಾಡುವ ವ್ಯಾಪಾರದಲ್ಲಿ ವಿಪರೀತವಾದ ಲಾಭ ಬಂದಿದೆ. ಆದ್ದರಿಂದ ಕೆಲವೆ ವರ್ಷಗಳೊಳಗೆ ಆತನು ಕೋಟೀಶ್ವರನಾದನು. ಅದೆಲ್ಲವು ವೆಂಕಟೇಶ್ವರಸ್ವಾಮಿ ತನ್ನ ಮೇಲೆ ದಯೆ ತೋರಿಸಿರುವುದರಿಂದಲೆ ನಡೆದಿದೆಯೆಂದು ಅಂದುಕೊಂಡನು. ಆ ವಿಧವಾಗಿ ಆತನಿಗೆ ವೆಂಕಟೇಶ್ವರಸ್ವಾಮಿ ಮೇಲೆ ಅಪಾರವಾದ ವಿಶ್ವಾಸ ಏರ್ಪಟ್ಟಿತು.

ತಾನು ಮಾಡುವ ವ್ಯಾಪಾರದಲ್ಲಿ ಬರುವ ವಿಪರೀತವಾದ ಲಾಭದಲ್ಲಿ ಕೋಟಿ ರೂಪಾಯಿಗಳನ್ನು ಹುಂಡಿಯಲ್ಲಿ ಹಾಕುವುದನ್ನು ಬಿಟ್ಟು, ವೆಂಕಟೇಶ್ವರ ಸ್ವಾಮಿಗೆ ಬಂಗಾರದ ಆಭರಣವನ್ನು ಶಾಶ್ವತವಾಗಿ ಇರುವಂತೆ ಮಾಡಿಸಬೇಕೆಂದು ಕೊಂಡನು. ಅಂದುಕೊಂಡ ತಕ್ಷಣವೆ ಸ್ವಾಮಿ ಪ್ರತಿಮೆಗೆ ತಕ್ಕಂತೆ ಕಿರೀಟವನ್ನು ಮಾಡಿಸಬೇಕೆಂದುಕೊಂಡನು. 42 ಕೋಟಿ ರೂಪಾಯಿಗಳು ಖರ್ಚಿಟ್ಟು ಬಂಗಾರದ ಕಿರೀಟವನ್ನು ಮಾಡಿಸಿದನು. ಒಂದು ಶುಭ ದಿನ ಆ ಕಿರೀಟವನ್ನು ವೆಂಕಟೇಶ್ವರ ಸ್ವಾಮಿಗೆ ತಿರುಮಲಕ್ಕೆ ಹೋಗಿ ಸಮರ್ಪಿಸಿ ಬಂದನು. ನಂತರ ಎರಡನೇ ವರ್ಷದಿಂದ ಆ ವ್ಯಕ್ತಿಗೆ ನಷ್ಟಗಳು ಆಗುವುದಕ್ಕೆ ಪ್ರಾರಂಭಿಸಿದವು.

ನಷ್ಟದಲ್ಲಿ ಅಪಾರನಷ್ಟ ಏರ್ಪಟ್ಟಿದೆ. ತಾನು ಮಾಡುವ ವ್ಯಾಪಾರ ಅಕ್ರಮವೆಂದು ಪ್ರಭುತ್ವವೆ ಆತಂಕಪಡಿಸಿದೆ. ತನ್ನ ವ್ಯಾಪಾರ ನಿಂತು ಹೋಯಿತು. ಹಾಗೆ ನಿಂತುಹೋಗಿರುವುದೆ ಅಲ್ಲದೆ, ಕೋರ್ಟಿನ ವ್ಯವಹಾರದಲ್ಲಿ ಸಹ ಸಿಲುಕಿಕೊಳ್ಳಬೇಕಾಗಿ ಬಂದಿತು. ಈ ವಿಧವಾಗಿ ಒಂದಕ್ಕೊಂದು ಎಲ್ಲ ವಿರುದ್ಧಗಳೆ ಎದುರಾಗಿವೆ. ಇದನ್ನರಿತು ನೋಡಿದರೆ ಇಲ್ಲಿಯವರೆಗು ವೆಂಕಟೇಶ್ವರನು ಆದಾಯವನ್ನು ಮಾಡಿಕೊಟ್ಟು ಈಗ ಏಕೆ ಆದಾಯವನ್ನು ಮಾಡಿಕೊಡಲಿಲ್ಲ ಎನ್ನುವ ಪ್ರಶ್ನೆ ಬರುತ್ತದೆ. ಆ ಪ್ರಶ್ನೆಗೆ ಉತ್ತರವನ್ನು ನೋಡಿದರೆ ಈ ವಿಧವಾಗಿದೆ.

ಮಾನವನ ಜೀವನದಲ್ಲಿ ಪ್ರತಿಯೊಂದು ನಡೆಯುವುದಕ್ಕೆ ಒಂದು ಕಾರಣವಿರುತ್ತದೆ. ಪ್ರತಿ ಕೆಲಸಕ್ಕಿರುವ ಹೇತುವನ್ನು (ಕಾರಣ) ನೋಡಿದರೆ, ಆ ಹೇತುವು ಕಳೆದ ಜನ್ಮಗಳಲ್ಲಿ ನಾವು ಮಾಡಿಕೊಂಡ ಪಾಪಪುಣ್ಯಗಳೆಂದು ತಿಳಿಯುತ್ತಿದೆ. ವೆಂಕಟೇಶ್ವರಸ್ವಾಮಿ ಭಕ್ತನಿಗೆ ಜೀವನದಲ್ಲಿ ಪುಣ್ಯ ಜಾರಿಗೆ ಬಂದ ಕಾರಣ ಆತನು ಮಾಡುತ್ತಿರುವ ವ್ಯಾಪಾರದಲ್ಲಿ ಲಾಭ ಬರಲು ಪ್ರಾರಂಭವಾಯಿತು. ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಆತನಿಗೆ ಪುಣ್ಯ ಫಲವನ್ನು ಕೊಡುವ ಒಳ್ಳೆಯ ದೆಸೆ ಇರುವುದರಿಂದ, ಆ ಲಾಭ ಬಂದಿದೆ. ಲಾಭಕ್ಕೆ ಹೇತುವು ತನ್ನ ಪುಣ್ಯವೆಂದು ತಿಳಿಯದ ಆ ವ್ಯಕ್ತಿ, ಅದೆಲ್ಲವು ವೆಂಕಟೇಶ್ವರನಿಂದಲೆ ಬಂದಿದೆಯೆಂದುಕೊಂಡು ಸ್ವಾಮಿಗೆ ಮುಡುಪುಗಳನ್ನು ಸಲ್ಲಿಸುತ್ತಾ, ಕೊನೆಗೆ ದೊಡ್ಡ ಕಿರೀಟವನ್ನೆ ಮಾಡಿಸಿದ್ದಾನೆ. ಪುಣ್ಯ ಮುಗಿದ ತಕ್ಷಣವೆ, ಲಾಭ ಬರದಂತೆ ಹೋಗಿರುವುದೆ ಅಲ್ಲದೆ ಪಾಪದ ಫಲವಾಗಿ ಕಷ್ಟಗಳು ಸಹ ಪ್ರಾರಂಭವಾಗಿವೆ. ಇದನ್ನನುಸರಿಸಿ ನೋಡಿದರೆ ಮೊದಲು ಲಾಭಕ್ಕಾಗಲಿ ಕೊನೆಯ ನಷ್ಟಕ್ಕಾಗಲಿ ವೆಂಕಟೇಶ್ವರ ಸ್ವಾಮಿ ಯಾವುದಕ್ಕು ಕಾರಣನು(ಹೇತು) ಅಲ್ಲ. ನೀವು ಆರಾಧಿಸುವ ದೇವರು, ನಿಮಗೆ ಏನು ಕೊಡುವವನಲ್ಲ ಎನ್ನುವ ವಿಷಯವನ್ನು ನಾವು ತಿಳಿದುಕೊಳ್ಳುವುದಕ್ಕೆ ಭಗವಂತನು ಭಗವದ್ಗೀತೆಯಲ್ಲಿ ಈ ವಿಧವಾಗಿ ಹೇಳಿದ್ದಾನೆ. (ವಿಜ್ಞಾನ ಯೋಗ 20,21,22,23,24 ಶ್ಲೋಕಗಳ ಸಾರಾಂಶ) 1) ಆಸೆ ಎನ್ನುವ ಗುಣದಿಂದ ಬಂಧಿಸಲ್ಪಟ್ಟವರಾಗಿ ನಿಯಮ ನಿಷ್ಟೆಗಳ ಪ್ರಕಾರ ದೇವರಲ್ಲದ ಇತರೆ ದೇವತೆಗಳನ್ನು

ಕೆಲವರು ಮನುಷ್ಯರು ಆರಾಧಿಸುತ್ತಿದ್ದಾರೆ. 2) ಯಾರು ಯಾವ ದೇವತೆಯನ್ನು ಪೂಜಿಸಬೇಕೆಂದುಕೊಳ್ಳುತ್ತಾರೊ, ಆ ದೇವತಾಭಕ್ತಿ ಮೇಲೆಯೆ ಅವರಿಗೆ ಶ್ರದ್ಧೆ ಇರುವಂತೆ ನಾನು ಮಾಡುತ್ತಿದ್ದೇನೆ. 3) ಆತನು ಶ್ರದ್ಧೆಯಿಂದ ದೇವತೆಯನ್ನು ಆರಾಧಿಸಿದಾಗ ಅದರಿಂದ ಆತನು ಕೋರಿಕೊಂಡ ಕೋರಿಕೆಗಳು ನೆರವೇರುವಂತೆ ನಾನೇ ಮಾಡುತ್ತಿದ್ದೇನೆ. 4) ತಿಳುವಳಿಕೆ ಇಲ್ಲದವರು ಹೊಂದುವ ಫಲವು ಸಹ ಅಷ್ಟು ಮಾತ್ರವೆ ಇರುತ್ತದೆ. ದೇವತಾ ಭಕ್ತರೆಲ್ಲ ದೇವತೆಗಳನ್ನೆ ಹೊಂದಿದರೆ, ನನ್ನ ಭಕ್ತರೆಲ್ಲರು ನನ್ನನ್ನು ಹೊಂದಬಲ್ಲರು. 5) ಬುದ್ಧಿ ಇಲ್ಲದವರು ಕೆಲವರು ನಾಶನವಿಲ್ಲದ, ಉತ್ತಮವಾದ ನನ್ನ ದೊಡ್ಡತನವನ್ನು ತಿಳಿಯದೆ, ಕಾಣಿಸದ ನನ್ನನ್ನು ಕಾಣಿಸುವ ದೇವತೆಯಂತೆ ಲೆಕ್ಕ ಹಾಕುತ್ತಾರೆ. ದೇವರು ಹೇಳಿದ ಈ ಮಾತುಗಳನ್ನು ಅನುಸರಿಸಿ ನೋಡಿದರೆ, ದೇವತೆಗಳನ್ನು ಪೂಜಿಸುವವರು ಬುದ್ಧಿ ಇಲ್ಲದವರು, ತಿಳುವಳಿಕೆ ಇಲ್ಲದವರೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೆ ದೇವತೆಗಳನ್ನು ಪೂಜಿಸುವವರು, ನನ್ನ ಕಡೆ ಬರಬಾರದೆನ್ನುವ ಭಾವನೆಯಿಂದ, ಅವರ ಕೋರಿಕೆಗಳನ್ನು ದೇವರೆ ನೆರವೇರಿಸುತ್ತಿದ್ದಾನೆ. ಅದನ್ನು ತಿಳಿಯದೆ ಅವರು ಪೂಜಿಸುವ ದೇವತೆಯೆ ನಮ್ಮ ಕೋರಿಕೆ ನೆರವೇರಿಸಿದೆಯೆಂದು, ದೇವತಾಭಕ್ತರು ಅಂದುಕೊಳ್ಳುವುದು ನಡೆಯುತ್ತಿದೆ. ವೆಂಕಟೇಶ್ವರಸ್ವಾಮಿ ಭಕ್ತನು ಸಹ ಹಾಗೆ ಅಂದುಕೊಂಡಿದ್ದನು. ನನ್ನ ಕೋರಿಕೆಗಳನ್ನು ನೆರವೇರಿಸಿ, ನನಗೆ ಲಾಭಬರುವಂತೆ ಮಾಡಿದ್ದಾನೆಂದು ಕೆಲವು ಕೋಟಿಗಳನ್ನು ಹುಂಡಿಯಲ್ಲಿ ಹಾಕುವುದೆ ಅಲ್ಲದೆ, ದೊಡ್ಡ ಕಿರೀಟವನ್ನು ಸಹ ಮಾಡಿಸಿದ್ದಾನೆ. ತನ್ನ ಕೋರಿಕೆಗಳನ್ನು ವೆಂಕಟೇಶ್ವರನು ನೆರವೇರಿಸಿಲ್ಲವೆಂಬ ಅಸಲು ವಿಷಯ ಆ ಭಕ್ತನಿಗೆ ತಿಳಿಯಲಿಲ್ಲ. **ಈಗ ನಾನು ಹೇಳಿದರೂ ಕೇಳುವ ಸ್ಥಿತಿಯಲ್ಲಿ ಇರುವುದಿಲ್ಲ.**

ಪ್ರತಿ ಕೆಲಸಕ್ಕು ಕಾಣಿಸದ ಫಲವಿರುತ್ತದಲ್ಲವೆ! ವೆಂಕಟೇಶ್ವರಸ್ವಾಮಿ ಭಕ್ತನು ಮಾಡಿದ ಆರಾಧನೆಗಳಿಗೆ ಫಲವಿರುವುದಿಲ್ಲವೆ ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಕಾಣಿಸುವ ಫಲವನ್ನು ದೇವರೆ ಕೊಟ್ಟು, ತನ್ನ ಕಡೆಗೆ ಬಾರದಂತೆ ದೇವರೆ ಮಾಡಿಕೊಳ್ಳುತ್ತಾನೆ. ಇನ್ನು ಕಾಣಿಸದ ಫಲ ಪುಣ್ಯ

ಬರುತ್ತದೆ. ಪುಣ್ಯದಿಂದ ಜನ್ಮ ಬರುತ್ತದೆ, ಆದರೆ ಮುಕ್ತಿ ಬರುವುದಿಲ್ಲ. ದೊಡ್ಡದಾದ ಮುಕ್ತಿಯನ್ನು ಬಿಟ್ಟು, ಬಂಧವಾದ ಜನ್ಮಕ್ಕೆ ಹೋಗುವುದು ತಿಳುವಳಿಕೆಯಿಲ್ಲದ ಕೆಲಸವಲ್ಲವೆ! ಆದ್ದರಿಂದ ಪವಿತ್ರವಾದ ದೈವದ ಕಡೆಗೆ ಹೋಗುವುದೆ ಮೇಧಾವಿಗಳ ಕೆಲಸವಾಗುತ್ತದೆ. ಹಾಗೆ ಹೋಗಬೇಕೆಂದರೆ ಕರ್ಮಯೋಗ, ಬ್ರಹ್ಮಯೋಗ ಎನ್ನುವ ಶಾಸ್ತ್ರಬದ್ಧವಾದ ಮಾರ್ಗಗಳಿವೆ. ಆ ಮಾರ್ಗಗಳು ಭಗವದ್ಗೀತೆಯಲ್ಲಿ ಧರ್ಮಯುಕ್ತವಾಗಿ ಹೇಳಲಾಗಿದೆ. ಒಂದುವೇಳೆ ಯಾರಾದರು ಯೋಗಗಳ ಮೇಲೆ ಪೂರ್ತಿ ಆಸಕ್ತಿ ಹೊಂದಿದ್ದು, ಆ ಎರಡು ಯೋಗಗಳನ್ನು ಆಚರಿಸುವುದರಲ್ಲಾಗಲಿ, ಅಭ್ಯಾಸ ಮಾಡುವುದರಲ್ಲಾಗಲಿ ಸಮರ್ಥತೆ ಇಲ್ಲದವರಾದರೆ, ಅಂತವರಿಗೆ ಪ್ರತ್ಯೇಕವಾದ ಮಾರ್ಗವಿದೆ. ಅದೇ ಭಕ್ತಿ ಮಾರ್ಗ. ಭಕ್ತಿ ಮಾರ್ಗದಲ್ಲಿ ಕೇವಲ ದೇವರನ್ನು ಕುರಿತು ಮಾತ್ರ ಸೇವೆ ಮಾಡುವುದಿರುತ್ತದೆ. ಸೃಷ್ಠಿ ಕರ್ತನಾದ ಪರಮಾತ್ಮನ ಸೇವೆಯೊಂದನ್ನು ಹೊರತು, ಬೇರೆ ಯಾವ ದೇವತೆ ಸೇವೆಗೆ ಸಂಬಂಧವಿರುವುದಿಲ್ಲವೆಂದು ಜ್ಞಾಪಕವಿಟ್ಟುಕೊಳ್ಳಬೇಕು. ದೇವರು ಕಾಣಿಸದವನು, ಆಕಾರವಿಲ್ಲದವನು ಆಗಿರುವಾದ ಆತನಿಗೆ ಸೇವೆ ಹೇಗೆ ಮಾಡಬೇಕೆಂದು ಕೆಲವರಿಗೆ ಪ್ರಶ್ನೆ ಬರಬಹುದು. ಅದಕ್ಕೆ ಉತ್ತರವೇನೆಂದರೆ! ಪ್ರಪಂಚದಲ್ಲಿ ದೇವರ ಸೇವೆ ಎನ್ನುವುದು ಒಂದೇ ಒಂದು ಮಾತ್ರವಿದೆ. ಆ ಒಂದು ಏನೆಂದರೆ! ದೇವರ ಜ್ಞಾನವನ್ನು ಪ್ರಚಾರ ಮಾಡುವುದು. ಅಷ್ಟು ದೊಡ್ಡ ದೇವರಿಗೆ ಇಷ್ಟು ಚಿಕ್ಕ ಸೇವೆ ಒಂದು ಮಾತ್ರವೆ ಇದೆಯಾ? ಎಂದು ಕೆಲವರು ಅಂದುಕೊಳ್ಳಬಹುದು. ಇದನ್ನು ಕುರಿತು ಭಗವದ್ಗೀತೆ ಭಕ್ತಿಯೋಗದಲ್ಲಿ 10ನೆ ಶ್ಲೋಕದಲ್ಲಿ

**ಶ್ಲೋ॥ *ಅಭ್ಯಾಸೇ ಪ್ಯಸಮರ್ಥೋ ಸಿ ಮತ್ಕರ್ಮ ಪರಮೊಭವ ।***
***ಮದರ್ಥಮಪಿ ಕರ್ಮಾಣಿಕುರ್ವನ್ ಸಿದ್ಧಿಮವಾಸ್ಸ್ಯಸಿ ॥***

ಹೀಗೆ ಇದೆ. "ನೀನು ಯೋಗ ಮಾಡುವುದರಲ್ಲಿ ಅಸಮರ್ಥನಾದರೆ, ನನಗೋಸ್ಕರ ಕೆಲಸ ಮಾಡು, ನನಗೋಸ್ಕರ ಕೆಲಸ ಮಾಡಿದಂತಾದರೆ, ನೀನು ಮುಕ್ತಿ ಹೊಂದಿ ನನ್ನ ಬಳಿಗೆ ಬರುತ್ತೀಯ" ಎಂದಿದ್ದಾನೆ. ಇದನ್ನನುಸರಿಸಿ ನೋಡಿದರೆ ದೇವರ ಕೆಲಸ ಪ್ರಪಂಚದಲ್ಲಿ ಒಂದು ಮಾತ್ರವೆ ಇದೆ. ಅದಕ್ಕೋಸ್ಕರ

ದೇವರೆ ಭೂಮಿಮೇಲೆ ಭಗವಂತನಾಗಿ ಬಂದು ಆ ಕೆಲಸವನ್ನು ಮಾಡಿಹೋಗಿದ್ದಾನೆ. ಆತನೆ ಸ್ವತಃವಾಗಿ ಧರ್ಮಗಳವೊಂದರ ಪ್ರಚಾರ ಎನ್ನುವ ಕೆಲಸ ಮಾಡಿದ್ದಾನೆ. ಆದ್ದರಿಂದ ಆತನ (ದೇವರ) ವೊಂದು ಧರ್ಮಗಳನ್ನು ಪ್ರಚಾರ ಮಾಡುವುದೇ ನಿಜವಾದ ದೇವರ ಕೆಲಸವಾಗುತ್ತದೆ. ದೇವರ ಕೆಲಸವನ್ನು ಪ್ರತ್ಯಕ್ಷವಾಗಿಯಾಗಲಿ, ಪರೋಕ್ಷವಾಗಿಯಾಗಲಿ ಮಾಡುವುದರಿಂದ ದೇವರ ಸೇವೆ ಮಾಡಿದಂತಾಗುತ್ತದೆ. ಯಾರಿಗಾದರು ದೇವರ ಧರ್ಮಗಳು ಶಾಸ್ತ್ರಬದ್ಧವಾಗಿ, ಹೇತುಬದ್ಧವಾಗಿ ತಿಳಿದಿದ್ದರೆ, ಅವುಗಳನ್ನು ಇತರರಿಗೆ ತಿಳಿಸುವುದು ದೇವರ ಸೇವೆ ಆಗುತ್ತದೆ. ಒಂದುವೇಳೆ ದೇವರ ಜ್ಞಾನವಾಗಲಿ, ಧರ್ಮಗಳಾಗಲಿ ತಿಳಿಯದಿರುವಾಗ ಅವು ತಿಳಿದುಬರುವುದಕ್ಕೆ ಸಹಾಯ ಮಾಡಿದರೂ, ಪ್ರತ್ಯಕ್ಷವಾಗಲ್ಲದೆ ಪರೋಕ್ಷವಾಗಿ ಸೇವೆ ಮಾಡಿದಂತಾಗುತ್ತದೆ.

ಈಗ ಕೆಲವರಿಗೆ ಕೆಲವು ಪ್ರಶ್ನೆಗಳು ಬಂದು ಹೀಗೆ ಕೇಳಬಹುದು. "ನಾನು ಹತ್ತು ಲಕ್ಷಗಳು ಖರ್ಚು ಮಾಡಿ ಆಂಜನೇಯಸ್ವಾಮಿ ಗುಡಿಯನ್ನು ಕಟ್ಟಿಸಿದ್ದೇನೆ. ಆ ಗುಡಿ ಇರುವುದರಿಂದ ನಮ್ಮ ಊರಿನಲ್ಲಿ ಬಹಳ ಜನ ಪ್ರಜೆಗಳಲ್ಲಿ ಭಕ್ತಿ ಭಾವ ಬೆಳೆದು, ಪ್ರತಿ ದಿನವು ಗುಡಿಗೆ ಹೋಗಿ ಬರುತ್ತಿರುತ್ತಾರೆ. ಅದರಿಂದ ನಾನು ದೇವರ ಸೇವೆ ಮಾಡಿದಂತೆ ಅಲ್ಲವೆ! ಎಂದು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ದೇವರು ಬೇರೆ, ದೇವತೆಗಳು ಬೇರೆ ಎಂದು ಮೊದಲೇ ಹೇಳಿದ್ದೇವೆ. ಆಂಜನೇಯಸ್ವಾಮಿಯಾಗಲಿ, ಮತ್ಯಾರಾಗಲಿ ಆಕಾರವಿದ್ದು ಕಾಣಿಸುವ ದೇವತೆಗಳು ಮತ್ತು ಹೆಸರಿದ್ದು ಕೇಳಿಸುವ ದೇವತೆಗಳು ಆಗಿರುವುದರಿಂದ ಅವರ್‍ಯಾರು ದೇವರಲ್ಲ, ಅವರಿಗೆ ಮಾಡಿರುವುದು ದೇವರ ಸೇವೆಯಲ್ಲ. ಹಾಗೆ ಮಾಡುವುದು ದೇವರಲ್ಲದ ಅನ್ಯದೇವರನ್ನು ಆರಾಧಿಸಿದಂತೆ, ಸೇವಿಸಿದಂತೆ ಆಗುತ್ತದೆ. ಈ ದಿನ ಭೂಮಿ ಮೇಲೆ ದೇವರ ಧರ್ಮಗಳು ತಿಳಿಯದೆ ಅಧರ್ಮಯುಕ್ತವಾದ ಕೆಲಸವನ್ನೇ ಮಾಡುತ್ತಿದ್ದಾರೆ. ಕೆಲವರು ಆಂಜನೇಯ ದಂಡಕ ಅನ್ನುವ ಪುಸ್ತಕವನ್ನು ಅಚ್ಚುಹಾಕಿಸಿ, ಉಚಿತವಾಗಿ ಲಕ್ಷಕಾಪಿಗಳನ್ನು ಹಂಚಿದ್ದಾರೆ, ಕೆಲವರು ರಾಮ್‌ದೇವ್ ಬಾಬಾ ಮಹತ್ವವನ್ನು ಕುರಿತು ಪ್ರಚಾರಿಸಿ

ಐದು ಲಕ್ಷಗಳ ಪುಸ್ತಗಳನ್ನು ಹಂಚಿದವರು, ನಾವು ಪ್ರತ್ಯಕ್ಷವಾಗಿ ಅಲ್ಲದೆ ಪರೋಕ್ಷವಾಗಿ ದೇವರ ಸೇವೆ ಮಾಡಿದಂತೆ ಅಲ್ಲವೆ! ಎಂದು ಅಂದುಕೊಳ್ಳುತ್ತಿದ್ದಾರೆ. ಮೇಲೆ ಹೇಳಿದ ಸೂತ್ರದ ಪ್ರಕಾರ ಇಂತವುಗಳೆಲ್ಲ ದೇವತೆಗಳ ಸೇವೆಗಳಾಗುತ್ತವೆ. ಆದರೆ ದೇವರ ಸೇವೆಯಲ್ಲ.

ಬ್ರಹ್ಮವಿದ್ಯಾಶಾಸ್ತ್ರವನ್ನು ಕುರಿತು ಸ್ವತಃವಾಗಿ ಇತರರಿಗೆ ಬೋಧಿಸಿದರೂ, ಅಥವಾ ಅದನ್ನು ಕುರಿತು ತಿಳಿಯದಿರುವಾಗ, ಆ ಶಾಸ್ತ್ರವನ್ನು ಬೋಧಿಸುವವರಿಗೆ ಸಹಾಯಮಾಡಿ ಬ್ರಹ್ಮವಿದ್ಯೆ ಪ್ರಚಾರವಾಗುವಂತೆ ಮಾಡಿದರೂ, ಅದು ದೇವರ ಸೇವೆ ಮಾಡಿದಂತೆ ಆಗುತ್ತದೆ. ಸ್ವತಃವಾಗಿ ಬೋಧಿಸಿದರೆ ಪ್ರತ್ಯಕ್ಷವಾಗಿ ಸೇವೆ ಮಾಡಿದಂತಾಗುತ್ತದೆ. ಬೋಧಿಸುವವರಿಗೆ ಸಹಾಯಮಾಡಿದರಾಗಲಿ, ಆ ಕಾರ್ಯಗಳಲ್ಲಿ ಪಾಲ್ಗೊಂಡರಾಗಲಿ, ಆತನು ಪರೋಕ್ಷವಾಗಿ ಸೇವೆ ಮಾಡಿ ದಂತಾಗುತ್ತದೆ. ಈ ದಿನ ಬ್ರಹ್ಮವಿದ್ಯಾಶಾಸ್ತ್ರ ಇಂದೂ ಮತದಲ್ಲಿ ಒಂದೇ ಒಂದು ಭಗವದ್ಗೀತೆಯಲ್ಲಿ ಕಾಣಿಸುತ್ತದೆ. ಆದ್ದರಿಂದ ನಾನು ಸ್ವತಃವಾಗಿ **ತ್ರೈತಸಿದ್ಧಾಂತ ಭಗವದ್ಗೀತೆಯ**ನ್ನು ರಚಿಸಿ, ಮುದ್ರಿಸಿ ಪ್ರಚಾರ ಮಾಡುತ್ತಿದ್ದೇನೆ. ಅಷ್ಟೇ ಅಲ್ಲದೆ ಬ್ರಹ್ಮವಿದ್ಯಾಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ಅಂಶಗಳನ್ನು ಸಹ ಬರೆದು ಪ್ರಚುರಿಸಿ, ಪ್ರಚಾರ ಮಾಡುವುದರಿಂದ ನನ್ನದು ನಿಜವಾದ ದೇವರ ಸೇವೆ ಎಂದು ಧೈರ್ಯದಿಂದ ಹೇಳಿಕೊಳ್ಳುತ್ತಿದ್ದೇನೆ. ನಾನು ಇಲ್ಲಿಯವರೆಗು ಇತರರಿಂದ ಧನ ಸಹಾಯವನ್ನು ತೆಗೆದುಕೊಳ್ಳದೆ, ಚಂದಗಳ ಹೆಸರಿನಲ್ಲಿ ಹಣವನ್ನು ವಸೂಲಿ ಮಾಡದೆ, ಸ್ವಚ್ಛಂದವಾಗಿ ಕಳೆದ 40 ವರ್ಷಗಳಿಂದ ದೇವರ ಸೇವೆ ಮಾಡುತ್ತಾ ಬಂದಿದ್ದೇನೆ.

ಈದಿನ ದೇಶದಲ್ಲಿ ದೇವರ ಸೇವೆ ಎಂದರೇನೊ ತಿಳಿಯದಂತೆ ಹೋಗಿದೆ. ಯೋಗಗಳೆಂದರೆ ಅವರಿಗೆ ಇಷ್ಟಬಂದಂತೆ ಊಹಿಸಿಕೊಳ್ಳುತ್ತಿದ್ದಾರೆ. ಬ್ರಹ್ಮವಿದ್ಯೆ ಅಸಲಿಗೆ ತಳಹತ್ತಿಹೋಗಿ ತಿಳಿಯದಂತೆ ಹೋಗಿದೆ. ಇಂತಹ ಸಂದರ್ಭದಲ್ಲಿ ನಾವು ದೈವಜ್ಞಾನವನ್ನು, ಧರ್ಮಗಳನ್ನು ಅಷ್ಟೆಲ್ಲಾ ಪ್ರಚಾರ ಮಾಡಿದರೂ, ಪೂರ್ತಿ ಪ್ರಯೋಜನ ಇಲ್ಲದಂತೆ ಹೋಗುತ್ತಿದೆ. ಸಾವಿರಕ್ಕೆ

ಒಬ್ಬನಿಗಾದರೂ ನಮ್ಮ ಜ್ಞಾನ ಸಿಗುವಂತಿಲ್ಲ. ನಾನು ಒಬ್ಬನೇ ಅಲ್ಲದೆ ಬಹಳ ಜನ ನನ್ನ ಹಾಗೆ ದೈವಜ್ಞಾನವನ್ನು ಪ್ರಚಾರ ಮಾಡಿದರೆ, ಕೆಲವರಿಗಾದರೂ ಅಸಲಾದ ಜ್ಞಾನ ತಿಳಿಯಬಹುದು. ನನ್ನ ಹಾಗೆ ಎಲ್ಲರು ಜ್ಞಾನವನ್ನು ಬೋಧಿಸಲಾರದೆ ಹೋಗಬಹುದು. ಆದರೆ ನನ್ನಹಾಗೆ ಜ್ಞಾನವನ್ನು ಪ್ರಚಾರ ಮಾಡಬಹುದು. ಜ್ಞಾನ ಪ್ರಚಾರದಲ್ಲಿ ಪ್ರತ್ಯಕ್ಷವಾಗಿ ಪಾಲ್ಗೊಳ್ಳದೆ ಹೋದರೂ, ಪರೋಕ್ಷವಾಗಿ ಸಹಾಯ ಮಾಡಿದರೂ ಅದು ದೇವರ ಸೇವೆಯೆ ಆಗುತ್ತದೆಂದುಕೊಂಡಿದ್ದೇವೆ. ಆದ್ದರಿಂದ ನಮ್ಮ ಅನುಮತಿಯಿಂದ ನಮ್ಮ ಗ್ರಂಥಗಳನ್ನು ಪ್ರಚುರಿಸಿ, ಉಚಿತವಾಗಿ ಇತರರಿಗೆ ಕೊಡುವುದು ದೇವರ ಸೇವೆ ಆಗುತ್ತದೆ. ನಾವು ತಿಳಿಸಿದ ಜ್ಞಾನ ದೇವತೆಗಳಿಗೆ ಸಂಬಂಧವಿಲ್ಲದೆ, ಕೇವಲ ದೇವರಿಗೆ ಮಾತ್ರವೆ ಸಂಬಂಧಿಸಿರುವುದು. ಆದ್ದರಿಂದ ನಮ್ಮ ಗ್ರಂಥಗಳನ್ನು ಪ್ರಚಾರ ಮಾಡುವುದರಿಂದ ಮಾತ್ರ ದೇವರ ಸೇವೆ ಮಾಡಿದಂತಾಗುತ್ತದೆ.

ದೇವರ ಜ್ಞಾನವನ್ನು ಬೋಧಿಸುವುದು ಎನ್ನುವ ಸೇವೆ ನಿಮಿತ್ತವಾಗಿ ನಾವು ಒಂದು ಸಂಘವನ್ನು ಸ್ಥಾಪಿಸಿದ್ದೇವೆ. ಅದರ ಹೆಸರು "ಪ್ರಬೋಧ ಸೇವಾ ಸಮಿತಿ" ಈ ಸಮಿತಿ, ದೇವರ ಸೇವೆ ನಿಮಿತ್ತ ಏರ್ಪಡಿಸಲಾಗಿದೆ. ಈ ಸಂಘವು ಸುಮಾರು 20 ವರ್ಷಗಳಿಂದ ಕೆಲಸ ಮಾಡುತ್ತಿದ್ದರು, ಈ ಪ್ರಬೋಧ ಸೇವಾ ಸಮಿತಿ ಇರುವುದು ಯಾರಿಗು ತಿಳಿದಿಲ್ಲ. ಮಾಯಾ ಪ್ರಭಾವದಿಂದ, ನಮ್ಮಿಂದ ಸ್ಥಾಪಿಸಲಾದ ಪ್ರಬೋಧ ಸೇವಾಸಮಿತಿ ಪ್ರಚಾರವಾಗದೆ ಹೋಗಿದೆ. ಆದ್ದರಿಂದ ಇಲ್ಲಿಯವರೆಗು ಬಹಳ ಜನರಿಗೆ ತಿಳಿಯದಂತೆ ಹೋಗಿದೆ. ಈಗ ನಾವು ಎಲ್ಲರಿಗೂ ತಿಳಿಸುವುದೇನೆಂದರೆ! ಪ್ರಪಂಚದಲ್ಲಿ ನಿಜವಾದ ದೇವರ ಸೇವೆ ಮಾಡಬೇಕೆಂದುಕೊಂಡವರು ಯಾರಾದರೂ ಈ ಸಂಘದಲ್ಲಿ ಸದಸ್ಯರಾಗಿ ಸೇರಬಹುದು. ಕೆಲವರಿಗೆ ಹಾಗೆ ಸೇರುವುದಕ್ಕೆ ಅಡಚಣೆಗಳಿರುವುದರಿಂದ, ಅವರು ಪ್ರಬೋಧ ಸೇವಾಸಮಿತಿಯಲ್ಲಿ ಸದಸ್ಯರಾಗಿ ಸೇರಲಾಗದೆ ಹೋಗಬಹುದು ಅಂತವರು ಸಹ ಈ ಸಂಘಕ್ಕೆ ಆರ್ಥಿಕ ಸಹಾಯ ಮಾಡಿ ಪರೋಕ್ಷವಾಗಿ ದೇವರ ಸೇವೆಯಲ್ಲಿ ಪಾಲ್ಗೊಳ್ಳಬಹುದು. ಅಂತಹ ಸಹಾಯ ಮಾಡುವವರಿಗೆ

ಅವರ ಆಧಾಯದ ತೆರಿಗೆ ಯಿಂದ ರಿಯಾಯಿತಿ ಮಾಡುವುದಕ್ಕೆ ತಕ್ಕ ಅವಕಾಶ ಸಹ ಇದೆ. ಅದಕ್ಕೆ ತಕ್ಕ ಪ್ರಭುತ್ವ ಅನುಮತಿ ಸಹ ಇದೆ. ಅದನ್ನು ನಂತರದ ಪುಟದಲ್ಲಿ ನೋಡಬಹುದು.

ಈ ಸಂಸ್ಥೆಯಿಂದ ದೇವರ ಸೇವೆ ಮಾಡಬಹುದು. ಹಾಗಲ್ಲದೆ ಎಷ್ಟು ಮಂದಿ ದೇವತೆಗಳಿಗಾದರೂ, ಎಷ್ಟು ದೊಡ್ಡ ಹೆಸರಿರುವ ದೇವತೆಗಳಿಗಾದರು, ಅವರ ಹುಂಡಿಯಲ್ಲಿ ಲಕ್ಷಗಳು ಹಾಕಿದರೂ, ಅದು ದೇವರ ಸೇವೆ ಅಲ್ಲವೆಂದು ತಿಳಿಯಬೇಕು. ಬಹಳ ಜನ ಅಸಲಾದ ದೈವತ್ವವನ್ನು ತಿಳಿಯದೆ, ಕಾಣಿಸುವ ದೇವತೆಗಳೇ ದೇವರೆಂದುಕೊಂಡು ಮೋಸ ಹೋಗಿದ್ದಾರೆ. ಆ ವಿಷಯ ಗೀತೆಯಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಇಂದಿನಿಂದಾದರು ದೇವತೆಗಳನ್ನು ಸಹ ಸೃಷ್ಟಿಸಿದವನು ದೇವರೆಂದು, ಆ ದೇವರನ್ನು ಯೋಗದಿಂದಾಗಲಿ, ಸೇವೆಯಿಂದಾಗಲಿ ಸೇರಬಹುದೆಂದು ತಿಳಿದು, ಇಲ್ಲಿ ಯೋಗವಾದರೂ ಮಾಡಿ, ಅಲ್ಲಿ ಸೇವೆಯನ್ನಾದರೂ ಮಾಡಿ. ಯೋಗ ಮಾಡುವುದಕ್ಕೆ ಹೇಗೆ ದಾರಿಯನ್ನು ತೋರಿಸಿದ್ದೇವೊ, ಹಾಗೆಯೇ ಸೇವೆ ಮಾಡುವುದಕ್ಕೂ ಸಹ ದಾರಿಯನ್ನು ತೋರಿಸಿದ್ದೇವೆ. ಹೇಳಬೇಕಾಗಿರುವುದು ನಮ್ಮ ತಪ್ಪಿಲ್ಲದೆ ಹೇಳಿದ್ದೇವೆ. ಇನ್ನು ನಿಮ್ಮ ಇಷ್ಟ.

*ಇಂತಿ*

**ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ**

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

# ದೆವ್ವಗಳ – ಭೂತಗಳ
# ಯಥಾರ್ಥ ಸಂಘಟನೆಗಳು




Author :

The Only Guru of Three Religions

The Spiritual Emperor, Thraitha Theorem Originator

**Sri Acharya Prabodhananda Yogeeshwarulu**


www.thraithashakam.org